ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ.ಯು.ಸಿ. ಮೊದಲ ವರ್ಷ

# ಅರ್ಥಶಾಸ್ತ್ರ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪಠ್ಯಪುಸ್ತಕ ರಚನಾ ಕೇಂದ್ರ

### ಸಲಹಾ ಸಮಿತಿ

ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ ಯು ಸಿ ಮೊದಲ ವರ್ಷ

# ಅರ್ಥಶಾಸ್ತ್ರ

ಸಂಪಾದಕ
**ಡಾ.ಸಿ.ಕೆ. ರೇಣುಕಾರ್ಯ**




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ARTHASHĀSTRA**

Text Book for First Year P.U.C

*Edited by*
**Dr. C.K. Renukarya**
Professor (Retd)
No. 4, Gangotri Badavane
Saraswatipuram
Mysore - 570 007

*Published by*
**Dr. H.C. Boralingaiah**
Director, Prasaranga
Kannada University, Hampi
Vidyaranya 583 276

Pages: xvi+352 **Price: Rs. 100/-**
First Impression : 2004
www.kavihampi.org



**ಬೆಲೆ : ರೂ. ೧೦೦/-**

*ಮುಖಪುಟ* : **ಕೆ.ಕೆ. ಮಕಾಳಿ**

*ಪ್ರಕಾಶಕರು*
ಡಾ. ಹಿ.ಚಿ. ಬೋರಲಿಂಗಯ್ಯ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

*ಅಕ್ಷರ ಸಂಯೋಜನೆ*
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

*ಮುದ್ರಣ*
ರವಿ ಗ್ರಾಫಿಕ್ಸ್, ಬೆಂಗಳೂರು

# ನಿರ್ದೇಶಕರ ಮಾತು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕ ರಚನಾ ಕೇಂದ್ರವು ಶಿಕ್ಷಣದ ಎಲ್ಲ ಹಂತಗಳಿಗೆ ಮತ್ತು ಎಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳು, ಆಕರ ಗ್ರಂಥಗಳು, ಪರಾಮರ್ಶನ ಕೃತಿಗಳು, ಅಧ್ಯಾಪಕರ ಕೈಪಿಡಿಗಳು ಮುಂತಾದವುಗಳನ್ನು ಸಿದ್ಧಪಡಿಸುವ ಮತ್ತು ಪ್ರಕಟಿಸುವ ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ಈ ದಿಶೆಯಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆ ೨೦೦೪-೦೫ರಲ್ಲಿ ಜಾರಿಗೆ ತಂದಿರುವ ಹೊಸ ಪಠ್ಯಕ್ರಮವನ್ನು ಆಧರಿಸಿ ಪಠ್ಯ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಈ ಪಠ್ಯಕ್ರಮಕ್ಕೆ ಅನುಗುಣವಾಗಿ ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಕೇಂದ್ರ ಆರಂಭಿಸಿದೆ.

ಈ ಕಾರ್ಯ ಅನೇಕರ ಸಹಕಾರ-ಸಹಯೋಗದಿಂದ ನಡೆಯಬೇಕಾಗಿದೆ. ನಾವು ಸಿದ್ಧಪಡಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಪಠ್ಯಗಳೆಂದು ಮನ್ನಣೆ ನೀಡಿದೆ. ಇದು ತುಂಬಾ ಮಹತ್ವದ ಸಂಗತಿಯಾಗಿದೆ. ಈ ದಿಶೆಯಲ್ಲಿ ನಮಗೆ ನೆರವು ನೀಡಿದ ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಡಿ.ಎನ್.ನಾಯಕ್ ಇವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಪಠ್ಯಪುಸ್ತಕಗಳ ಸಂಪಾದಕರಾಗಿ ನಾಡಿನ ಅನೇಕ ಹಿರಿಯ ವಿದ್ವಾಂಸರು ಕೆಲಸ ಮಾಡುತ್ತಿದ್ದಾರೆ. ಅವರ ಸಹಯೋಗದಲ್ಲಿ ಅನೇಕ ಲೇಖಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರೆಲ್ಲರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಕೇಂದ್ರದ ಹಿಂದಿನ ಶಕ್ತಿಯೆಂದರೆ ಕುಲಪತಿಗಳಾದ ಡಾ. ಕೆ.ವಿ.ನಾರಾಯಣ. ಅವರ ಮಾರ್ಗದರ್ಶನದಲ್ಲಿ ಕೇಂದ್ರವು ಕೆಲಸ ಮಾಡುತ್ತಿದೆ. ಈ ಸಂದರ್ಭದಲ್ಲಿ ಮಾನ್ಯ ಕುಲಪತಿಗಳಿಗೆ, ಕುಲಸಚಿವರಿಗೆ, ಕೇಂದ್ರದ ಸಲಹಾ ಮಂಡಳಿ ಸದಸ್ಯರಿಗೆ, ಪ್ರಸಾರಾಂಗದ ನಿರ್ದೇಶಕರು ಮತ್ತು ಸಿಬ್ಬಂದಿಗೆ ಕೇಂದ್ರದ ಪರವಾಗಿ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

ಪ್ರಸ್ತುತ ಪದವಿಪೂರ್ವ ಮೊದಲ ವರ್ಷದ 'ಅರ್ಥಶಾಸ್ತ್ರ' ಪಠ್ಯವನ್ನು ತುಂಬಾ ಅಚ್ಚುಕಟ್ಟಾಗಿ ಸಿದ್ಧಪಡಿಸಿಕೊಟ್ಟಿರುವ ಅದರ ಸಂಪಾದಕರಾದ ಡಾ. ಸಿ.ಕೆ.ರೇಣುಕಾರ್ಯ ಅವರಿಗೆ ಹಾಗೂ ವಿವಿಧ ಅಧ್ಯಾಯಗಳನ್ನು ಸಿದ್ಧಮಾಡಿಕೊಟ್ಟಿರುವ ನಾಡಿನ ಖ್ಯಾತ ವಿದ್ವಾಂಸರಿಗೆ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಡಾ.ಟಿ.ಆರ್.ಚಂದ್ರಶೇಖರ

# ಸಂಪಾದಕರ ಮಾತು

ಪ್ರಥಮ ಪಿ.ಯು.ಸಿ.ಗೆ ಕನ್ನಡ ಮಧ್ಯಮದಲ್ಲಿ ಅರ್ಥಶಾಸ್ತ್ರ ಕೃತಿಯೊಂದನ್ನು ಸಂಪಾದಿಸಿ ಕೊಡಬೇಕೆಂಬ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇವರ ಬೇಡಿಕೆಗೆ ಅನುಗುಣವಾಗಿ ಪ್ರಸ್ತುತ ಅರ್ಥಶಾಸ್ತ್ರ ಪಠ್ಯ "ಮೂಲ ಆರ್ಥಿಕ ಸಿದ್ಧಾಂತ" ರೂಪುಗೊಂಡಿದೆ.

ವಿಭಿನ್ನ ಪ್ರಾದೇಶಿಕ ಹಿನ್ನೆಲೆಯ ಮತ್ತು ಮನೋಧರ್ಮಗಳ ಎಂಟು ಲೇಖಕರು ಈ ಕೃತಿಯ ಅಷ್ಟ ಅಧ್ಯಾಯಗಳನ್ನು ರೂಪಿಸಿದ್ದಾರೆ. ಹಾಗಾಗಿ ಎಂಟು ಅಧ್ಯಾಯಗಳು ವಿಭಿನ್ನ ಓದನ್ನು ನೀಡುವ ಸಾಧ್ಯತೆಗಳಿವೆ. ಸಾಧ್ಯವಾದಷ್ಟು ಮಟ್ಟಿಗೆ ಪರಿಕಲ್ಪನೆಗಳಲ್ಲಿ ಏಕರೂಪತೆಯನ್ನು ಸಾಧಿಸಲು ಯತ್ನಿಸಲಾಗಿದೆ. ಆದರೆ ವಿವರಣೆಯಲ್ಲಿನ ಪ್ರಾದೇಶಿಕತೆಯ ಸೊಗಡನ್ನು ಬದಲಾಯಿಸುವ ಗೋಜಿಗೆ ಹೋಗಿಲ್ಲ. ವಿವಿಧತೆಯಲ್ಲಿ ಏಕತೆ ಎಂಬ ನುಡಿ ಇಲ್ಲಿ ಮೂರ್ತರೂಪ ತಾಳಿರುವುದು ನನಗೆ ಸಂತಸವುಂಟುಮಾಡಿದೆ.

ಪಿ.ಯು.ಸಿ ಮಂಡಳಿ ರೂಪಿಸಿದ ಅರ್ಥಶಾಸ್ತ್ರದ ನೂತನ ಪಠ್ಯಕ್ರಮವು ಕಾಲದ ಅಗತ್ಯಗಳಿಗೆ ಸ್ಪಂದಿಸಿರುವುದರಿಂದ ನಾನು ಈ ಕೃತಿಯ ಸಂಪಾದಕತ್ವದ ಹೊಣೆ ಹೊತ್ತಿದ್ದೇನೆ. ಪಠ್ಯಕ್ರಮದ ಬಿಡುಗಡೆ ತೀರಾ ತಡವಾದುದರಿಂದ ನನ್ನ ಜವಾಬ್ದಾರಿಗೆ ನ್ಯಾಯ ಸಲ್ಲಿಸಿದ್ದೇನೆಯೇ ಎಂಬ ಅಳುಕು ನನ್ನನ್ನು ಕಾಡುತ್ತಿದೆ.

ಕೃತಿಯ ಸಂಪಾದಕತ್ವದ ಜವಾಬ್ದಾರಿಯನ್ನು ನನಗಿತ್ತ ಕನ್ನಡ ವಿಶ್ವವಿದ್ಯಾಲಯದ ಸಮಸ್ತರಿಗೆ, ಅಧ್ಯಾಯಗಳನ್ನು ಸಿದ್ಧ ಪಡಿಸಿಕೊಟ್ಟ ತಜ್ಞರಿಗೆ, ಈ ಕೃತಿ ಹೊರಬರಲು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣರಾದ ಎಲ್ಲರಿಗೆ ನಾನು ಋಣಿಯಾಗಿದ್ದೇನೆ.

ಮೈಸೂರು

**ಡಾ. ಸಿ.ಕೆ. ರೇಣುಕಾರ್ಯ**

# ವಿಸ್ತೃತ ಪಠ್ಯಕ್ರಮ

(ಪದವಿಪೂರ್ವ ಶಿಕ್ಷಣ ಇಲಾಖೆ ನಿಯಮಿಸಿರುವ ಪಠ್ಯಕ್ರಮ)

## ಅಧ್ಯಾಯ ೧ : ಪ್ರಸ್ತಾವನೆ

**೧.೧. ಅರ್ಥಶಾಸ್ತ್ರದ ವ್ಯಾಖ್ಯೆಗಳು**

ಸಂಪತ್ತಿನ, ಕಲ್ಯಾಣದ ಮತ್ತು ಕೊರತೆ ವ್ಯಾಖ್ಯೆಗಳು (೩ ಗಂಟೆಗಳು)

**೧.೨. ಆರ್ಥಿಕತೆಯ ಅರ್ಥ ಮತ್ತು ಮೂಲ ಸಮಸ್ಯೆಗಳು**

ಆರ್ಥಿಕ ಚಟುವಟಿಕೆಗಳ ರೂಪದಲ್ಲಿ ಆರ್ಥಿಕತೆಯ ಅರ್ಥ - ಆರ್ಥಿಕತೆಯ ಮೂಲ ಸಮಸ್ಯೆಗಳು - ಸ್ಪರ್ಧಾತ್ಮಕ ಅವಶ್ಯಕತೆಗಳಿಗೆ ಸಂಪನ್ಮೂಲಗಳ ನಿಯುಕ್ತಿ - (೨ ಗಂಟೆಗಳು).

**೧.೩. ಅರ್ಥಶಾಸ್ತ್ರದ ವಿಶ್ಲೇಷಣಾ ಪಥಗಳು**

ಆರ್ಥಿಕ ಸಿದ್ಧಾಂತದ ವ್ಯಾಖ್ಯೆ ಮತ್ತು ಉದ್ದೇಶ - ವಿಶ್ಲೇಷಣಾ ಪಥಗಳು - ವ್ಯಷ್ಟಿ ಮತ್ತು ಸಮಷ್ಟಿ ಅರ್ಥಶಾಸ್ತ್ರ - ವಾಸ್ತವಿಕ/ವಿವರಣಾತ್ಮಕ ಮತ್ತು ಪ್ರಮಾಣಕ/ವಿಧಾಯಕ ಅರ್ಥಶಾಸ್ತ್ರ - ಸ್ಥಿರಾತ್ಮಕ ಮತ್ತು ಚಲನಾತ್ಮಕ ವಿಶ್ಲೇಷಣೆ - ಭಾಗಶಃ ಮತ್ತು ಸಾರ್ವತ್ರಿಕ ಸಮತೋಲನ (೫ ಗಂಟೆಗಳು).

**೧.೪. ಗಣಿತದ ಪ್ರಾಥಮಿಕ ಪರಿಕಲ್ಪನೆಗಳು**

ಸಂಖ್ಯಾ ಪದ್ಧತಿ : ಪೂರ್ಣಾಂಕ, ಭಿನ್ನರಾಶಿ ಮತ್ತು ವೈಚಾರಿಕ ಸಂಖ್ಯೆಗಳು - ಸ್ಥಿರ ಮತ್ತು ಚರ ಪರಿಮಾಣಗಳು - ಸ್ವತಂತ್ರ / ಬಾಹ್ಯ ಮತ್ತು ಅವಲಂಬಿ / ಆಂತರಿಕ ಚರ ಪರಿಮಾಣಗಳು - ಪ್ರಾಚಲ ಅಥವಾ ಪರಾಮಿತಿಗಳು - ಕಾರ್ಯಾತ್ಮಕ ಸಂಬಂಧ ಬಿಂಬಕಗಳು - ಸರಳ ಮತ್ತು ವಕ್ರರೇಖಾ ಬಿಂಬಕಗಳ ರೂಪೀಕರಣ ಮತ್ತು ನಕ್ಷೆ / ನಿಷ್ಪನ್ನ ಪರಿಕಲ್ಪನೆ, ಅವಕಲನದ ನಿಯಮಗಳು ಮತ್ತು ಸರಳರೇಖಾ ಬಿಂಬಕದ ಗಮನ (೫ ಗಂಟೆಗಳು).

**೧.೫. ಪ್ರಾಯೋಗಿಕ ಕಾರ್ಯ ಯೋಜನೆಗಳು ಮತ್ತು ಹೊಣೆಗಳು**

೧.೫.೧. ಸರಳ ರೇಖಾ ಬಿಂಬಕವನ್ನು ಸಂಖ್ಯಾರೂಪದ ಉದಾಹರಣೆಗಳನ್ನು ಬಳಸಿ ಚಿತ್ರಿಸುವುದು.

೧.೫.೨. ಅವಕಲನದ ನಿಯಮಗಳಿಗೆ ಸಂಖ್ಯಾರೂಪದ ಅಭ್ಯಾಸಗಳನ್ನು ನೀಡುವುದು.

## ಅಧ್ಯಾಯ ೨ : ಅನುಭೋಗ

### ೨.೧. ಮಾನವನ ಬಯಕೆಗಳು

ಮಾನವನ ಬಯಕೆಗಳ ಅರ್ಥ ವಿವರಣೆ - ಮಾನವನ ಬಯಕೆಗಳ ಲಕ್ಷಣಗಳು - ಬಯಕೆಗಳ ವಿಧಗಳು : ಅಗತ್ಯದ, ಹಿತದಾಯಕ ಮತ್ತು ವಿಲಾಸಿ ಬಯಕೆಗಳು (೨ ಗಂಟೆಗಳು).

### ೨.೨. ಸರಕು ಮತ್ತು ಸೇವೆಗಳು

ಆರ್ಥಿಕ ಸರಕುಗಳ ಮತ್ತು ಸೇವೆಗಳ ಅರ್ಥ - ಸರಕುಗಳ ವಿಧಗಳು : ಅನುಭೋಗಿಗಳ ಮತ್ತು ಉತ್ಪಾದಕರ ಸರಕುಗಳು - ದೀರ್ಘಾಯುಷಿ ಮತ್ತು ಅಲ್ಪಾಯುಷಿ ಸರಕುಗಳು : ಖಾಸಗಿ ಮತ್ತು ಸಾರ್ವಜನಿಕ ಸರಕುಗಳು (೨ ಗಂಟೆಗಳು).

### ೨.೩. ಅನುಭೋಗ

ಅನುಭೋಗದ ಅರ್ಥವಿವರಣೆ - ಅನುಭೋಗದ ವಿಧಗಳು : ನೇರ ಮತ್ತು ಪರೋಕ್ಷ ಅನುಭೋಗ (೧ ಗಂಟೆ).

### ೨.೪. ತುಷ್ಟಿಗುಣ

ತುಷ್ಟಿಗುಣದ ಅರ್ಥವಿವರಣೆ - ತುಷ್ಟಿಗುಣದ ವಿಧಗಳು : ರೂಪ, ಸ್ಥಳ ಮತ್ತು ಸಮಯ ತುಷ್ಟಿಗುಣ - ಇಳಿಕೆಯ ಸೀಮಾಂತ ತುಷ್ಟಿಗುಣ ನಿಯಮ : ಮಾರ್ಷಲನ ವ್ಯಾಖ್ಯೆ, ಕೋಷ್ಟಕ ಮತ್ತು ರೇಖಾಚಿತ್ರ (೩ ಗಂಟೆಗಳು).

### ೨.೫. ಬೇಡಿಕೆ

ಬೇಡಿಕೆಯ ಅರ್ಥ - ಬೇಡಿಕೆಯ ಕಾರ್ಯಾತ್ಮಕ ಸಂಬಂಧಬಿಂಬಕ - ಬೇಡಿಕೆಯ ನಿಯಮ : ಅನುಸೂಚಿ ಮತ್ತು ರೇಖಾಚಿತ್ರ - ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆ -ಮಿಗುತೆ ಪರಿಕಲ್ಪನೆ (೪ ಗಂಟೆಗಳು).

### ೨.೬. ಪ್ರಾಯೋಗಿಕ ಕಾರ್ಯಯೋಜನೆಗಳು ಮತ್ತು ಹೊಣೆಗಳು

೨.೬.೧. ಅಗತ್ಯದ, ಹಿತದಾಯಕ ಮತ್ತು ವಿಲಾಸಿ ಸರಕುಗಳ ಪಟ್ಟಿಯೊಂದನ್ನು ತಯಾರಿಸುವುದು

೨.೬.೨. ಸ್ವಂತ ಕುಟುಂಬದ ನೇರ ಮತ್ತು ಪರೋಕ್ಷ ಅನುಭೋಗದ ಸರಕು ಮತ್ತು ಸೇವೆಗಳ ಪಟ್ಟಿ ಸಿದ್ಧಪಡಿಸುವುದು.

೨.೬.೩. ಒಂದು ನಿರ್ದಿಷ್ಟ ಸರಕಿನ ಸಂಖ್ಯಾರೂಪದ ಬೇಡಿಕೆಯ ಅನುಸೂಚಿ ಯೊಂದನ್ನು ರಚಿಸುವುದು.

## ಅಧ್ಯಾಯ ೩ : ಉತ್ಪಾದನೆ

### ೩.೧. ಪೂರೈಕೆ

ಪೂರೈಕೆಯ ಅರ್ಥ - ಪೂರೈಕೆಯ ಕಾರ್ಯಾತ್ಮಕ ಸಂಬಂಧ ಬಿಂಬಕ - ಪೂರೈಕೆಯ ನಿಯಮ : ಅನುಸೂಚಿ ಮತ್ತು ರೇಖಾಚಿತ್ರ (೨ ಗಂಟೆಗಳು).

### ೩.೨. ಉತ್ಪಾದನಾಂಗಗಳು

ಉತ್ಪಾದನೆಯ ಅರ್ಥ - ಉತ್ಪಾದನಾಂಗಗಳು : ಉತ್ಪಾದನೆಯ ಕಾರ್ಯಾತ್ಮಕ ಸಂಬಂಧ ಬಿಂಬಕ - ಪ್ರತಿಫಲ ಪ್ರಮಾಣ : ಏರಿಕೆಯ, ಸ್ಥಿರ ಮತ್ತು ಇಳಿಕೆಯ ಪ್ರತಿಫಲ ಪ್ರಮಾಣ (೨ ಗಂಟೆಗಳು).

### ೩.೩. ಭೂಮಿ

ಭೂಮಿಯ ಅರ್ಥ - ಭೂಮಿಯ ಲಕ್ಷಣಗಳು - ಇಳಿಕೆಯ ಸೀಮಾಂತ ಪ್ರತಿಫಲ ನಿಯಮ - ಗೇಣಿ : ಆರ್ಥಿಕ ಗೇಣಿ ಮತ್ತು ಅರೆಗೇಣಿಯ ನಡುವಣ ವ್ಯತ್ಯಾಸಗಳು (೨ ಗಂಟೆಗಳು).

### ೩.೪. ಶ್ರಮ

ಶ್ರಮದ ಅರ್ಥ ವಿವರಣೆ - ಶ್ರಮದ ಲಕ್ಷಣಗಳು - ಮಾಲ್ತಸನ ಜನಸಂಖ್ಯಾ ಸಿದ್ಧಾಂತ - ಜನಸಂಖ್ಯಾ ಪರಿವರ್ತನಾ ಸಿದ್ಧಾಂತ - ಕೂಲಿ : ಕೂಲಿಯ ಅರ್ಥ -ನೈಜ ಕೂಲಿ ಮತ್ತು ಹಣರೂಪಿ ಕೂಲಿಯ ನಡುವಣ ವ್ಯತ್ಯಾಸಗಳು (೪ ಗಂಟೆಗಳು).

### ೩.೫. ಬಂಡವಾಳ

ಬಂಡವಾಳದ ಅರ್ಥ ವಿವರಣೆ - ಬಂಡವಾಳದ ವಿಧಗಳು : ಸ್ಥಿರ ಮತ್ತು ಚರ ಬಂಡವಾಳ - ಭೌತಿಕ ಮತ್ತು ಹಣಕಾಸಿನ ಬಂಡವಾಳ - ಬಂಡವಾಳ ಸಂಚಯನದ ಅರ್ಥ - ಬಂಡವಾಳದ ಮೂಲಗಳು : ಆಂತರಿಕ ಮತ್ತು ಬಾಹ್ಯ ಮೂಲಗಳು - ಉಳಿತಾಯದ ಅಂತರ - ಬಡ್ಡಿಯ ಅರ್ಥ - ಒಟ್ಟು ಬಡ್ಡಿ ಮತ್ತು ನಿವ್ವಳ ಬಡ್ಡಿಯ ನಡುವಣ ವ್ಯತ್ಯಾಸ (೩ ಗಂಟೆಗಳು).

### ೩.೬. ಸಂಘಟನೆ

ಸಂಘಟನೆಯ ಅರ್ಥ - ಉದ್ಯಮ ಸಾಹಸಿಯ ಕಾರ್ಯ : ಸಂಶೋಧನೆ ಮತ್ತು ಆವಿಷ್ಕಾರ - ಲಾಭದ ಅರ್ಥ - ಒಟ್ಟು ಲಾಭ ಮತ್ತು ನಿವ್ವಳ ಲಾಭದ ನಡುವಣ ವ್ಯತ್ಯಾಸಗಳು (೨ ಗಂಟೆಗಳು).

### ೩.೭. ಪ್ರಾಯೋಗಿಕ ಕಾರ್ಯಯೋಜನೆಗಳು ಮತ್ತು ನಿರೂಪಣಗಳು

೩.೭.೧. ಆಯ್ದ ಅನುಭೋಗಿ ಮತ್ತು ಉತ್ಪಾದಕರ ಸರಕುಗಳ ಪೂರೈಕೆಯ ಅನುಸೂಚಿಯನ್ನು ರಚಿಸುವುದು.

೩.೭.೨. ಸ್ಥಳೀಯ ಯಶಸ್ವೀ ಉದ್ಯಮ ಸಾಹಸಿಯೊಬ್ಬರ ಉದ್ದಿಮೆಗೆ ಭೇಟಿ ನೀಡಿ ಉತ್ಪಾದನಾಂಗಗಳ ಪಾತ್ರವನ್ನು ಅರ್ಥಮಾಡಿಕೊಳ್ಳುವುದು.

೩.೭.೩. ಸ್ಥಳೀಯ ಬ್ಯಾಂಕರ್‌ರೊಡನೆ ಬಂಡವಾಳ ಸಂಚಯನದ ಮೂಲಗಳನ್ನು ಚರ್ಚಿಸುವುದು.

## ಅಧ್ಯಾಯ ೪ : ವೆಚ್ಚ, ಆದಾಯ ಮತ್ತು ಮಾರುಕಟ್ಟೆ ವಿನ್ಯಾಸ

**೪.೧. ವೆಚ್ಚ**

ವೆಚ್ಚದ ಅರ್ಥ : ವೆಚ್ಚದ ವಿಧಗಳು : ಚರವೆಚ್ಚ ಮತ್ತು ಸದವಕಾಶ ವೆಚ್ಚ : ಒಟ್ಟು ವೆಚ್ಚ : ಸರಾಸರಿ ವೆಚ್ಚ ಮತ್ತು ಸೀಮಾಂತ ವೆಚ್ಚ (೩ ಗಂಟೆಗಳು).

**೪.೨. ಆದಾಯ**

ಆದಾಯದ ಅರ್ಥ - ಆದಾಯದ ವಿಧಗಳು - ಒಟ್ಟು ಆದಾಯ, ಸರಾಸರಿ ಆದಾಯ ಮತ್ತು ಸೀಮಾಂತ ಆದಾಯ (೨ ಗಂಟೆಗಳು).

**೪.೩. ಮಾರುಕಟ್ಟೆ ವಿನ್ಯಾಸ**

ಮಾರುಕಟ್ಟೆಯ ಅರ್ಥ - ಮಾರುಕಟ್ಟೆಯ ವಿಧಗಳು : ಪರಿಪೂರ್ಣ ಪೈಪೋಟಿ, ಏಕಸ್ವಾಮ್ಯ, ಸ್ವಾಮ್ಯಯುತ ಪೈಪೋಟಿಯ ಅರ್ಥ ಮತ್ತು ಲಕ್ಷಣಗಳು (೪ ಗಂಟೆಗಳು).

**೪.೪. ಪ್ರಾಯೋಗಿಕ ಕಾರ್ಯ ಯೋಜನೆಗಳು ಮತ್ತು ಹೊಣೆಗಳು**

೪.೪.೧. ಸ್ಥಳೀಯ ಮಾರುಕಟ್ಟೆಯನ್ನು ಸಂದರ್ಶಿಸಿ ಮಾರುಕಟ್ಟೆಯ ವಿನ್ಯಾಸವನ್ನು ಗುರುತಿಸುವುದು.

೪.೪.೨. ಸಂಖ್ಯಾರೂಪದ ಉದಾಹರಣೆಗಳನ್ನು ಬಳಸಿ ಸರಾಸರಿ ವೆಚ್ಚ, ಸೀಮಾಂತ ವೆಚ್ಚ, ಸರಾಸರಿ ಆದಾಯ ಮತ್ತು ಸೀಮಾಂತ ಆದಾಯಗಳನ್ನು ಕಂಡುಹಿಡಿದು ಚಿತ್ರರೂಪದಲ್ಲಿ ತೋರಿಸುವುದು.

## ಅಧ್ಯಾಯ ೫ : ಕಲ್ಯಾಣ ಅರ್ಥಶಾಸ್ತ್ರದ ಮೂಲಾಂಶಗಳು

**೫.೧. ಪರಿಕಲ್ಪನೆಗಳು ಮತ್ತು ಪ್ರಮೇಯಗಳು**

ಆರ್ಥಿಕ ಕಲ್ಯಾಣ ಪರಿಕಲ್ಪನೆ - ಕಲ್ಯಾಣ ಅರ್ಥಶಾಸ್ತ್ರದ ಅರ್ಥ - ಕಲ್ಯಾಣ ಅರ್ಥಶಾಸ್ತ್ರದ ಮೂಲ ಪ್ರಮೇಯಗಳು - ಕಲ್ಯಾಣ ಅರ್ಥಶಾಸ್ತ್ರದ ಪ್ರಥಮ ಮತ್ತು ದ್ವಿತೀಯ ಪ್ರಮೇಯಗಳು (೪ ಗಂಟೆಗಳು).

## ಅಧ್ಯಾಯ ೬ : ರಾಷ್ಟ್ರೀಯ ಆದಾಯ

**೬.೧. ರಾಷ್ಟ್ರೀಯ ಆದಾಯದ ಪರಿಕಲ್ಪನೆಗಳು**

ರಾಷ್ಟ್ರೀಯ ಆದಾಯದ ಅರ್ಥವಿವರಣೆ - ಪರ್ಯಾಯ ಪರಿಕಲ್ಪನೆಗಳು : ಒಟ್ಟು

ರಾಷ್ಟ್ರೀಯ ಉತ್ಪನ್ನ - ಒಟ್ಟು ದೇಶೀಯ ಉತ್ಪನ್ನ - ಮಾರುಕಟ್ಟೆ ಬೆಲೆಗಳಲ್ಲಿ ಮತ್ತು ಉತ್ಪಾದನಾಂಗ ವೆಚ್ಚಗಳಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನ - ನೈಜ ಮತ್ತು ನಾಮಮಾತ್ರದ ರಾಷ್ಟ್ರೀಯ ಆದಾಯ - ತಲಾದಾಯ (೪ ಗಂಟೆಗಳು).

**೬.೨. ರಾಷ್ಟ್ರೀಯ ಆದಾಯದ ಮಾಪನ**

ರಾಷ್ಟ್ರೀಯ ಆದಾಯದ ಮಾಪನ ವಿಧಾನಗಳು - ಉತ್ಪನ್ನ, ಆದಾಯ ಮತ್ತು ವೆಚ್ಚದ ವಿಧಾನಗಳು - ಒಟ್ಟು ದೇಶೀಯ ಉತ್ಪನ್ನದ ನಿತ್ಯ ಸಮೀಕರಣ (೨ ಗಂಟೆಗಳು).

**೬.೩. ರಾಷ್ಟ್ರೀಯ ಆದಾಯ ಮತ್ತು ರಾಷ್ಟ್ರೀಯ ಕಲ್ಯಾಣ**

ರಾಷ್ಟ್ರೀಯ ಆದಾಯ ಮತ್ತು ರಾಷ್ಟ್ರೀಯ ಕಲ್ಯಾಣದ ನಡುವಣ ಸಂಬಂಧ - ರಾಷ್ಟ್ರೀಯ ಕಲ್ಯಾಣದ ಮಾಪಕವಾಗಿ ರಾಷ್ಟ್ರೀಯ ಆದಾಯದ ಮಿತಿಗಳು (೨ ಗಂಟೆಗಳು).

**೬.೪. ಪ್ರಾಯೋಗಿಕ ಕಾರ್ಯ ಯೋಜನೆಗಳು ಮತ್ತು ಹೊಣೆಗಳು**

೬.೪.೧. ರಾಷ್ಟ್ರೀಯ ಆದಾಯ ಲೆಕ್ಕಾಚಾರಕ್ಕೆ ಸಂಖ್ಯಾರೂಪದ ಉದಾಹರಣೆಗಳನ್ನು ನೀಡುವುದು.

೬.೪.೨. ನೈಜ ರಾಷ್ಟ್ರೀಯ ಆದಾಯವನ್ನು ಸಂಖ್ಯಾರೂಪದಲ್ಲಿ ತೋರಿಸುವುದು.

## ಅಧ್ಯಾಯ ೭ : ಹಣದ ಸಿದ್ಧಾಂತ

**೭.೧. ಹಣ**

ಅರ್ಥ ವಿವರಣೆ - ಹಣದ ಕಾರ್ಯಗಳು : ಪ್ರಧಾನ ಮತ್ತು ಆನುಷಂಗಿಕ ಕಾರ್ಯಗಳು - ಸಮೀಪ ಹಣದ ಸ್ವತ್ತುಗಳು : ಚೆಕ್ಕುಗಳು, ಖಜಾನೆ ಹುಂಡಿಗಳು, ಕ್ರೆಡಿಟ್ಟು ಮತ್ತು ಎ.ಟಿ.ಎಂ. ಕಾರ್ಡುಗಳು (೩ ಗಂಟೆಗಳು).

**೭.೨. ಹಣದ ಪೂರೈಕೆ**

ಹಣ ಪೂರೈಕೆಯ ಪರಿಕಲ್ಪನೆ - ಹಣ ಪೂರೈಕೆಯ ವಿಧಗಳು : ಸೀಮಿತ ಹಣ - ಮತ್ತು ವಿಶಾಲ ಹಣ - ಪೂರೈಕೆಯ ಮೂಲವಾಗಿ ವಾಣಿಜ್ಯ ಬ್ಯಾಂಕುಗಳ ಉದರಿ ನಿರ್ಮಾಣ (೩ ಗಂಟೆಗಳು).

**೭.೩. ಹಣದ ಬೇಡಿಕೆ**

ಹಣದ ಬೇಡಿಕೆ - ವಹಿವಾಟು - ಮುನ್ನೆಚ್ಚರಿಕೆಯ ಬೇಡಿಕೆ - ಸಟ್ಟಾ ವ್ಯಾಪಾರದ ಬೇಡಿಕೆ (೨ ಗಂಟೆಗಳು).

**೭.೪. ಹಣದುಬ್ಬರ ಮತ್ತು ಹಣದಿಳಿತ**

ಹಣದುಬ್ಬರ ಮತ್ತು ಹಣದಿಳಿತದ ಅರ್ಥ - ಹಣದುಬ್ಬರದ ವಿಧಗಳು : ವೆಚ್ಚ

ದೂಡಿಕೆಯ ಮತ್ತು ಬೇಡಿಕೆಯ ಎಳೆತದ ಹಣದುಬ್ಬರ - ಹಣದುಬ್ಬರ ನಿಯಂತ್ರಣಕ್ಕೆ ವಿತ್ತೀಯ ಮತ್ತು ಖಜಾನೆ ನೀತಿಯ ಮೂಲ ಪರಿಕರಗಳು (೪ ಗಂಟೆಗಳು)

೭.೫. ಪ್ರಾಯೋಗಿಕ ಕಾರ್ಯ ಯೋಜನೆಗಳು ಮತ್ತು ಹೊಣೇಗಳು

೭.೫.೧. ಸ್ಥಳೀಯ ಬ್ಯಾಂಕು ಮ್ಯಾನೇಜರರೊಡನೆ ಠೇವಣಿ ಸಂಗ್ರಹ, ಉದರಿ ನಿರ್ಮಾಣ, ಚೆಕ್ಕು, ಕ್ರೆಡಿಟ್ಟು ಮತ್ತು ಎ.ಟಿ.ಎಂ. ಕಾರ್ಡುಗಳ ಬಗ್ಗೆ ವಿಚಾರ ವಿನಿಮಯ.

## ಅಧ್ಯಾಯ ೮ : ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು

೮.೧. ವ್ಯಾಪಾರ ಸಿದ್ಧಾಂತ ಮತ್ತು ನೀತಿಯ ಮೂಲಾಂಶಗಳು

ವ್ಯಾಪಾರದ ತಳಹದಿ : ನಿರಪೇಕ್ಷ ಮತ್ತು ಸಾಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆ - ಸರಕು ಮತ್ತು ಆದಾಯ ವ್ಯಾಪಾರದ ಕರಾರುಗಳ ಅರ್ಥ - ಮುಕ್ತ ವ್ಯಾಪಾರ ನೀತಿ ಮತ್ತು ರಕ್ಷಣಾತ್ಮಕ ವ್ಯಾಪಾರ ನೀತಿಯ ನಡುವಣ ವ್ಯತ್ಯಾಸಗಳು (೪ ಗಂಟೆಗಳು)

೮.೨. ವಿದೇಶಿ ವಿನಿಮಯ

ವಿದೇಶಿ ವಿನಿಮಯದ ಮತ್ತು ವಿದೇಶಿ ವಿನಿಮಯ ದರದ ಅರ್ಥ : ವಿನಿಮಯ ದರದ ವಿಧಗಳು : ಸ್ಥಿರ ವಿನಿಮಯ ದರ ಮತ್ತು ತೇಲುವ ವಿನಿಮಯ ದರ ಯುರೋ ಪರಿಕಲ್ಪನೆ (೩ ಗಂಟೆಗಳು).

೮.೩. ಅಂತಾರಾಷ್ಟ್ರೀಯ ಹಣಕಾಸು ನಿಧಿ

ಸಂಘಟನೆ : ಉದ್ದೇಶಗಳು ಮತ್ತು ಕಾರ್ಯಗಳು : ವಿಶೇಷ ಪಡೆಯುವ ಹಕ್ಕುಗಳು (೩ ಗಂಟೆಗಳು).

೮.೪. ವಿಶ್ವ ಬ್ಯಾಂಕು

ಸಂಘಟನೆ : ಉದ್ದೇಶಗಳು ಮತ್ತು ಕಾರ್ಯಗಳು : ಸ್ವರೂಪ ಹೊಂದಾಣಿಕೆಯ ಸಾಲಗಳು (೨ ಗಂಟೆಗಳು).

೮.೫. ಪ್ರಾಯೋಗಿಕ ಕಾರ್ಯ ಯೋಜನೆಗಳು ಮತ್ತು ಹೊಣೆಗಳು

೮.೫.೧. ಭಾರತದ ರೂಪಾಯಿ ಮತ್ತು ವಿಶ್ವದ ಪ್ರಮುಖ ಕರೆನ್ಸಿಗಳಾದ ಅಮೇರಿಕಾದ ಡಾಲರು, ಜಪಾನಿನ ಯೆನ್ ಮತ್ತು ಯುರೋಪಿಯನ್ ಒಕ್ಕೂಟದ ಯುರೋ ನಡುವಣ ವಿನಿಮಯ ದರ ಪ್ರವೃತ್ತಿಯನ್ನು ಗಮನಿಸಿ ಚಿತ್ರ ಬಿಡಿಸುವುದು.

# ಪರಿವಿಡಿ

## ಅಧ್ಯಾಯ ೧

# ಪ್ರಸ್ತಾವನೆ

### ೧.೧. ಅರ್ಥಶಾಸ್ತ್ರದ ವ್ಯಾಖ್ಯೆಗಳು

ಯಾವುದೇ ಒಂದು ಅರ್ಥವ್ಯವಸ್ಥೆಯ ಆರ್ಥಿಕ ಚಟುವಟಿಕೆಯನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ, ಅಪರಿಮಿತ ಬಯಕೆಗಳು ಮತ್ತು ಈ ಬಯಕೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಮಿತವಾದ ಸಾಧನಗಳನ್ನು ಹೊಂದಾಣಿಕೆ ಮಾಡುವುದು ನಿರಂತರವಾಗಿ ನಡೆಯುತ್ತಿರುವ ಒಂದು ಕಾರ್ಯವಾಗಿ ಗೋಚರವಾಗುತ್ತದೆ.

ನಮ್ಮೆಲ್ಲರ ಬಯಕೆಗಳ ಸ್ವರೂಪ ತುಂಬಾ ವೈವಿಧ್ಯಮಯವಾದುದು ಎಂಬುದನ್ನು ನಾವು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ನಮ್ಮಲ್ಲಿ ಪ್ರತಿಯೊಬ್ಬರ ಬಯಕೆಗೂ ಮಿತಿಯೇ ಇಲ್ಲ. ನಮ್ಮಲ್ಲಿ ಯಾರನ್ನಾದರೂ, ನಿಮಗಿರುವ ಬಯಕೆಗಳನ್ನೆಲ್ಲಾ ಪಟ್ಟಿಮಾಡಿ ಎಂದು ತಿಳಿಸಿದರೆ, ಈ ಪಟ್ಟಿ ಎಂದೆಂದಿಗೂ ಮುಗಿಯುವುದೇ ಇಲ್ಲ. ಏಕೆಂದರೆ, ಹೊಸದಾಗಿ ಪೇಟೆಗೆ ಬರುವ ಆಕರ್ಷಕ ವಸ್ತುಗಳೆಲ್ಲವೂ ನಮ್ಮ ಬಳಿ ಇದ್ದರೆ ಎಷ್ಟು ಚೆಂದ ಎಂದು ನಮ್ಮ ಮನಸ್ಸಿಗೆ ಅನ್ನಿಸುತ್ತದೆ. ಅರ್ಥವ್ಯವಸ್ಥೆ, ಯಾವ ಸ್ವರೂಪದ್ದೇ ಆಗಿದ್ದರೂ ಅಲ್ಲಿಯ ಜನರೆಲ್ಲರಿಗೂ, ಅಪರಿಮಿತವಾದ ಬಯಕೆಗಳು ಇರುತ್ತವೆ ಎಂಬುದನ್ನು ಗಮನಿಸಬೇಕು. ಉದಾಹರಣೆಗೆ ಅಮೆರಿಕಾ ಸಂಯುಕ್ತ ಸಂಸ್ಥಾನದ ಜನರು ನಮಗಿಂತ ಶ್ರೀಮಂತರಿರಬಹುದು. ಆದರೆ, ಒಬ್ಬ ಅಮೆರಿಕನನ್ನು ನಿನಗಿರುವ ಬಯಕೆಗಳು ಯಾವುವು? ಎಂದು ಕೇಳಿದರೆ, ಅವನು ಸಹ ಒಂದು ದೊಡ್ಡ ಪಟ್ಟಿಯನ್ನೇ ನಮ್ಮ ಮುಂದಿಡುತ್ತಾನೆ. ಆದ್ದರಿಂದ, ಅರ್ಥವ್ಯವಸ್ಥೆ, ಶ್ರೀಮಂತಸ್ವರೂಪದ್ದಾಗಲೀ, ಬಡತನದಿಂದ ಕೂಡಿರುವ ರಾಷ್ಟ್ರವಾಗಲೀ, ಅಲ್ಲಿನ ಜನರಿಗೆ, ಬಯಕೆಗಳು ತುಂಬಾ ಅಪರಿಮಿತವಾದವು ಮತ್ತು ಅವುಗಳೆಲ್ಲವನ್ನೂ ತೃಪ್ತಿಪಡಿಸುವುದು ಸಾಧ್ಯವಿಲ್ಲ ಎಂಬುದನ್ನು ನಾವು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಇದೇ ಅರ್ಥವಿಜ್ಞಾನದ ಮೂಲಭೂತವಾದ ವಿಷಯ.

ಅರ್ಥವ್ಯವಸ್ಥೆಗಳ ಸ್ವರೂಪವು ಬದಲಾಗಿದ್ದರೂ, ಸಂಪನ್ಮೂಲಗಳಲ್ಲಿ ವೈವಿಧ್ಯತೆ ಇದ್ದರೂ, ಇಂತಹ ಮೂಲಭೂತ ಸಮಸ್ಯೆ ಇರುವುದಕ್ಕೆ ಕಾರಣವೇನು? ಎನ್ನುವ ಪ್ರಶ್ನೆ

ಏಳುವುದು ಸಹಜವೇ! ಇದಕ್ಕೆ ಕಾರಣವಿಷ್ಟೆ. ನಮ್ಮೆಲ್ಲರ ಬಯಕೆಗಳೆಲ್ಲವನ್ನೂ ತೃಪ್ತಿಪಡಿಸುವಷ್ಟು ಸಾಧನ ಸಂಪತ್ತು ಈ ಪ್ರಪಂಚದಲ್ಲಿಲ್ಲ. ಈ ಸಾಧನ ಸಂಪತ್ತುಗಳು ಯಾವುವು? ಇವು ಸಾಕಷ್ಟಿಲ್ಲದಿದ್ದರೆ ಇವುಗಳನ್ನು ಹೆಚ್ಚಿಸುವುದು ಸಾಧ್ಯವಿಲ್ಲವೇ? ಎಂಬ ಪ್ರಶ್ನೆ ಸಹ ನಮಗೆ ಎದುರಾಗಬಹುದು. ಸರಕು ಮತ್ತು ಸೇವೆಗಳ ಉತ್ಪಾದನೆಗೆ ನೆರವಾಗುವ ಎಲ್ಲ ಸಾಮಗ್ರಿಗಳನ್ನೂ ನಾವು ಸಾಧನ ಸಂಪತ್ತು ಎಂದು ಕರೆಯಬಹುದು. ಇದಕ್ಕೆ ಮತ್ತೊಂದು ಹೆಸರು 'ಆರ್ಥಿಕ ಸಂಪನ್ಮೂಲ'. ಸಾಮಾನ್ಯವಾಗಿ ಈ ಆರ್ಥಿಕ ಸಂಪನ್ಮೂಲಗಳನ್ನು ಎರಡು ವಿಭಾಗವಾಗಿ ನಾವು ವಿಂಗಡಿಸಿಕೊಳ್ಳುತ್ತೇವೆ. ಅವುಗಳೆಂದರೆ (೧) ಆಸ್ತಿ ಸಂಪನ್ಮೂಲಗಳು ಮತ್ತು (೨) ಮಾನವ ಸಂಪನ್ಮೂಲಗಳು.

ಆಸ್ತಿ ಸಂಪನ್ಮೂಲಗಳು, ಭೂಮಿ, ಉತ್ಪಾದನೆಗೆ ಅಗತ್ಯವಾದ ಕಚ್ಚಾಸರಕುಗಳು, ಬಂಡವಾಳ ಮುಂತಾದವನ್ನೆಲ್ಲಾ ಒಳಗೊಳ್ಳುತ್ತವೆ. ಮಾನವಸಂಪನ್ಮೂಲ, ಮಾನವರ ಶ್ರಮಶಕ್ತಿಯನ್ನು ಒಳಗೊಳ್ಳುತ್ತದೆ. ಆಸ್ತಿಸಂಪನ್ಮೂಲಗಳನ್ನು ಮತ್ತು ಮಾನವ ಸಂಪನ್ಮೂಲಗಳನ್ನು ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಗಳೆಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗುತ್ತದೆ. ಇವುಗಳನ್ನು 'ಉತ್ಪಾದನಾಂಗಗಳೆಂದು' ಕರೆಯಲಾಗುತ್ತದೆ. ಇವುಗಳಿಗಿರುವ ಮತ್ತೊಂದು ಹೆಸರು 'ಉತ್ಪಾದನಾ ಅವಯವಗಳು.'.

ಸಂಪನ್ಮೂಲಗಳು, ಆಸ್ತಿ ಸಂಪನ್ಮೂಲಗಳಾಗಲೀ, ಮಾನವಸಂಪನ್ಮೂಲವಾಗಲೀ ಇವಕ್ಕಿರುವ ಒಂದು ಸಾಮಾನ್ಯ ಲಕ್ಷಣವೆಂದರೆ, ಅವುಗಳ ಬೇಡಿಕೆಗೆ ಸಂಬಂಧಿಸಿದಂತೆ ಅವುಗಳ ನೀಡಿಕೆ ತುಂಬಾ ವಿರಳ.

ಇದಕ್ಕೆ ಒಂದು ಉದಾಹರಣೆಯನ್ನು ಗಮನಿಸಿ. ಭಾರತ ವಿಶಾಲವಾದ ರಾಷ್ಟ್ರವಷ್ಟೆ. ಇಲ್ಲಿ ಹೇರಳವಾದ ಭೂಸಂಪತ್ತಿದೆಯಷ್ಟೆ. ಆದರೆ ಇಲ್ಲಿಯ ಜನರ ಭೂಮಿಯ ಬೇಡಿಕೆಗೆ ಸಂಬಂಧಿಸಿದಂತೆ, ಭೂಮಿಯ ನೀಡಿಕೆ ವಿರಳವೇ! ಅಂದರೆ ಜನರಿಗಿರುವ ಭೂಮಿಯ ಬೇಡಿಕೆಯನ್ನೆಲ್ಲ ತೃಪ್ತಿಪಡಿಸುವಷ್ಟು ಭೂಮಿಯ ನೀಡಿಕೆ ಲಭ್ಯವಿಲ್ಲ. ಇಷ್ಟೇ ಅಲ್ಲ, ಗುಣಮಟ್ಟದ ದೃಷ್ಟಿಯಿಂದ ಸಹ ಭೂಮಿಯ ನೀಡಿಕೆ ವಿರಳ. ಅಂದರೆ, ಲಭ್ಯವಿರುವ ಭೂಮಿಯೆಲ್ಲವೂ ಉಳಲು ಯೋಗ್ಯವಾದುದಲ್ಲ. ಆದ್ದರಿಂದ, ಭೌತಿಕವಾಗಿ ಮತ್ತು ಗುಣಮಟ್ಟದ ದೃಷ್ಟಿಗಳೆರಡರಿಂದಲೂ ಭೂಮಿಯ ನೀಡಿಕೆಯು ಅದರ ಬೇಡಿಕೆಗೆ ಸಂಬಂಧಿಸಿದಂತೆ ವಿರಳವೇ. ಈ ಮಾತು ಎಲ್ಲ ಸಂಪನ್ಮೂಲಗಳಿಗೂ ಸತ್ಯ. ಆದ್ದರಿಂದ ಒಟ್ಟಾರೆ, ಸಂಪನ್ಮೂಲಗಳ ಬೇಡಿಕೆಗೆ ಸಂಬಂಧಿಸಿದಂತೆ ಅವುಗಳ ನೀಡಿಕೆ ತುಂಬಾ ವಿರಳ. ಇದು ಸಂಪನ್ಮೂಲಗಳ ಅತ್ಯಂತ ಮೂಲಲಕ್ಷಣಗಳಲ್ಲಿ ಒಂದು.

ಅರ್ಥಶಾಸ್ತ್ರ ಮುಖ್ಯವಾಗಿ, ವಿರಳ ಸಂಪನ್ಮೂಲಗಳನ್ನು ಅಪರಿಮಿತವಾದ ನಮ್ಮ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು, ಹೇಗೆ ಉಪಯೋಗಕ್ಕೆ ಹಾಕಬೇಕು ಎಂಬ ಸಮಸ್ಯೆಯನ್ನು ಅಭ್ಯಾಸ ಮಾಡುತ್ತದೆ. ಈ ಸಮಸ್ಯೆಯನ್ನು ವಿವರವಾಗಿ ಅಭ್ಯಾಸ ಮಾಡುವ ಮೊದಲು, ಅರ್ಥಶಾಸ್ತ್ರದ ವ್ಯಾಖ್ಯೆಗಳನ್ನು ನೋಡೋಣ.

## ಅರ್ಥಶಾಸ್ತ್ರದ ವ್ಯಾಖ್ಯೆ

ಅರ್ಥಶಾಸ್ತ್ರಕ್ಕೆ ನಿರ್ದಿಷ್ಟವಾದ ವ್ಯಾಖ್ಯೆ ಇನ್ನೂ ಲಭ್ಯವಿಲ್ಲ. ಈ ವಿಜ್ಞಾನ ಬಹಳ ಪ್ರಾಚೀನವಾದುದು. ಇದಕ್ಕೆ ಒಂದು ವ್ಯಾಖ್ಯೆಯನ್ನು ನಿರೂಪಿಸುವ ಪ್ರಯತ್ನ ೧೭೭೬ರಷ್ಟು ಹಿಂದೆಯೆ ಪ್ರಾರಂಭವಾಯಿತು. ಅರ್ಥಶಾಸ್ತ್ರದ ಪಿತಾಮಹರಾದ ಆಡಂ ಸ್ಮಿತ್ ತಮ್ಮ ಉದ್ಗ್ರಂಥ 'ಅನ್ ಇನ್‌ಕ್ವರಿ ಇನ್‌ಟು ದಿ ನೇಚರ್ ಅಂಡ್ ಕಾಸಸ್ ಆಫ್ ವೆಲ್ಥ್ ಆಫ್ ನೇಷನ್ಸ್' ಎಂಬುದರಲ್ಲಿ ಪ್ರಪ್ರಥಮವಾಗಿ ಅರ್ಥಶಾಸ್ತ್ರಕ್ಕೆ ಒಂದು ವ್ಯಾಖ್ಯೆಯನ್ನು ನೀಡಿದರು. ಆ ಕಾಲಕ್ಕೆ ಈ ವಿಷಯವು 'ರಾಜಕೀಯ ಅರ್ಥವಿಜ್ಞಾನ' ಎಂಬ ಹೆಸರನ್ನು ಪಡೆದಿತ್ತು. ೧೯ನೆಯ ಶತಮಾನದವರೆಗೂ ಈ ಹೆಸರು ಹಾಗೆಯೇ ಮುಂದುವರಿಯಿತು. ನಂತರ ಮಾತ್ರ ಅರ್ಥವಿಜ್ಞಾನವೆಂಬ ಹೆಸರು ಪ್ರಚಲಿತವಾಯಿತು.

ಸ್ಮಿತ್‌ರ ಜೊತೆಯಲ್ಲಿಯೆ ಅನೇಕ ಚಿಂತಕರು ಅರ್ಥವಿಜ್ಞಾನಕ್ಕೆ ಅನೇಕ ವ್ಯಾಖ್ಯೆಗಳನ್ನು ನೀಡುವ ಪ್ರಯತ್ನಗಳನ್ನು ನಡೆಸಿದರು. ಆದರೆ ಈ ಪ್ರಯತ್ನಗಳು ಗಟ್ಟಿಯಾಗಿ ಉಳಿಯಲಿಲ್ಲ. ಸ್ಮಿತ್‌ರವರ ವ್ಯಾಖ್ಯೆ ಮಾತ್ರ ೧೯ನೆಯ ಶತಮಾನದ ಮಧ್ಯಭಾಗದವರೆಗೂ ಉಳಿದುಕೊಂಡು ಬಂದಿತು. ಸ್ಮಿತ್‌ರವರ ವ್ಯಾಖ್ಯೆಯನ್ನು ನೋಡುವುದಕ್ಕೆ ಮುಂಚೆ ಪ್ರಾಸ್ತಾವಿಕವಾಗಿ ಉಳಿದ ಚಿಂತಕರು ಅರ್ಥವಿಜ್ಞಾನದ ವ್ಯಾಖ್ಯೆಯ ಬಗ್ಗೆ ಯಾವ ಅಭಿಪ್ರಾಯಗಳನ್ನು ತಾಳಿದ್ದರು ಎಂಬುದನ್ನು ಗಮನಿಸೋಣ.

ವ್ಯಾಟ್ಲೆ ಅರ್ಥವಿಜ್ಞಾನವನ್ನು 'ವಿನಿಮಯಗಳಿಗೆ ಸಂಬಂಧಿಸಿದ ಶಾಸ್ತ್ರ'ವೆಂದು ಹೇಳಿದ. ಇನ್‌ಗ್ರಾಂ ಎಂಬುವನು 'ಅದು ಹಣವನ್ನು ಗಳಿಸುವ ವಿಜ್ಞಾನ'ವೆಂದು ಅಭಿಪ್ರಾಯಪಟ್ಟಿದ್ದ. ಹರ್ನ್ ಎಂಬುವವನು 'ಇದು ಸಂಪತ್ತಿಗೆ ಸಂಬಂಧಿಸಿದ ವಿಜ್ಞಾನ ಭಾಗ'ವೆಂದು ಅಭಿಪ್ರಾಯಪಟ್ಟಿದ್ದ. ಆದರೆ ಈ ವ್ಯಾಖ್ಯೆಗಳು ಸಮಗ್ರವಾಗಿರಲಿಲ್ಲ. ಆದ್ದರಿಂದಲೇ ಆಡಂ ಸ್ಮಿತ್‌ರವರ ವ್ಯಾಖ್ಯೆ ಬಹಳ ಪ್ರಚಲಿತವಾಗಿ ಮುಂದುವರಿಯಿತು. ನಂತರ ೨೦ನೆಯ ಶತಮಾನದವರೆವಿಗೂ ಅನೇಕ ವ್ಯಾಖ್ಯೆಗಳು ಹೊರಬಂದವು. ನಾವು ಗಮನಿಸಬೇಕಾದ ಒಂದು ಅಂಶವೆಂದರೆ ಇಂದಿಗೂ ಅರ್ಥಶಾಸ್ತ್ರದ ವ್ಯಾಖ್ಯೆಯ ಬಗ್ಗೆ ಅರ್ಥ ವಿಜ್ಞಾನಿಗಳಲ್ಲಿ ಒಮ್ಮತವಿಲ್ಲ. ಪ್ರಸಿದ್ಧ ಅರ್ಥಶಾಸ್ತ್ರಜ್ಞೆಯಾದ ಬಾರ್ಬರಾ ವೂಟನ್ ಹೇಳುವಂತೆ ಆರು ಅರ್ಥವಿಜ್ಞಾನಿಗಳು ವ್ಯಾಖ್ಯೆಯ ಬಗ್ಗೆ ಚರ್ಚೆಗೆ ಕುಳಿತರೆ ಅವರು ಏಳು ಅಭಿಪ್ರಾಯಗಳೊಡನೆ ಮೇಲೇಳುತ್ತಾರೆ. ಆದ್ದರಿಂದ ನಾವು ಮೇಲೆ ಸೂಚಿಸಿರುವಂತೆ ಅರ್ಥಶಾಸ್ತ್ರಕ್ಕೆ ಖಚಿತವಾದ ವ್ಯಾಖ್ಯೆ ಲಭ್ಯವಿಲ್ಲ. ಆದರೂ ಆರ್ಥಿಕ ಚಿಂತನೆಯ ಬೆಳವಣಿಗೆಯನ್ನು ಅನುಸಿರಿಸಿ ಪ್ರಚಲಿತ ವ್ಯಾಖ್ಯೆಗಳು ಯಾವ ರೂಪವನ್ನು ತಳೆದವು ಎಂಬುದನ್ನು ಆಧಾರವಾಗಿಟುಕೊಂಡು ಅರ್ಥಶಾಸ್ತ್ರದ ವ್ಯಾಖ್ಯೆಗಳನ್ನು ನಾಲ್ಕು ಮುಖ್ಯ ಗುಂಪುಗಳಾಗಿ ವಿಂಗಡಿಸಬಹುದು. ಅವುಗಳೆಂದರೆ :

೧. ಸಂಪತ್ತಿನ ವ್ಯಾಖ್ಯೆ.

೨. ಮಾನವ ಕ್ಷೇಮಾಭ್ಯುದಯದ ವ್ಯಾಖ್ಯೆ.

೩. ವಿರಳತೆಯ ವ್ಯಾಖ್ಯೆ.

೪. ಆರ್ಥಿಕ ಬೆಳವಣಿಗೆಯ ವ್ಯಾಖ್ಯೆ.

**ಸಂಪತ್ತಿನ ವ್ಯಾಖ್ಯೆ**

ಆಡಂಸ್ಮಿತ್ ಅರ್ಥಶಾಸ್ತ್ರವನ್ನು ಸಂಪತ್ತನ್ನು ಅಧ್ಯಯನ ಮಾಡುವ ಶಾಸ್ತ್ರವೆಂದು ವಿವರಿಸಿದರು. ಇವರ ಅನೇಕ ಅನುಯಾಯಿಗಳು ಈ ವ್ಯಾಖ್ಯೆಯನ್ನು ಬಹಳವಾಗಿ ಬೆಂಬಲಿಸಿದರು. ಆದರೆ ಈ ವ್ಯಾಖ್ಯೆ ಅನೇಕ ಕಟುವಾದ ಟೀಕೆಗಳನ್ನು ಎದುರಿಸಬೇಕಾಯಿತು. ೧೯ನೆಯ ಶತಮಾನದ ಪ್ರಸಿದ್ಧ ಚಿಂತಕರುಗಳಾದ ರಸ್ಕಿನ್, ಕಾರ್ಲೈಲ್ ಮತ್ತು ಮ್ಯಾಥ್ಯೂ ಆರ್ನಾಲ್ಡ್- ಇಂತಹ ಒಂದು ವ್ಯಾಖ್ಯೆ ಅರ್ಥಶಾಸ್ತ್ರವನ್ನು ಕಗ್ಗತ್ತಲೆಯ ಶಾಸ್ತ್ರವಾಗಿ ಮಾಡುತ್ತದೆಂದು ಅಭಿಪ್ರಾಯಪಟ್ಟರು. ಸ್ವಾರ್ಥ ಮತ್ತು ಧನಾಭಿಲಾಷೆಯನ್ನು ಉತ್ತೇಜಿಸುವ ಶಾಸ್ತ್ರ ಅರ್ಥಶಾಸ್ತ್ರವಾಗುತ್ತದೆ ಎನ್ನುವ ಅಭಿಪ್ರಾಯ ಈ ವ್ಯಾಖ್ಯೆಯಿಂದ ಮೂಡುತ್ತ ದೆಂಬುದು ಅವರ ವಾದವಾಗಿತ್ತು. ಆರ್ಥಿಕ ಚಿಂತನೆಯ ಇತಿಹಾಸದ ದೃಷ್ಟಿಯಿಂದ ಗಮನಿಸುವಾಗ ಈ ಟೀಕೆಗಳು ನಮಗೆ ಆಶ್ಚರ್ಯವನ್ನುಂಟು ಮಾಡುವುದಿಲ್ಲ. ಏಕೆಂದರೆ ಧಾರ್ಮಿಕ ಭಾವನೆಗಳು ಬಹಳ ಬಲವಾಗಿದ್ದ ಕಾಲ ಅದು. ಆಧ್ಯಾತ್ಮಕ್ಕೆ ಪ್ರಾಶಸ್ತ್ಯವಿದ್ದ ಒಂದು ಸಂಧಿಕಾಲ ಕೂಡ ಅದು. ಹೀಗಿದ್ದ ಸಮಯದಲ್ಲಿ ಒಂದು ಶಾಸ್ತ್ರ ಸಂಪತ್ತನ್ನು ಗಳಿಸುವ ಮತ್ತು ವಿತರಣೆ ಮಾಡುವ ವಿಷಯವನ್ನು ಅಭ್ಯಾಸ ಮಾಡುತ್ತದೆ ಎನ್ನುವುದು ಸಹಜವಾಗಿಯೇ ಟೀಕೆಗಳನ್ನು ಎದರಿಸಬೇಕಾಗಿತ್ತು.

ಸಂಪತ್ತಿನ ವ್ಯಾಖ್ಯೆಯು ಅರ್ಥಶಾಸ್ತ್ರದ ವ್ಯಾಪ್ತಿಯನ್ನು ಸಹ ಬಹುಮಟ್ಟಿಗೆ ಸಂಕುಚಿತ ಗೊಳಿಸುತ್ತದೆ ಎನ್ನುವುದು ಕಟುವಾದ ಟೀಕೆಯಾಗಿತ್ತು. ಏಕೆಂದರೆ ಅರ್ಥಶಾಸ್ತ್ರವು ಕೇವಲ ಸಂಪತ್ತನ್ನು ಅಭ್ಯಾಸ ಮಾಡುವ ಶಾಸ್ತ್ರವೆಂದು ಒಪ್ಪಿಕೊಂಡರೆ ಅದು ಹಣವನ್ನು ಅರ್ಜಿಸುತ್ತಿರುವವರ ಚಟುವಟಿಕೆಗಳನ್ನು ಮಾತ್ರ ಅಭ್ಯಾಸ ಮಾಡಬೇಕಾಗುತ್ತದೆ. ನಿರುದ್ಯೋಗಿಗಳ ವಿಷಯವನ್ನು ಸಂಪೂರ್ಣವಾಗಿ ಅರ್ಥಶಾಸ್ತ್ರದ ವ್ಯಾಪ್ತಿಯಿಂದ ಹೊರಗಿಡಬೇಕಾಗುತ್ತದೆ. ಹೀಗಾದ ಪಕ್ಷದಲ್ಲಿ ಸಹಜವಾಗಿಯೇ ಅರ್ಥಶಾಸ್ತ್ರವು ಬಹಳ ಸಂಕುಚಿತ ವ್ಯಾಪ್ತಿಯುಳ್ಳ ಒಂದು ಶಾಸ್ತ್ರವಾಗುತ್ತದೆ.

ಮೇಲಿನ ಕಾರಣಗಳಿಗಾಗಿ ಸಂಪತ್ತಿನ ವ್ಯಾಖ್ಯೆ ಬರಬರುತ್ತಾ ತನ್ನ ಪ್ರಾಧಾನ್ಯತೆಯನ್ನು ಕಳೆದುಕೊಳ್ಳಬೇಕಾಯಿತು. ೧೯ನೆಯ ಶತಮಾನದ ಕೊನೆಯ ಭಾಗದ ವೇಳೆಗೆ ಈ ವ್ಯಾಖ್ಯೆ ಸಂಪೂರ್ಣವಾಗಿ ಬಲಹೀನವಾಯಿತು. ಈ ವೇಳೆಗೆ ಆರ್ಥಿಕ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳು ಉಂಟಾಗಿದ್ದವು. ಅರ್ಥಶಾಸ್ತ್ರದ ಚಿಂತನೆ ಕೂಡ ಬಹಳ ವೇಗವಾದ ಗತಿಯಲ್ಲಿ ಬದಲಾವಣೆಗಳನ್ನು ಅನುಭವಿಸಿತ್ತು. ಸಹಜವಾಗಿಯೇ ಅರ್ಥಶಾಸ್ತ್ರದ ವ್ಯಾಖ್ಯೆ ಒಂದು ಹೊಸ ರೂಪವನ್ನು ಪಡೆದುಕೊಳ್ಳುವುದು ಅನಿವಾರ್ಯವಾಗಿತ್ತು. ಈ ಕಾಲದಲ್ಲಿ ಅರ್ಥಶಾಸ್ತ್ರಕ್ಕೆ ಪ್ರೊ.ಆಲ್‌ಫ್ರೆಡ್ ಮಾರ್ಷಲ್‌ರು ಒಂದು ಹೊಸ ವ್ಯಾಖ್ಯೆಯನ್ನು

ದೊರಕಿಸಿಕೊಟ್ಟರು. ಈ ವ್ಯಾಖ್ಯೆ ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆಯೆಂದು ಪ್ರಸಿದ್ಧವಾಯಿತು.

**ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆ**

ಆಲ್‌ಫ್ರೆಡ್ ಮಾರ್ಷಲ್‌ರವರು ತಮ್ಮ ಪ್ರಸಿದ್ಧ ಗ್ರಂಥವಾದ 'ಪ್ರಿನ್ಸಿಪಲ್ಸ್ ಆಫ್ ಎಕನಾಮಿಕ್ಸ್' ಎಂಬುದರಲ್ಲಿ ಅರ್ಥಶಾಸ್ತ್ರದ ವ್ಯಾಖ್ಯೆ ಮತ್ತು ವಿಷಯ ಸ್ವರೂಪವನ್ನು ಕುರಿತು ಗಂಭೀರವಾದ ವಿಚಾರ ನಡೆಸಿದರು. ಅವರು ಅರ್ಥಶಾಸ್ತ್ರವು ಸಂಪತ್ತನ್ನು ಅಧ್ಯಯನ ಮಾಡುವ ಶಾಸ್ತ್ರವೆಂಬ ವಿಚಾರವನ್ನು ಒಪ್ಪಲಿಲ್ಲ. ಅವರ ಪ್ರಕಾರ ಅದು 'ಒಂದು ಕಡೆ ಸಂಪತ್ತನ್ನು ಅಧ್ಯಯನ ಮಾಡುವ ಶಾಸ್ತ್ರ, ಆದರೆ ಅದಕ್ಕಿಂತ ಹೆಚ್ಚಾಗಿ ಅದು ಮಾನವನ ಆರ್ಥಿಕ ಚಟುವಟಿಕೆಗಳನ್ನು ಅಧ್ಯಯನ ಮಾಡುವ ಶಾಸ್ತ್ರ'. ಆದ್ದರಿಂದ ಇವರು ಅರ್ಥವಿಜ್ಞಾನವು ಮುಖ್ಯವಾಗಿ ಮಾನವನು ಭೌತಿಕ ಸಂಪತ್ತನ್ನು ಹೇಗೆ ಪಡೆದುಕೊಳ್ಳುತ್ತಾನೆ ಮತ್ತು ಅದನ್ನು ಹೇಗೆ ವಿತರಣೆ ಮಾಡುತ್ತಾನೆ ಎನ್ನುವುದನ್ನು ಅಭ್ಯಾಸ ಮಾಡುವ ಶಾಸ್ತ್ರವೆಂದು ಅಭಿಪ್ರಾಯಪಟ್ಟರು. ಅವರ ಮಾತುಗಳಲ್ಲೇ ಹೇಳಬೇಕಾದರೆ "ರಾಜಕೀಯ ಅರ್ಥವಿಜ್ಞಾನ ಅಥವಾ ಅರ್ಥಶಾಸ್ತ್ರ ಮಾನವನ ಸಾಧಾರಣ ಚಟುವಟಿಕೆಗಳನ್ನು ಪರಿಶೀಲಿಸುತ್ತದೆ. ಅದು ಅವನು ತನ್ನ ಕಲ್ಯಾಣಕ್ಕಾಗಿ ಭೌತಿಕ ಸಂಪತ್ತನ್ನು ಹೇಗೆ ಗಳಿಸುತ್ತಾನೆ ಮತ್ತು ಉಪಯೋಗಿಸುತ್ತಾನೆ ಎಂಬುದಕ್ಕೆ ಸಂಬಂಧಿಸಿದ ವಿಷಯಗಳನ್ನು ಪರಿಶೀಲಿಸುವ ಶಾಸ್ತ್ರ".

ಮಾರ್ಷಲ್‌ರವರ ಮೇಲಿನ ವ್ಯಾಖ್ಯೆ ಸಂಪತ್ತಿನ ವ್ಯಾಖ್ಯೆಗೆ ಹೋಲಿಸಿದಂತೆ ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತರುವುದು ಸ್ಪಷ್ಟ. ಮಾರ್ಷಲ್‌ರವರು ಮಾನವನ ಕ್ಷೇಮಾಭ್ಯುದಯವನ್ನು ಅರ್ಥಶಾಸ್ತ್ರದಲ್ಲಿನ ಪ್ರಮುಖವಾದ ವಿಷಯವನ್ನಾಗಿ ಒತ್ತಿ ಹೇಳುತ್ತಾರೆ. ಇವರ ವ್ಯಾಖ್ಯೆಯನ್ನು ಅನೇಕ ಅನುಯಾಯಿಗಳು ಬಹುಮಟ್ಟಿಗೆ ಬೆಂಬಲಿಸಿದರು. ಎಡ್ವಿನ್ ಕ್ಯಾನನ್ ಮತ್ತು ಎ.ಸಿ. ಪಿಗೋ ಇವರಲ್ಲಿ ಮುಖ್ಯರಾದವರು.

ಎಡ್ವಿನ್ ಕ್ಯಾನನ್ "ಮಾನವನ ಭೌತಿಕ ಕ್ಷೇಮಾಭ್ಯುದಯವು ಯಾವ ಕಾರಣಗಳನ್ನು ಅವಲಂಬಿಸುತ್ತದೆ ಎನ್ನುವುದನ್ನು ವಿವರಿಸುವುದೇ ಅರ್ಥಶಾಸ್ತ್ರದ ಹೆಗ್ಗುರಿ" ಎಂದು ಅಭಿಪ್ರಾಯಪಟ್ಟರು. ಪಿಗೋವಿನ ಪ್ರಕಾರ "ಹಣದ ಮಾನದಂಡದೊಡನೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಂಬಂಧಿಸುವ ಸಾಮಾಜಿಕ ಕ್ಷೇಮಾಭ್ಯುದಯದ ಪರಿಶೀಲನೆಯೇ ಅರ್ಥಶಾಸ್ತ್ರದ ಅಧ್ಯಯನದ ಮುಖ್ಯ ವಿಷಯ".

ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆ ಅರ್ಥಶಾಸ್ತ್ರದ ನಿರ್ವಚನಕ್ಕೆ ಸಂಬಂಧಿಸಿದ ಕಳಂಕವನ್ನು ಹೋಗಲಾಡಿಸಿದ್ದು ದಿಟ. ಮಾರ್ಷಲ್ ಮತ್ತು ಅವರ ಅನುಯಾಯಿಗಳ ಪ್ರಕಾರ ಅರ್ಥಶಾಸ್ತ್ರ ಕೇವಲ ಸಂಪತ್ತನ್ನು ಅಧ್ಯಯನ ಮಾಡುವ ಶಾಸ್ತ್ರವಲ್ಲ. ಆದ್ದರಿಂದ ಅದು ಕಗ್ಗತ್ತಲೆಯ ಶಾಸ್ತ್ರವೂ ಅಲ್ಲ, ಸಂಕುಚಿತ ವ್ಯಾಪ್ತಿಯುಳ್ಳ ಶಾಸ್ತ್ರವೂ ಅಲ್ಲ. ಮಾನವ

ಕ್ಷೇಮಾಭ್ಯುದಯ ವ್ಯಾಖ್ಯೆ ಬಹಳ ಕಾಲದವರೆಗೆ ಪ್ರಸಿದ್ಧವಾಗಿತ್ತು. ೨೦ನೆಯ ಶತಮಾನದ ಪ್ರಥಮಾರ್ಧದವರೆಗೂ ಈ ವ್ಯಾಖ್ಯೆ ಬಹಳ ಪ್ರಚಾರದಲ್ಲಿತ್ತು. ಆದರೆ ಆರ್ಥಿಕ ಚಿಂತನೆ ಬೆಳೆದಂತೆ, ಪ್ರಪಂಚದಲ್ಲಿ ಆರ್ಥಿಕ ಬದಲಾವಣೆಗಳು ತಲೆದೋರಿದಂತೆ ಅರ್ಥಶಾಸ್ತ್ರದ ಅಧ್ಯಯನದ ವಿಷಯ ಮತ್ತು ವ್ಯಾಪ್ತಿ ಅನೇಕ ಬದಲಾವಣೆಗಳನ್ನು ಹೊಂದಬೇಕಾಯಿತು.

೧೯೩೨ರಲ್ಲಿ ಲಿಯೋನಲ್ ರಾಬಿನ್ಸ್ ಎಂಬ ಅರ್ಥವಿಜ್ಞಾನಿ ಅರ್ಥಶಾಸ್ತ್ರದ ವ್ಯಾಖ್ಯೆಯನ್ನು ನವೀನ ರೀತಿಯಲ್ಲಿ ರೂಪಿಸುವುದು ಅಗತ್ಯವೆಂದು ವಾದಿಸಿದ್ದಾನೆ. ಅವನು ತನ್ನ ವಾದವನ್ನು 'ನೇಚರ್ ಆಂಡ್ ಸಿಗ್‌ನಿಫಿಕೆನ್ಸ್ ಆಫ್ ಎಕನಾಮಿಕ್' ಎಂಬ ಗ್ರಂಥದಲ್ಲಿ ಮಂಡಿಸಿದ. ರಾಬಿನ್ಸ್ ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆಯನ್ನು ಏಕೆ ಒಪ್ಪುವುದಕ್ಕಾಗುವುದಿಲ್ಲವೆಂಬುದಕ್ಕೆ ಅನೇಕ ಬಲವಾದ ಕಾರಣಗಳನ್ನು ನೀಡಿದ.

ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆ ಕೇವಲ ಭೌತಿಕ ಸಂಪತ್ತನ್ನು ಮಾತ್ರ ಅರ್ಥಶಾಸ್ತ್ರದ ವ್ಯಾಪ್ತಿಯೊಳಕ್ಕೆ ತರುತ್ತದೆ. ಅದು ಅಭೌತಿಕ ವಿಷಯಗಳನ್ನು ತನ್ನ ವ್ಯಾಪ್ತಿಯಿಂದ ಹೊರಗಿಡುತ್ತದೆ. ಆದರೆ ವಾಸ್ತವ ಜೀವನದಲ್ಲಿ ಭೌತಿಕ ಮತ್ತು ಅಭೌತಿಕ ವಸ್ತುಗಳ ನಡುವೆ ಗೆರೆಯನ್ನು ಹಾಕಿ ಅವುಗಳನ್ನು ಪರಸ್ಪರ ಬೇರ್ಪಡಿಸುವುದು ಸಾಧ್ಯವಿಲ್ಲ. ಉದಾಹರಣೆಗೆ ವೈದ್ಯರು, ವಕೀಲರು, ಅಧ್ಯಾಪಕರು ಇವರುಗಳ ಸೇವೆಯನ್ನು ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆ ಅರ್ಥಶಾಸ್ತ್ರದ ವ್ಯಾಪ್ತಿಯಿಂದ ಹೊರಗಿಡುತ್ತದೆ. ಆದರೆ ನಿಜವಾದ ಜೀವನದಲ್ಲಿ ಇವು ಬಹಳ ಮುಖ್ಯವಾದ ವಿಷಯಗಳು. ಹಾಗೆಯೇ ಮಾನವ ಕ್ಷೇಮಾಭ್ಯುದಯವನ್ನು ಸಾಧಿಸುವ ಭೌತಿಕ ವಿಷಯಗಳ ಅಧ್ಯಯನ ಅರ್ಥಶಾಸ್ತ್ರದ ಗುರಿಯೆಂದು ಒಪ್ಪಿಕೊಂಡರೆ, ಮದ್ಯ, ಅಫೀಮು ಮುಂತಾದವುಗಳ ಉತ್ಪಾದನೆ ಮತ್ತು ಅವುಗಳ ಅಧ್ಯಯನ ಅರ್ಥಶಾಸ್ತ್ರದ ವ್ಯಾಪ್ತಿಯೊಳಕ್ಕೆ ಬರುವುದಿಲ್ಲ. ಏಕೆಂದರೆ ಈ ವಸ್ತುಗಳು ಮಾನವನ ಕ್ಷೇಮಾಭ್ಯುದಯಕ್ಕೆ ಹಾನಿಯನ್ನುಂಟುಮಾಡುವಂಥವು. ಆದರೆ ನಿಜವಾದ ಜೀವನದಲ್ಲಿ ಪ್ರತಿಯೊಂದು ಅರ್ಥವ್ಯವಸ್ಥೆಯಲ್ಲಿಯೂ ಈ ಚಟುವಟಿಕೆಗಳು ಬಹಳ ಮುಖ್ಯವಾದವು. ಆದ್ದರಿಂದ ರಾಬಿನ್ಸ್‌ನ ಪ್ರಕಾರ ಅರ್ಥಶಾಸ್ತ್ರ ಇವುಗಳ ಅಧ್ಯಯನವನ್ನು ಕೂಡ ಮಾಡಲೇಬೇಕು.

ಪಿಗೋವಿನ ವ್ಯಾಖ್ಯೆಯನ್ನು ನಾವು ಗಮನಿಸುವುದಾದರೆ ಹಣದೊಡನೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಂಬಂಧಿಸಬಹುದಾದ ವಿಷಯಗಳು ಅರ್ಥಶಾಸ್ತ್ರದ ವ್ಯಾಪ್ತಿಯೊಳಕ್ಕೆ ಬರುತ್ತದೆ. ಆದರೆ ಕ್ಷೇಮಾಭ್ಯುದಯವನ್ನು ಅಳತೆ ಮಾಡಲು ಹಣ ಸಮರ್ಪಕವಾದ ಮಾನದಂಡವಾಗಬಲ್ಲದೆ? ಎಂಬ ಪ್ರಶ್ನೆ ಏಳುತ್ತದೆ. ಹಣದ ವೆಚ್ಚದಿಂದ ದೊರೆಯುವ ತುಷ್ಟಿಗುಣ ವ್ಯಕ್ತಿಯಿಂದ ವ್ಯಕ್ತಿಗೆ ತುಂಬಾ ಭಿನ್ನವಾಗಿರುತ್ತದೆ ಎನ್ನುವ ವಿಷಯ ನಿರ್ವಿವಾದವಾದುದು. ಈ ಕಾರಣದಿಂದ ಸಹ ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆಯನ್ನು ಪಿಗೋ ನಿರೂಪಿಸಿರುವ ರೀತಿಯಲ್ಲಿ ಒಪ್ಪುವುದು ಕಷ್ಟವಾಗುತ್ತದೆ.

ಇತರ ಕೆಲವು ಚಿಂತಕರು ಕ್ಷೇಮಾಭ್ಯುದಯ ವ್ಯಾಖ್ಯೆಯ ಅರ್ಥಶಾಸ್ತ್ರವನ್ನು ಕೆಲವು

ಕಾರಣಗಳಿಗಾಗಿ ಟೀಕಿಸಿದ್ದಾರೆ. ಈ ವ್ಯಾಖ್ಯೆಯು ಅರ್ಥಶಾಸ್ತ್ರವನ್ನು ಶುದ್ಧವಾದ ಸಮಾಜ ವಿಜ್ಞಾನವನ್ನಾಗಿ ಮಾಡಿಬಿಡುತ್ತದೆ. ಅಂದರೆ ಇದು ಮಾನವನನ್ನು ಸಮಾಜದ ಒಂದು ಭಾಗವನ್ನಾಗಿ ಅಭ್ಯಾಸ ಮಾಡುತ್ತದೆ. ಆದರೆ ಅನೇಕರು ಸಮಾಜದಿಂದ ಸಂಪೂರ್ಣವಾಗಿ ಬೇರ್ಪಟ್ಟು ಜೀವನ ನಡೆಸುತ್ತಿರಬಹುದು. ಉದಾಹರಣೆಗೆ ಹಿಮಾಲಯ ಪರ್ವತದಲ್ಲಿ ಒಬ್ಬ ಯೋಗಿ ತಪಸ್ಸು ಮಾಡುತ್ತಿರಬಹುದು ಅಥವಾ ರಾಬಿನ್‌ಸನ್ ಕ್ರೂಸೋವಿನಂತೆ ಅನಿವಾರ್ಯವಾಗಿ ಏಕಾಂತ ಜೀವನ ನಡೆಸುತ್ತಿರಬಹುದು. ಮಾರ್ಷಲ್ ಮತ್ತು ಪಿಗೋರವರ ನಿರೂಪಣೆಗಳಂತೆ ಇವರ ಜೀವನ ಕುರಿತ ಅಧ್ಯಯನ ಅರ್ಥಶಾಸ್ತ್ರದ ವ್ಯಾಪ್ತಿಯಿಂದ ಹೊರಗೆ ಬೀಳುತ್ತವೆ. ಆದರೆ ವಾಸ್ತವವಾಗಿ ಇವರ ಜೀವನವನ್ನು ಕೂಡ ಕೆಲವು ಮೂಲಭೂತ ಆರ್ಥಿಕ ತತ್ವಗಳು ಆಳುತ್ತವೆ. ಆದ್ದರಿಂದ ಶುದ್ಧ ಸಮಾಜ ವಿಜ್ಞಾನದ ವಿಷಯವನ್ನಾಗಿ ಅರ್ಥಶಾಸ್ತ್ರವನ್ನು ಒಪ್ಪಿಕೊಳ್ಳುವುದಕ್ಕಿಂತ ಮಾನವನಿಗೆ ಮತ್ತು ಅವನ ಆರ್ಥಿಕ ಚಟುವಟಿಕೆಗಳಿಗೆ ಹೆಚ್ಚು ಮಹತ್ವವನ್ನು ನೀಡುವುದು ಮುಖ್ಯವಾಗುತ್ತದೆ.

ಮೇಲಿನ ಮುಖ್ಯವಾದ ಕಾರಣಗಳಿಗಾಗಿ ರಾಬಿನ್ಸ್ ತಮ್ಮ ಗ್ರಂಥದಲ್ಲಿ ಮಾರ್ಷಲ್‌ನ ವ್ಯಾಖ್ಯೆಯನ್ನು ತಿರಸ್ಕರಿಸುತ್ತಾರೆ. ಅದಕ್ಕೆ ಬದಲಾಗಿ ಅರ್ಥಶಾಸ್ತ್ರಕ್ಕೆ ತಮ್ಮದೇ ಆದ ಹೊಸ ವ್ಯಾಖ್ಯೆಯೊಂದನ್ನು ರೂಪಿಸುತ್ತಾರೆ. ಇವರ ನಿರ್ವಚನವು ವಿರಳತೆಯ ವ್ಯಾಖ್ಯೆಯೆಂದು ಪ್ರಸಿದ್ಧವಾಗಿದೆ.

### ವಿರಳತೆಯ ವ್ಯಾಖ್ಯೆ

ಲಿಯೋನಲ್ ರಾಬಿನ್ಸ್‌ನ ಪ್ರಕಾರ ಅರ್ಥಶಾಸ್ತ್ರ "ಸಂಪತ್ತನ್ನಾಗಲಿ - ಮಾನವ ಕ್ಷೇಮಾಭ್ಯುದಯವನ್ನಾಗಲಿ ಮುಖ್ಯವಾಗಿ ಅಧ್ಯಯನ ಮಾಡುವ ಶಾಸ್ತ್ರವಲ್ಲ. ಅವರು ಈ ಶಾಸ್ತ್ರವನ್ನು, ಅಪರಿಮಿತವಾದ ಬಯಕೆಗಳು, ಮಿತಿಯುಳ್ಳ ಹಾಗೂ ವಿವಿಧ ಉಪಯೋಗಗಳಿಗೆ ಆಗುವ ಸಾಧನಗಳು, ಈ ಕಾರಣಗಳಿಂದ ಉದ್ಭವಿಸುವ ಆಯ್ಕೆ, ಈ ಪರಿಸ್ಥಿತಿಯಲ್ಲಿ ಮನುಷ್ಯ ನಡೆದುಕೊಳ್ಳುವ ರೀತಿಯನ್ನು ಅಧ್ಯಯನ ಮಾಡುವುದೇ ಅರ್ಥ ಶಾಸ್ತ್ರದ ಗುರಿ" ಎಂದು ವಾದಿಸುತ್ತಾರೆ. ರಾಬಿನ್ಸ್‌ರವರ ವ್ಯಾಖ್ಯೆವನ್ನು ನಾವು ಕೆಳಗಿನಂತೆ ವಿಶದೀಕರಿಸಬಹುದು.

ಮಾನವನ ಬಯಕೆಗಳು ಅಪರಿಮಿತ. ಅವನ ಬಯಕೆಗಳಿಗೆ ಮಿತಿಯೇ ಇಲ್ಲ. ಒಂದು ಬಯಕೆ ಪೂರ್ಣವಾಗುತ್ತಿದಂತೆಯೇ ಮತ್ತೊಂದು ಬಯಕೆ ತಾನಾಗಿಯೆ ಹುಟ್ಟಿಕೊಂಡಿರುತ್ತದೆ. ಆದ್ದರಿಂದ ಇವೆಲ್ಲ ಬಯಕೆಗಳನ್ನು ಪೂರೈಸಿಕೊಳ್ಳುವ ಸತತ ಪ್ರಯತ್ನದಲ್ಲಿ ಅವನು ತೊಡಗಿರುತ್ತಾನೆ. ದುರದೃಷ್ಟವಶಾತ್ ಮಾನವನು ಬಯಕೆಗಳನ್ನು ತೃಪ್ತಿಗೊಳಿಸಲು ಬೇಕಾದ ಸಾಧನಗಳು ವಿರಳವಾಗಿವೆ. ಸರಕು ಮತ್ತು ಸೇವೆಗಳು ಮಾನವನ ಬಯಕೆಗಳನ್ನು ತೃಪ್ತಿಪಡಿಸುವ ಸಾಧನಗಳು. ಇವುಗಳ ನೀಡಿಕೆಯು ಅವುಗಳ ಬೇಡಿಕೆಗೆ ಹೋಲಿಸಿದಂತೆ ವಿರಳವಾಗಿದೆ. ಆದ್ದರಿಂದ ಮಾನವನು ತನ್ನ ಬಯಕೆಗಳನ್ನು ತೃಪ್ತಿಗೊಳಿಸುವಾಗ

ಲಭ್ಯವಿರುವ ಸಾಧನಗಳನ್ನು ಗಮನಿಸಿ ಅತ್ಯಂತ ಮುಖ್ಯವಾದ ಬಯಕೆಗಳನ್ನು ಮಾತ್ರ ತೃಪ್ತಿಪಡಿಸಬೇಕಾಗುತ್ತದೆ.

ಮಾನವನ ಬಯಕೆಗಳನ್ನು ತೃಪ್ತಿಗೊಳಿಸುವ ಸಾಧನಗಳಿಗೆ ಮತ್ತೊಂದು ವಿಶೇಷ ಗುಣವಿದೆ. ಆದೆಂದರೆ ಈ ವಿರಳವಾದ ಸಾಧನಗಳನ್ನು ಅನೇಕ ಉಪಯೋಗಗಳಿಗೆ ಹಾಕುವುದು ಸಾಧ್ಯ. ಆದ್ದರಿಂದ ತನ್ನ ಅತಿ ಮುಖ್ಯವಾದ ಬಯಕೆಗಳನ್ನು ತೃಪ್ತಿಪಡಿಸಿ ಕೊಳ್ಳುವುದಕ್ಕೆ ಮಾತ್ರ ಇದನ್ನು ಉಪಯೋಗಿಸಬೇಕಾಗುತ್ತದೆ. ಹೀಗಾಗಿ ಪ್ರತಿಯೊಂದು ಘಟ್ಟದಲ್ಲೂ ಮಾನವನಿಗೆ ಯಾವ ಬಯಕೆಯನ್ನು ತೃಪ್ತಿಪಡಿಸಿಕೊಳ್ಳಬೇಕು ಎನ್ನುವ ಪ್ರಶ್ನೆ ಹುಟ್ಟುತ್ತದೆ. ಉದಾಹರಣೆಗೆ ಒಬ್ಬ ಅನುಭೋಗಿಯ ಬಳಿ ೨೦ ರೂಪಾಯಿಗಳಿದ್ದರೆ ಅವನು ಒಂದು ಅರ್ಥಶಾಸ್ತ್ರ ಪುಸ್ತಕವನ್ನು ಕೊಂಡುಕೊಳ್ಳಲು ಉಪಯೋಗಿಸಬಹುದು ಅಥವಾ ಉತ್ತಮವಾದ ಒಂದು ಭೋಜನ ಗೃಹದಲ್ಲಿ ಊಟಮಾಡಲು ಅದನ್ನು ಖರ್ಚು ಮಾಡಬಹುದು. ಇವುಗಳಲ್ಲಿ ಯಾವುದನ್ನು ಆಯ್ದುಕೊಳ್ಳಬೇಕೆಂಬುದನ್ನು ಅನುಭೋಗಿ ನಿರ್ಧರಿಸಬೇಕು. ಈ ರೀತಿ ನಿರ್ಧಾರಮಾಡುವಾಗ ಮಾನವ ಹೇಗೆ ನಡೆದುಕೊಳ್ಳುತ್ತಾನೆ ಎನ್ನುವುದನ್ನು ಅಭ್ಯಾಸ ಮಾಡುವುದೇ ಅರ್ಥಶಾಸ್ತ್ರದ ಹೆಗ್ಗುರಿಯೆಂದು ರಾಬಿನ್ಸ್ ಅಭಿಪ್ರಾಯಪಡುತ್ತಾರೆ.

ರಾಬಿನ್ಸ್‌ರವರ ನಿರೂಪಣೆ ಎಲ್ಲಾ ಸಮಾಜದ ಮತ್ತು ಎಲ್ಲ ವರ್ಗದ ಜನರಿಗೂ ಅನ್ವಯಿಸುತ್ತದೆಂಬುದು ಸ್ಪಷ್ಟ. ಏಕೆಂದರೆ ಒಂಟಿಯಾಗಿ ಜೀವಿಸುತ್ತಿರುವ ಯೋಗಿಗಾಗಲಿ, ರಾಬಿನ್‌ಸನ್ ಕ್ರೂಸೋವಿನಂತೆ ಸಮಾಜ ಜೀವನದಿಂದ ಅನಿವಾರ್ಯವಾಗಿ ಬೇರ್ಪಟ್ಟಿರುವ ವ್ಯಕ್ತಿಗಾಗಲಿ ಮೂಲಭೂತವಾಗಿ ಬಯಕೆಗಳು ಮತ್ತು ಸಾಧನಗಳ ನಡುವಣ ಸಮಸ್ಯೆ ಇದ್ದೇ ತೀರುತ್ತದೆ. ಹಾಗೆಯೆ ಸಂಪೂರ್ಣವಾಗಿ ಕೇಂದ್ರಿಕೃತ ಆಡಳಿತವುಳ್ಳ ಸಮಾಜವಾದಿ ರಾಷ್ಟ್ರವಾಗಲಿ, ಬಂಡವಾಳಶಾಹಿ ರಾಷ್ಟ್ರವಾಗಲಿ ಅಥವಾ ಮಿಶ್ರ ಅರ್ಥ ವ್ಯವಸ್ಥೆಯಾಗಲಿ, ರಾಷ್ಟ್ರ ಮಿತವಾದ ಸಾಧನ ಸಂಪತನ್ನು ರಾಷ್ಟ್ರೀಯ ಪ್ರಗತಿಯ ನಾನಾ ಗುರಿಗಳಿಗೆ ಹೇಗೆ ನಿಯೋಜಿಸಬೇಕೆಂಬ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ.

ರಾಬಿನ್ಸ್‌ರವರ ವ್ಯಾಖ್ಯೆ ಬಹು ಮನ್ನಣೆಯನ್ನು ಪಡೆಯಿತು. ಅನೇಕ ಅರ್ಥ ವಿಜ್ಞಾನಿಗಳು ರಾಬಿನ್ಸ್‌ರ ವ್ಯಾಖ್ಯೆಯನ್ನು ಬೆಂಬಲಿಸಿದರು. ಈ ವ್ಯಾಖ್ಯೆ ಅರ್ಥಶಾಸ್ತ್ರಕ್ಕೆ ವಿಶಾಲವಾದ ವ್ಯಾಪ್ತಿಯನ್ನು ದೊರಕಿಸಿಕೊಟ್ಟಿತೆಂಬ ಸಮಾಧಾನವನ್ನು ಅವರು ವ್ಯಕ್ತಪಡಿಸಿ ದರು. ಏಕೆಂದರೆ ಈ ವ್ಯಾಖ್ಯೆಯ ಪ್ರಕಾರ ಮಿತವಾದ ಸಾಧನಗಳು ಮತ್ತು ಅಪರಿಮಿತ ವಾದ ಬಯಕೆಗಳ ನಡುವಣ ಹೊಂದಾಣಿಕೆಯನ್ನು ಅಭ್ಯಾಸಮಾಡುವುದು ಅರ್ಥಶಾಸ್ತ್ರದ ಗುರಿಯಾಗಿರುವುದರಿಂದ ಮಾನವನ ಸಮಸ್ತ ಚಟುವಟಿಕೆಗಳನ್ನು ಅದು ಒಳಗೊಳ್ಳುತ್ತದೆ. ಮಾನವ ಕ್ಷೇಮಾಭ್ಯುದಯ ವ್ಯಾಖ್ಯೆಯಾದರೆ ಬಯಕೆಗಳ ಒಳಿತು-ಕೆಡಕುಗಳ ನಡುವೆ ಭೇದವನ್ನು ಮನಗಂಡಿತ್ತು. ಆದರೆ ವಿರಳತೆಯ ವ್ಯಾಖ್ಯೆ ಹಾಗಲ್ಲ. ಬಯಕೆಗಳ ಒಳಿತು-ಕೆಡಕುಗಳ ವಿಚಾರವನ್ನು ಮಾಡುವುದು ಅರ್ಥಶಾಸ್ತ್ರದ ಕಾರ್ಯವೇ ಅಲ್ಲ. ಈ

ಬಯಕೆಗಳು ಒಳ್ಳೆಯವಾಗಿರಬಹುದು ಅಥವಾ ಕೆಟ್ಟವಾಗಿರಬಹುದು. ಆದರೆ ಅಪರಿಮಿತ ವಾದ ಬಯಕೆಗಳು ಮತ್ತು ಮಿತವಾದ ಸಾಧನಗಳ ನಡುವಣ ಎಲ್ಲ ಸಮಸ್ಯೆಗಳನ್ನು ಚರ್ಚಿಸುವುದೇ ಅರ್ಥಶಾಸ್ತ್ರದ ಗುರಿ. ರಾಬಿನ್ಸ್‌ರ ವ್ಯಾಖ್ಯೆಯನ್ನು ಸಮರ್ಥಿಸಿದ ಪ್ರಮುಖ ಅರ್ಥವಿಜ್ಞಾನಿಗಳೆಂದರೆ ಎರಿಕ್ ರೋಲ್, ಅಲೆಕ್ ಮಾಕ್‌ಫಿ, ಎ.ಪಿ. ಲರ್‌ನರ್, ಸ್ಟಿಟೋಸ್ಕಿ, ಸ್ಟಿಗ್ಲರ್, ಕೇರನ್ ಕ್ರಾಸ್ ಮತ್ತು ಲಿನ್. ಇವರು ರಾಬಿನ್ಸ್‌ನ ವ್ಯಾಖ್ಯೆ ಅರ್ಥಶಾಸ್ತ್ರದ ವ್ಯಾಪ್ತಿಯನ್ನು ತುಂಬ ವಿಶಾಲಗೊಳಿಸಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ.

ರಾಬಿನ್ಸ್‌ನ ವ್ಯಾಖ್ಯೆಯು ಮೇಲೆ ವಿವರಿಸಿದಂತೆ ಮನ್ನಣೆಗೆ ಪಾತ್ರವಾಗಿದ್ದರು ಕೂಡ ಅನೇಕರು ಇದನ್ನು ಕಟುವಾಗಿ ಟೀಕಿಸಿದ್ದಾರೆ. ಈ ಟೀಕೆಗಳಲ್ಲಿ ಕೆಲವು ಮುಖ್ಯವಾದವನ್ನು ಇಲ್ಲಿ ಗಮನಿಸಬಹುದು.

ರಾಬಿನ್ಸ್‌ನ ವ್ಯಾಖ್ಯೆ ಕ್ಷೇಮಾಭ್ಯುದಯ ಪರಿಭಾವನೆಯಿಂದ ದೂರಹೋಗಿದೆಯೆಂದು ಹೇಳಿಕೊಂಡರೂ ಆ ವ್ಯಾಖ್ಯೆಯಲ್ಲಿ ಕ್ಷೇಮಾಭ್ಯುದಯವು ಅಂತರ್ಗತವಾಗಿರುವುದುನ್ನು ನಾವು ಗಮನಿಸಬಹುದು. ಅನುಭೋಗಿಯ ಗುರಿ ತನ್ನ ಮಿತವಾದ ಆದಾಯದಿಂದ ಅತ್ಯಧಿಕ ತೃಪ್ತಿಯನ್ನು ಪಡೆಯುವುದು ಅಥವಾ ಪರಮಾವಧಿ ತುಷ್ಟಿಗುಣವನ್ನು ಪಡೆದು ಕೊಳ್ಳುವುದು. ಅಂದರೆ ಹೆಚ್ಚಿನ ಕ್ಷೇಮಾಭ್ಯುದಯವನ್ನು ಸಾಧಿಸುವುದು. ಈ ಅರ್ಥದಲ್ಲಿ ನೋಡಿದಾಗ ಕ್ಷೇಮಾಭ್ಯುದಯವು ವಿರಳತೆಯ ವ್ಯಾಖ್ಯೆಯಲ್ಲಿ ಅಡಗಿರುವುದು ಸ್ಪಷ್ಟ. ಮಾರ್ಷಲ್ ಪಂಥಕ್ಕೆ ಸೇರಿದ ಬಾರ್‌ಬರಾ ವೂಟನ್, ಬೆವರಿಡ್ಜ್, ಡರ್ಬನ್ ಮತ್ತು ಫ್ರೇಸ್ ಮುಂತಾದವರು ರಾಬಿನ್ಸ್‌ರ ವಿರಳತೆಯ ವ್ಯಾಖ್ಯೆ ಸಹ ಅರ್ಥಶಾಸ್ತ್ರದ ವ್ಯಾಪ್ತಿಗೆ ಸಂಕುಚಿತತೆಯನ್ನು ಉಂಟುಮಾಡುತ್ತದೆಂದು ಹೇಳುತ್ತಾರೆ. ಅರ್ಥಶಾಸ್ತ್ರ ಮುಖ್ಯವಾಗಿ ನೈತಿಕ ವಿಷಯಗಳಿಗೆ ಸಹ ಮನ್ನಣೆಯನ್ನು ನೀಡಬೇಕಾದುದು ಅವಶ್ಯಕವೆಂದು ಅವರ ಭಾವನೆ. ಇಷ್ಟೇ ಅಲ್ಲದೆ ವಿರಳತೆಯ ವ್ಯಾಖ್ಯೆ ಅರ್ಥಶಾಸ್ತ್ರವನ್ನು ಶುದ್ಧವಿಜ್ಞಾನವನ್ನಾಗಿ ಮಾಡಿಬಿಡುತ್ತದೆ. ಅಪರಿಮಿತ ಬಯಕೆಗಳು ಮತ್ತು ಮಿತವಾದ ಸಾಧನಗಳ ನಡುವಣ ಹೊಂದಾಣಿಕೆಯನ್ನು ಚರ್ಚಿಸುವಾಗ ಅನೇಕ ತತ್ವಗಳನ್ನು ರೂಪಿಸಿದರು ಕೂಡ ನಿಜವಾದ ಜೀವನದೊಡನೆ ಅವು ಸುಸಂಬದ್ಧತೆಯನ್ನು ಹೊಂದಿರದೆ ಹೋಗುವ ಸಾಧ್ಯತೆಗಳು ಉಂಟಾಗಬಹುದು. ಅನೇಕ ಅರ್ಥಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಅರ್ಥಶಾಸ್ತ್ರದ ತತ್ವಗಳು ಪೂರ್ಣವಾಗಿ ಉಪಯೋಗವಾಗುವಂತಿರಬೇಕು. ಬಾರ್ಬರಾ ವೂಟನ್ ಅಭಿಪ್ರಾಯ ಪಡುವಂತೆ "ನಾವು ಹೆಚ್ಚಿನ ಸಮಯವನ್ನು ತತ್ವಕ್ಕೆ ಸಂಬಂಧಿಸಿದ ಸಾಧನಗಳನ್ನು ರೂಪಿಸುವುದರಲ್ಲಿ ಕಳೆದುಬಿಡುತ್ತೇವೆ ಮತ್ತು ಅತ್ಯಂತ ಕಡಿಮೆ ಸಮಯವನ್ನು ಅವುಗಳ ವಾಸ್ತವ ಉಪಯೋಗದ ಬಗ್ಗೆ ಕಳೆಯುತ್ತೇವೆ" ಹೀಗಾದರೆ ಏನು ಪ್ರಯೋಜನ?

ಈ ವ್ಯಾಖ್ಯೆಗಿರುವ ಮತ್ತೊಂದು ಟೀಕೆಯೆಂದರೆ ಆರ್ಥಿಕ ಸಮಸ್ಯೆಗಳು ಯಾವಾಗಲೂ ಕೇವಲ ವಿರಳತೆಯಿಂದ ಮಾತ್ರ ಉದ್ಭವಿಸುವುದಿಲ್ಲ. ಹೇರಳತೆಯಿಂದ ಕೂಡ ಸಮಸ್ಯೆಗಳು ಹುಟ್ಟಿಕೊಳ್ಳುವುದು ಸಾಧ್ಯ. ಒಂದು ಉದಾಹರಣೆಯನ್ನು ಕೊಡುವುದಾದರೆ ೧೯೨೯-

೩೩ರ ಅವಧಿಯಲ್ಲಿ ವಿಶ್ವದ ಆರ್ಥಿಕ ಮಹಾಕುಸಿತ ಉಂಟಾದಾಗ ಅನೇಕ ಸಮಸ್ಯೆಗಳು ಅಧಿಕ ಉತ್ಪಾದನೆಯಿಂದ ಉಂಟಾದವೇ ಹೊರತು ಅವುಗಳ ವಿರಳತೆಯಿಂದಲ್ಲ.

ರಾಬಿನ್ಸ್‌ರ ವ್ಯಾಖ್ಯೆಯನ್ನು ಅದರ ಜಡ ಸ್ವರೂಪಕ್ಕಾಗಿ ಕೂಡ ಸಾಮಾನ್ಯವಾಗಿ ಟೀಕಿಸಲಾಗಿದೆ. ಈ ವ್ಯಾಖ್ಯೆ ಬಯಕೆಗಳಲ್ಲಾಗಲೀ ಅಥವಾ ಅವುಗಳನ್ನು ತೃಪ್ತಿಪಡಿಸಲು ಲಭ್ಯವಾಗುವ ಸಾಧನಗಳಲ್ಲಾಗಲಿ ಉಂಟಾಗುವ ಬದಲಾವಣೆಗಳನ್ನು ಗಣನೆಗೆ ತೆಗೆದು ಕೊಳ್ಳುವುದಿಲ್ಲ. ಪ್ರತಿಯೊಂದು ಅರ್ಥವ್ಯವಸ್ಥೆಯೂ ಅನೇಕ ಬದಲಾವಣೆಗಳನ್ನು ಅನುಭವಿಸುವುದರಿಂದ ಬಯಕೆಗಳು ಮತ್ತು ತೃಪ್ತಿಗಳ ನಡುವಣ ಹೊಂದಾಣಿಕೆಯಲ್ಲಿ ಉಂಟಾಗುವ ಬದಲಾವಣೆಯನ್ನು ಗಮನಿಸಬೇಕಾದುದು ಅಗತ್ಯವಾಗುತ್ತದೆ. ಇದಕ್ಕೆ ರಾಬಿನ್ಸ್‌ರ ವ್ಯಾಖ್ಯೆ ಅವಕಾಶವನ್ನು ನೀಡುವುದಿಲ್ಲ.

ಎರಡನೆಯ ಮಹಾಯುದ್ಧದ ವೇಳೆಗೆ ಪ್ರಪಂಚದ ಆರ್ಥಿಕ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳು ತಲೆದೋರಿದ್ದವು. ಆರ್ಥಿಕ ಬೆಳವಣಿಗೆಯು ರಾಷ್ಟ್ರೀಯ ನೀತಿಯ ಮುಖ್ಯ ಗುರಿಯಾಗಿತ್ತು. ಅನೇಕ ಆಧುನಿಕ ಅರ್ಥಶಾಸ್ತ್ರಜ್ಞರು ಅರ್ಥಶಾಸ್ತ್ರದ ವ್ಯಾಖ್ಯೆಯನ್ನು, ಆರ್ಥಿಕ ಬೆಳವಣಿಗೆಗೆ ಮಹತ್ವ ನೀಡುವಂತೆ ಮರುರೂಪಿಸಬೇಕೆಂದು ಅಭಿಪ್ರಾಯಪಟ್ಟರು. ಆದ್ದರಿಂದ ಇತ್ತೀಚಿನ ಕೆಲವು ವ್ಯಾಖ್ಯೆಗಳಲ್ಲಿ ಆರ್ಥಿಕ ಬೆಳವಣಿಗೆ ಪ್ರಾಮುಖ್ಯತೆ ಪಡೆದಿರುವುದನ್ನು ನಾವು ಗಮನಿಸುತ್ತೇವೆ.

**ಆರ್ಥಿಕ ಬೆಳವಣಿಗೆಯ ವ್ಯಾಖ್ಯೆ**

ಆರ್ಥಿಕವಿಜ್ಞಾನದ ನೋಬಲ್ ಪ್ರಶಸ್ತಿ ವಿಜೇತ ಪ್ರೊ. ಸ್ಯಾಮ್ಯುಯಲ್‌ಸನ್ ತಮ್ಮ ಪ್ರಮುಖ ಗ್ರಂಥವಾದ 'ಎಕಾನಿಮಿಕ್ಸ್' ಎನ್ನುವುದರಲ್ಲಿ ಆರ್ಥಿಕ ಬೆಳವಣಿಗೆಯ ವ್ಯಾಖ್ಯೆಯನ್ನು ನೀಡುತ್ತಾರೆ. ಅವರ ವ್ಯಾಖ್ಯೆ ಹೀಗಿದೆ: "ಅರ್ಥವಿಜ್ಞಾನವು, ಮಾನವ ಮತ್ತು ಅರ್ಥವ್ಯವಸ್ಥೆಗಳು ಹಣವನ್ನು ಉಪಯೋಗಿಸುತ್ತಾ ಅಥವಾ ಉಪಯೋಗಿಸದೆ ವಿರಳವಾದ ಉತ್ಪಾದನಾ ಸಂಪನ್ಮೂಲಗಳನ್ನು ಹೇಗೆ ವಿವಿಧ ವಸ್ತುಗಳ ಉತ್ಪಾದನೆಗಾಗಿ ಬಳಸುತ್ತಾರೆ ಎಂಬುದನ್ನು ಅಭ್ಯಾಸ ಮಾಡುತ್ತದೆ. ಈ ವಿರಳವಾದ ಸಂಪನ್ಮೂಲಗಳಿಗೆ ವಿವಿಧ ಉಪಯೋಗದ ಗುಣಗಳಿವೆ. ಈ ಸಾಧನಗಳನ್ನು ಬಳಸಿಕೊಂಡು ಉತ್ಪಾದಿಸಲಾಗುವ ಸರಕುಗಳನ್ನು ಅನುಭೋಗಕ್ಕೆ ಪ್ರಸ್ತುತದಲ್ಲಿ ಮತ್ತು ಭವಿಷ್ಯದಲ್ಲಿ ಹೇಗೆ ಬಳಸಲಾಗುತ್ತದೆ ಎನ್ನುವುದನ್ನು ಅರ್ಥಶಾಸ್ತ್ರ ಅಭ್ಯಾಸ ಮಾಡುತ್ತದೆ".

ರಾಬಿನ್ಸ್ ಮತ್ತು ಸ್ಯಾಮ್ಯುಯಲ್‌ಸನ್‌ರವರ ವ್ಯಾಖ್ಯೆಗಳಲ್ಲಿ ಅನೇಕ ಸಾಮ್ಯಗಳಿರುವುದನ್ನು ನಾವು ಗಮನಿಸಬಹುದು. ಇವರೆಡು ವ್ಯಾಖ್ಯೆಗಳೂ ಅರ್ಥಶಾಸ್ತ್ರ ಮೂಲಭೂತವಾಗಿ ವಿವಿಧ ಉಪಯೋಗಗಳಿಗೆ ಹಾಕಬಹುದಾದ ವಿರಳವಾದ ಸಾಧನಗಳು ಮತ್ತು ಅಪರಿಮಿತವಾದ ಬಯಕೆಗಳ ನಡುವಣ ಹೊಂದಾಣಿಕೆಯನ್ನು ಒತ್ತಿ ಹೇಳುತ್ತವೆ. ಆದರೆ ಸ್ಯಾಮ್ಯುಯಲ್‌ಸನ್‌ರವರ ವ್ಯಾಖ್ಯೆ ರಾಬಿನ್ಸ್‌ರ ವ್ಯಾಖ್ಯೆಯಲ್ಲಿರುವ ಜಡತ್ವದ ಅಂಶವನ್ನು ಹೋಗಲಾಡಿಸಲು ಯತ್ನಿಸುತ್ತದೆ. ಸ್ಯಾಮ್ಯುಯಲ್‌ಸನ್‌ರವರ ವ್ಯಾಖ್ಯೆ ಕಾಲದ ಅಂಶಕ್ಕೆ ಮಹತ್ವವನ್ನು

ನೀಡುತ್ತದೆ. ಉತ್ಪಾದಿತ ವಸ್ತುಗಳು ಪ್ರಸ್ತುತ ಕಾಲಕ್ಕಲ್ಲದೆ ಭವಿಷ್ಯದಲ್ಲಿ ಕೂಡ ಅನುಭೋಗಕ್ಕಾಗಿ ಹೇಗೆ ವಿತರಣೆಯಾಗುತ್ತವೆಂಬುದನ್ನು ಪರಿಶೀಲಿಸಬೇಕೆಂದು ಒತ್ತಿ ಹೇಳುವುದರ ಮೂಲಕ ಕಾಲದ ಅಂಶಕ್ಕೆ ಹೆಚ್ಚಿನ ಮಹತ್ವವನ್ನು ಈ ವ್ಯಾಖ್ಯೆ ನೀಡುತ್ತದೆ.

ಸ್ಯಾಮ್ಯುಯಲ್‌ಸನ್‌ರವರ ನಿರ್ವಚನವು ಅರ್ಥಶಾಸ್ತ್ರಕ್ಕೆ ಹೆಚ್ಚಿನ ವ್ಯಾಪ್ತಿಯನ್ನು ದೊರಕಿಸಿಕೊಡುತ್ತದೆ. ಈ ವ್ಯಾಖ್ಯೆಯ ಪ್ರಕಾರ ಕೇವಲ ಹಣವನ್ನು ಉಪಯೋಗಿಸುವ ಆರ್ಥಿಕ ಚಟುವಟಿಕೆಗಳನಲ್ಲದೆ ಹಣವಿಲ್ಲದೆ ನಡೆಯುವ ಆರ್ಥಿಕ ಚಟುವಟಿಕೆಗಳನ್ನು ಸಹ ಅರ್ಥಶಾಸ್ತ್ರವು ಪರಿಶೀಲಿಸಬೇಕೆಂದು ಈ ವ್ಯಾಖ್ಯೆ ಸೂಚಿಸುತ್ತದೆ. ಇದು ಉಚಿತ ವಾದುದು. ಏಕೆಂದರೆ ಹಣದ ಸಹಾಯವಿಲ್ಲದೆ ಅನೇಕ ವಿನಿಮಯ ಕಾರ್ಯಗಳು ನಡೆಯುತ್ತವೆ. ಭಾರತದಂತಹ ರಾಷ್ಟ್ರದಲ್ಲಂತೂ ಈ ರೀತಿಯ ವ್ಯವಹಾರಗಳು ಹೇರಳ ವಾಗಿವೆ. ಇಂತಹ ಆರ್ಥಿಕ ವ್ಯವಹಾರಗಳಲ್ಲೂ ಅಪರಿಮಿತವಾದ ಬಯಕೆಗಳು ಅವುಗಳ ತೃಪ್ತಿಗಾಗಿ ವಿರಳ ಹಾಗೂ ವಿವಿಧ ಉಪಯೋಗವುಳ್ಳ ಸಾಧನಗಳ ಬಳಕೆಯ ಸಮಸ್ಯೆ ಇದ್ದೇ ಇರುತ್ತದೆ. ಆದ್ದರಿಂದ ಅರ್ಥಶಾಸ್ತ್ರ ಈ ಚಟುವಟಿಕೆಗಳನ್ನು ಗಮನಿಸಲೇ ಬೇಕಾಗುತ್ತದೆ.

ಸ್ಯಾಮ್ಯುಯಲ್‌ಸನ್‌ರವರ ನಿರ್ವಚನವು ಬದಲಾವಣೆಗಳನ್ನು ಸಹ ಗಮನಕ್ಕೆ ತೆಗೆದುಕೊಳ್ಳುತ್ತದೆ. ಬಯಕೆಗಳಿಗೆ ಬದಲಾವಣೆಯಾಗುವ ಸ್ವರೂಪ ಇರುವುದರಿಂದ ಅವಕ್ಕೆ ತಕ್ಕಂತೆ ಸಂಪನ್ಮೂಲಗಳಲ್ಲಿ ಬದಲಾವಣೆಗಳು ಉಂಟಾಗುತ್ತವೆ. ಬಯಕೆಗಳು ಹೆಚ್ಚಿದಂತೆ ಸಂಪನ್ಮೂಲಗಳನ್ನು ಹೆಚ್ಚಿಸಿ ಹೊಸ ಉತ್ಪಾದನೆಗಳನ್ನು ಕೈಗೊಳ್ಳಬೇಕಾಗುತ್ತದೆ. ಹೀಗೆ ಮಾಡುವಾಗ ಆದಾಯ, ಉತ್ಪಾದನೆ ಮತ್ತು ಉದ್ಯೋಗಗಳನ್ನು ಹೆಚ್ಚಿಸಿಕೊಳ್ಳ ಬೇಕಾದುದು ಅಗತ್ಯವಾಗುತ್ತದೆ. ಇವುಗಳೆಲ್ಲದರ ಬದಲಾವಣೆಗಳನ್ನು ಸಹ ಅರ್ಥಶಾಸ್ತ್ರ ಅಭ್ಯಾಸಮಾಡುತ್ತದೆ.

ಮೇಲಿನ ವ್ಯಾಖ್ಯೆಗಳಲ್ಲೆಲ್ಲ ಪ್ರೊ. ಸ್ಯಾಮ್ಯುಯಲ್‌ಸನ್‌ರವರ ವ್ಯಾಖ್ಯೆ ಹೆಚ್ಚು ಸಮರ್ಪಕವಾಗಿರುವುದು ಕಂಡುಬರುತ್ತದೆ. ಏಕೆಂದರೆ ಈ ವ್ಯಾಖ್ಯೆ ಸಾರ್ವತ್ರಿಕವಾಗಿ ಎಲ್ಲ ಅರ್ಥವ್ಯವಸ್ಥೆಗಳಿಗೂ ಅನ್ವಯವಾಗುವ ಗುಣವನ್ನು ಹೊಂದಿದೆ. ಬಂಡವಾಳಶಾಹಿ ಅರ್ಥವ್ಯವಸ್ಥೆ, ಮಿಶ್ರ ಅರ್ಥವ್ಯವಸ್ಥೆ ಮತ್ತು ಸಮಾಜವಾದಿ ಅರ್ಥವ್ಯವಸ್ಥೆಗಳಿಗೆ ಕೂಡ ಈ ವ್ಯಾಖ್ಯೆ ಸಮರ್ಪಕವಾಗಿ ಅನ್ವಯವಾಗುತ್ತದೆ. ಕಾಲದ ಅಂಶಕ್ಕೆ ಸಹ ಇದು ಮಹತ್ವವನ್ನು ಕೊಡುವುದರಿಂದ ಇದು ರಾಬಿನ್ಸ್‌ರ ವ್ಯಾಖ್ಯೆಗಿಂತ ಹೆಚ್ಚು ಉತ್ತಮವಾದ ವ್ಯಾಖ್ಯೆಯಾಗುತ್ತದೆ.

## ವ್ಯಾಖ್ಯೆರಹಿತ ಪಂಥ

ಇತ್ತೀಚಿಗೆ ಅರ್ಥಶಾಸ್ತ್ರದ ವ್ಯಾಪ್ತಿಯನ್ನು ವಿವರಿಸುವ ವ್ಯಾಖ್ಯೆಯ ಅಗತ್ಯವೇ ಇಲ್ಲವೆಂಬ ಒಂದು ಪಂಥ ಉಗಮವಾಗಿದೆ. ಇವರ ಪ್ರಕಾರ ಅರ್ಥಶಾಸ್ತ್ರಕ್ಕೆ ಯಾವುದೇ ಒಂದು ವ್ಯಾಖ್ಯೆಯನ್ನು ನೀಡುವುದು ಬಹಳ ಕಷ್ಟವಾದ ವಿಷಯ. ಏಕೆಂದರೆ ಅರ್ಥಶಾಸ್ತ್ರದ

ವ್ಯಾಪ್ತಿ ತುಂಬಾ ವಿಶಾಲವಾದುದು. ಯಾವುದೇ ವ್ಯಾಖ್ಯೆಯನ್ನು ನೀಡಿದರೂ ಕೂಡ ಅದು ಅರ್ಥಶಾಸ್ತ್ರದ ವ್ಯಾಪ್ತಿಯನ್ನು ಸಂಕುಚಿತಗೊಳಿಸೇ ತೀರುತ್ತದೆ. ಏಕೆಂದರೆ ಆರ್ಥಿಕ ಚಟುವಟಿಕೆಗಳು ನಿರಂತರವಾದ ಬದಲಾವಣೆಗಳನ್ನು ಅನುಭವಿಸುತ್ತಾ ಇರುತ್ತವೆ. ಹೊಸ ಹೊಸ ಆರ್ಥಿಕ ಚಟುವಟಿಕೆಗಳನ್ನು ಸಹ ಅರ್ಥಶಾಸ್ತ್ರ ಅಭ್ಯಾಸ ಮಾಡಬೇಕಾಗುತ್ತದೆ. ಆದ್ದರಿಂದ ಹಿಂದೆ ವಿವರಿಸಿದ್ದ ವ್ಯಾಖ್ಯೆ ಈಗ ಹಳೆಯದಾಗುತ್ತದೆ ಮತ್ತು ನಿರರ್ಥಕವಾಗುತ್ತದೆ. ಈ ಪಂಥಕ್ಕೆ ಸೇರಿದವರಲ್ಲಿ ಕೆಲವರ ಅಭಿಪ್ರಾಯಗಳನ್ನು ನಾವು ಗಮನಿಸಬಹುದು. ಜಾಕಬ್ ವೈನರ್‌ನ ಪ್ರಕಾರ "ಅರ್ಥಶಾಸ್ತ್ರ, ಅರ್ಥವಿಜ್ಞಾನಿಗಳು ಏನನ್ನು ವಿಶ್ಲೇಷಿಸುತ್ತಾರೋ ಅದೇ ಆಗಿದೆ". ಅಂದರೆ ಅರ್ಥಶಾಸ್ತ್ರದ ವ್ಯಾಪ್ತಿಯನ್ನು ನಿರ್ದಿಷ್ಟಗೊಳಿಸುವುದು ಸಾಧ್ಯವೇ ಇಲ್ಲ. ಪ್ರೊ. ಮಾರಿಸ್ ಡಾಬ್‌ರವರ ಪ್ರಕಾರ 'ಅರ್ಥವಿಜ್ಞಾನಕ್ಕೆ ಒಂದು ತರ್ಕಬದ್ಧವಾದ' ವ್ಯಾಖ್ಯೆಯನ್ನು ಹುಡುಕುವುದು ನಿರರ್ಥಕ ಆರ್ಥಿಕ ಚಟುವಟಿಕೆಗಳು ತೀವ್ರವಾದ ಬದಲಾವಣೆಗಳನ್ನು ಅನುಭವಿಸುವುದರಿಂದ ಯಾವುದೇ ವ್ಯಾಖ್ಯೆ ಕೂಡ ಹಳೆಯದಾಗಿ ಬಿಡುತ್ತದೆ. ನೋಬಲ್ ಪ್ರಶಸ್ತಿ ವಿಜೇತ ಪ್ರೊ. ಗುನ್ನಾರ್‌ಮಿರ್‌ಡಾಲ್‌ರವರೂ ಕೂಡ, "ಅರ್ಥಶಾಸ್ತ್ರಕ್ಕೆ ಒಂದು ವ್ಯಾಖ್ಯೆಯನ್ನು ಹುಡುಕುವುದು ಅನಗತ್ಯ, ಏಕೆಂದರೆ ಅರ್ಥವಿಜ್ಞಾನಿ ವ್ಯಾಖ್ಯೆ ನೀಡಬೇಕಾಗಿಲ್ಲದ ಒಂದು ಪರಿಭಾವನೆಯೆಂದರೆ ಅರ್ಥವಿಜ್ಞಾನ. ಅರ್ಥವಿಜ್ಞಾನದ ವ್ಯಾಖ್ಯೆಯಿಂದ ಆರ್ಥಿಕ ತತ್ವಗಳಿಗೆ ಸಂಬಂಧಿಸಿದ ಯಾವುದೇ ಚರ್ಚೆಯೂ ಏರುಪೇರಾಗು ವುದಿಲ್ಲ" ಎಂದು ಹೇಳುತ್ತಾರೆ.

ಈ ಪಂಥದವರ ಮಾತು ಮೇಲ್ನೋಟಕ್ಕೆ ಸತ್ಯವೆನಿಸಬಹುದು. ಏಕೆಂದರೆ ಈಗಾಗಲೆ ನೋಡಿರುವಂತೆ ಅರ್ಥಶಾಸ್ತ್ರಕ್ಕೆ ಹಳೆಯ ವ್ಯಾಖ್ಯೆಗಳು ಶಕ್ತಿಹೀನವಾಗಿ ಹೊಸ ವ್ಯಾಖ್ಯೆಗಳು ಅಗತ್ಯವಾಗುತ್ತದೆ. ಆದರೂ ಅರ್ಥಶಾಸ್ತ್ರ ಎಂಬ ಪರಿಭಾವನೆಗೆ ಒಂದು ವ್ಯಾಖ್ಯೆ ಅಗತ್ಯವಷ್ಟೆ. ವ್ಯಾಖ್ಯೆಯೇ ಇಲ್ಲದೆ ಹೋದ ಪಕ್ಷದಲ್ಲಿ ಅರ್ಥವಿಜ್ಞಾನಿಗಳು ಸುಸಂಬದ್ಧತೆ ಯುಳ್ಳ ಮತ್ತು ಸುಸಂಬದ್ಧತೆ ಇಲ್ಲದಿರುವ ಅನೇಕ ವಿಷಯಗಳನ್ನು ಅರ್ಥಶಾಸ್ತ್ರವೆಂದು ಚರ್ಚಿಸಬಹುದು. ಆದ್ದರಿಂದ ಅರ್ಥವಿಜ್ಞಾನಿಗಳು ಯಾವ ದಿಕ್ಕಿನಲ್ಲಿ ಆಲೋಚಿಸ ಬೇಕೆಂಬುದನ್ನು ಸೂಚಿಸುವುದಕ್ಕೋಸ್ಕರವಾದರೂ ಅರ್ಥಶಾಸ್ತ್ರಕ್ಕೆ ಒಂದು ವ್ಯಾಖ್ಯೆ ಆಗತ್ಯವಾಗುತ್ತದೆ. ಕಾಲಕಾಲಕ್ಕೆ ಇಂತಹ ವ್ಯಾಖ್ಯೆಯಲ್ಲಿ ಬದಲಾವಣೆಗಳು ಅಗತ್ಯ ವಾಗುತ್ತದೆನ್ನುವುದು ದಿಟ. ಅರ್ಥ ವಿಜ್ಞಾನಿಗಳು ಈ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಆರ್ಥಿಕ ಚಟುವಟಿಕೆಗಳಲ್ಲಿನ ಬದಲಾವಣೆಗಳನ್ನು ಗಮನಿಸಿ ವ್ಯಾಖ್ಯೆಯಲ್ಲೂ ಕೂಡ ಬದಲಾವಣೆಯನ್ನು ಅವರು ಮಾಡಿಕೊಳ್ಳಬಹುದು. ಆದ್ದರಿಂದ ವ್ಯಾಖ್ಯೆಯೇ ಬೇಡವೆನ್ನುವ ಪಂಥದವರ ಮಾತು ಬಹಳ ತರ್ಕಬದ್ಧವಾದರೂ ಕೂಡ, ಅರ್ಥಶಾಸ್ತ್ರದ ವ್ಯಾಪ್ತಿಯನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ಒಂದು ವ್ಯಾಖ್ಯೆ ತುಂಬಾ ಅಗತ್ಯವೆಂದು ನಾವು ಹೇಳಬಹುದು. ಪ್ರಸ್ತುತದಲ್ಲಿ ಪ್ರೊ. ಸ್ಯಾಮ್ಯುಯಲ್‌ಸನ್‌ರವರ ವ್ಯಾಖ್ಯೆ ಈ ದೃಷ್ಟಿಯಿಂದ ತುಂಬಾ ಉಪಯುಕ್ತವಾದುದೆಂದು ಹೇಳಬಹುದು.

## ೧.೨. ಆರ್ಥಿಕತೆಯ ಅರ್ಥ ಮತ್ತು ಮೂಲ ಸಮಸ್ಯೆಗಳು

ಒಂದು ಆರ್ಥಿಕತೆ ಅನೇಕ ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ಜನರ ಬಯಕೆಗಳನ್ನು ತೃಪ್ತಿಪಡಿಸಬೇಕಾದರೆ ಸರಕು ಮತ್ತು ಸೇವೆಗಳ ಉತ್ಪಾದನೆಯಾಗ ಬೇಕಾಗುತ್ತದೆ. ಅವುಗಳನ್ನು ಸಂಸ್ಕರಿಸಬೇಕಾಗುತ್ತದೆ. ಎಲ್ಲದಕ್ಕಿಂತ ಮುಖ್ಯವಾಗಿ ಆರ್ಥಿಕತೆಯಲ್ಲಿನ ಎಲ್ಲ ಜನರಿಗೆ ಸರಕು ಮತ್ತು ಸೇವೆಗಳು ಅನುಭೋಗಕ್ಕೆ ಲಭ್ಯವಾಗು ವಂತೆ ವಿತರಣೆಯಾಗಬೇಕಾಗುತ್ತದೆ. ಆದ್ದರಿಂದ ಉತ್ಪಾದನೆ, ಸಂಸ್ಕರಣೆ, ವಿತರಣೆ ಮತ್ತು ಅನುಭೋಗ ಯಾವುದೇ ಆರ್ಥಿಕತೆಯ ಅತಿ ಮುಖ್ಯ ಆರ್ಥಿಕ ಚಟುವಟಿಕೆಗಳು.

ಸರಕು ಮತ್ತು ಸೇವೆಗಳು ಹೇಗೆ ಉತ್ಪಾದನೆ ಯಾಗುತ್ತವೆ? ಅವು ಹೇಗೆ ಸಂಸ್ಕರಣೆ ಯಾಗುತ್ತವೆ? ಜನರಿಗೆ ಹೇಗೆ ತಲುಪುತ್ತವೆ? ಜನರು ಹೇಗೆ ಅನುಭೋಗ ನಡೆಸುತ್ತಾರೆ? ಎನ್ನುವುದು ಸ್ವಾರಸ್ಯವಾದ ಪ್ರಶ್ನೆ. ಆರ್ಥಿಕತೆಯಲ್ಲಿ ನಡೆಯುವ ಈ ಚಟುವಟಿಕೆಗಳು ಸಂಕೀರ್ಣವಾದವು. ಉದಾಹರಣೆಗೆ ನಾವು ಚಪಾತಿಗಾಗಿ ಬಳಸುವ ಗೋದಿ ಹಿಟ್ಟನ್ನು ಗಮನಿಸಿ. ಅದು ಹೇಗೆ ನಮ್ಮನ್ನು ಸೇರಿತು? ನಾವು ಬಳಸುವ ಕಾರು ಹೇಗೆ ನಮಗೆ ಬಂದು ಸೇರಿತು? ಇದಕ್ಕೆ ಉತ್ತರ ಹುಡುಕುತ್ತಾ ಹೋದರೆ ಆರ್ಥಿಕತೆಯ ಸಂಕೀರ್ಣತೆಯ ಅರಿ ವಾಗುತ್ತದೆ. ಈ ಚಟುವಟಿಕೆಗಳು ನಡೆಯುವುದಕ್ಕೆ ಕೃಷಿ, ಕೈಗಾರಿಕೆ, ಆಂತರಿಕ ವ್ಯಾಪಾರ, ಬೇರೆ ದೇಶಗಳೊಡನೆ ವ್ಯಾಪಾರ, ಸಾರಿಗೆ ಮತ್ತು ಸಂಪರ್ಕಗಳು ಬೇಕಾಗುತ್ತವೆ. ಜೊತೆಗೆ ಈ ಕ್ಷೇತ್ರಗಳಲ್ಲಿನ ಚಟುವಟಿಕೆಗಳನ್ನು ಸುಗಮಗೊಳಿಸಲು, ಅಂಚೆ-ಕಛೇರಿ, ಬ್ಯಾಂಕುಗಳು ಮುಂತಾದ ಮೂಲರಚನೆ ಅಗತ್ಯವಾಗುತ್ತದೆ. ಆದ್ದರಿಂದ ಇವೆಲ್ಲಾ ಚಟುವಟಿಕೆಗಳನ್ನು ಆರ್ಥಿಕತೆ ಹೊಂದಿರುತ್ತದೆ. ಕೆಳಗಿನ ಎರಡು ಚಿತ್ರಗಳನ್ನು ಗಮನಿಸಿ




ಚಿತ್ರ ೧

ಚಿತ್ರ ೨

ಚಿತ್ರ ೧ : ಇಂದು ಆರ್ಥಿಕತೆಯಲ್ಲಿ ನಡೆಯುವ ಮುಖ್ಯ ಕ್ರಿಯೆಗಳನ್ನು ತೋರಿಸುತ್ತದೆ. ಉತ್ಪಾದನೆ, ಸಂಸ್ಕರಣೆ, ವಿತರಣೆ ಮತ್ತು ಅನುಭೋಗಗಳು ಎಲ್ಲ ಆರ್ಥಿಕತೆಗಳ ಮುಖ್ಯ ಕಾರ್ಯಗಳು. ಅನುಭೋಗದಿಂದಲೇ ಎಲ್ಲ ಕ್ರಿಯೆಗಳೂ ಚಾಲನೆ ಗೊಳ್ಳುತ್ತವೆ. ಚಿತ್ರ ೨ ತೋರಿಸುವಂತೆ, ಅನುಭೋಗನ್ನು ಪೂರೈಸಲು, ಕೃಷಿ, ಕೈಗಾರಿಕೆ, ವಾಣಿಜ್ಯ, ಸೇವೆಗಳು ಮತ್ತು ಮೂಲರಚನೆಗಳಾದ, ಬ್ಯಾಂಕಿಂಗ್, ವಿಮೆ, ಸಂಪರ್ಕ ಮುಂತಾದವು ಅಗತ್ಯವಾಗುತ್ತವೆ. ಇವೆಲ್ಲಾ ಚಟುವಟಿಕೆಗಳು ನಡೆದಾಗ ಮಾತ್ರ ಸರಕು ಮತ್ತು ಸೇವೆಗಳ ಪೂರೈಕೆ ಸಾಧ್ಯ.

ಆದರೆ ಆರ್ಥಿಕತೆಯಲ್ಲಿ ಏನನ್ನು ಉತ್ಪಾದಿಸಬೇಕು? ಯಾವ ಉತ್ಪಾದನಾ ಕ್ರಮವನ್ನು ಅನುಸರಿಸಬೇಕು? ಉತ್ಪಾದಿತ ಸರಕುಗಳು ಜನರ ನಡುವೆ ಹೇಗೆ ವಿತರಣೆಯಾಗಬೇಕು? ಉತ್ಪಾದನಾಂಗಗಳನ್ನು ಯಾವ ಮಟ್ಟದವರೆಗೆ ಬಳಕೆಗೆ ಹಾಕಬೇಕು? ಮತ್ತೆ ಲಭ್ಯವಿರುವ ಸಂಪನ್ಮೂಲವನ್ನು ಪ್ರಸ್ತುತದಲ್ಲಿ ಎಷ್ಟು ಬಳಸಬೇಕು? ಭವಿಷ್ಯಕ್ಕಾಗಿ ಎಷ್ಟು ಉಳಿಸಬೇಕು ಎನ್ನುವುದು ಯಾವುದೇ ಆರ್ಥಿಕತೆಯ ಮೂಲ ಸಮಸ್ಯೆಗಳು. ಇವುಗಳನ್ನು ಸ್ವಲ್ಪ ವಿವರವಾಗಿ ನೋಡೋಣ;

### ೧. ಏನನ್ನು ಉತ್ಪಾದಿಸಬೇಕು ?

ನಾವು ಈಗಾಗಲೇ ಸೂಚಿಸಿರುವಂತೆ ಪೂರ್ಣೋತ್ಪಾದನೆಯನ್ನು ಕಾಪಾಡಿಕೊಳ್ಳುವುದು ಪ್ರತಿಯೊಂದು ಅರ್ಥವ್ಯವಸ್ಥೆಗೂ ಮುಖ್ಯವಾದ ವಿಷಯವಾಗುತ್ತದೆ. ಉತ್ಪನ್ನ ಸಾಧ್ಯತೆ ರೇಖೆಯೊಳಗಿನ ವಿಸ್ತೀರ್ಣದ ಯಾವುದೇ ಬಿಂಧುವನ್ನು ಆಯ್ದುಕೊಂಡರೂ ಪೂರ್ಣಮಟ್ಟದ ಉತ್ಪಾದನೆಗಿಂತ ಕಡಿಮೆ ಪ್ರಮಾಣದ ಉತ್ಪಾದನೆ ನಡೆಯುತ್ತದೆ. ಆದ್ದರಿಂದ ಉತ್ಪನ್ನ ಸಾಧ್ಯತೆ ರೇಖೆಯ ಮೇಲೆ ಯುಕ್ತವಾದ ಬಿಂಧುವನ್ನು ಉತ್ಪಾದನೆಗೆ ಆಯ್ದುಕೊಳ್ಳ ಬೇಕಾಗುತ್ತದೆ. ಹೀಗೆ ಮಾಡುವಾಗ ರಾಷ್ಟ್ರದಲ್ಲಿ ಯಾವ ಸ್ವರೂಪದ ಸರಕು ಮತ್ತು ಸೇವೆಗಳನ್ನು ಉತ್ಪಾದಿಸಬೇಕು? ಮತ್ತು ಎಷ್ಟು ಪ್ರಮಾಣದಲ್ಲಿ ಅವುಗಳನ್ನು ಉತ್ಪಾದಿಸ ಬೇಕು? ಎಂಬುದನ್ನು ನಿರ್ಧರಿಸಬೇಕಾಗುತ್ತದೆ.

ಯಾವುದೇ ಒಂದು ರೀತಿಯ ವಸ್ತುವನ್ನು ಹೆಚ್ಚಾಗಿ ಉತ್ಪಾದಿಸಿದರೆ ಮತ್ತೊಂದು ರೀತಿಯ ವಸ್ತುವನ್ನು ಕಡಿಮೆ ಪ್ರಮಾಣದಲ್ಲಿ ಉತ್ಪಾದಿಸಬೇಕಾಗುತ್ತದೆ.

ಅರ್ಥವ್ಯವಸ್ಥೆ ಯಾವುದೇ ಸ್ವರೂಪದ್ದಾಗಿರಲಿ, ಲಭ್ಯವಿರುವ ಸಂಪನ್ಮೂಲಗಳನ್ನು ಹೇಗೆ ಉತ್ಪಾದನೆಗೆ ತೊಡಗಿಸಬೇಕು ಎಂಬುದನ್ನು ಒಂದಲ್ಲ ಒಂದು ರೀತಿಯಲ್ಲಿ ನಿರ್ಧರಿಸಲೇಬೇಕಾಗುತ್ತದೆ. ಬಂಡವಾಳಶಾಹಿ ಅರ್ಥವ್ಯವಸ್ಥೆಯಲ್ಲಿ ಬೆಲೆಯ ತಂತ್ರ, ಉತ್ಪಾದನಾಂಗಗಳು ಯಾವ ಉತ್ಪಾದನೆಗೆ ತೊಡಗಬೇಕು ಎಂಬುದನ್ನು ನಿರ್ಧರಿಸುತ್ತದೆ. ಕೇಂದ್ರೀಕೃತ ಯೋಜನೆಯ ಅರ್ಥವ್ಯವಸ್ಥೆಯಲ್ಲಿ ಕೇಂದ್ರೀಕೃತ ಅಧಿಕಾರದ ಮೇಲ್ವಿಚಾರಕರು ಸಂಪನ್ಮೂಲಗಳು ಯಾವ ದಿಕ್ಕಿನಲ್ಲಿ ಉತ್ಪಾದನೆಗೆ ತೊಡಗಬೇಕು ಎಂಬುವನ್ನು ನಿರ್ಧರಿಸುತ್ತಾರೆ. ಬೆಲೆಯ ತಂತ್ರಕ್ಕೆ ಇಲ್ಲಿ ಅಷ್ಟು ಪ್ರಾಧಾನ್ಯತೆ ಇರುವುದಿಲ್ಲ. ಆದರೆ

ಯಾವ ಯಾವ ಪ್ರಮಾಣದ ವಸ್ತುವನ್ನು ಎಷ್ಟೆಷ್ಟು ಉತ್ಪಾದಿಸಬೇಕು? ಎಷ್ಟು ಉತ್ಪಾದಿಸಿದರೆ ಜನರ ಬಯಕೆ ಹೆಚ್ಚಾಗಿ ತೃಪ್ತಿಯಾಗುತ್ತದೆ ಎನ್ನುವುದನ್ನು ನಿರ್ಧರಿಸುವುದು ಯಾವುದೇ ರೀತಿಯ ಅರ್ಥವ್ಯವಸ್ಥೆಯಲ್ಲೂ ಸುಲಭವಾದ ಮಾತಲ್ಲ.

**೨. ಯಾವ ಉತ್ಪಾದನೆಯ ಕ್ರಮವನ್ನು ಅನುಸರಿಸಿ ಉತ್ಪಾದನೆಯನ್ನು ನಡೆಸಬೇಕು?**

ಉತ್ಪಾದನೆ ಏನನ್ನು ಮಾಡಬೇಕು ಎನ್ನುವುದನ್ನು ನಿರ್ಧರಿಸಿದ ನಂತರ ಉದ್ಭವವಾಗುವ ಪ್ರಶ್ನೆಯೆಂದರೆ, ಈ ಮಟ್ಟದ ಉತ್ಪಾದನೆಯನ್ನು ಯಾವ ಕ್ರಮವನ್ನು ಅನುಸರಿಸಿ ಉತ್ಪಾದಿಸಬೇಕು ಎಂಬುದಾಗಿದೆ.

ಯಾವುದೇ ವಸ್ತುವನ್ನು ನಾವು ತೆಗೆದುಕೊಂಡರೂ ಅದನ್ನು ನಾನಾ ತಂತ್ರಗಳನ್ನು ಬಳಸಿ ಉತ್ಪಾದಿಸುವ ಸಾಧ್ಯತೆ ಇರುವುದನ್ನು ಕಾಣುತ್ತೇವೆ. ಬೇರೆ ಬೇರೆ ಉತ್ಪಾದನಾ ಕ್ರಮಗಳನ್ನು ಅನುಸರಿಸಿ ಒಂದೇ ವಸ್ತುವನ್ನು ಉತ್ಪಾದಿಸುವುದು ಸಾಧ್ಯ. ಉದಾಹರಣೆಗೆ ಗೋದಿಯ ಉತ್ಪಾದನೆಯನ್ನು ತೆಗೆದುಕೊಂಡರೆ, ಸ್ವಲ್ಪವೇ ಭೂಮಿಯಲ್ಲಿ ತೀವ್ರತರವಾದ ಬೇಸಾಯವನ್ನು ಮಾಡಿ ಎಷ್ಟು ಪ್ರಮಾಣವನ್ನು ಉತ್ಪಾದಿಸಬಹುದೋ ಅಷ್ಟೇ ಪ್ರಮಾಣದ ಉತ್ಪಾದನೆಯನ್ನು ಅಷ್ಟೇನೂ ತೀವ್ರತರವಲ್ಲದ, ಆದರೆ ಹೆಚ್ಚಿನ ವಿಸ್ತೀರ್ಣದ ಹಿಡುವಳಿಯಲ್ಲಿ ಉತ್ಪಾದಿಸುವುದು ಸಾಧ್ಯ. ಇದೇ ಮಾತು ಕೈಗಾರಿಕಾ ಉತ್ಪಾದನೆಗೆ ಸಹ ಅನ್ವಯವಾಗುತ್ತದೆ. ಆದ್ದರಿಂದ ನಾನಾ ರೀತಿಯ ಉತ್ಪಾದನಾ ತಂತ್ರಗಳನ್ನು ಒಂದೇ ಪ್ರಮಾಣದ ಉತ್ಪಾದನೆಗಾಗಿ ಅನುಸರಿಸಬಹುದು. ಯಾವ ಕ್ರಮವನ್ನು ಅನುಸರಿಸಿದರೆ ಅತ್ಯಂತ ದಕ್ಷವಾದ ರೀತಿಯಲ್ಲಿ ಉತ್ಪಾದನೆಯನ್ನು ನಡೆಸಬಹುದು ಎನ್ನುವುದು ನಾನಾ ಅಂಶಗಳನ್ನು ಅವಲಂಬಿಸಿರುತ್ತದೆ. ರಾಷ್ಟ್ರದಲ್ಲಿ ಲಭ್ಯವಿರುವ ಸಂಪನ್ಮೂಲಗಳು, ತಾಂತ್ರಿಕ ಮಟ್ಟ ಈ ಅಂಶಗಳಲ್ಲಿ ಮುಖ್ಯವಾದವು.

**೩. ರಾಷ್ಟ್ರದ ಜನತೆಯ ನಡುವೆ ಉತ್ಪಾದಿತ ವಸ್ತು ಹೇಗೆ ವಿತರಣೆಯಾಗಬೇಕು?**

ರಾಷ್ಟ್ರೀಯ ಉತ್ಪನ್ನ ಜನರಿಗೆ ಹೇಗೆ ವಿತರಣೆಯಾಗಬೇಕು ಎನ್ನುವುದು ಬಹಳ ಮುಖ್ಯವಾದ ವಿಷಯ. ಉತ್ಪಾದನಾಂಗಗಳಿಗೆ ಪ್ರತಿಫಲಗಳು ಹೇಗೆ ದೊರೆಯುತ್ತವೆ ಎನ್ನುವ ವಿಷಯವನ್ನು ಅರ್ಥವಿಜ್ಞಾನಿಗಳು ನಾನಾ ಸಿದ್ಧಾಂತಗಳ ಮೂಲಕ ಪರಿಶೀಲಿಸುತ್ತಾ ಬಂದಿದ್ದಾರೆ. ಉತ್ಪಾದಿತವಾಗಿರುವ ವಸ್ತುಗಳ ವಿತರಣೆಗಾಗಿ ಸರ್ಕಾರ ಅನುಸರಿಸಬೇಕಾದ ನೀತಿಗಳಾವುವು ಎನ್ನುವುದನ್ನು ಸಹ ಪರಿಶೀಲಿಸಲಾಗುತ್ತದೆ. ದೇಶದ ಸಂಪ್ರದಾಯ, ರಾಜಕೀಯ ಪರಿಸ್ಥಿತಿ ಮತ್ತು ಆರ್ಥಿಕ ಚಟುವಟಿಕೆಗಳು ವಿತರಣೆಯನ್ನು ಬಹುಮಟ್ಟಿಗೆ ಪ್ರಭಾವಿಸುತ್ತವೆ. ವಿತರಣೆಯ ಸಿದ್ಧಾಂತಗಳನ್ನು ನಾವು ಮುಂದೆ ಪರಿಶೀಲಿಸುತ್ತೇವೆ.

**೪. ಲಭ್ಯವಿರುವ ಉತ್ಪಾದನಾಂಗಗಳನ್ನು ಯಾವ ಮಟ್ಟದವರೆಗೆ ಉತ್ಪಾದನೆಗೆ ತೊಡಗಿಸಬೇಕು?**

ರಾಷ್ಟ್ರದಲ್ಲಿ ಲಭ್ಯವಿರುವ ಸಂಪನ್ಮೂಲವನ್ನು ಯಾವ ಮಟ್ಟದವರೆಗೆ ಉತ್ಪಾದನೆಗೆ

ತೊಡಗಿಸಬೇಕು? ಎನ್ನುವುದು ನಿಜವಾಗಿಯೂ ಒಂದು ಜಟಿಲವಾದ ಪ್ರಶ್ನೆ. ಇದಕ್ಕೆ ಸಂಬಂಧಪಟ್ಟ ಎರಡು ವಿಷಯಗಳೆಂದರೆ, ರಾಷ್ಟ್ರ ತನ್ನ ಬಂಡವಾಳ ಸಂಪತ್ತು ಮತ್ತು ಮಾನವನ ಸಂಪತ್ತನ್ನು ಎಷ್ಟರಮಟ್ಟಿಗೆ ಉಪಯೋಗಿಸಲು ಇಚ್ಛಿಸುತ್ತದೆ ಮತ್ತು ತನ್ನ ಸಂಪನ್ಮೂಲಗಳನ್ನು ಉಪಯೋಗಕ್ಕೆ ಹಾಕುವ ಶಕ್ತಿ ರಾಷ್ಟ್ರಕ್ಕೆ ಎಷ್ಟಿದೆ ಎನ್ನುವುದು.

ನಾವೆಲ್ಲರೂ ಹಗಲು-ರಾತ್ರಿ ಎನ್ನದೆ ಕೆಲಸ ಮಾಡಿದರೆ ಉತ್ಪಾದನೆಯನ್ನು ಹೆಚ್ಚಿಸುವುದು ಸಾಧ್ಯ. ಇಷ್ಟೇ ಏಕೆ, ದೇಶದಲ್ಲಿರುವ ೮ ವರ್ಷದಿಂದ ೬೦ ವರ್ಷದ ಒಳಗಿನವರೆಲ್ಲರೂ ಸ್ವಲ್ಪವೂ ವಿರಾಮವಿಲ್ಲದೆ ಉತ್ಪಾದನೆಯಲ್ಲಿ ತೊಡಗಬೇಕು ಎಂದು ನಿರ್ಧಾರಮಾಡಿದರೆ ಉತ್ಪಾದನೆ ತುಂಬಾ ಹೆಚ್ಚಾಗುವುದು ಸಾಧ್ಯ. ಆದರೆ ಯಾರೂ ವಿರಾಮವಿಲ್ಲದೆ ಕೆಲಸಮಾಡಲು ಒಪ್ಪುವುದಿಲ್ಲ. ವಾಸ್ತವವಾಗಿ ನಾವು ಹೆಚ್ಚು ಹೆಚ್ಚು ವಿರಾಮವನ್ನು ಬಯಸುತ್ತೇವೆ. ವಿರಾಮವಿಲ್ಲದೆ ಹೋದರೆ, ರೇಡಿಯೋ, ಟೆಲಿವಿಷನ್, ಆಟದ ಮೈದಾನ ಇವುಗಳೆಲ್ಲವೂ ವ್ಯರ್ಥ. ಆದ್ದರಿಂದ ನಮ್ಮ ಸಮಯವನ್ನು ನಾವು ಕೆಲಸ ಮತ್ತು ವಿರಾಮಗಳ ನಡುವೆ ಹಂಚುತ್ತೇವೆ. ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಎಷ್ಟು ಸಮಯ ಕೆಲಸ ಮಾಡಬೇಕು? ಎಷ್ಟು ಸಮಯ ವಿರಾಮದಲ್ಲಿ ಕಳೆಯಬೇಕು? ಎನ್ನುವುದನ್ನು ನಿರ್ಧರಿಸುವುದು ಮುಖ್ಯ. ಹೆಚ್ಚಿನ ಅಬಿವೃದ್ಧಿಯನ್ನು ಸಾಧಿಸಿರುವ ರಾಷ್ಟ್ರಗಳಲ್ಲಿ ವಾರದಲ್ಲಿ ೫ ದಿನ ಕೆಲಸಮಾಡಿ ೨ ದಿನದ ವಿರಾಮದ ನಿರ್ಧಾರವನ್ನು ಮಾಡಿರುವುದನ್ನು ನಾವು ನೋಡುತ್ತೇವೆ. ನಮ್ಮಂತಹ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ವಾರದಲ್ಲಿ ೬ ದಿನಗಳ ಕಾಲ ಕೆಲಸ ಮಾಡಿ ಕೇವಲ ಒಂದು ದಿನ ವಿರಾಮದಿಂದ ತೃಪ್ತಿ ಪಡೆಯಬೇಕು.

ಲಭ್ಯವಿರುವ ಸಂಪನ್ಮೂಲಗಳಲ್ಲಿ ಎಷ್ಟನ್ನು ಪ್ರಸ್ತುತದಲ್ಲಿ ಉಪಯೋಗಿಸಬೇಕು? ಎಷ್ಟನ್ನು ಭವಿಷ್ಯದ ಉಪಯೋಗಕ್ಕಾಗಿ ಕಾಯ್ದಿಡಬೇಕು? ಎನ್ನುವುದರ ನಿರ್ಧಾರ ಸಹ ಬಹಳ ಮುಖ್ಯ. ಖನಿಜ ಸಂಪತ್ತು, ಪೆಟ್ರೋಲಿಯಂ, ಮತ್ತು ನಾನಾ ರೀತಿಯ ಅನಿಲಗಳ ವಿಷಯದಲ್ಲಿ ಈ ಮಾತು ಇನ್ನೂ ಮುಖ್ಯ. ಇವುಗಳೆಲ್ಲವನ್ನೂ ನಾವು ಬೇಗ ಬೇಗ ಉಪಯೋಗಿಸಿ ಅವುಗಳ ನಿಕ್ಷೇಪಗಳನ್ನು ಖಾಲಿ ಮಾಡಿಬಿಡಬಹುದು. ಆದರೆ ರಾಷ್ಟ್ರದ ಬೆಳವಣಿಗೆಯ ದೃಷ್ಟಿಯಿಂದ ಇದು ಬುದ್ಧಿವಂತಿಕೆಯಾಗುವುದಿಲ್ಲ. ಇಂತಹ ಸಂಪನ್ಮೂಲಗಳನ್ನು ಪ್ರಸ್ತುತ ಹಾಗೂ ಭವಿಷ್ಯತ್ತಿನ ಉಪಯೋಗದ ಬಗ್ಗೆ ಯುಕ್ತವಾದ ನೀತಿಯನ್ನು ಅನುಸರಿಸಲೇಬೇಕಾಗುತ್ತದೆ.

ಎಷ್ಟು ಸಂಪನ್ಮೂಲಗಳನ್ನು ಬಳಕೆಗೆ ಹಾಕಬೇಕು ಎನ್ನುವಾಗ, ಸದ್ಯಕ್ಕೆ ನಿರುದ್ಯೋಗ ಉಂಟಾಗದಂತೆ ನೋಡಿಕೊಳ್ಳುವಷ್ಟರಮಟ್ಟಿಗೆ ಸಂಪನ್ಮೂಲವನ್ನು ಬಳಸುವುದು ಮುಖ್ಯವಾಗುತ್ತದೆ. ನಿರುದ್ಯೋಗವಿದ್ದರೆ ಸಂಪನ್ಮೂಲಗಳು ಪೋಲಾಗುತ್ತಿವೆ ಎಂದು ಅರ್ಥ. ಆದ್ದರಿಂದ ಉತ್ಪಾದನಾಂಗಗಳು ಅತ್ಯಂತ ದಕ್ಷವಾಗಿ ಉತ್ಪಾದನೆಯಲ್ಲಿ ತೊಡಗಿರುವಂತೆ ಮಾಡುವ ದೃಷ್ಟಿಯಿಂದ ಅತ್ಯಂತ ಉನ್ನತ ಮಟ್ಟದ ಉದ್ಯೋಗ

ಸ್ಥಿತಿಯನ್ನು ಕಾಪಾಡಿಕೊಳ್ಳುವುದು ಪ್ರತಿಯೊಂದು ಅರ್ಥ ವ್ಯವಸ್ಥೆಗೂ ತುಂಬಾ ಮುಖ್ಯವಾದ ವಿಷಯವಾಗುತ್ತದೆ. ಆದರೆ ಉನ್ನತ ಮಟ್ಟದ ಉದ್ಯೋಗಸ್ಥಿತಿಯನ್ನು ಕಾಪಾಡಿಕೊಂಡು ರಾಷ್ಟ್ರದಲ್ಲಿ ದೃಢ ಬೆಲೆ ಮಟ್ಟಗಳನ್ನು ಕಾಪಾಡಿಕೊಳ್ಳುವುದು ತುಂಬಾ ಕಷ್ಟವಾದ ವಿಷಯ. ನಮ್ಮ ದೇಶದಲ್ಲೇ ನಾವು ನೋಡುವಂತೆ ಉದ್ಯೋಗ ಸೃಷ್ಟಿಯ ಪ್ರಯತ್ನದಿಂದಾಗಿ ತೀವ್ರವಾದ ಹಣದುಬ್ಬರ ಉಂಟಾಗುವುದನ್ನು ನೋಡುತ್ತೇವೆ.

ಆದ್ದರಿಂದ ಉದ್ಯೋಗಮಟ್ಟ ಮತ್ತು ಬೆಲೆಮಟ್ಟವನ್ನು ದೃಢವಾಗಿಟ್ಟಿರುವುದು, ಇವೆರಡನ್ನೂ ಒಟ್ಟಿಗೆ ಸಾಧಿಸುವದು ಬಹಳ ಕಷ್ಟವಾದ ವಿಷಯ. ಕೆಳಮಟ್ಟದ ಉದ್ಯೋಗಕ್ಕೆ ಮುಖ್ಯ ಕಾರಣ ರಾಷ್ಟ್ರದ ಒಟ್ಟು ಉಳಿತಾಯ ಮತ್ತು ಹೂಡಿಕೆಗಳ ನಡುವೆ ಹೊಂದಾಣಿಕೆ ಇಲ್ಲದಿರುವುದು. ಅನುಭೋಗಿಗಳು ಕಡಿಮೆ ವೆಚ್ಚ ಮಾಡಿದರೆ ಸರಕುಗಳಿಗೆ ಬೇಡಿಕೆಯ ಕೊರತೆಯುಂಟಾಗಿ ಆರ್ಥಿಕ ಮುಗ್ಗಟ್ಟು ಉಂಟಾಗುತ್ತದೆ. ಬದಲಿಗೆ ಅನುಭೋಗಿಗಳು ಹೆಚ್ಚಿನ ವೆಚ್ಚ ಮಾಡಿದರೆ ಹಣದುಬ್ಬರ ಉಂಟಾಗುತ್ತದೆ. ಇವೆರಡೂ ಉಂಟಾಗದಂತೆ ಉತ್ಪಾದನೆಯನ್ನು ದೃಢಮಟ್ಟದಲ್ಲಿಟ್ಟಿರುವುದು ಒಂದು ಗಂಭೀರವಾದ ಸಮಸ್ಯೆ. ಈ ಪರಿಸ್ಥಿತಿ ಇರುವುದರಿಂದಲೇ ಯಾವ ಅರ್ಥ ವ್ಯವಸ್ಥೆಯಾಗಲಿ ಉತ್ಪನ್ನ ಸಾಧ್ಯತೆ ರೇಖೆಯ ಮೇಲಿನ ಯಾವುದಾದರೂ ಬಿಂಧುವಿನಲ್ಲಿ ಉತ್ಪಾದನೆಯನ್ನು ನಡೆಸುವುದು ಸಾಧ್ಯವಾಗುವುದಿಲ್ಲ. ನಮ್ಮಂತಹ ದೇಶದಲ್ಲಂತೂ ವರ್ಷಂಪ್ರತಿ ಅಗಾಧ ಪ್ರಮಾಣದಲ್ಲಿ ಜನಸಂಖ್ಯೆ ಬೆಳೆಯುತ್ತಿರುವುದರಿಂದ, ಬೆಳೆಯುತ್ತಿರುವ ಜನಸಂಖ್ಯೆಗೆ ಉದ್ಯೋಗವನ್ನು ಸೃಷ್ಟಿಸಿಕೊಡುವುದು ಇನ್ನೂ ಕಠಿಣವಾದ ವಿಷಯ.

**೫. ರಾಷ್ಟ್ರದ ಉತ್ಪಾದನಾ ಶಕ್ತಿ ಸ್ಥಾಯಿಯಾದುದೇ ಅಥವಾ ಬದಲಾವಣೆಯನ್ನು ಅನುಭವಿಸುವ ಸ್ವರೂಪದ್ದೆ?**

ಬೆಳೆಯುತ್ತಿರುವ ಜನರ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಅರ್ಥ ವ್ಯವಸ್ಥೆ ಬದಲಾವಣೆಗಳನ್ನು ಅನುಭವಿಸಲು - ಎಲ್ಲಾ ಆರ್ಥಿಕ ದೃಷ್ಟಿಯಿಂದ ಸಿದ್ಧವಿರಲೇಬೇಕು ಎನ್ನುವುದು ನಿರ್ವಿವಾದ. ವರ್ಷದಿಂದ ವರ್ಷಕ್ಕೆ ಆಧುನಿಕ ಯುಗದಲ್ಲಿ ಜನರ ಅಭಿರುಚಿ, ಬಯಕೆಗಳು, ತಾಂತ್ರಿಕಜ್ಞಾನ ಬದಲಾವಣೆಗಳನ್ನು ಅನುಭವಿಸುತ್ತಲೇ ಇರುತ್ತವೆ. ಈ ಬದಲಾವಣೆಗಳಿಗೆ ತಕ್ಕಂತಹ ರೀತಿಯಲ್ಲಿ ಉತ್ಪಾದನಾ ವ್ಯವಸ್ಥೆ ಸಹ ಬದಲಾಗುವುದು ಅನಿವಾರ್ಯ. ಕೆಲವು ರಾಷ್ಟ್ರಗಳಲ್ಲಿ ಉತ್ಪಾದನಾ ವ್ಯವಸ್ಥೆಯಲ್ಲಿ ಬಹಳ ವೇಗವಾಗಿ ಬದಲಾವಣೆಗಳಾಗುವುದನ್ನು ಮತ್ತೆ ಕೆಲವು ರಾಷ್ಟ್ರಗಳಲ್ಲಿ ಈ ಬದಲಾವಣೆ ಮಂದಗತಿಯಲ್ಲಿ ನಡೆಯುವುದನ್ನು ನಾವು ನೋಡುತ್ತೇವೆ. ಇದಕ್ಕೆ ಅನೇಕ ಕಾರಣಗಳಿವೆ. ಆಯಾ ದೇಶದ ಬಂಡವಾಳ ಹೂಡುವಿಕೆ, ಆರ್ಥಿಕ ಪರಿಸ್ಥಿತಿ, ತಾಂತ್ರಿಕ ಜ್ಞಾನ, ವಿದೇಶ ವ್ಯಾಪಾರ ಮುಂತಾದ ವಿಷಯಗಳು ಉತ್ಪಾದನ ಕ್ರಮದ ಮೇಲೆ ಮತ್ತು ಅವುಗಳ ಬದಲಾವಣೆಯ ಮೇಲೆ ಪ್ರಭಾವ ಬೀರುತ್ತವೆ. ಏನೇ ಆದರೂ ಉತ್ಪಾದನಾ ಕ್ರಮದಲ್ಲಿ ಬದಲಾವಣೆಯನ್ನು ಅನುಭವಿಸದ ರಾಷ್ಟ್ರ ಇಲ್ಲವೆಂದೇ ಹೇಳಬಹುದು.

ಮೇಲೆ ನಾವು ವಿವರಿಸಿರುವ ಐದು ಮೂಲಭೂತ ಪ್ರಶ್ನೆಗಳೂ, ಅಪರಿಮಿತ ಬಯಕೆ ಮತ್ತು ವಿರಳವಾದ ಸಂಪನ್ಮೂಲಗಳ ಹೊಂದಾಣಿಕೆಯ ಹಿಂದೆ ಇರುವ ಪ್ರಮುಖ ಪ್ರಶ್ನೆಗಳಾಗಿವೆ. ಈ ಐದೂ ಪರಸ್ಪರ ಸಂಬಂಧವನ್ನು ಹೊಂದಿವೆ ಎನ್ನುವುದು ಗಮನಾರ್ಹ. ಅರ್ಥಶಾಸ್ತ್ರದ ಮೀಮಾಂಸೆಗಳು ಈ ಐದೂ ಸಮಸ್ಯೆಗಳನ್ನು ಗಮನದಲ್ಲಿಟ್ಟು ಕೊಂಡು ಅವುಗಳನ್ನು ಉತ್ತರಿಸಲು ಪ್ರಯತ್ನಿಸುತ್ತವೆ.

## ೧.೩. ಅರ್ಥಶಾಸ್ತ್ರದ ವಿಶ್ಲೇಷಣಾ / ವಿಧಾನಗಳು

ಒಂದು ಆರ್ಥಿಕ ಸಿದ್ಧಾಂತ ಹೇಗೆ ಅಸ್ತಿತ್ವಕ್ಕೆ ಬರುತ್ತದೆ ಎನ್ನುವುದು ಕುತೂಹಲಕರವಾದ ಪ್ರಶ್ನೆ. ಮುಂದೆ ನೀವು ಬೇಡಿಕೆ ಸಿದ್ಧಾಂತ, ನೀಡಿಕೆ ಸಿದ್ಧಾಂತ, ತುಷ್ಟಿಗುಣ ನಿಯಮ ಮುಂತಾದವನ್ನು ಅಭ್ಯಾಸಮಾಡುತ್ತೀರಿ. ಈ ಸಿದ್ಧಾಂತಗಳನ್ನು ಅರ್ಥಶಾಸ್ತ್ರಜ್ಞರು ಕಾಲಾನುಗತವಾಗಿ ಅಭಿವೃದ್ಧಿ ಪಡಿಸುತ್ತಾ ಬಂದಿದ್ದಾರೆ. ಕೆಲವು ಸಿದ್ಧಾಂತಗಳು, ನಮ್ಮ ನಿತ್ಯ ಜೀವನದಲ್ಲಿ ನೋಡುವ - ಮಾಡುವ ಕ್ರಿಯೆಗಳಿಂದ ಉದ್ಭವವಾಗುತ್ತವೆ. ಉದಾಹರಣೆಗೆ, ನಾವು ಮಾರುಕಟ್ಟೆಗೆ ಹೋಗಿ ನಿಂತು ಗಮನಿಸಿದರೆ, ಸರಕುಗಳ ಬೆಲೆಗಳು ಕಡಿಮೆ ಇರುವಾಗ ಅವಕ್ಕೆ ಹೆಚ್ಚಿಗೆ ಬೇಡಿಕೆ ಇರುವುದನ್ನು ಮತ್ತು ಬೆಲೆ ಹೆಚ್ಚು ಇರುವಾಗ ಕಡಿಮೆ ಬೇಡಿಕೆಯನ್ನು ನೋಡುತ್ತೇವೆ. ಆದ್ದರಿಂದ ಈ ಪ್ರಕ್ರಿಯೆಯನ್ನು ಅನುಸರಿಸಿ ಬೇಡಿಕೆ ಸಿದ್ಧಾಂತವನ್ನು ರಚಿಸುವುದು ಸಾಧ್ಯ. ಆದರೆ ದುರದೃಷ್ಟವಶಾತ್ ಎಲ್ಲ ಆರ್ಥಿಕ ಕ್ರಿಯೆಗಳನ್ನು ಹೀಗೆ ಗಮನಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಉದಾಹರಣೆಗೆ ೨೦೨೦ರಲ್ಲಿ ಭಾರತದಲ್ಲಿ ಎಷ್ಟು ಹಾಲು ಉತ್ಪಾದನೆಯಾಗಬಹುದು? ಎನ್ನುವ ಪ್ರಶ್ನೆಯನ್ನು ನೋಡೋಣ. ಇದಕ್ಕೆ ಉತ್ತರ ಬೇಕಾದರೆ ನಾವು ಕೆಲವು ಆಧಾರ ಕಲ್ಪನೆಗಳ ಮೇಲೆ ತತ್ವವನ್ನು ರಚಿಸಬೇಕಾಗುತ್ತದೆ. ಕಳೆದ ಅನೇಕ ವರ್ಷಗಳ ಹಾಲಿನ ಉತ್ಪಾದನೆಯ ಅಂಕಿ-ಅಂಶಗಳನ್ನು ಕಲೆ ಹಾಕಿ, ಜನಸಂಖ್ಯೆಯ ಬೆಳವಣಿಗೆಯನ್ನು ಅಂದಾಜು ಮಾಡಿ ಅದಕ್ಕೆ ಸಂಬಂಧಿಸಿದ ತತ್ವವನ್ನು ರೂಪಿಸಿಬೇಕಾಗುತ್ತದೆ. ಆದ್ದರಿಂದ ಕೆಲವು ನಿದಿಷ್ಟ ಮಾರ್ಗಗಳನ್ನು ಅನುಸರಿಸಿ ಆರ್ಥಿಕ ತತ್ವವನ್ನು ರೂಪಿಸಬೇಕಾಗುತ್ತದೆ.

ಇನ್ನೂ ಒಂದು ಸ್ವಾರಸ್ಯವೆಂದರೆ, ಕೆಲವು ಕ್ರಿಯೆಗಳನ್ನು ನಾವು ಗಮನಿಸುವುದಕ್ಕೆ ಸಾಧ್ಯವಿಲ್ಲ. ಉದಾಹರಣೆಗೆ ಕಾರ್ಲ್‌ಮಾರ್ಕ್ಸ್‌ನು ಬಂಡವಾಳಶಾಹಿ ಅರ್ಥವ್ಯವಸ್ಥೆ ಭವಿಷ್ಯದಲ್ಲಿ ಕುಸಿಯುತ್ತದೆ ಎಂಬ ತತ್ವವನ್ನು ಮಂಡಿಸಿದ. ಹಾಗೆಯೇ ಮೂಲ್ಥಸ್ ಮುಂದೊಂದು ಕಾಲದಲ್ಲಿ ಆಹಾರದ ಕೊರತೆಯಿಂದ ರಸ್ತೆಗಳಲ್ಲಿಯೆ ಜನರು ಸಾಯುತ್ತಾರೆ ಎಂಬ ತತ್ವವನ್ನು ಮಂಡಿಸಿದ. ಈ ತತ್ವಗಳನ್ನು ಅರ್ಥಶಾಸ್ತ್ರಜ್ಞರು ಅನೇಕ ಆಧಾರ ಕಲ್ಪನೆಗಳ ಮೇಲೆ ರೂಪಿಸುತ್ತಾರೆ. ಅರ್ಥಶಾಸ್ತ್ರದ ತತ್ವಗಳಿಗೆ ಮಾನ್ಯತೆ ಬಂದಿರುವುದು ಇಂತಹ ತತ್ವಗಳ ಆಧಾರದಿಂದಲೆ. ಆದ್ದರಿಂದ ಅರ್ಥಶಾಸ್ತ್ರಜ್ಞರು ನೇರವಾಗಿ ಆರ್ಥಿಕ ಕ್ರಿಯೆಗಳನ್ನು ಗಮನಿಸಿ ತತ್ವಗಳನ್ನು ರೂಪಿಸುತ್ತಾರೆ. ಹಾಗೆಯೇ ಅನೇಕ ಕಲ್ಪನೆಗಳನ್ನು ಆಧರಿಸಿ ಇಡೀ ಅರ್ಥ ವ್ಯವಸ್ಥೆಯ ಭವಿಷ್ಯಕ್ಕೆ ಸಂಬಂಧಿಸಿದ ತತ್ವಗಳನ್ನು ರಚಿಸುತ್ತಾರೆ. ಒಂದು ವಿಷಯಕ್ಕೆ ಸಂಬಂಧಿಸಿದ ತತ್ವವನನ್ನು ಮೈಕ್ರೋ ಅರ್ಥಶಾಸ್ತ್ರವೆಂದೂ, ಸಮಗ್ರ ವಿಷಯಗಳಿಗೆ ಸಂಬಂಧಿಸಿದ ವಿಷಯವನ್ನು ಮ್ಯಾಕ್ರೋ ಅರ್ಥಶಾಸ್ತ್ರವೆಂದೂ ಗುರುತಿಸಲಾಗುತ್ತದೆ. ಈ ವಿಭಜನೆಯನ್ನು ಸ್ವಲ್ಪ ವಿವರವಾಗಿ ನೋಡೋಣ.

## ಅಂಶಲಕ್ಷಿ ಅರ್ಥಶಾಸ್ತ್ರ ಮತ್ತು ಸಮಗ್ರಲಕ್ಷಿ ಅರ್ಥಶಾಸ್ತ್ರ

ಆಧುನಿಕ ಅರ್ಥಶಾಸ್ತ್ರಜ್ಞರು ಅರ್ಥಶಾಸ್ತ್ರದ ಅಭ್ಯಾಸದ ವಿಷಯವನ್ನು ಅಂಶಲಕ್ಷಿ ಅರ್ಥಶಾಸ್ತ್ರ ಮತ್ತು ಸಮಗ್ರಲಕ್ಷಿ ಅರ್ಥಶಾಸ್ತ್ರವೆಂದು ಎರಡು ವಿಭಾಗವಾಗಿ ವಿಂಗಡಿಸಿ ಕೊಳ್ಳುತ್ತಾರೆ. ಪ್ರಪ್ರಥಮವಾಗಿ ಇವೆರಡು ಪರಿಭಾವನೆಗಳನ್ನು ಪ್ರಯೋಗಿಸಿದವರು ಓಸ್ಲೋ ವಿಶ್ವವಿದ್ಯಾನಿಲಯದ ಪ್ರೊಫೆಸರ್ ರ್‍ಯಾಗ್ನರ್ ಫ್ರಿಶ್ಚರವರು. ಇತ್ತೀಚೆಗಂತೂ ಆರ್ಥಿಕ ತತ್ವಗಳನ್ನು ಇವೆರಡೂ ವಿಭಾಗಗಳಲ್ಲಿ ಚರ್ಚಿಸುವುದು ತುಂಬಾ ಪ್ರಚಲಿತದಲ್ಲಿದೆ. ಇಲ್ಲಿ ಅಂಶಲಕ್ಷಿ ಅರ್ಥಶಾಸ್ತ್ರದ ವಿಷಯ ಮತ್ತು ಮಿತಿಗಳನ್ನು ಚರ್ಚಿಸಲಾಗುತ್ತದೆ. ಮುಂದೆ ಸಮಗ್ರಲಕ್ಷಿ ಅರ್ಥಶಾಸ್ತ್ರದ ವಿಷಯವನ್ನು ಚರ್ಚಿಸಲಾಗುತ್ತದೆ.

## ಅಂಶಲಕ್ಷಿ ಅರ್ಥಶಾಸ್ತ್ರ

ಅಂಶಲಕ್ಷಿ ಅರ್ಥಶಾಸ್ತ್ರದಲ್ಲಿ ಸಣ್ಣಸಣ್ಣ ಆರ್ಥಿಕ ವಿಷಯವನ್ನು ಕೂಲಂಕಷವಾಗಿ ಚರ್ಚಿಸಲಾಗುತ್ತದೆ. ಉದಾಹರಣೆಗೆ ಒಬ್ಬ ಅನುಭೋಗಿ ಹೇಗೆ ವರ್ತಿಸುತ್ತಾನೆ, ಅವನು ತನ್ನ ಮಿತವಾದ ಆದಾಯದಿಂದ ಹೇಗೆ ಪರಮಾವಧಿ ತೃಪ್ತಿಯನ್ನು ಪಡೆಯುತ್ತಾನೆ; ಒಂದು ವಸ್ತುವಿನ ಬೆಲೆ ಹೇಗೆ ನಿಗದಿಯಾಗುತ್ತದೆ; ಒಂದು ಕಾರ್ಖಾನೆ ಹೇಗೆ ಸಮತೋಲನವನ್ನು ಮುಟ್ಟುತ್ತದೆ; ಇತ್ಯಾದಿ ವಿಷಯಗಳನ್ನು ಚರ್ಚಿಸಲಾಗುತ್ತದೆ. ಅಂದರೆ ಇಡೀ ರಾಷ್ಟ್ರೀಯ ಆರ್ಥಿಕ ಚಟುವಟಿಕೆಗಳನ್ನು ಸಮಗ್ರವಾಗಿ ಈ ಭಾಗದಲ್ಲಿ ಚರ್ಚಿಸಲಾಗುವುದಿಲ್ಲ. ಬದಲಿಗೆ ರಾಷ್ಟ್ರೀಯ ಆರ್ಥಿಕ ಚಟುವಟಿಕೆಗಳನ್ನು ಸಣ್ಣಸಣ್ಣ ವಿಭಾಗಗಳಾಗಿ ವಿಂಗಡಿಸಿಕೊಂಡು ಪ್ರತಿಯೊಂದೂ ವಿಭಾಗವನ್ನು ವೈಯಕ್ತಿಕವಾಗಿ ಅಭ್ಯಾಸ ಮಾಡಲಾಗುತ್ತದೆ. ಕ್ಲಾಸಿಕಲ್ ಪಂಥದ ಚಿಂತಕರ ಬಹುಭಾಗದ ವಿಶ್ಲೇಷಣೆ ಅಂಶಲಕ್ಷಿ ಅರ್ಥಶಾಸ್ತ್ರಕ್ಕೆ ಸಂಬಂಧಪಟ್ಟಿದೆ. ಏಕೆಂದರೆ ಅವರು ವೈಯಕ್ತಿಕ ಘಟಕಗಳಿಗೆ ಸಂಬಂಧಿಸಿದ ಆರ್ಥಿಕ ಚಟುವಟಿಕೆಗಳ ವಿಶ್ಲೇಷಣೆಗೆ ಹೆಚ್ಚಿನ ಮಹತ್ವ ನೀಡಿದ್ದರು. ಮತ್ತೊಂದು ಉದಾಹರಣೆಯನ್ನು ನೀಡುವುದಾದರೆ ಪ್ರೊ.ಮಾರ್ಷಲ್‌ರವರ 'ಪ್ರಿನ್ಸಿಪಲ್ಸ್ ಆಫ್ ಎಕನಾಮಿಕ್ಸ್' ಮುಖ್ಯವಾಗಿ ಅಂಶಲಕ್ಷಿ ಅರ್ಥಶಾಸ್ತ್ರವಾಗಿದೆ. ಅವರ ಪ್ರಸಿದ್ಧ ಸಿದ್ಧಾಂತ ಗಳಾದ ಸಮಸೀಮಾಂತ ತುಷ್ಟಿಗುಣ ಮೀಮಾಂಸೆ, ಅನುಭೋಗಿ ಅಧಿಶೇಷ ಮುಂತಾದವು ಅಂಶಲಕ್ಷಿ ಅರ್ಥಶಾಸ್ತ್ರಕ್ಕೆ ನಿರ್ದಿಷ್ಟ ಉದಾಹರಣೆಗಳು.

ಸಮಗ್ರಲಕ್ಷಿ ಅರ್ಥಶಾಸ್ತ್ರವನ್ನು ಮುಖ್ಯವಾಗಿ ಕೇನ್ಸ್ ಅಭಿವೃದ್ಧಿಪಡಿಸಿದ್ದಾರೆ. ಈ ರೀತಿಯ ವಿಶ್ಲೇಷಣೆಯಲ್ಲಿ ಆರ್ಥಿಕ ಚಟುವಟಿಕೆಗಳನ್ನು ಅವುಗಳ ಸಮಗ್ರತೆಯಲ್ಲಿ ಚರ್ಚಿಸಲಾಗುತ್ತದೆ. ಉದಾಹರಣೆಗೆ, ರಾಷ್ಟ್ರೀಯ ವರಮಾನ, ರಾಷ್ಟ್ರೀಯ ಅನುಭೋಗ, ಉದ್ಯೋಗ ಮೀಮಾಂಸೆ, ಇತ್ಯಾದಿಗಳು ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆಯ ಕ್ಷೇತ್ರಕ್ಕೆ ಬರುತ್ತದೆ.

ಅಂಶಲಕ್ಷಿ ಅರ್ಥಶಾಸ್ತ್ರವನ್ನು ಅಭ್ಯಾಸದ ದೃಷ್ಟಿಯಿಂದ ಸಾಮಾನ್ಯವಾಗಿ ಮೂರು

ವಿಭಾಗಗಳಾಗಿ ವಿಂಗಡಿಸಲಾಗುತ್ತದೆ. ಅವುಗಳೆಂದರೆ :

೧. ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ

೨. ತುಲನಾತ್ಮಕ ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ

೩. ಕ್ರಿಯಾತ್ಮಕ ಅಂಶಲಕ್ಷಿ ವಿಶ್ಲೇಷಣೆ

**೧. ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ**

ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆಯಲ್ಲಿ ಅನೇಕ ಆರ್ಥಿಕ ಚಲಗಳ ನಡುವೆ ಇರುವ ಸಂಬಂಧವನ್ನು ಅವುಗಳ ಸಮತೋಲನ ಸ್ಥಿತಿಯಲ್ಲಿ ಚರ್ಚಿಸಲಾಗುತ್ತದೆ. ಇಲ್ಲಿ ನಿರ್ದಿಷ್ಟ ಸಮಯದಲ್ಲಿ ಉಂಟಾಗಿರುವ ಸಮತೋಲನ ಸ್ಥಿತಿಯ ವಿಶ್ಲೇಷಣೆಗೆ ಗಮನವನ್ನು ಕೇಂದ್ರೀಕರಿಸಲಾಗುತ್ತದೆ. ಉದಾಹರಣೆಗೆ, ಒಬ್ಬ ಅನುಭೋಗಿ ತನ್ನ ಮಿತವಾದ ಆದಾಯದಲ್ಲಿ, ಕೊಡಲಾಗಿರುವ ಎರಡು ವಸ್ತುಗಳ ಬೆಲೆಗಳಲ್ಲಿ, ಒಂದು ನಿರ್ದಿಷ್ಟ ಸಮಯದಲ್ಲಿ ಅತ್ಯಧಿಕ ತೃಪ್ತಿ ಮಟ್ಟವನ್ನು ಪಡೆದಿರಬಹುದು. ಈ ನಿರ್ದಿಷ್ಟ ಸಮಯದಲ್ಲಿ ಅನುಭೋಗಿ ಹೇಗೆ ಸಮತೋಲನವನ್ನು ಮುಟ್ಟಿದ್ದಾನೆ, ಇಂತಹ ಸಮತೋಲನವನ್ನು ಉಂಟುಮಾಡಿರುವ ಅಂಶಗಳಾವುವು ಎಂಬುದನ್ನು ಸಮಸ್ಥಿತಿ ಅಂಶಲಕ್ಷಿ ಅರ್ಥಶಾಸ್ತ್ರದಲ್ಲಿ ವಿಶ್ಲೇಷಿಸಲಾಗುತ್ತದೆ. ಈ ಸಮತೋಲನವನ್ನು ಉಂಟುಮಾಡಿರುವ ಅಂಶಗಳಲ್ಲಿ ಯಾವ ಯಾವ ಬದಲಾವಣೆಗಳು ಏರ್ಪಟ್ಟು ಕೊನೆಗೆ ಈ ಸಮತೋಲನ ಸ್ಥಿತಿಗೆ ಬಂದು ಮುಟ್ಟಲಾಗಿದೆ ಎಂಬುದನ್ನು ಇದರಲ್ಲಿ ಚರ್ಚಿಸಲಾಗುವುದಿಲ್ಲ. ಅಂದರೆ ಆರ್ಥಿಕ ಚಟುವಟಿಕೆಗಳಲ್ಲಿನ ಸ್ಥಿತ್ಯಂತರಗಳಲ್ಲಿ ಉಂಟಾಗುವ ಪ್ರತಿಯೊಂದೂ ಬದಲಾವಣೆಯನ್ನೂ ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ ಚರ್ಚಿಸುವುದಿಲ್ಲ. ಇನ್ನೂ ಒಂದು ಸರಳವಾದ ಉದಾಹರಣೆಯನ್ನು ಕೊಡುವುದಾದರೆ ಒಂದು ನಿರ್ದಿಷ್ಟ ಸಮಯದಲ್ಲಿ, ಒಂದು ನಿರ್ದಿಷ್ಟ ವಸ್ತುವಿಗೆ ಬೇಡಿಕೆ ಮತ್ತು ನೀಡಿಕೆಗಳು ಪರಸ್ಪರ ಸಮವಾಗಿದ್ದು, ಸಮತೋಲನ ಬೆಲೆ ಮಾರುಕಟ್ಟೆಯಲ್ಲಿ ಏರ್ಪಟ್ಟಿರಬಹುದು. ಇಂತಹ ಸಮತೋಲನದಲ್ಲಿ ಬೇಡಿಕೆ, ನೀಡಿಕೆ ಮತ್ತು ಬೆಲೆಯನ್ನು ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ ಚರ್ಚಿಸುತ್ತದೆ. ಆದರೆ ಇಂತಹ ಒಂದು ಸಮತೋಲನ ಸ್ಥಿತಿ ಏರ್ಪಡುವುದ ಕ್ಕೋಸ್ಕರ ಬೇಡಿಕೆ ಮತ್ತು ನೀಡಿಕೆಗಳಲ್ಲಿ ಯಾವ ಯಾವ ಬದಲಾವಣೆಗಳು ಏರ್ಪಟ್ಟಿವೆ ಎನ್ನುವುದನ್ನು ಈ ವಿಶ್ಲೇಷಣೆ ಕೈಗೊಳ್ಳುವುದಿಲ್ಲ.

**೨. ತುಲನಾತ್ಮಕ ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ**

ಬೇರೆ ಬೇರೆ ಸಮಯಗಳಲ್ಲಿ ಉಂಟಾಗಿರುವ ಸಮತೋಲನಗಳ ಅಧ್ಯಯನವನ್ನು ತುಲನಾತ್ಮಕ ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ ಕೈಗೊಳ್ಳುತ್ತದೆ. ಅಂದರೆ ಎರಡು ನಿರ್ದಿಷ್ಟ ಸಮಯಗಳಲ್ಲಿ ಉಂಟಾಗಿರುವ ಸಮತೋಲವನ್ನು ಇದು ವಿಶ್ಲೇಷಿಸುತ್ತದೆ. ಒಂದು ಸರಳವಾದ ಉದಾಹರಣೆಯ ಮೂಲಕ ಈ ವಿಶ್ಲೇಷಣೆಯನ್ನು ಅರ್ಥಮಾಡಿಕೊಳ್ಳೋಣ.

ಒಂದು ವಸ್ತುವಿಗೆ T೧ ಎನ್ನುವ ಸಮಯದಲ್ಲಿ ಬೇಡಿಕೆ ಮತ್ತು ನೀಡಿಕೆಗಳ ಹೊಂದಾಣಿಕೆಯಿಂದಾಗಿ ಹತ್ತು ರೂಪಾಯಿ ಸಮತೋಲನ ಬೆಲೆ ಏರ್ಪಟ್ಟಿದೆ ಎಂದು ಭಾವಿಸೋಣ. ಈಗ ಈ ವಸ್ತುವಿಗೆ ಬೇಡಿಕೆಯಲ್ಲಿ ಕುಸಿತ ಉಂಟಾಗಿದೆ ಎಂದು ಭಾವಿಸೋಣ. ಇದರಿಂದಾಗಿ T೨ ಸಮಯದಲ್ಲಿ ಬೇಡಿಕೆ ಮತ್ತು ನೀಡಿಕೆಗಳ ಹೊಂದಾಣಿಕೆ ಎಂಟು ರೂಪಾಯಿಗಳಲ್ಲಿ ಉಂಟಾಗಿ ಸಮತೋಲನ ಆ ಬೆಲೆಯಲ್ಲಿ ಉಂಟಾಗುತ್ತದೆಂದು ಭಾವಿಸೋಣ. ತುಲನಾತ್ಮಕ ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆಯಲ್ಲಿ ಇವೆರಡೂ ಸಮಯಗಳಲ್ಲಿನ ಸಮತೋಲನಗಳನ್ನು ವಿಶ್ಲೇಷಿಸಲಾಗುತ್ತದೆ. ಆದರೆ T೧ ಅವಧಿಯಿಂದ T೨ ಅವಧಿಯ ನಡುವೆ ಬೇಡಿಕೆ ಮತ್ತು ಬೆಲೆಗಳಲ್ಲಿ ಉಂಟಾಗಿರುವ ಎಲ್ಲ ರೀತಿಯ ಬದಲಾವಣೆಗಳನ್ನು ಈ ವಿಶ್ಲೇಷಣೆ ಗಮನಕ್ಕೆ ತೆಗೆದುಕೊಳ್ಳುವುದಿಲ್ಲ. ಸಾರಾಂಶದಲ್ಲಿ ಹೇಳುವುದಾದರೆ ಈ ವಿಶ್ಲೇಷಣೆ ಎರಡು ನಿರ್ದಿಷ್ಟ ಅವಧಿಯಲ್ಲಿನ ಸಮತೋಲನ ಸ್ಥಿತಿಗಳನ್ನು ಅಭ್ಯಾಸ ಮಾಡುತ್ತದೆ ಅಷ್ಟೆ.

**೩. ಕ್ರಿಯಾತ್ಮಕ ಅಂಶಲಕ್ಷಿ ವಿಶ್ಲೇಷಣೆ**

ಈ ವಿಶ್ಲೇಷಣೆಯಲ್ಲಿ ಒಂದು ಸಮತೋಲನ ಸ್ಥಿತಿಯಿಂದ ಮತ್ತೊಂದು ಸಮತೋಲನ ಸ್ಥಿತಿಯನ್ನು ಮುಟ್ಟುವವರೆಗೆ ಎಲ್ಲ ಬದಲಾವಣೆಗಳನ್ನು ವಿಶ್ಲೇಷಿಸಲಾಗುತ್ತದೆ. ನಮ್ಮ ಹಿಂದಿನ ಉದಾಹರಣೆಯನ್ನು ಗಮನಿಸುವುದಾದರೆ ಹತ್ತು ರೂಪಾಯಿ ಸಮತೋಲನ ಸ್ಥಿತಿಯಿಂದ ಬೆಲೆ ವಿಚಲಿತಗೊಂಡಾಗ ಅದು ಎಂಟು ರೂಪಾಯಿ ಸಮತೋಲನ ಸ್ಥಿತಿಯನ್ನು ಮುಟ್ಟುವವರೆಗೆ, ಬೇಡಿಕೆ ಮತ್ತು ನೀಡಿಕೆಗಳು ಯಾವ ಯಾವ ಬದಲಾವಣೆಯನ್ನು ಅನುಭವಿಸಿದವು ಎಂಬುದನ್ನು ಸಂಪೂರ್ಣವಾಗಿ ಅಭ್ಯಾಸ ಮಾಡಲಾಗುತ್ತದೆ. ಅಂದರೆ ಒಂದು ಸಮತೋಲನ ಸ್ಥಿತಿಯಿಂದ ಮತ್ತೊಂದು ಸಮತೋಲನ ಸ್ಥಿತಿಯನ್ನು ಮುಟ್ಟುವವರೆಗೆ ಮಧ್ಯಂತರದಲ್ಲಿ ಉಂಟಾಗುವ ಎಲ್ಲ ಅಸಮತೋಲನ ಸ್ಥಿತಿಗಳನ್ನು ಕ್ರಿಯಾತ್ಮಕ ಅಂಶಲಕ್ಷಿ ವಿಶ್ಲೇಷಣೆ ಚರ್ಚಿಸುತ್ತದೆ.

**ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆಯ ವಿಭಾಗಗಳು**

ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆಯನ್ನು ಮುಖ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗುತ್ತದೆ. ಅವುಗಳೆಂದರೆ :

೧. ಸಮಸ್ಥಿತಿ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ.

೨. ತುಲಾನಾತ್ಮಕ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ

೩. ಕ್ರಿಯಾತ್ಮಕ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ.

**೧. ಸಮಸ್ಥಿತಿ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ**

ಈ ವಿಶ್ಲೇಷಣೆ ವಿಧಾನದಲ್ಲಿ ಒಂದು ನಿರ್ದಿಷ್ಟ ಸಮತೋಲನ ಸ್ಥಿತಿಯಲ್ಲಿರುವ ಆರ್ಥಿಕ ಚಟುವಟಿಕೆಗಳನ್ನು ಅವುಗಳ ಸಮಗ್ರತೆಯಲ್ಲಿ ವಿಶ್ಲೇಷಿಸಲಾಗುತ್ತದೆ. ನಾವು

ವಿಶ್ಲೇಷಿಸುತ್ತಿರುವ ಸಮಷ್ಟಿತಿ ಹೇಗೆ ಉಂಟಾಯಿತು, ಈ ಸ್ಥಿತಿಯನ್ನು ಮುಟ್ಟಲು ಆರ್ಥಿಕ ಚಟುವಟಿಕೆಗಳು ಯಾವ ಗತಿಯನ್ನು ಕ್ರಮಿಸಿದವು ಎನ್ನುವ ವಿವರಗಳಿಗೆ ಈ ವಿಶ್ಲೇಷಣಾ ಕ್ರಮದಲ್ಲಿ ಗಮನ ಕೊಡುವುದಿಲ್ಲ.

ಒಂದು ಸರಳವಾದ ಉದಾಹರಣೆಯನ್ನು ಇದರ ಬಗ್ಗೆ ಗ್ರಹಿಸೋಣ. ಒಂದು ರಾಷ್ಟ್ರದ ಆದಾಯ ಒಂದು ನಿರ್ದಿಷ್ಟ ಸಮಯದಲ್ಲಿ ರಾಷ್ಟ್ರದ ಅನುಭೋಗ ಮತ್ತು ರಾಷ್ಟ್ರದ ಹೂಡಿಕೆಗಳ ಮೊತ್ತಗಳನ್ನು ಒಳಗೊಳ್ಳುತ್ತದೆ ಎಂದು ಭಾವಿಸೋಣ. ಇವುಗಳ ಸಂಬಂಧವನ್ನು ನಾವು ಒಂದು ಸಮೀಕರಣದ ಮೂಲಕ ಕೆಳಗಿನಂತೆ ಬರೆಯಬಹುದು.

$$Y = C + I$$

ಇಲ್ಲಿ Y ರಾಷ್ಟ್ರಾದಾಯವನ್ನು, C ರಾಷ್ಟ್ರೀಯ ಅನುಭೋಗವನ್ನು ಮತ್ತು I ರಾಷ್ಟ್ರೀಯ ಹೂಡಿಕೆಯನ್ನು ವ್ಯಕ್ತಪಡಿಸುತ್ತವೆ. ಸಮೀಕರಣದ ಪ್ರಕಾರ ರಾಷ್ಟ್ರಾದಾಯ (Y) , ರಾಷ್ಟ್ರೀಯ ಅನುಭೋಗ (C) ಮತ್ತು ರಾಷ್ಟ್ರೀಯ ಹೂಡಿಕೆಯ (Y) ಮೊತ್ತಕ್ಕೆ ಸಮನಾಗಿದ್ದು, ಒಂದು ಸಮತೋಲನ ಸ್ಥಿತಿಯನ್ನು ಇದು ವ್ಯಕ್ತಪಡಿಸುತ್ತದೆ ಎಂದಿಟ್ಟುಕೊಳ್ಳೋಣ. ಸಮಷ್ಟಿತಿ ಸಮಗ್ರ ಲಕ್ಷಿ ಆರ್ಥಿಕ ವಿಶ್ಲೇಷಣಾ ಕ್ರಮದಲ್ಲಿ ಈ ಸಮತೋಲನ ಸಂಬಂಧವನ್ನು ಕೂಲಂಕಷವಾಗಿ ಪರಿಶೀಲಿಸಲಾಗುತ್ತದೆ. ಆದರೆ ಇಂತಹ ಸಮತೋಲನವನ್ನು ಮುಟ್ಟಲು ಅನುಭೋಗ ಮತ್ತು ಹೂಡಿಕೆಗಳು ಯಾವ ಬದಲಾವಣೆಗಳನ್ನು ಅನುಭವಿಸಿದವು ಎನ್ನುವುದರ ವಿಶ್ಲೇಷಣೆಯ ಗೋಜಿಗೆ ಈ ಕ್ರಮದಲ್ಲಿ ಹೋಗುವುದಿಲ್ಲ. ಅಂದರೆ ಈ ವಿಶ್ಲೇಷಣಾ ಕ್ರಮದಲ್ಲಿ, ಅನೇಕ ಬದಲಾವಣೆಗಳನ್ನು ಅನುಭವಿಸಿ ಸಮತೋಲನವನ್ನು ಮುಟ್ಟಿದ ನಂತರದ ವಿಶ್ಲೇಷಣೆಯನ್ನು ಮಾತ್ರ ಕೈಗೊಳ್ಳಲಾಗುತ್ತದೆ. ಈ ಬದಲಾವಣೆಗಳು ಹೇಗೆ ನಡೆದವು ಎಂಬುದನ್ನು ವಿವರಿಸುವುದಿಲ್ಲ.

**೨. ತುಲನಾತ್ಮಕ ಸಮಷ್ಟಿತಿ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ**

ರಾಷ್ಟ್ರದ ಅನುಭೋಗ, ಹೂಡಿಕೆ, ಉಳಿತಾಯ ಮುಂತಾದ ಚಟುವಟಿಕೆಗಳು ಸ್ಥಿರವಾಗಿರುವುದಿಲ್ಲ. ಬದಲಿಗೆ ಅವು ಒಂದು ಸಮಯದಿಂದ ಮತ್ತೊಂದಕ್ಕೆ ಬದಲಾವಣೆಗಳನ್ನು ಅನುಭವಿಸುತ್ತವೆ. ಆದ್ದರಿಂದ ಈ ಸಮಗ್ರ ಚಟುವಟಿಕೆಗಳ ನಡುವೆ ಉಂಟಾಗುವ ಸಮತೋಲನಗಳೂ ಕಾಲದಿಂದ ಕಾಲಕ್ಕೆ ವ್ಯತ್ಯಾಸಗೊಳ್ಳುತ್ತಾ ಹೋಗುತ್ತವೆ. ವಿವಿಧ ಸಮತೋಲನ ಸ್ಥಿತಿಗಳ ಹೋಲಿಕೆ ಸಹ ಕುತೂಹಲಕಾರಿಯಾದುದು. ತುಲನಾತ್ಮಕ ಸಮಷ್ಟಿತಿ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆಯಲ್ಲಿ ಅರ್ಥವ್ಯವಸ್ಥೆ ಬಂದು ಮುಟ್ಟುವ ವಿವಿಧ ಸಮತೋಲನಗಳ ಹೋಲಿಕೆಯ ವಿಶ್ಲೇಷಣೆಯನ್ನು ಕೈಗೊಳ್ಳಲಾಗುತ್ತದೆ.

ನಮ್ಮ ಹಿಂದಿನ ಉದಾಹರಣೆಯನ್ನೇ ಮತ್ತೆ ತೆಗೆದುಕೊಳ್ಳೋಣ. ಹಿಂದಿನ ಸಮೀಕರಣವನ್ನು ಸ್ವಲ್ಪ ಬದಲಾಯಿಸಿ ಕೆಳಗಿನಂತೆ ಬರೆಯೋಣ.

$$Y_1 = C_1 + I_1$$

't' ಎಂಬ ಅಕ್ಷರ ಹಿಂದಿನ ಸಮೀಕರಣದಲ್ಲಿಲ್ಲದ್ದು ಈಗ ಕಾಣಿಸಿಕೊಂಡಿದೆ. 't' ಎಂಬ ಸಮಯದಲ್ಲಿ ಉಂಟಾಗಿರುವ ಆದಾಯ ಸಮತೋಲನ ಸ್ಥಿತಿಯನ್ನು ಈ ಸಮೀಕರಣ ವ್ಯಕ್ತಪಡಿಸುತ್ತದೆ. (t + ೧) ಅವಧಿಯಲ್ಲಿ ಮೇಲಿನ ಸಮತೋಲನ ಸ್ಥಿತಿ ಕೆಳಗಿನಂತೆ ಬದಲಾಗುತ್ತದೆ ಎಂದು ಭಾವಿಸೋಣ.

$Y_{t+೧} = C_{t+೧} + I_{t+೧}$

ತುಲನಾತ್ಮಕ ಸಮಸ್ಥಿತಿ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ ಕ್ರಮದಲ್ಲಿ (t) ಮತ್ತು (t +೧) ಎರಡೂ ಅವಧಿಗಳ ಸಮತೋಲನ ಸ್ಥಿತಿಗಳನ್ನು ಪರಸ್ಪರ ಹೋಲಿಸಲಾಗುತ್ತದೆ. ಅಂದರೆ ಅರ್ಥವ್ಯವಸ್ಥೆ (t) ಅವಧಿಯ ಸಮತೋಲನದಿಂದ (t+೧) ಅವಧಿಯ ಸಮತೋಲನದವರೆಗೆ, ಆದಾಯ, ಅನುಭೋಗ ಮತ್ತು ಹೂಡಿಕೆಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ಈ ವಿಶ್ಲೇಷಣಾ ಕ್ರಮದಲ್ಲಿ ವಿಚಾರ ಮಾಡುವುದಿಲ್ಲ.

ಒಂದು ಸಮತೋಲನ ಸ್ಥಿತಿಯನ್ನು ಮತ್ತೊಂದು ಅವಧಿಯ ಸಮತೋಲನ ಸ್ಥಿತಿಯೊಂದಿಗೆ ಹೋಲಿಸಲಾಗುತ್ತದೆ, ಅಷ್ಟೆ.

ಈ ರೀತಿಯ ವಿಶ್ಲೇಷಣೆಗೆ ಸಂಬಂಧಿಸಿದ ಮತ್ತೂ ಒಂದು ಉದಾಹರಣೆಯನ್ನು ಗಮನಿಸೋಣ. ಒಂದು ನಿರ್ದಿಷ್ಟ ಬೆಲೆಮಟ್ಟದ ಸಮತೋಲನದಲ್ಲಿ ಅರ್ಥವ್ಯವಸ್ಥೆ ಒಂದು ಅವಧಿಯಲ್ಲಿ ಇದೆ ಎಂದು ಭಾವಿಸೋಣ. ಸರ್ಕಾರ ಈಗ ಹಣದ ಪ್ರಮಾಣವನ್ನು ಹೆಚ್ಚು ಮಾಡಿದೆ ಎಂದು ಭಾವಿಸೋಣ. ಹಣದ ಪ್ರಮಾಣದಲ್ಲಿ ವ್ಯತ್ಯಾಸ ಉಂಟಾಗಿರುವುದ ರಿಂದ ಇದು ಬೆಲೆಮಟ್ಟದ ಮೇಲೆ ಪ್ರಭಾವ ಬೀರಿ ಬೆಲೆಮಟ್ಟ ವ್ಯತ್ಯಾಸಗೊಳ್ಳುವಂತೆ ಮಾಡುತ್ತದೆ. ಈಗ ಅರ್ಥವ್ಯವಸ್ಥೆಯಲ್ಲಿ ಒಂದು ಹೊಸ ಬೆಲೆಮಟ್ಟದಲ್ಲಿ ಸಮತೋಲನ ಏರ್ಪಡುತ್ತದೆ. ತುಲನಾತ್ಮಕ ಸಮಸ್ಥಿತಿ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆಯಲ್ಲಿ ಹಿಂದಿನ ಸಮತೋಲನದೊಡನೆ, ಹೊಸದಾಗಿ ಏರ್ಪಟ್ಟಿರುವ ಸಮತೋಲನವನ್ನು ಹೋಲಿಸಿ ನೋಡಲಾಗುತ್ತದೆ ಅಷ್ಟೆ. ಆದರೆ ಈ ವಿಶ್ಲೇಷಣೆ ಇವೆರಡೂ ಸಮತೋಲನ ಸ್ಥಿತಿಗಳ ನಡುವೆ ಹಣಪ್ರಮಾಣ, ಬೆಲೆಮಟ್ಟ ಮುಂತಾದ ಆರ್ಥಿಕ ಚಲಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ವಿಶ್ಲೇಷಿಸುವುದಿಲ್ಲ.

**೩. ಕ್ರಿಯಾತ್ಮಕ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ**

ಈ ರೀತಿಯ ವಿಶ್ಲೇಷಣೆ ಇತ್ತೀಚಿನ ದಿನಗಳಲ್ಲಿ ಅಭಿವೃದ್ಧಿಗೊಂಡಿದೆಯೆಂದು ಹೇಳಬಹುದು. ಪ್ರಸಿದ್ಧ ಅರ್ಥವಿಜ್ಞಾನಿಗಳಾದ ರಾಗ್ನರ್‌ಫ್ರಿಶ್ಚ್. ಡಿ. ಹೆಚ್. ರಾಬರ್ಟ್ ಸನ್, ಜೆ.ಆರ್. ಹಿಕ್ಸ್, ಎಮ್. ಕಲೆಕೆ, ಟಿನ್‌ಬರ್ಜಿನ್ ಮತ್ತು ಸ್ಯಾಮ್ಯುಯಲ್‌ಸನ್ ಈ ರೀತಿಯ ವಿಶ್ಲೇಷಣೆಯನ್ನು ಅಭಿವದ್ಧಿ ಪಡಿಸಿದ್ದಾರೆ. ಇಂತಹ ವಿಶ್ಲೇಷಣೆ ಅತ್ಯಂತ ಮಹತ್ವವಾದದ್ದೆಂದು ಸಹ ಕಂಡುಬಂದಿದೆ.

ನಮ್ಮ ಹಿಂದಿನ ಎರಡು ಸಮೀಕರಣಗಳನ್ನೇ ಮತ್ತೆ ಗಮನಿಸೋಣ :

$Y_t = C_t + I_t$

$$Y_{t+1} = C_{t+1} + I_{t+1}$$

t ಮತ್ತು t+1 ಎರಡು ಅವಧಿಗಳಲ್ಲಿ ರಾಷ್ಟ್ರಾದಾಯ ಸಮತೋಲನಗಳನ್ನು ಈ ಸಮೀಕರಣಗಳು ವ್ಯಕ್ತಪಡಿಸುತ್ತವೆ ಎಂಬುದನ್ನು ಹಿಂದೆ ಗಮನಿಸಿದ್ದೇವೆ. ತುಲನಾತ್ಮಕ ಸಮಸ್ಥಿತಿ ಆರ್ಥಿಕ ವಿಶ್ಲೇಷಣೆಯಲ್ಲಿ ಇವೆರಡೂ ಸಮತೋಲನಗಳನ್ನು ಹೋಲಿಸಿ ನೋಡಲಾಗುತ್ತದೆ. ಆದರೆ ಕ್ರಿಯಾತ್ಮಕ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆಯಲ್ಲಿ ಇವೆರಡು ಸಮತೋಲನಗಳ ನಡುವೆ ಆರ್ಥಿಕ ಚಲಗಳಲ್ಲಿ ಉಂಟಾಗುವ ಎಲ್ಲ ಬದಲಾವಣೆಗಳನ್ನೂ ಗಮನಕ್ಕೆ ತೆಗೆದುಕೊಳ್ಳಲಾಗುತ್ತದೆ. $Y_t$ ಅವಧಿಯಿಂದ ವಿಚಲವಾದ ಸಮತೋಲನ ಯಾವ ಬದಲವಾಣೆಗಳನ್ನು ಅನುಭವಿಸಿ $Y_{t+1}$ ಅವಧಿಯ ಸಮತೋಲನವನ್ನು ಮುಟ್ಟಿತು ಎನ್ನುವುದನ್ನು ಕೂಲಂಕಷವಾಗಿ ಅಭ್ಯಾಸ ಮಾಡಲಾಗುತ್ತದೆ. ಇಂತಹ ವಿಶ್ಲೇಷಣೆಗೆ ಗಣಿತಶಾಸ್ತ್ರವನ್ನು ಬಹುಮಟ್ಟಿಗ ಬಳಸಿಕೊಳ್ಳಲಾಗುತ್ತದೆ.

ಕ್ರಿಯಾತ್ಮಕ ಸಮಗ್ರಲಕ್ಷಿ ಆರ್ಥಿಕ ವಿಶ್ಲೇಷಣೆ ಕಷ್ಟವಾದರೂ ಬಹಳ ಉಪಯುಕ್ತವಾದುದೆಂದು ಕಂಡುಬಂದಿದೆ. ಏಕೆಂದರೆ, ಎರಡು ಸಮತೋಲನಗಳ ನಡುವಣ ಹಾದಿಯೆಲ್ಲವನ್ನೂ ವಿಶ್ಲೇಷಣೆ ಕ್ರಮಿಸುವುದರಿಂದ, ಪ್ರತಿಯೊಂದು ಆರ್ಥಿಕ ಚಲದಲ್ಲಿ ಉಂಟಾಗುವ ಬದಲಾವಣೆ, ಒಂದು ಚಲದ ಪ್ರಭಾವದಿಂದ ಇತರ ಚಲಗಳ ಮೇಲೆ ಉಂಟಾಗುವ ಪರಿಣಾಮಗಳನ್ನು ಗಮನಿಸುವುದರಿಂದ, ಇಡೀ ಅರ್ಥವ್ಯವಸ್ಥೆಯ ಚಲಗಳನ್ನು ಅವುಗಳ ಸಮಗ್ರತೆಯಲ್ಲಿ ಅರ್ಥಮಾಡಿಕೊಳ್ಳುವುದು ಇಂತಹ ವಿಶ್ಲೇಷಣೆಯಿಂದ ಸಾಧ್ಯವಾಗುತ್ತದೆ. ರಾಷ್ಟ್ರದ ಆರ್ಥಿಕ ನೀತಿಗೆ ಈ ವಿಶ್ಲೇಷಣೆ ಬಹುಮಟ್ಟಿಗೆ ನೆರವಾಗುತ್ತದೆ.

## ಆರ್ಥಿಕ ವಿಶ್ಲೇಷಣಾ ಪದ್ಧತಿಗಳು

ಅರ್ಥಶಾಸ್ತ್ರದಲ್ಲಿ ಎರಡು ಬಗೆಯ ವಿಶ್ಲೇಷಣಾ ವಿಧಾನಗಳಿವೆ. ಅವುಗಳೆಂದರೆ ನಿಗಮನ ವಿಶ್ಲೇಷಣ ವಿಧಾನ ಮತ್ತು ಅನುಗಮನ ವಿಶ್ಲೇಷಣ ವಿಧಾನ. ನಿಗಮನ ವಿಧಾನದಲ್ಲಿ, ಸಾಮಾನ್ಯವಾಗಿರುವ ಒಂದು ತತ್ವದಿಂದ, ನಿರ್ದಿಷ್ಟವಾದ ಒಂದು ತತ್ವಕ್ಕೆ ಚಲಿಸಲಾಗುತ್ತದೆ. ಅನುಗಮನ ವಿಧಾನದಲ್ಲಿ ಒಂದು ನಿರ್ದಿಷ್ಟತತ್ವದಿಂದ ಹೊರಟು ಅದನ್ನು ಸಾರ್ವತ್ರೀಕರಿಸುವ ಪ್ರಯತ್ನವನ್ನು ಮಾಡಲಾಗುತ್ತದೆ. ಇವುಗಳನ್ನು ಸ್ವಲ್ಪ ವಿವರವಾಗಿ ನೋಡೋಣ.

## ನಿಗಮನ ಪದ್ಧತಿ

ನಿಗಮನ ಪದ್ಧತಿಯನ್ನು ವಿಶ್ಲೇಷಣ ಪದ್ಧತಿ, ಭಾವನಾ ರೂಪದ ವಿಶ್ಲೇಷಣ ಪದ್ಧತಿ, ಪೂರ್ವಭಾವಿ ಕಲ್ಪನೆಗಳ ಪದ್ಧತಿ ಎಂದೂ ಸಹ ಹೇಳಲಾಗುತ್ತದೆ. ಕೆಲವು ಉದಾಹರಣೆಗಳ ಮೂಲಕ ಈ ವಿಶ್ಲೇಷಣಾ ಕ್ರಮವನ್ನು ಗಮನಿಸೋಣ.

ನಿಗಮನ ಪದ್ಧತಿಯಲ್ಲಿ ಮಾನವನ ಸ್ವಭಾವಕ್ಕೆ ಸಂಬಂಧಿಸಿದ ಕೆಲವು ನಿರ್ವಿವಾದ ಅಂಶಗಳ ಆಧಾರದ ಮೇಲೆ ಕೆಲವು ತತ್ವಗಳನ್ನು ರೂಪಿಸಿ ಅವುಗಳನ್ನು ನಿರ್ದಿಷ್ಟ ವಿಷಯಗಳಿಗೆ ಅನ್ವಯವಾಗುವಂತೆ ಮೀಮಾಂಸೆಯ ರೂಪದಲ್ಲಿ ಮಂಡಿಸಲಾಗುತ್ತದೆ.

ಉದಾಹರಣೆಗೆ ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮವನ್ನು ಗಮನಿಸಿ. ಒಬ್ಬ ಅನುಭೋಗಿ ಯಾವುದೇ ಒಂದು ವಸ್ತುವನ್ನು ನಿರ್ದಿಷ್ಟ ಸಮಯದಲ್ಲಿ ಹೆಚ್ಚು ಹೆಚ್ಚು ಅನುಭೋಗಿಸುತ್ತಾ ಹೋದಂತೆ ಅವನಿಗೆ ಈ ಅನುಭೋಗದಿಂದ ದೊರೆಯುವ ತುಷ್ಟಿಗುಣ ಕಡಿಮೆಯಾಗುತ್ತಾ ಹೋಗುತ್ತದೆಂದು ಈ ನಿಯಮ ತಿಳಿಸುತ್ತದೆ. ಈ ನಿಯಮಕ್ಕೆ ಯಾವುದೇ ಆಧಾರ ಅನಗತ್ಯ. ಮಾನವನ ಸ್ವಭಾವವೇ ಈ ನಿಯಮಕ್ಕೆ ವಿವರಣೆಯನ್ನು ನೀಡಬಲ್ಲದು. ಈ ನಿಯಮವನ್ನು ಆಧಾರವಾಗಿಟ್ಟುಕೊಂಡು, ನಿಗಮನ ಪದ್ಧತಿಯನ್ನು ಅನುಸರಿಸಿ ಇನ್ನೂ ಕೆಲವು ಸಾಮಾನ್ಯ ನಿಯಮಗಳನ್ನು ರೂಪಿಸಬಹುದು. ಉದಾಹರಣೆಗೆ ಒಬ್ಬ ವ್ಯಕ್ತಿಯ ಬಳಿ ಯಾವುದೇ ವಸ್ತುವಿನ ದಾಸ್ತಾನು ಹೆಚ್ಚಾದಂತೆ ಅದರಿಂದ ಅವನಿಗೆ ದೊರೆಯುವ ತುಷ್ಟಿಗುಣ ಕಡಿಮೆಯಾಗುತ್ತಾ ಹೋಗುತ್ತದೆ. ಅಂದರೆ ಶ್ರೀಮಂತರಿಗೆ ಹಣದ ತುಷ್ಟಿಗುಣ ಕಡಿಮೆಯೂ, ಬಡವರಿಗೆ ಅದು ಹೆಚ್ಚೂ ಆಗಿರುತ್ತದೆ. ಇದನ್ನು ಆಧರಿಸಿ ಇನ್ನೂ ಒಂದು ಸಾಮಾನ್ಯ ನಿಯಮವನ್ನು ರೂಪಿಸಬಹುದು. ಶ್ರೀಮಂತನಿಗೆ ಹಣದ ತುಷ್ಟಿಗುಣ ಕಡಿಮೆಯಿರುವುದರಿಂದ ಅವನಿಗೆ ಹೆಚ್ಚಿನ ತೆರಿಗೆಯನ್ನು ವಿಧಿಸಬಹುದು. ಆದರೆ ಬಡವನಿಗೆ ಹೆಚ್ಚಾಗಿರುವುದರಿಂದ ಅವನಿಗೆ ಕಡಿಮೆ ತೆರಿಗೆ ಭಾರವನ್ನು ವಿಧಿಸಬೇಕು. ಹೀಗೆ ಒಂದು ನಿದಿಷ್ಟ ನಿಯಮವನ್ನು ಅನುಸರಿಸಿ ಸಾಮಾನ್ಯವಾದ ಅನೇಕ ನಿಯಮಗಳನ್ನು ರೂಪಿಸುವ ಕ್ರಮ ನಿಗಮನ ಪದ್ಧತಿಯ ಮುಖ್ಯ ಲಕ್ಷಣ.

ನಿಗಮನ ಪದ್ಧತಿ ಮತ್ತು ಅನುಗಮನ ಪದ್ಧತಿಗಳ ನಡುವೆ ಒಂದು ಗೆರೆಯನ್ನು ಹಾಕಿ ಅವುಗಳನ್ನು ಪರಸ್ಪರ ಬೇರ್ಪಡಿಸುವುದು ಸಾಧ್ಯವಿಲ್ಲ. ಏಕೆಂದರೆ ನಿಗಮನ ಪದ್ಧತಿಯ ವಿಶ್ಲೇಷಣೆಯನ್ನು ಅನುಸರಿಸುತ್ತಿರುವಾಗ ಮಧ್ಯದಲ್ಲಿ ಅನುಗಮನ ಪದ್ಧತಿಯ ಪ್ರವೇಶ ನಡೆದಿರುತ್ತದೆ. ಅಥವಾ ನಿಗಮನ ಪದ್ಧತಿಯ ಸಿದ್ಧಾಂತವನ್ನು ಸತ್ಯವೆಂದು ಸಾಧಿಸಿ ತೋರಿಸಲು ಅನುಗಮನ ಪದ್ಧತಿಯ ವಿಶ್ಲೇಷಣೆ ಅಗತ್ಯವಾಗುತ್ತದೆ. ನಮ್ಮ ಮೇಲಿನ ಉದಾಹರಣೆಯನ್ನು ಗಮನಿಸುವುದಾದರೆ ಸೀಮಾಂತ ಇಳಿಮುಖ ತುಷ್ಟಿಗುಣ ನಿಯಮವನ್ನು ಸಿದ್ಧ ಮಾಡಲು ವೈಯಕ್ತಿಕವಾದ ಅನೇಕ ಅನುಭೋಗದ ಸಿದ್ಧಾಂತಗಳು ಆಧಾರ ಅಗತ್ಯವಾಗುತ್ತದೆ.

ನಿಗಮನ ಪದ್ಧತಿಯ ವಿಶ್ಲೇಷಣೆ ಅನೇಕ ಪ್ರಯೋಜನಗಳನ್ನು ಹೊಂದಿವೆ ಎಂಬುದನ್ನು ನಾವು ಗಮನಿಸಬೇಕು. ಈ ಪದ್ಧತಿಯ ಮುಖ್ಯವಾದ ಲಕ್ಷಣವೆಂದರೆ ಕೆಲವು ಪೂರ್ವಭಾವಿ ಕಲ್ಪನೆಗಳ ಆಧಾರದ ಮೇಲೆ ಮೊದಲಿಗೆ ಒಂದು ಸರಳವಾದ ನಿಯಮವನ್ನು ಮಂಡಿಸುವುದು. ನಂತರ ಈ ಸರಳವಾದ ನಿಯಮವನ್ನು ಆಧಾರವಾಗಿಟ್ಟುಕೊಂಡು ಜಟಿಲವಾದ ತತ್ವಗಳನ್ನು ರೂಪಿಸುವುದು. ಆದ್ದರಿಂದ ನಿಗಮನ ಪದ್ಧತಿಯಲ್ಲಿ ವಿಶ್ಲೇಷಣೆ ಅತ್ಯಂತ ಸರಳವೂ ಆದದ್ದು. ಅರ್ಥವಿಜ್ಞಾನದಲ್ಲಿ ವಾಸ್ತವ ಪ್ರಯೋಗವ ಮೂಲಕ ಸಿದ್ಧಾಂತಗಳನ್ನು ರೂಪಿಸುವುದು ಸಾಧ್ಯವಿಲ್ಲ. ಆದ್ದರಿಂದ ಮೊದಲಿಗೆ ತತ್ವಗಳು

ಸ್ವಲ್ಪ ಮಟ್ಟಿಗೆ ಭಾವನಾರೂಪದ್ದಾಗಿರಲೇ ಬೇಕಾಗುತ್ತದೆ. ಈ ಕಾರಣದಿಂದಲೆ ಕ್ಲಾಸಿಕಲ್ ಪಂಥದ ಚಿಂತಕರ ತತ್ವಗಳು ಭಾವನಾರೂಪದ್ದಾಗಿರುವುದನ್ನು ನಾವು ನೋಡುತ್ತೇವೆ. ಆದ್ದರಿಂದ ಸರಳ ಮತ್ತು ನೇರವಾದ ತತ್ವಗಳನ್ನು ಪ್ರತಿಪಾದಿಸುವುದಕ್ಕೆ ನಿಗಮನ ಪದ್ಧತಿ ಬಹಳ ಉಪಯುಕ್ತವಾಗಿರುತ್ತದೆ.

ಆದರೆ ಇಂತಹ ವಿಶ್ಲೇಷಣಾ ವಿಧಾನದಲ್ಲಿ ಕೆಲವು ತೊಂದರೆಗಳಿರುವುದನ್ನು ಸಹ ನಾವು ಗಮನಿಸಬೇಕು. ನಿಗಮನ ಪದ್ಧತಿಯಲ್ಲಿ ಕೆಲವು ಕಲ್ಪನೆಗಳ ಆಧಾರದ ಮೇಲೆ ತತ್ವಗಳನ್ನು ರೂಪಿಸಲಾಗುತ್ತದೆ ಎಂಬುದನ್ನು ನಾವು ನೋಡಿದ್ದೇವೆ. ಆದ್ದರಿಂದ ಈ ತತ್ವಗಳು, ಈ ಕಲ್ಪನೆಗಳು ನಿಜವಾಗಿದ್ದರೆ ಮಾತ್ರ ಸತ್ಯವಾಗಿರುತ್ತವೆ. ಆದರೆ ಅರ್ಥಶಾಸ್ತ್ರದ ತತ್ವಗಳಿಗೆ ಆಧಾರವಾಗಿಟ್ಟುಕೊಳ್ಳುವ ಕಲ್ಪನೆಗಳು ಬದಲಾವಣೆಯ ಸ್ವರೂಪವನ್ನು ಹೊಂದಿರುವುದರಿಂದ, ಅವು ಯಾವಾಗಲೂ ಸತ್ಯವಾಗಿರುತ್ತವೆ ಎಂದು ಹೇಳುವುದಕ್ಕಾಗುವುದಿಲ್ಲ. ಈ ಕಾರಣದಿಂದ ಒಂದು ತತ್ವವನ್ನು ಮಂಡಿಸುವಾಗ ನಿಗಮನ ಪದ್ಧತಿಯ ಕ್ರಮದಲ್ಲಿ "ಉಳಿದ ವಿಷಯಗಳು ಸ್ಥಿರವಾಗಿದ್ದರೆ" ಎನ್ನುವ ಕಲ್ಪನೆಯನ್ನು ಯಾವಾಗಲೂ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಈ ಕಲ್ಪನೆಯ ಸತ್ಯತೆ ಪ್ರಶ್ನಾರ್ಹ ವಾಗುತ್ತದೆ. ಈ ಪದ್ಧತಿಯಲ್ಲಿರುವ ಮತ್ತೂ ಒಂದು ತೊಂದರೆಯೆಂದರೆ ಇದು ಅತ್ಯಂತ ಹೆಚ್ಚಾಗಿ ಭಾವನಾಸ್ವರೂಪದ ತತ್ವಗಳನ್ನೇ ಮಂಡಿಸುವುದರಿಂದ,ಇಂತಹ ಪದ್ಧತಿಯನ್ನು ಅನುಸರಿಸುವ ಅರ್ಥ ವಿಜ್ಞಾನಿ ನೈಜತೆಯಿಂದ ಬಹಳ ದೂರ ಹೋಗಿ ಕೇವಲ ಭಾವನಾ ಸ್ವರೂಪದ ತತ್ವಗಳನ್ನು ಮಾತ್ರ ಮಂಡಿಸುವ ಸಾಧ್ಯತೆಗಳಿರುತ್ತವೆ. ಇಂತಹ ತತ್ವಗಳು ಬುದ್ಧಿಜೀವಿಗಳಿಗೆ ಸಾಕಷ್ಟು ಆಹಾರವನ್ನು ಒದಗಿಸಿದರೂ ವಾಸ್ತವತೆಯಲ್ಲಿ ಯಾವ ಪ್ರಯೋಜನಕ್ಕೂ ಬಾರದ ತತ್ವಗಳಾಗಬಹುದು. ಕೊನೆಯದಾಗಿ ತಪ್ಪು ಪರಿಕಲ್ಪನೆಗಳ ಆಧಾರದ ಮೇಲೆ ತತ್ವಗಳನ್ನು ರೂಪಿಸಿದರೆ ಅವೂ ಸಹ ಸಂಪೂರ್ಣವಾಗಿ ನಿಷ್ಪ್ರಯೋಜಕ ವಾಗುತ್ತವೆ. ಇಂತಹ ತತ್ವಗಳನ್ನು ಕಾರ್ಯಾಚರಣೆಗೆ ಸರ್ಕಾರದ ನೀತಿಗಳ ಮೂಲಕ ಅನುಸರಿಸಿದರಂತೂ ತುಂಬಾ ಅಪಾಯಕಾರಿಯಾದ ಪರಿಣಾಮಗಳುಂಟಾಗುವ ಸಾಧ್ಯತೆ ಗಳಿರುತ್ತವೆ.

**ಅನುಗಮನ ಪದ್ಧತಿ**

ಅನುಗಮನ ಪದ್ಧತಿ ಐತಿಹಾಸಿಕ ಅಂಶಗಳ ಆಧಾರದ ವಿಶ್ಲೇಷಣೆಯ ಪದ್ಧತಿ. ಅಂಕಿ-ಅಂಶಗಳ ಆಧಾರದ ಪದ್ಧತಿ ಎಂದು ಸಹ ಇದು ಪ್ರಸಿದ್ಧವಾಗಿದೆ. ಅನುಗಮನ ಪದ್ಧತಿ ಯಲ್ಲಿ ವಿಶ್ಲೇಷಣೆಗಾಗಿ ಸಾಮಾನ್ಯವಾಗಿ ಎರಡು ಕ್ರಮಗಳನ್ನು ಅನುಸರಿಸಲಾಗುತ್ತದೆ. ಮೊದಲನೆಯದು ಪ್ರಾಯೋಗಿಕ ಕ್ರಮ. ಎರಡನೆಯದು ಅಂಕಿ-ಅಂಶಗಳ ಆಧಾರಿತ ವಿಶ್ಲೇಷಣಾ ಕ್ರಮ. ಪ್ರಾಯೋಗಿಕ ಕ್ರಮದಲ್ಲಿ ನಿಗಮನ ಪದ್ಧತಿಯಿಂದ ಮಂಡಿಸಲಾಗಿರುವ ತತ್ವಗಳನ್ನು ವಾಸ್ತವವಾಗಿ ಇರುವ ಆರ್ಥಿಕ ವಿಷಯಗಳ ಆಧಾರದ ಮೇಲೆ ಪರೀಕ್ಷಿಸ ಲಾಗುತ್ತದೆ. ಹೀಗೆ ಪರೀಕ್ಷಿಸುವುದರ ಮೂಲಕ ನಿಗಮನ ಕ್ರಮದ ಮೂಲಕ ಬಂದಿರುವ

ತೀರ್ಮಾನಗಳು ಸರಿಯಾದವೇ ಅಲ್ಲವೇ ಎನ್ನುವುದನ್ನು ಪರೀಕ್ಷಿಸಲಾಗುತ್ತದೆ. ಅಂಕಿ ಅಂಶಗಳ ಆಧಾರಿತ ವಿಶ್ಲೇಷಣಾ ಕ್ರಮದಲ್ಲಿ, ಲಭ್ಯವಿರುವ ಎಲ್ಲ ಅಂಕಿ-ಅಂಶಗಳನ್ನೂ ಬಳಸಿಕೊಂಡು ಅವುಗಳ ಆಧಾರದ ಮೇಲೆ ವಿಶ್ಲೇಷಣೆಯನ್ನು ನಡೆಸಿ ನಿರ್ದಿಷ್ಟ ತೀರ್ಮಾನಗಳಿಗೆ ಬರಲಾಗುತ್ತದೆ.

ಇವೆರಡೂ ಕ್ರಮಗಳು ಬಹಳ ಮುಖ್ಯವಾದವು ಎಂಬುದನ್ನು ಗಮನಿಸಬೇಕು. ಆದರೆ ಅರ್ಥಶಾಸ್ತ್ರದ ವಿಷಯ ಸ್ವರೂಪದ ದೃಷ್ಟಿಯಿಂದ ಪ್ರಾಯೋಗಿಕ ಕ್ರಮ ಸ್ವಲ್ಪ ಕಷ್ಟ. ಭೌತಶಾಸ್ತ್ರದಂತೆ ನಮಗೆ ಪ್ರಯೋಗ ಶಾಲೆಗಳು ಲಭ್ಯವಿಲ್ಲ. ಆದ್ದರಿಂದ ನಾವು ಈ ಕ್ರಮವನ್ನು ಹೆಚ್ಚಾಗಿ ಬಳಸುವುದು ಸಾಧ್ಯವಿಲ್ಲ. ಇಷ್ಟೆ ಅಲ್ಲದೆ ಆರ್ಥಿಕ ಚಟುವಟಿಕೆಗಳು ಮಾನವನ ನಡವಳಿಕೆಗಳಿಗೆ ಸಂಬಂಧಪಟ್ಟಿರುವುದರಿಂದ ಮತ್ತು ಈ ನಡವಳಿಕೆಗಳು ನಿರ್ದಿಷ್ಟ ಸ್ವರೂಪದವಲ್ಲವಾದ್ದರಿಂದ ಅರ್ಥಶಾಸ್ತ್ರದಲ್ಲಿ ಪ್ರಯೋಗಗಳ ಆಧಾರದ ಮೇಲೆ ತೀರ್ಮಾನಗಳನ್ನು ಕೈಗೊಳ್ಳುವುದು ಸಾಧ್ಯವಿಲ್ಲ. ಆದರೂ ಸಹ ಈ ಕ್ರಮವನ್ನು ಸಾಧ್ಯವಿರುವ ಕೆಲವು ಸಂದರ್ಭದಲ್ಲಿ ಬಳಸಿಕೊಳ್ಳಲಾಗುತ್ತದೆ. ಉದಾಹರಣೆಗೆ ವ್ಯವಸಾಯ ಪಂಥದ ಕೆಲವು ತತ್ವಗಳನ್ನು ಸತ್ಯವಾದವೇ ಅಲ್ಲವೇ ಎಂಬುದನ್ನು ಪರೀಕ್ಷಿಸುವುದಕ್ಕೆ ಕಾರ್ಲ್‌ಫ್ರೆಡ್ರಿಚ್, ಬೇಡನ್ನಿನ ಮೂರು ಹಳ್ಳಿಗಳಲ್ಲಿ ಈ ತತ್ವಗಳನ್ನು ವಾಸ್ತವವಾಗಿ ಅನ್ವಯಕ್ಕೆ ತರುವ ಪ್ರಯತ್ನವನ್ನು ಮಾಡಿದ್ದ. ಹೀಗೆ ಕೆಲವು ತತ್ವಗಳು ಸತ್ಯವಾದವೇ ಅಲ್ಲವೇ ಎಂಬುದನ್ನು ಪ್ರಯೋಗಗಳ ಮೂಲಕ ಪರೀಕ್ಷಿಸುವುದು ಸಾಧ್ಯ. ಆದರೆ ಅರ್ಥಶಾಸ್ತ್ರದಲ್ಲಿ ಇಂತಹ ಪ್ರಯೋಗಕ್ಕೆ ಅವಕಾಶಗಳು ಬಹಳ ಕಡಿಮೆ.

ಆರ್ಥಿಕ ವಿಶ್ಲೇಷಣೆಯಲ್ಲಿ ಅಂಕಿ-ಅಂಶಗಳ ಆಧಾರದ ಮೇಲೆ ವಿಶ್ಲೇಷಣೆಯನ್ನು ನಡೆಸುವ ಕ್ರಮಕ್ಕೆ ತುಂಬಾ ಪ್ರಾಶಸ್ತ್ಯ ಬಂದಿದೆ. ಎಲ್ಲ ಆರ್ಥಿಕ ಚಟುವಟಿಕೆಗಳ ಬಗೆಗೂ ಅಂಕಿ-ಅಂಶಗಳನ್ನು ಕಲೆ ಹಾಕುವ ರೂಢಿ ಪ್ರಚಲಿತವಾಗಿದೆ. ಅಂಕಿ-ಅಂಶಗಳನ್ನು ಕಲೆ-ಹಾಕಿ ಅದರ ಆಧಾರದ ಮೇಲೆ ತತ್ವವನ್ನು ರೂಪಿಸುವ ಮತ್ತು ಅದರ ಸತ್ಯಾಸತ್ಯಗಳನ್ನು ಪರೀಕ್ಷಿಸುವ ಕ್ರಮವನ್ನು ಇಂದು ಹೆಚ್ಚಿನ ಅರ್ಥಶಾಸ್ತ್ರಜ್ಞರು ಪಾಲಿಸುತ್ತಾರೆ. ಇದಕ್ಕಾಗಿ ಸಂಖ್ಯಾಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳನ್ನು ಸಹ ಬಳಸಿಕೊಳ್ಳಲಾಗುತ್ತದೆ.

ಮೇಲಿನ ವಿವರಣೆಯಿಂದ ಸ್ಪಷ್ಟವಾಗುವ ಅಂಶವೆಂದರೆ, ಅರ್ಥಶಾಸ್ತ್ರದಲ್ಲಿ ಅನುಗಮನ ಮತ್ತು ನಿಗಮನ ವಿಧಾನಗಳೆರಡೂ ಮುಖ್ಯವಾದವು. ಒಂದು ಮತ್ತೊಂದಕ್ಕೆ ಪೂರಕವಾದುದು. ಆರ್ಥಿಕ ಚಟುವಟಿಕೆಗಳ ವಿಶ್ಲೇಷಣೆ ಜಟಿಲವಾದುದರಿಂದ, ಸಂದರ್ಭಕ್ಕೆ ತಕ್ಕ ಹಾಗೆ ಎರಡೂ ಕ್ರಮಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಅನುಗಮನ ಪದ್ಧತಿ, ನಿಗಮನ ಪದ್ಧತಿಯ ತತ್ವಗಳನ್ನು ಪರೀಕ್ಷಿಸುವುದಕ್ಕೆ ಉತ್ತಮವಾದ ಸಾಧನವಾಗಬಲ್ಲದು. ಹಾಗೆಯೇ ನಿಗಮನ ಪದ್ಧತಿ ಬುದ್ಧಿಶಕ್ತಿಯನ್ನೇ ಪ್ರಧಾನವಾಗಿ ಉಪಯೋಗಿಸಿ ಉಪಯುಕ್ತವಾದ ಸಿದ್ಧಾಂತಗಳನ್ನು ಮಂಡಿಸುವುದಕ್ಕೆ ಸಹಾಯಕವಾಗಬಲ್ಲದು. ಆದ್ದರಿಂದ ಇವೆರಡು ವಿಶ್ಲೇಷಣಾ ವಿಧಾನಗಳು ಅರ್ಥಶಾಸ್ತ್ರದಲ್ಲಿ ತತ್ವಗಳನ್ನು ಅಭಿವೃದ್ಧಿ ಪಡಿಸುವುದಕ್ಕೆ ಮಹತ್ವವಾದವು ಎನ್ನುವುದನ್ನು ಗಮನಿಸಬೇಕು.

## ೧.೪. ಗಣಿತ ಪರಿಕಲ್ಪನೆಗಳು

**ಸಂಖ್ಯಾ ಪದ್ಧತಿ**

ಸ್ವಾಭಾವಿಕವಾಗಿ ನಾವೆಲ್ಲರೂ ಸಂಖ್ಯೆಗಳನ್ನು ಬಳಸಿ ಲೆಕ್ಕಾಚಾರ ಮಾಡುತ್ತೇವೆ. ೧, ೨, ೩, ೪ ಇತ್ಯಾದಿ ಸಂಖ್ಯೆಗಳು ಯಾರಿಗೆ ಗೊತ್ತಿಲ್ಲ. ಈ ಸಂಖ್ಯೆಗಳನ್ನು ಅಂದರೆ ೧, ೨, ೩, ೪, ೫, ೬, ೭, ೮ .... ಇತ್ಯಾದಿಗಳನ್ನು ಸ್ವಾಭಾವಿಕ ಸಂಖ್ಯೆಗಳು ಎಂದು ಕರೆಯಲಾಗುತ್ತದೆ.

**ಗಣ :** ಗಣ ಎಂಬುದು ಗಣಿತ ಶಾಸ್ತ್ರದಲ್ಲಿ ಒಂದು ಮುಖ್ಯವಾದ ಪರಿಭಾವನೆ. ಒಂದು ನಿದಿಷ್ಟ ಸಂಖ್ಯೆಗಳ ಅಥವಾ ವಸ್ತುಗಳ ಅಥವಾ ವ್ಯಕ್ತಿಗಳ ಗುಂಪನ್ನು ಗಣ ಎಂದು ಕರೆಯಲಾಗುತ್ತದೆ. ಉದಾಹರಣೆಗೆ ಒಂದು ತರಗತಿಯಲ್ಲಿರುವ ಎಡಚರ ಗುಂಪು. ಇವರನ್ನು ಎಡಚರ ಗಣ ಎಂದು ಹೇಳಲಾಗುತ್ತದೆ. ಈ ಗಣವನ್ನು A ಯಿಂದ ಸೂಚಿಸಿದರೆ, ಎಡಚರ ಗಣವನ್ನು ಕೆಳಗಿನಂತೆ ಬರೆಯಬಹುದು.

A = { ತರಗತಿಯಲ್ಲಿರುವ ಎಡಚರು }

ಹಾಗೆಯೇ B = { ತರಗತಿಯಲ್ಲಿರುವ ವಿದ್ಯಾರ್ಥಿನಿಯರು }

ಇದೇ ರೀತಿ ನಾವು ಸ್ವಾಭಾವಿಕ ಸಂಖ್ಯೆಗಳ ಗಣವನ್ನು

N = { ೧, ೨, ೩, ೪ .... }

ಎಂದು ಬರೆಯಬಹುದು. ಇದನ್ನು ಓದುವ ರೀತಿಯೆಂದರೆ

N ಎನ್ನುವುದು ಸ್ವಾಭಾವಿಕ ಸಂಖ್ಯೆಗಳ ಗಣ ಎಂದು.

೧೦ ಅಂಕಿಗಳನ್ನು ಬಳಸಿಕೊಂಡು ಸಂಖ್ಯೆಗಳನ್ನು ವ್ಯಕ್ತಪಡಿಸುವ ಪರಿಪೂರ್ಣ ವಿಧಾನವನ್ನು ಭಾರತದವರೇ ಕಂಡು ಹಿಡಿದ ಮೊದಲಿಗರು ಎನ್ನುವುದು ನಮಗೆ ಹೆಮ್ಮೆಯ ವಿಷಯ.

**ಪೂರ್ಣ ಸಂಖ್ಯೆ ಅಥವಾ ಪೂರ್ಣಾಂಕ**

ಎಲ್ಲಾ ಸ್ವಾಭಾವಿಕ ಸಂಖ್ಯೆಗಳನ್ನು ಮತ್ತು ಸೊನ್ನೆಯನ್ನು ಒಳಗೊಂಡ ಗಣವನ್ನು ಪೂರ್ಣ ಸಂಖ್ಯೆಗಳ ಗಣ ಎಂದು ಹೇಳಲಾಗುತ್ತದೆ. ಅಂದರೆ ೦, ೧ ೨, ೩, ೪, ೫, ೬, ೭, ೮ ..... ಇದನ್ನು ಬರೆಯಬಹುದಾದ ವಿಧಾನ

W = { ೦, ೧, ೨, ೩ ....... }

W ಎನ್ನುವುದು ಪೂರ್ಣಾಕಗಳ ಗಣ. ಹೆಸರೇ ಸೂಚಿಸುವಂತೆ ಈ ಅಂಕಗಳು ಪೂರ್ಣವಾದವು. ಉದಾಹರಣೆಗೆ ನನ್ನ ತಿಂಗಳ ಖರ್ಚು ರೂ.೧೦,೦೦೦. ಇದು ಪೂರ್ಣಾಂಕ.

**ಸಂಖ್ಯಾರೇಖೆ :** ಕೆಳಗಿನ ಸಂಖ್ಯಾ ರೇಖೆಯನ್ನು ಗಮನಿಸಿ.




ಸಂಖ್ಯಾ ರೇಖೆಯ ಮೇಲೆ + ೨ ಮತ್ತು - ೨ ಸೊನ್ನೆಯಿಂದ ಸಮದೂರದಲ್ಲಿವೆ. ಆದರೆ ವಿರುದ್ಧ ದಿಕ್ಕಿನಲ್ಲಿವೆ. ಈ ರೇಖೆಯ ಮೇಲೆ ಧನ ಸಂಖ್ಯೆಗಳು ಅಥವಾ ಸ್ವಾಭಾವಿಕ ಸಂಖ್ಯೆಗಳು, ಅವುಗಳ ಋಣಗಳು ಮತ್ತು ಸೊನ್ನೆಯನ್ನು ಹೊಂದಿರುವ ಗಣವನ್ನು ಗುರುತಿಸಲಾಗಿದೆ. ಆದ್ದರಿಂದ ಸಂಖ್ಯಾ ರೇಖೆಯ ಮೇಲಿನ ಗಣವನ್ನು ಕೆಳಗಿನಂತೆ ಬರೆಯಬಹುದು.

Z = { ........... - ೩, - ೨, -೧, ೦, + ೧, +೨, + ೩ ........... }

ಸೊನ್ನೆಯ ಬಲಕ್ಕಿರುವ +೧, +೨, +೩ ....ಗಳನ್ನು ಧನಾತ್ಮಕ ಪೂರ್ಣಾಂಕಗಳು ಎಂದು ಕರೆಯಲಾಗುತ್ತದೆ.

ಸೊನ್ನೆಯ ಎಡಕ್ಕಿರುವ - ೧, -೨, -೩ .... ಗಳನ್ನು ಋಣಾತ್ಮಕ ಪೂರ್ಣಾಂಕಗಳು ಎಂದು ಕರೆಯಲಾಗುತ್ತದೆ.

ಮೂರನೇ ವಿಧದ ಪೂರ್ಣಾಂಕ ಅಂದರೆ ೦. ಅದು ಋಣವೂ ಅಲ್ಲ, ಧನವೂ ಅಲ್ಲ.

**ಭಿನ್ನರಾಶಿ, ಭಾಗಲಬ್ಧ ಸಂಖ್ಯೆ ಅಥವಾ ಅಪೂರ್ಣಾಂಕ**

ನಾವು ಒಂದು ಪೂರ್ಣಾಂಕವನ್ನು ಮತ್ತೊಂದು ಪೂರ್ಣಾಂಕದಿಂದ ಭಾಗಿಸಿದಾಗ ಏನಾಗುತ್ತದೆ ?

ಉದಾಹರಣೆಗೆ, ೫/೬, ೭/೧೦, -೧೫/೮ ಇತ್ಯಾದಿ.

ಇವುಗಳನ್ನು ಭಿನ್ನರಾಶಿ ಅಥವಾ ಭಾಗಲಬ್ಧಸಂಖ್ಯೆಗಳೆಂದು ಕರೆಯುತ್ತೇವೆ. ಭಾಗಲಬ್ಧ ಸಂಖ್ಯೆಗಳನ್ನು ಎರಡು ಪೂರ್ಣಾಂಕಗಳ ಅನುಪಾತವಾಗಿ ವ್ಯಕ್ತಪಡಿಸಲಾಗುತ್ತದೆ. ಭಾಗಲಬ್ಧ ಸಂಖ್ಯೆಗಳನ್ನು P/q ರೂಪದಲ್ಲಿ ವ್ಯಕ್ತಪಡಿಸಲಾಗುತ್ತದೆ. ಇಲ್ಲಿ P ಮತ್ತು q ಗಳು ಪೂರ್ಣಾಂಕಗಳು ಮತ್ತು q≠೦. ಭಿನ್ನರಾಶಿ ಸಂಖ್ಯೆಗಳಲ್ಲಿ ಮೇಲಿನ ಪೂರ್ಣಾಂಕವನ್ನು ಅಂಶವೆಂದೂ, ಕೆಳಗಿನ ಪೂರ್ಣಾಂಕವನ್ನು ಛೇದವೆಂದೂ ಕರೆಯಲಾಗುತ್ತದೆ. ಒಂದು ಸ್ವಾರಸ್ಯಕರ ಪ್ರಶ್ನೆಯನ್ನು ಉತ್ತರಿಸೋಣ

ಯಾವುದೇ ಎರಡು ಭಾಗಲಬ್ಧ ಸಂಖ್ಯೆಗಳ ನಡುವೆ ಎಷ್ಟು ಭಾಗಲಬ್ಧ ಸಂಖ್ಯೆಗಳಿರುತ್ತವೆ? ಉತ್ತರ ಅಸಂಖ್ಯಾತ!

**ಅಭಾಗಲಬ್ಧ ಸಂಖ್ಯೆಗಳು** : ಅಭಾಗಲಬ್ಧ ಸಂಖ್ಯೆಗಳು ಅಂತ್ಯಗೊಳ್ಳದ ಮತ್ತು ಆವರ್ತವಲ್ಲದ ದಶಮಾಂಶಗಳಾಗಿವೆ.

ಉದಾಹರಣೆ : $\sqrt{೨}$ = ೧.೪೧೪೨೧೩....
$\sqrt{೭}$ = ೨.೬೪೫೭೫...
$\pi$ = ೩.೧೪೧೬....

ಈ ಎರಡೂ ಬಗೆಯ ಸಂಖ್ಯೆಗಳ ಗಣವನ್ನು ಅಂದರೆ, ಭಾಗಲಬ್ಧ ಮತ್ತು ಅಭಾಗಲಬ್ಧ ಸಂಖ್ಯೆಗಳ ಗಣವನ್ನು ವಾಸ್ತವಿಕ ಸಂಖ್ಯೆಗಳ ಗಣವೆಂದು ಕರೆಯಲಾಗುತ್ತದೆ. ಸಂಖ್ಯಾ ರೇಖೆಯ ಮೇಲಿನ ಪ್ರತಿ ಬಿಂಧುವಿಗೆ ಅನುರೂಪವಾದ ಒಂದು ವಾಸ್ತವಿಕ ಸಂಖ್ಯೆ ಮತ್ತು ಪ್ರತಿ ವಾಸ್ತವಿಕ ಸಂಖ್ಯೆಗೆ ಅನುರೂಪವಾದ ಒಂದು ಬಿಂಧು ಸಂಖ್ಯಾ ರೇಖೆಯ ಮೇಲೆ ಇರುತ್ತದೆ. ಆದ್ದರಿಂದ ಸಂಖ್ಯಾ ರೇಖೆಯ ಮೇಲಿನ ಎಲ್ಲಾ ಬಿಂಧುಗಳ ಸಮೂಹವನ್ನು ವಾಸ್ತವಿಕ ಸಂಖ್ಯೆಗಳ ಸಂರಚನೆ ಎಂದು ಹೇಳಬಹುದು.

ವಾಸ್ತವಿಕ ಸಂಖ್ಯಾ ಗಣವನ್ನು ಕೆಳಗಿನ ನಕ್ಷೆಯಿಂದ ತೋರಿಸಬಹುದು. ಇದನ್ನು 'ವೆನ್' ನಕ್ಷೆ ಎಂದು ಕರೆಯಲಾಗುತ್ತದೆ.




D = ಸ್ವಾಭಾವಿಕ ಸಂಖ್ಯೆಗಳು A = ಭಾಗಲಬ್ಧ ಸಂಖ್ಯೆಗಳು

C = ಪೂರ್ಣಾಂಕಗಳು Ir = ಅಭಿಲಬ್ಧ ಸಂಖ್ಯೆಗಳು

B = ಪೂರ್ಣ ಸಂಖ್ಯೆಗಳು, R = ವಾಸ್ತವಿಕ ಸಂಖ್ಯೆಗಳು.

ವಿವಿಧ ಸಂಖ್ಯೆಗಳನ್ನು ಕೆಳಗಿನ ಪ್ರವಾಹ ನಕ್ಷೆಯ ಮೂಲಕ ಸೂಚಿಸಬಹುದು.




ಅರ್ಥಶಾಸ್ತ್ರಕ್ಕೆ ಈ ಸಂಖ್ಯಾ ಪರಿಚಯವೇಕೆ ಎನ್ನುವ ಪ್ರಶ್ನೆ ನಿಮ್ಮ ಮನಸ್ಸಿನಲ್ಲಿ ಏಳಬಹುದು. ಅರ್ಥಶಾಸ್ತ್ರ ವಾಸ್ತವವಾಗಿ ಲೆಕ್ಕಾಚಾರ ಶಾಸ್ತ್ರವೆ! ಒಂದು ಮಾವಿನ ಹಣ್ಣನ್ನು ತಿಂದಾಗ ನಮಗೆ ಎಷ್ಟು ತುಷ್ಟಿಗುಣ ದೊರೆಯುತ್ತದೆ? ೧೦ ಘಟಕಗಳಷ್ಟು ದೊರೆಯಬಹುದು.

ಒಂದಾದ ಮೇಲೆ ಒಂದರಂತೆ ಮಾವಿನಹಣ್ಣನ್ನು ತಿನ್ನುತ್ತಾ ಹೋದರೆ, ನಮಗೆ ದೊರೆಯುವ ತುಷ್ಟಿಗುಣ ಏನಾಗುತ್ತದೆ? ಅದು ಕಡಿಮೆಯಾಗುತ್ತಾ ಹೋಗುತ್ತದೆ. ಒಂದು ಘಟ್ಟದಲ್ಲಿ ಅದು ಸೊನ್ನೆಯಾಗುತ್ತದೆ. ಮಾವಿನ ಹಣ್ಣು ಬೇಡ ಎನ್ನಿಸುತ್ತದೆ. ನಂತರವೂ ಮಾವಿನ ಹಣನ್ನು ತಿಂದರೆ ತುಷ್ಟಿಗುಣ ಋಣಾತ್ಮಕ ವಾಗುತ್ತದೆ. ಅದು - ೧೦ ಘಟಕ ಗಳಷ್ಟಾಗಬಹುದು. ಈ ಲೆಕ್ಕಾಚಾರಕ್ಕೆ ಸಂಬಂಧಿಸಿದ ನಿಯಮವನ್ನು ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮ ಎನ್ನುತ್ತೇವೆ. ಇದನ್ನು ವಿವರವಾಗಿ ಮುಂದೆ ಓದುತ್ತೀರಿ.

ಅನೇಕ ಆರ್ಥಿಕ ನಿಯಮಗಳನ್ನು ನಾವು ಅರ್ಥಮಾಡಿಕೊಳ್ಳಲು ನಮಗೆ ಸಂಖ್ಯಾಶಾಸ್ತ್ರದ ಪರಿಚಯ ತೀರ ಅಗತ್ಯವಾಗುತ್ತದೆ. ಸಂಖ್ಯೆಗಳಿಲ್ಲದೆ ಲೆಕ್ಕಾಚಾರ ಇಲ್ಲವಷ್ಟೆ. ಲೆಕ್ಕಾಚಾರ ವಿಲ್ಲದೆ ಅರ್ಥಶಾಸ್ತ್ರವಿಲ್ಲ.

**ಬಿಂಬಕಗಳು ಮತ್ತು ಬಿಂಬಕ ಸಂಬಂಧಗಳು**

ಅರ್ಥಶಾಸ್ತ್ರದಲ್ಲಿ ಯಾವುದೇ ತತ್ವವನ್ನು ಮಂಡಿಸುವಾಗ ಅನೇಕ ಆಧಾರ ಕಲ್ಪನೆಗಳನ್ನು ಮಾಡಿಕೊಳ್ಳುತ್ತೇವೆ. ಅರ್ಥಶಾಸ್ತ್ರದ ಸಿದ್ಧಾಂತದ ವಿಶ್ಲೇಷಣೆಯಲ್ಲಿ ಈ ಆಧಾರ ಕಲ್ಪನೆಗಳು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಉದಾಹರಣೆಗೆ ಬೇಡಿಕೆಯ ಪ್ರಮಾಣ ಬೆಲೆಯ ಪ್ರಮಾಣದೊಂದಿಗೆ ವ್ಯತ್ಯಾಸ ಹೊಂದಿದರೆ, ಇದರಿಂದ ಉತ್ಪಾದನೆಯ ಮೇಲೆ ಪರಿಣಾಮ ಉಂಟಾಗುತ್ತದೆ. ಇದು ಒಂದು ಆಧಾರ ಕಲ್ಪನೆ. ಇದೇ ರೀತಿ ಬೆಲೆಯ ವ್ಯತ್ಯಾಸಗಳು ಬೇಡಿಕೆ ಮತ್ತು ನೀಡಿಕೆಯ ಪ್ರಮಾಣಗಳನ್ನು ವ್ಯತ್ಯಾಸಗೊಳಿಸುತ್ತವೆ ಎನ್ನುವುದು ಮತ್ತೊಂದು ಆಧಾರ ಕಲ್ಪನೆ. ಈ ಆಧಾರ ಕಲ್ಪನೆಗಳನ್ನು ನಾವು ಸಾಮಾನ್ಯ ವಾದ ಸಿದ್ಧಾಂತಗಳ ರೂಪದಲ್ಲಿ, ಶಬ್ದಗಳಲ್ಲಿ ವಿವರಿಸಬಹುದು ಅಥವಾ ಇವನ್ನು ಬೀಜಗಣಿತದ ಸಹಾಯದಿಂದ ಬಿಂಬಕಗಳ ರೂಪದಲ್ಲಿ ವಿವರಿಸಬಹುದು. ನಾವು ಯಾವ ಕ್ರಮವನ್ನು ಕೈಗೊಂಡರೂ ಸಹ ನಮ್ಮ ಉದ್ದೇಶ ಒಂದೇ - ಆಧಾರ ಕಲ್ಪನೆಯನ್ನು ವಿವರಿಸುವುದು. ಇನ್ನೂ ಒಂದು ಸ್ವಾರಸ್ಯದ ವಿಷಯವೆಂದರೆ, ಈ ಕ್ರಮಗಳು ಪರಸ್ಪರ ಪೂರಕವಾದವು. ಅಂದರೆ ಬಗೆಯ ಶಬ್ದಗಳಲ್ಲಿ ಕೇಳಿರುವ ಆಧಾರ ಕಲ್ಪನೆಯನ್ನು ಬೀಜಗಣಿತದ ಬಿಂಬಕ ಸ್ವರೂಪಕ್ಕೆ ತಕ್ಷಣವೆ ಪರಿವರ್ತಿಸಬಹುದು. ಆಧಾರ ಕಲ್ಪನೆಯನ್ನು ಯಾವ ಕ್ರಮದ ಮೂಲಕ ವಿವರಿಸುತ್ತೇವೆ ಎನ್ನುವುದು, ನಮ್ಮ ಆಯ್ಕೆಯ ಮತ್ತು ಅನುಕೂಲದ ಪ್ರಶ್ನೆ ಅಷ್ಟೆ. ಗಣಿತದ ರೂಪದಲ್ಲಿ ಬಿಂಬಕವನ್ನು ವಿವರಿಸಿದಾಗ ಅದಕ್ಕೆ ಸಂಕ್ಷಿಪ್ತತೆ ದೊರೆಯುತ್ತದೆ. ಆಧಾರ ಕಲ್ಪನೆಯನ್ನು ನಕ್ಷೆಯ ಮೂಲಕ ಸಹ ವಿವರಿಸ ಬಹುದು. ಅದು ಬಹಳ ಸರಳವಾಗಿ ಆಧಾರ ಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಸಹಾಯ ಮಾಡುತ್ತದೆ. ಬಿಂಬಕ ಮತ್ತು ನಕ್ಷೆಯ ಮೂಲಕ ಹೇಗೆ ಆಧಾರ ಕಲ್ಪನೆಗಳನ್ನು ವಿವರಿಸಬಹುದೆಂಬುದನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳೋಣ.

**ಸ್ಥಿರ ಸಂಖ್ಯೆ ಮತ್ತು ಚಲಗಳು**

ಒಂದು ಪರಿಮಾಣದ ಸಂಖ್ಯಾ ಮೌಲ್ಯವು ಯಾವಾಗಲೂ ನಿಯತವಾಗಿದ್ದರೆ ಅದನ್ನು ಸ್ಥಿರ ಸಂಖ್ಯೆ ಎಂದು ಕರೆಯುತ್ತೇವೆ. ಈ ಪರಿಮಾಣದ ಸಂಖ್ಯಾ ಮೌಲ್ಯವು ವ್ಯತ್ಯಾಸ ವಾಗುತ್ತಾ ಹೋದರೆ ಅದನ್ನು ಚಲಸಂಖ್ಯೆ ಎಂದು ಕರೆಯುತ್ತೇವೆ. ಒಂದು ಉದಾಹರಣೆ ಯನ್ನು ಕೊಡುವುದಾದರೆ ಏಕಮುಖವಾದ ವೇಗದಲ್ಲಿ ಚಲಿಸುತ್ತಿರುವ ಒಂದು ವಸ್ತುವನ್ನು ಪರಿಗಣಿಸಿದರೆ ಕಾಲ ಮತ್ತು ದೂರಗಳು ಚಲಗಳು, ವೇಗ ಮಾತ್ರ ಸ್ಥಿರಸಂಖ್ಯೆ.

**ಬಿಂಬಕಗಳು**

ಚಲಗಳು ಮತ್ತು ಸ್ಥಿರಸಂಖ್ಯೆಗಳನ್ನು ಉಪಯೋಗಿಸಿಕೊಂಡು ಅನೇಕ ಆರ್ಥಿಕ ವಿಷಯಗಳ ಪರಸ್ಪರ ಸಂಬಂಧವನ್ನು ನಾವು ಬಿಂಬಕಗಳ ರೂಪದಲ್ಲಿ ವ್ಯಕ್ತಪಡಿಸುತ್ತೇವೆ. ಪ್ರತಿಯೊಂದು ಆರ್ಥಿಕ ಪರಿಭಾವನೆಗೂ ಒಂದೊಂದು ಸಂಕೇತವನ್ನು ಕೊಟ್ಟು, ಒಂದು ಸಂಕೇತ ಮತ್ತೊಂದು ಸಂಕೇತದೊಡನೆ ಸಂಬಂಧ ಹೊಂದಿದೆಯೆ ಅಥವಾ ಈ ಪರಿಭಾವನೆಗಳು ಪರಸ್ಪರ ಸ್ವತಂತ್ರವಾದವೆ ಎಂಬುದನ್ನು ನಾವು ಬಿಂಬಕಗಳ ಮೂಲಕ ವ್ಯಕ್ತಪಡಿಸುತ್ತೇವೆ. ಬಿಂಬಕವನ್ನು ಸಾಮಾನ್ಯವಾಗಿ ಕೆಳಗಿನಂತೆ ವಾಖ್ಯಾನಿಸಲಾಗುತ್ತದೆ:

X ಮತ್ತು Y ಎರಡು ಗಣಗಳಾಗಿದ್ದು, X ಗಣಕ್ಕೆ ಸೇರಿದ ಪ್ರತಿಯೊಂದು X ಧಾತುವಿಗೂ Y ಗಣಕ್ಕೆ ಸೇರಿದ ಒಂದು ವಿಶಿಷ್ಟ Y ಧಾತುವಿನೊಡನೆ ಸಂಬಂಧ ಕಲ್ಪಿಸುವ f ಎಂಬ ಒಂದು ನಿಯಮವಿದ್ದರೆ, ಈ ಸಂಬಂಧವನ್ನು ಒಂದು ಬಿಂಬಕವೆಂದು ಕರೆಯುತ್ತೇವೆ. ಈ ಚಿತ್ರಣವನ್ನು ಕೆಳಗಿನಂತೆ ನಿರೂಪಿಸಬಹುದು.




y ಧಾತುವನ್ನು x ಧಾತುವಿನ ಪ್ರತಿಬಿಂಬವೆಂದು ಕರೆಯುತ್ತೇವೆ. ಸಾಮಾನ್ಯವಾಗಿ yಯನ್ನು f(x) ಎಂದು ಸೂಚಿಸಲಾಗುತ್ತದೆ. x ಗಣವನ್ನು ಬಿಂಬಕದ ಪ್ರಾಂತವೆಂದು ಕರೆಯಲಾಗುತ್ತದೆ. x ನ ಪ್ರತಿಬಿಂಬಗಳಾದ y=f (x) ಧಾತುಗಳ ಗಣವು y ಗಣದ ಒಂದು ಉಪಗಣ. ಈ ಉಪಗಣವನ್ನು f (x) ಎಂದು ಸೂಚಿಸಲಾಗುತ್ತದೆ. f (x) ಅನ್ನು ಬಿಂಬಕದ ವ್ಯಾಪ್ತಿಯೆಂದು ಕರೆಯಲಾಗುತ್ತದೆ.

ಬಿಂಬಕದ ನಿರೂಪವನ್ನು ಕೆಳಗಿನಂತೆ ಮಾಡಲಾಗುತ್ತದೆ :

$$y = f(x)$$

y, xನ ಬಿಂಬಕವೆಂದು ಇದನ್ನು ಓದಬೇಕು. ಇದರ ಅರ್ಥ y, xನ ಮೇಲೆ ಅವಲಂಬಿತವಾಗಿದೆ ಎಂದು. ಇಲ್ಲಿ x ಬದಲಾವಣೆಗೊಂಡಾಗಲೆಲ್ಲ yನ ಮೌಲ್ಯ ಸಹ ಬದಲಾವಣೆಯಾಗುತ್ತದೆ. y ಒಂದು ವಸ್ತುವಿನ ಬೆಲೆಯನ್ನು ಸೂಚಿಸುತ್ತದೆ ಎಂದು ಭಾವಿಸೋಣ. x ಆ ವಸ್ತುವಿನ ಬೇಡಿಕೆಯ ಪ್ರಮಾಣವನ್ನು ಸೂಚಿಸುತ್ತದೆ ಎಂದು ಭಾವಿಸೋಣ. ಆ ಬಿಂಬಕದಲ್ಲಿ y ಮತ್ತು x ಎರಡೂ ಸಹ ಚಲಗಳು. ಅವೆರಡರ ಪ್ರಮಾಣವೂ ವ್ಯತ್ಯಾಸಗೊಳ್ಳುತ್ತದೆ.

ಒಂದು ಬಿಂಬಕವು ಸ್ಥಿರಾಂಕಗಳು, ಚಲಗಳು ಮತ್ತು ಚಲ-ಸ್ಥಿರಾಂಕ (Parameters) ಗಳನ್ನು ಹೊಂದಿರುತ್ತದೆ. ಚಲಗಳೆಂದರೆ, ಹೆಸರೇ ಸೂಚಿಸುವಂತೆ ಬದಲಾವಣೆಯನ್ನು ಅನುಭವಿಸುವ ಕ್ರಿಯೆಗಳು. ನಾವು ಅರ್ಥಶಾಸ್ತ್ರದಲ್ಲಿ ಪರಿಶೀಲಿಸುವ ಕ್ರಿಯೆಗಳಾದ, ಅನುಭೋಗ, ಉತ್ಪಾದನೆ, ಹಣದ ಸರಬರಾಜು, ಸರಕುಗಳ ಬೆಲೆಗಳು, ಇವೆಲ್ಲವೂ ಚಲಗಳೆ. ಏಕೆಂದರೆ, ಇವು ಪದೇ-ಪದೇ ಬದಲಾಗುತ್ತಿರುತ್ತವೆ. ಈ ಚಲಗಳನ್ನು ಆಂಗ್ಲ ಭಾಷೆಯ ಕೊನೆಯ ಅಕ್ಷರಗಳಾದ x, y, z ಮುಂತಾದವುಗಳಿಂದ ಸಾಮಾನ್ಯವಾಗಿ ಸೂಚಿಸಲಾಗುತ್ತದೆ.

ಬಿಂಬಕವು ಸ್ಥಿರಾಂಕಗಳನ್ನು ಸಹ ಹೊಂದಿರುತ್ತವೆ. ಅವು ಬದಲಾವಣೆಯನ್ನು ಅನುಭವಿಸುವುದಿಲ್ಲ. ಉದಾಹರಣೆಗೆ ಹೂವನ್ನು ಮಾರುವವರು, ಒಂದು ದಿನದಲ್ಲಿ ಮಾರುಕಟ್ಟೆಗೆ ತರುವ ಹೂವನ್ನು ಗಮನಿಸಿ. ಇದು ಆ ದಿನ ನೀಡಿಕೆಯಾಗುವ ಹೂವಿನ ಪ್ರಮಾಣ. ಆ ದಿನದ ಮಟ್ಟಿಗೆ ಅದು ಬದಲಾಗುವುದಿಲ್ಲ. ಮತ್ತೊಂದು ಉದಾಹರಣೆಯನ್ನು ಗಮನಿಸೋಣ. ಮುನಿಸಿಪಾಲಿಟಿಯವರೂ ಲೀಟರ್ ನೀರಿಗೆ ರೂ. ೧೦ ರಂತೆ ಎಷ್ಟು ಬೇಕಾದರೂ ನೀರನ್ನು ಸರಬರಾಜು ಮಾಡಲು ತಯಾರಿದ್ದಾರೆ ಎಂದು ಭಾವಿಸೋಣ. ಆಗ ನೀರಿನ ಬೆಲೆ ಒಂದು ಸ್ಥಿರ ಪ್ರಮಾಣ. ಸ್ಥಿರಾಂಕಗಳನ್ನು ಆಂಗ್ಲ ಭಾಷೆಯ ಮೊದಲ ಅಕ್ಷರಗಳಾದ a, b, c, d ಇತ್ಯಾದಿಗಳಿಂದ ಸಾಮಾನ್ಯವಾಗಿ ಸೂಚಿಸಲಾಗುತ್ತದೆ.

ಬಿಂಬಕ ಹೊಂದಿರುವ ಮತ್ತೊಂದು ಅಂಶವೆಂದರೆ, ಸ್ಥಿರ-ಚಲಾಂಕ. ಇದರ ಹೆಸರೇ ಸೂಚಿಸುವಂತೆ, ಕೆಲವೊಮ್ಮೆ ಇದು ಸ್ಥಿರವಾಗಿರುತ್ತದೆ ಮತ್ತೆ ಕೆಲವೊಮ್ಮೆ ಚಲಾಂಕವಾಗಿರುತ್ತದೆ. ಕೆಳಗಿನ ಬಿಂಬಕವನ್ನು ಗಮನಿಸಿ.

$$Y = X^b$$

ಇಲ್ಲಿ Y, ಒಂದು ರಾಷ್ಟ್ರದ ಜನಸಂಖ್ಯೆ ಎಂದು ಭಾವಿಸೋಣ. X ಒಂದು ನಿದಿಷ್ಟ ವರ್ಷದ ಜನಸಂಖ್ಯೆಯಾಗಿರಲಿ. b ಎನ್ನುವುದು ಜನಸಂಖ್ಯೆಯ ಬೆಳವಣಿಗೆಯ ದರವಾಗಿರಲಿ. ಭಾರತಕ್ಕೆ ಸಂಬಂಧಿಸಿದಂತೆ b, ೨.೦ ಆಗಿರಬಹುದು, ರಷ್ಯಾಕ್ಕೆ ಸಂಬಂಧಿಸಿದಂತೆ ಇದು ೧.೦ ಆಗಿರಬಹುದು, ಚೀನಾಕ್ಕೆ ಸಂಬಂಧಿಸಿದಂತೆ b, ೨.೦ ಆಗಿರಬಹುದು. ಅಂದರೆ ಒಂದು ರಾಷ್ಟ್ರಕ್ಕೆ ಸಂಬಧಿಸಿದಂತೆ ಒಂದು ವರ್ಷಕ್ಕೆ b ಸ್ಥಿರಾಂಕ. ಆದರೆ ಬೇರೆ ರಾಷ್ಟ್ರಕ್ಕೆ ಸಂಬಂಧಿಸಿದಂತೆ ಅದು ಚಲ. ಆದ್ದರಿಂದ b ಯನ್ನು ಸ್ಥಿರ-ಚಲಾಂಕ ಎಂದು ಹೇಳಲಾಗುತ್ತದೆ.

ಚಲಗಳನ್ನು ಅವಲಂಬಿ ಚಲ ಮತ್ತು ಸ್ವತಂತ್ರ ಚಲಗಳೆಂದು ವಿಂಗಡಿಸಲಾಗುತ್ತದೆ. ಇವುಗಳನ್ನು ಇನ್ನೂ ಅನೇಕ ಹೆಸರುಗಳಿಂದ ಕರೆಯಲಾಗುತ್ತದೆ. ಕೆಳಗಿನ ಚಿತ್ರವನ್ನು ಗಮನಿಸಿ.




ಇವುಗಳನ್ನು ಬಿಂಬಿಕ ಸಮೀಕರಣಗಳ ಮೂಲಕ ಅರ್ಥ ಮಾಡಿಕೊಳ್ಳೋಣ.

$Y = C + I_o + G_o$ ....... (೧)

$C = a + bY$ ........... (೨)

ಈ ಸಮೀಕರಣಗಳಲ್ಲಿ

$Y$ = ರಾಷ್ಟ್ರಾದಾಯ

$C$ = ರಾಷ್ಟ್ರೀಯ ಅನುಭೋಗ

$I_o$ = ಹೂಡಿಕೆದಾರರು ಮಾಡುವ ಹೂಡಿಕೆ

$G_o$ = ಸರ್ಕಾರದ ಸ್ವತಂತ್ರ ವೆಚ್ಚ

$a$ = ಸ್ಥಿರಾಂಕ

$b$ = ಸ್ಥಿರಾಂಕ

ಈ ಸಮೀಕರಣಗಳು ರಾಷ್ಟ್ರೀಯ ವರಮಾನ ನಿಗದಿಯಾಗುವ ಬಗೆಯನ್ನು ಸೂಚಿಸುತ್ತವೆ. ಸಮೀಕರಣ (೧) ರಲ್ಲಿ

$Y$ = ಅವಲಂಬಿ ಚಲ

$C$ = ಸ್ವತಂತ್ರ ಚಲ

$I_o$ = ಸ್ವತಂತ್ರ ಚಲ

$G_o$ = ಸ್ವತಂತ್ರ ಚಲ

ಆದರೆ ಸಮೀಕರಣ (೨) ರಲ್ಲಿ

$C$ = ಅವಲಂಬಿ ಚಲ

Y = ಸ್ವತಂತ್ರ ಚಲ

$I_o$ ಎನ್ನುವುದು ಹೂಡಿಕೆದಾರರಿಂದ ನಿರ್ಧಾರವಾಗುತ್ತದೆ. ಆದ್ದರಿಂದ ಇದನ್ನು ಮಾದರಿಯ ಒಳಗೆ ನಿಗದಿಯಾಗುವ ಚಲ (endogenous variable) ಎಂದು ಕರೆಯಲಾಗುತ್ತದೆ. $G_o$ - ಅಂದರೆ ಸರ್ಕಾರದ ಹೂಡಿಕೆ ಯಾವುದನ್ನೂ ಅವಲಂಬಿಸದೆ, ಮಾದರಿಯ ಹೊರಗಿನಿಂದ ನಿರ್ಧಾರವಾಗುತ್ತದೆ. ಆದ್ದರಿಂದ ಇದನ್ನು ಮಾದರಿಯ ಬಾಹ್ಯ ವಿವರಿತ ಚಲ (exogeneous variable) ಎಂದು ಕರೆಯಲಾಗುತ್ತದೆ. ಅಂದರೆ ಅರ್ಥಶಾಸ್ತ್ರದಲ್ಲಿ ಮಾದರಿಗಳನ್ನು ರಚಿಸುವಾಗ, ಕೆಲವು ಚಲಗಳ ಬೆಲೆಗಳನ್ನು ಮಾದರಿಯ ಒಳಗೆ ನಿರ್ಧಾರ ಮಾಡಲಾಗುತ್ತದೆ. ಅವು ಮಾದರಿಯ ಒಳಗೆ ನಿರ್ಧಾರವಾಗುವ ಚಲಗಳು. ಕೆಲವು ಚಲಗಳು ಹೊರಗಡೆಯಿಂದ ಮೊದಲೇ ನಿರ್ಧಾರವಾಗಿ, ಮಾದರಿಯನ್ನು ಪ್ರವೇಶಿಸುತ್ತವೆ. ಅವು ಮಾದರಿಯ ಬಾಹ್ಯ ನಿರ್ಧಾರಿತ ಚಲಗಳು.

ಮೇಲಿನ ಮಾದರಿಯನ್ನು ರಾಷ್ಟ್ರಾದಾಯ ಮಾದರಿ ಎಂದು ಕರೆಯಲಾಗುತ್ತದೆ. ಇಲ್ಲಿ ರಾಷ್ಟ್ರಾದಾಯ, ಅನುಭೋಗ, ಹೂಡಿಕೆದಾರರ ಹೂಡಿಕೆಗಳನ್ನು ಈ ಮಾದರಿಯನ್ನು ಬಿಡಿಸಿ ನಿರ್ಧಾರ ಮಾಡಲಾಗುತ್ತದೆ. ಆದ್ದರಿಂದ ಇವು ಮಾದರಿಯ ಒಳಗೆ ನಿರ್ಧಾರವಾಗುವ ಚಲಗಳು. ಆದರೆ, ಸರ್ಕಾರದ ಹೂಡಿಕೆ ಸ್ವತಂತ್ರವಾಗಿ, ಸರ್ಕಾರದಿಂದ ನಿರ್ಧಾರವಾಗುವುದರಿಂದ ಅದರ ಬೆಲೆಯನ್ನು ಮಾದರಿಯ ಒಳಗೆ ಬಿಡಿಸಿ ನಿರ್ಧರಿಸಲಾಗುವುದಿಲ್ಲ.

y = 10 + 2......................(೧)

ಇದು y ಮತ್ತು x ಗಳ ನಡುವೆ ಸಂಬಂಧವನ್ನು ಸೂಚಿಸುವ ಒಂದು ಬಿಂಬಕ. ಇಲ್ಲಿ x ನ ಬೆಲೆ ಹೆಚ್ಚಾದಂತೆ y ನ ಬೆಲೆಯೂ ಸತತವಾಗಿ ಹೆಚ್ಚಾಗುತ್ತದೆ. ಆದ್ದರಿಂದ ಇದನ್ನು ನಾವು ಆರೋಹಣ ಬಿಂಬಕವೆಂದು (Increasing function) ಎಂದು ಕರೆಯುತ್ತೇವೆ.

y = ೧೦ - ೨x ........ (೨)

ಈ ಬಿಂಬಕದಲ್ಲಿ x ನ ಬೆಲೆ ಹೆಚ್ಚಾದಂತೆ y ನ ಬೆಲೆಯು ಕಡಿಮೆಯಾಗುತ್ತಾ ಹೋಗುತ್ತದೆ. ಆದ್ದರಿಂದ ಇದನ್ನು ನಾವು ಅವರೋಹಣ (Decreasing function) ಬಿಂಬಕವೆಂದು ಕರೆಯುತ್ತೇವೆ.

ಮೇಲಿನ ಎರಡು ಸಮೀಕರಣಗಳಲ್ಲಿ y ಮತ್ತೆ x ಚಲಗಳನ್ನು ಮಾತ್ರ ತೆಗೆದುಕೊಂಡಿದ್ದೇವೆ. ಈ ಚಲಗಳು ಅವಲಂಬಿ ಚಲಗಳಾಗಬಹುದು (Depenent variable) ಅಥವಾ ಸ್ವತಂತ್ರ ಚಲವಾಗಬಹುದು. ಈಗ ಮತ್ತೆ ಮೊದಲನೆಯ ಸಮೀಕರಣವನ್ನು ತೆಗೆದುಕೊಳ್ಳೋಣ.

y = ೧೦ + ೨x .......... (೧)

ಇದನ್ನು ನಾವು ೨ x - y = ೧೦ .......... (೩) ಎಂದು ಸಹ ಬರೆಯಬಹುದು ಅಥವಾ y-೨x - ೧೦ = ೦ .......... (೪) ಎಂದು ಸಹ ಬರೆಯಬಹುದು. ಆದ್ದರಿಂದ ಬಿಂಬಕವನ್ನು ನಾವು ಮೇಲಿನ ಮೂರು ಸ್ವರೂಪಗಳಲ್ಲಿ ಕೂಡ ನಮೂದಿಸಬಹುದು. ಇದನ್ನು

ಸಾಮಾನ್ಯ ಸ್ವರೂಪಗಳಲ್ಲಿ ಕೆಳಗಿನಂತೆ ಒರೆಯಲಾಗುತ್ತದೆ.

$$y = f(x) \;.....\; (೫)$$

$$x = g(y) \;.....\; (೬)$$

$$(x, y) = ೦ \;....\; (೭)$$

೫, ೬ ಬಿಂಬಕದ ಸ್ವರೂಪಗಳನ್ನು ವ್ಯಕ್ತ ಬಿಂಬಕಗಳೆಂದೂ (Explicit function) ಮತ್ತು ೭ನೇ ಸ್ವರೂಪದ ಬಿಂಬಕವನ್ನು ಅವ್ಯಕ್ತ ಬಿಂಬಕವೆಂದೂ (Implicit function) ಕರೆಯಲಾಗುತ್ತದೆ. ಯಾವುದೇ ಅಸ್ಪಷ್ಟ ಬಿಂಬಕವನ್ನು ಕೊನೆಯ ಪಕ್ಷ ಎರಡು ಸ್ಪಷ್ಟ ಬಿಂಬಕಗಳಾಗಿ ನಮೂದಿಸುವುದು ಸಾಧ್ಯ.

$$y = ೧೦ + ೨x$$

ಎನ್ನುವ ಸಮೀಕರಣದಲ್ಲಿ ಎಡಭಾಗದಲ್ಲಿ ನಮೂದಿಸಿರುವ ಚಲವನ್ನು ಅವಲಂಬಿ ಚಲವೆಂದು ಕರೆಯಲಾಗುತ್ತದೆ. ಸಮೀಕರಣದ ಬಲಭಾಗದಲ್ಲಿ ನಮೂದಿಸಿರುವ ಚಲವನ್ನು ಸ್ವತಂತ್ರ ಚಲವೆಂದು ಕರೆಯಲಾಗುತ್ತದೆ. ಗಣಿತದ ದೃಷ್ಟಿಯಿಂದ ನೋಡುವಾಗ ಪರಾವಲಂಬಿ ಚಲವನ್ನು ಎಡಭಾಗದಲ್ಲಿ ನಮೂದಿಸಬೇಕೆ ಅಥವಾ ಅದನ್ನು ಬಲ ಭಾಗದಲ್ಲಿ ನಮೂದಿಸಬೇಕೆ ಎಂಬುದು ಗೌಣವಾದ ವಿಷಯ. ಆದರೆ ರೂಢಿಯ ಪ್ರಕಾರ ಸಾಮಾನ್ಯವಾಗಿ ಅವಲಂಬಿ ಚಲವನ್ನು ಸಮೀಕರಣದ ಎಡಭಾಗದಲ್ಲೂ ಮತ್ತು ಸ್ವತಂತ್ರ ಚಲವನ್ನು ಸಮೀಕರಣದ ಬಲಭಾಗದಲ್ಲೂ ನಮೂದಿಸಲಾಗುತ್ತದೆ. ಮೇಲಿನ ಸಮೀಕರಣ ದಲ್ಲಿ y ಎನ್ನುವುದು ಅವಲಂಬಿ ಚಲ. x ಎನ್ನುವುದು ಸ್ವತಂತ್ರ ಚಲ. ಇಲ್ಲಿ yಯನ್ನು ನಾವು ಒಂದು ವಸ್ತುವಿನ ಬೆಲೆಯೆಂದು ಮತ್ತು x ಅನ್ನು ವಸ್ತುವಿನ ಬೇಡಿಕೆಯ ಪ್ರಮಾಣವೆಂದು ಇಟ್ಟುಕೊಂಡರೆ, ವಸ್ತುವಿನ ಬೆಲೆ ಅದರ ಬೇಡಿಕೆಯ ಪ್ರಮಾಣದ ಮೇಲೆ ಅವಲಂಬಿಸಿದೆ ಎನ್ನುವುದು ಮೇಲಿನ ಬಿಂಬಕದಿಂದ ವ್ಯಕ್ತವಾಗುತ್ತದೆ. ನಾವು ಬಿಂಬಕವನ್ನು ರೂಪಿಸುವಾಗ ನಮ್ಮ ಅನುಕೂಲಕ್ಕೆ ತಕ್ಕಂತೆ ಮತ್ತು ಉದ್ದೇಶಕ್ಕೆ ತಕ್ಕಂತೆ ಅವಲಂಬಿ ಮತ್ತು ಪರಾವಲಂಬಿ ಚಲಗಳನ್ನು ಗೊತ್ತುಮಾಡಿಕೊಳ್ಳುತ್ತೇವೆ.

### ನಿತ್ಯಸಮೀಕರಣಗಳು ಮತ್ತು ಸಮೀಕರಣಗಳು

ನಿತ್ಯ ಸಮೀಕರಣಗಳು ಮತ್ತು ಸಮೀಕರಣಗಳ ನಡುವೆ ವ್ಯತ್ಯಾಸವನ್ನು ನಾವು ಅರಿಯುವದು ಅಗತ್ಯ. ನಿತ್ಯ ಸಮೀಕರಣ ಅದರ ಹೆಸರೇ ಸೂಚಿಸುವಂತೆ ಚಲಗಳ ಎಲ್ಲ ಮೌಲ್ಯಗಳಿಗೂ ಸತ್ಯವಾಗುತ್ತದೆ. ಉದಾಹರಣೆಗೆ ಒಂದು ರೂಪಾಯಿ=೧೦೦ ಪೈಸೆ, ಇದು ಒಂದು ನಿತ್ಯ ಸಮೀಕರಣ. ಅಥವಾ ೫ + ३ = ೮, ಇದು ಸಹ ನಿತ್ಯ ಸಮೀಕರಣ. ನಿತ್ಯ ಸಮೀಕರಣಗಳನ್ನು ನಾವು ಮೂರು ಅಡ್ಡಗೆರೆಗಳಿಂದ ಸೂಚಿಸುತ್ತೇವೆ. ಅರ್ಥಶಾಸ್ತ್ರದ ಒಂದು ಉದಾಹರಣೆಯನ್ನು ಕೊಡುವುದಾದರೆ

$$Y \equiv C + S$$

ಇಲ್ಲಿ Y ರಾಷ್ಟ್ರದಾಯವನ್ನು, C ರಾಷ್ಟ್ರೀಯ ಅನುಭೋಗವನ್ನು, S ರಾಷ್ಟ್ರೀಯ ಉಳಿತಾಯವನ್ನು ಸೂಚಿಸುತ್ತವೆಂದು ಇಟ್ಟುಕೊಂಡರೆ ಇಡೀ ರಾಷ್ಟ್ರಾದಾಯವು, ರಾಷ್ಟ್ರೀಯ ಅನುಭೋಗ ಮತ್ತು ರಾಷ್ಟ್ರೀಯ ಉಳಿತಾಯಗಳ ಮೊತ್ತಕ್ಕೆ ಸಮನಾಗಿರುತ್ತದೆ. ಇದು ಒಂದು ನಿತ್ಯ ಸಮೀಕರಣ.

ನಮ್ಮ ಹಿಂದಿನ ಸಮೀಕರಣವನ್ನು ಗಮನಿಸಿ.

$Y = ೧೦ + ೨x$

ಇದು ಒಂದು ಸಮೀಕರಣ ಅಷ್ಟೆ. ಬರಿಯ ಸಮೀಕರಣದಲ್ಲಿ ಸಮೀಕರಣವನ್ನು ನಾವು ಎರಡು ಅಡ್ಡಗೆರೆಗಳಿಂದ ಸೂಚಿಸುತ್ತೇವೆ. ಇಲ್ಲಿ X ನ ಬೆಲೆ ೨ ಆದಾಗ Yನ ಬೆಲೆ ೧೪ ಆದರೆ ಮಾತ್ರ ಈ ಸಮೀಕರಣ ಸತ್ಯವಾಗುತ್ತದೆ. ಆದ್ದರಿಂದ ಸಮೀಕರಣ ಚಲಗಳ ಕೆಲವು ನಿರ್ದಿಷ್ಟ ಬೆಲೆಗಳಿಗೆ ಮಾತ್ರ ಸತ್ಯವಾಗುತ್ತದೆ ಅಷ್ಟೆ. ಆದ್ದರಿಂದ ನಿತ್ಯ ಸಮೀಕರಣವು ಚಲಗಳ ಎಲ್ಲ ಮೌಲ್ಯಗಳಿಗೂ ಮತ್ತು ಸಮೀಕರಣವು ಚಲಗಳ ನಿರ್ದಿಷ್ಟ ಮೌಲ್ಯಗಳಿಗೆ ಮಾತ್ರ ಸತ್ಯವಾಗುತ್ತದೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡಿರಬೇಕು.

## ನಕ್ಷೆಗಳು

ಬಿಂಬಕಗಳನ್ನು ನಕ್ಷೆಗಳ ಮೂಲಕ ವ್ಯಕ್ತಪಡಿಸುವುದು ಅರ್ಥಶಾಸ್ತ್ರದಲ್ಲಿ ತುಂಬಾ ಸಾಮಾನ್ಯವಾದ ವಿಷಯ. ಆದ್ದರಿಂದ ಬಿಂಬಕವನ್ನು ನಕ್ಷೆಯ ಮೇಲೆ ಹೇಗೆ ನಮೂದಿಸಬೇಕು ಎಂಬುದನ್ನು ಮತ್ತು ಬೇರೆ ಬೇರೆ ಸ್ವರೂಪದ ರೇಖೆಗಳನ್ನು ಅವು ಹೇಗೆ ನೀಡುತ್ತವೆ ಎಂಬುವ ವಿಷಯವನ್ನು ಸ್ವಲ್ಪಮಟ್ಟಿಗೆ ಅರಿತಿರುವುದು ಅಗತ್ಯ.

ನಮಗೆಲ್ಲರಿಗೂ ನಕ್ಷೆಯ ಪರಿಚಯವಿದ್ದೇ ಇದೆ. ಒಂದು ನಕ್ಷೆಯನ್ನು ನಾವು ನಾಲ್ಕು ವಿಭಾಗಗಳಾಗಿ ವಿಂಗಡಿಸುತ್ತೇವೆ. ನಕ್ಷೆಯಲ್ಲಿ ನಾವು ಎರಡು ಚಲಗಳ ಬಿಂಬಕ ಸಂಬಂಧವನ್ನು ವ್ಯಕ್ತಪಡಿಸುತ್ತೇವೆ. ಚಲಗಳ ಸಂಖ್ಯೆ ಎರಡಕ್ಕಿಂತ ಹೆಚ್ಚಾದಾಗ ನಕ್ಷೆಯ ಮೇಲೆ ರೇಖೆಗಳನ್ನು ಎಳೆಯುವುದು ಕ್ಲಿಷ್ಟವಾಗುತ್ತದೆ. ಸಧ್ಯಕ್ಕೆ ನಾವು ಎರಡು ಚಲಗಳ ನಕ್ಷೆಯ ರಚನೆಯ ಬಗ್ಗೆ ಮಾತ್ರ ಗಮನ ನೀಡುತ್ತೇವೆ. ಈ ನಾಲ್ಕೂ ವಿಭಾಗಗಳಲ್ಲಿ ಮೊದಲನೆಯ ವಿಭಾಗ ಎರಡು ಚಲಗಳು ಧನಾತ್ಮಕ ಮೌಲ್ಯಗಳನ್ನು (Positive values) ಪಡೆದಾಗ ಯಾವ ಸ್ವರೂಪದ ರೇಖೆ ಪಡೆಯುತ್ತದೆ ಎಂಬುದಕ್ಕೆ ಸಂಬಂಧಿಸಿ ರುತ್ತದೆ. ಅರ್ಥಶಾಸ್ತ್ರದಲ್ಲಿ ನಮಗೆ ಈ ವಿಭಾಗವೇ ಮುಖ್ಯವಾದುದು. ಏಕೆಂದರೆ ಆರ್ಥಿಕ ಚಲಗಳು ಧನಾತ್ಮಕ ಮೌಲ್ಯಗಳನ್ನು ಪಡೆದಾಗ ಅವುಗಳ ನಡುವಣ ಸಂಬಂಧ ಹೇಗಿರುತ್ತದೆ ಎನ್ನುವುದರ ಪರೀಕ್ಷೆಯಲ್ಲಿ ನಾವು ಬಹಳ ಮಗ್ನರಾಗಿರುತ್ತೇವೆ. ಎರಡನೆಯ ವಿಭಾಗದಲ್ಲಿ x ಋಣಮೌಲ್ಯವನ್ನು y ಧನಮೌಲ್ಯವನ್ನು ಪಡೆದುಕೊಂಡಿರುವ ಸಂಬಂಧವನ್ನು ನಮೂದಿಸಲಾಗುತ್ತದೆ. ಮೂರನೆಯ ವಿಭಾಗದಲ್ಲಿ x ಮತ್ತು y ಗಳೆರಡೂ ಋಣಮೌಲ್ಯ ವನ್ನು ಪಡೆದುಕೊಂಡಿರುವುದನ್ನು ನಮೂದಿಸಲಾಗುತ್ತದೆ.




ನಾಲ್ಕನೆಯ ವಿಭಾಗದಲ್ಲಿ x ಧನಮೌಲ್ಯವನ್ನು y ಋಣ ಮೌಲ್ಯವನ್ನು ಪಡೆದು ಕೊಂಡಿರುವುದನ್ನು ನಮೂದಿಸಲಾಗುತ್ತದೆ. x ನ ಧನಮೌಲ್ಯಗಳನ್ನು ಅಳತೆ ಮಾಡುವ ದಿಕ್ಕನ್ನು ox ಅಕ್ಷವೆಂದೂ ಹಾಗೆಯೇ yನ ಧನಮೌಲ್ಯಗಳನ್ನು ಅಳತೆ ಮಾಡುವ ದಿಕ್ಕನ್ನು oy ಅಕ್ಷವೆಂದೂ ಕರೆಯುತ್ತೇವೆ. ಇವುಗಳ ಋಣಮೌಲ್ಯಗಳನ್ನು ಅಳತೆ ಮಾಡುವ ದಿಕ್ಕುಗಳನ್ನು $ox^1$ ಮತ್ತು $oy^1$ ಅಕ್ಷಗಳೆಂದು ಕರೆಯುತ್ತೇವೆ.

**ಸರಳರೇಖೆ ಬಿಂಬಕಗಳು ಮತ್ತು ವಕ್ರರೇಖೆ ಬಿಂಬಕಗಳು**

ಈಗ ವಾಸ್ತವವಾಗಿ ಬಿಂಬಕ ಸಂಬಂಧವನ್ನು ನಕ್ಷೆಯ ಮೇಲೆ ಹೇಗೆ ನಮೂದಿಸುತ್ತೇವೆ ಎಂಬುದನ್ನು ಅರಿಯೋಣ. ಬಿಂಬಕವನ್ನು ಎರಡು ವಿಭಾಗಗಳಾಗಿ ವಿಂಗಡಿಸಲಾಗುತ್ತದೆ. ಅವುಗಳೆಂದರೆ ೧) ಸರಳರೇಖೆ ಬಿಂಬಕಗಳು ಮತ್ತು ೨) ವಕ್ರರೇಖೆ ಬಿಂಬಕಗಳು. ಸರಳ ರೇಖೆಯ ಬಿಂಬಕಗಳು - ಅವುಗಳ ಹೆಸರೆ ಸೂಚಿಸುವಂತೆ ನಕ್ಷೆಯ ಮೇಲೆ ಮೂಡಿದಾಗ ಸರಳರೇಖೆಗಳನ್ನು ವ್ಯಕ್ತಪಡಿಸುತ್ತವೆ. ವಕ್ರರೇಖೆಯ ಬಿಂಬಕಗಳು, ನಕ್ಷೆಯ ಮೇಲೆ ಮೂಡಿದಾಗ ನಾನಾರೀತಿಯ ವಕ್ರರೇಖೆಗಳನ್ನು ವ್ಯಕ್ತ ಪಡಿಸುತ್ತವೆ. ಗಣಿತಶಾಸ್ತ್ರದಲ್ಲಿ ಈ ಎಲ್ಲ ಬಿಂಬಕಗಳಿಗೂ ನಿದಿಷ್ಟ ಸಮೀಕರಣಗಳನ್ನು ರೂಪಿಸಲಾಗಿದೆ. ಮೊದಲು ನಾವು ಸರಳರೇಖೆ ಬಿಂಬಕಗಳನ್ನು ನಕ್ಷೆಯ ಮೇಲೆ ಮೂಡಿಸುವ ಕ್ರಮವನ್ನು ಅರಿತು ನಂತರ ವಕ್ರರೇಖೆಯ ಬಿಂಬಕಗಳನ್ನು ಅರಿಯೋಣ.

**ಸರಳರೇಖೆ ಬಿಂಬಕಗಳು**

ಸರಳರೇಖೆಯ ಸಾರ್ವತ್ರಿಕ ರೂಪವನ್ನು

೧) $Ax + By + C =$ ೦ ...........೧ ಎಂಬ ಸಮೀಕರಣದಿಂದ ಸೂಚಿಸಲಾಗುತ್ತದೆ. ವಾಸ್ತವವಾಗಿ ಸರಳರೇಖೆ ಇನ್ನೂ ಕೆಲವು ರೂಪಗಳನ್ನು ಪಡೆದುಕೊಂಡಿರುತ್ತದೆ. ಅವುಗಳನ್ನು ಕೆಳಗಿನ ರೂಪಗಳಲ್ಲಿ ಸಹ ಸಾಮಾನ್ಯವಾಗಿ ವ್ಯಕ್ತಪಡಿಸಲಾಗುತ್ತದೆ.

೨) ದ್ವಿಬಿಂದುಗಮನ ರೂಪ

$$\frac{x - x_1}{x_1 - x_2} \qquad \frac{y - y_1}{y_1 - y_2}$$

೩) ರೇಖಾಂತರ ರೂಪ

$$\frac{x}{a} + \frac{y}{b} = 1$$

೪) ಓಟ-ರೇಖಾಂತರ ದೂರ

$$y = mx + d$$

೫. ಓಟ-ಬಿಂದು ರೂಪ

$$y - y_1 = m (x - x_1)$$

೬. ದೂರ ರೂಪ

$$\frac{x - x_1}{\text{Cos } O} = \frac{y - y_1}{\text{Sin } O} = r$$

೭. ಲಂಬ-ಬಾಗು ರೂಪ

$$x \text{ Cos } a + y \text{ Sin } a = P$$

ಮೇಲಿನ ಎಲ್ಲ ಸಮೀಕರಣಗಳೂ ಸರಳರೇಖೆಯನ್ನೆ ವ್ಯಕ್ತಪಡಿಸುತ್ತವೆ. ಇಲ್ಲಿ ನಾವು ಸಧ್ಯಕ್ಕೆ ಮೊದಲನೆಯ ಸಾರ್ವತ್ರಿಕ ರೂಪವನ್ನು ಮಾತ್ರ ಪರಿಗಣಿಸುತ್ತೇವೆ. ಈಗ ಸರಳರೇಖೆಯ ಸಾಮಾನ್ಯ ಸಮೀಕರಣದಿಂದ ನಕ್ಷೆಯ ಮೇಲೆ ಅದನ್ನು ಮೂಡಿಸುವ ಕ್ರಮವನ್ನು ಅರಿಯೋಣ.

೪ x + ೫ y - ೨೦ = ೦

ಎಂಬ ಸಮೀಕರಣವನ್ನು ತೆಗೆದುಕೊಳ್ಳೋಣ. ಒಂದು ಸರಳರೇಖೆಯನ್ನು ನಕ್ಷೆಯ ಮೇಲೆ ಮೂಡಿಸಲು x ಮತ್ತು y ಗಳ ಒಂದು ಜೊತೆ ಬೆಲೆಯನ್ನು ಕಂಡುಕೊಳ್ಳಬೇಕು. ಇದನ್ನು xಗೆ ಬೇರೆ ಬೇರೆ ಬೆಲೆಗಳನ್ನು ಕೊಟ್ಟು ಆ ಬೆಲೆಗಳಲ್ಲಿ y ನ ಮೌಲ್ಯಗಳನ್ನು ಕಂಡು ಹಿಡಿದುಕೊಳ್ಳುವುದರ ಮೂಲಕ ಮಾಡಬಹುದು. ಈ ಕ್ರಮವನ್ನು ಕೆಳಗಿನಂತೆ ಅನುಸರಿಸಬಹುದು.

೪ x + ೫ y - ೨೦ =೦

x = ೦

೪ (೦) + ೫ y - ೨೦ = ೦

೫y = ೨೦

$y = ೪$

$y = ೦$

$೪x + ೫ (೦) - ೨೦ = ೦$

$೪x = ೨೦$

$x = ೫$

x ನ ಬೆಲೆ ಸೊನ್ನೆಯಾದಾಗ y ನ ಬೆಲೆ ೪ ಆಗಿರುವುದು, ಮತ್ತು y ನ ಬೆಲೆ ೦ ಆಗಿರುವಾಗ x ನ ಬೆಲೆ ೫ ಆಗಿರುವುದು ವ್ಯಕ್ತವಾಗುತ್ತದೆ. ಈ ಮೌಲ್ಯಗಳನ್ನು ನಾವು ನಕ್ಷೆಯ ಮೇಲೆ ಮೂಡಿಸಿದಾಗ AB ಸರಳರೇಖೆ ನಮಗೆ ದೊರೆಯುತ್ತದೆ. ಈ ಸರಳ ರೇಖೆ OY ಅಕ್ಷವನ್ನು ೪ನೇ ಅಂಶದಲ್ಲಿ ಛೇದಿಸುತ್ತಿರುವುದನ್ನು ನಾವು ಗಮನಿಸುತ್ತೇವೆ. ಸರಳರೇಖೆ AB ಒಂದು ಇಳಿಯುತ್ತಿರುವ ಬಿಂಬಕವನ್ನು ವ್ಯಕ್ತಪಡಿಸುತ್ತದೆ. ಏಕೆಂದರೆ x ನ ಮೌಲ್ಯಗಳು ಹೆಚ್ಚಿದಂತೆ yನ ಮೌಲ್ಯ ಕಡಿಮೆಯಾಗುತ್ತಾ ಬರುತ್ತಿದೆ. ಆದ್ದರಿಂದ ಇದು ಒಂದು ಅವರೋಹಣ ಬಿಂಬಕ.




ಕೆಳಗಿನ ಉದಾಹರಣೆಯಲ್ಲಿ ಬೇಡಿಕೆ ಮತ್ತು ನೀಡಿಕೆಗಳನ್ನು ಅವುಗಳ ಬಿಂಬಕಗಳ ಸಹಾಯದಿಂದ ನಕ್ಷೆಯ ಮೇಲೆ ಮೂಡಿಸಿ ಸಮತೋಲನ ಬೆಲೆ ಮತ್ತು ಸಮತೋಲನ ಪ್ರಮಾಣವನ್ನು ವ್ಯಕ್ತಪಡಿಸಲಾಗಿದೆ.

$y = ೨೦ - ೨x$ ಬೇಡಿಕೆಯ ಬಿಂಬಕವಾಗಿರಲಿ.

$y = ೮ + ೨x$ ನೀಡಿಕೆಯ ಬಿಂಬಕವಾಗಿರಲಿ.

ಇಲ್ಲಿ y ಚಲ ವಸ್ತುವಿನ ಬೆಲೆಯನ್ನು, x ಚಲ ವಸ್ತುವಿನ ಬೇಡಿಕೆಯ ಪ್ರಮಾಣವನ್ನು ನಮೂದಿಸಲಿ.

ನಕ್ಷೆಯ ಮೇಲೆ ಬೇಡಿಕೆಯ ರೇಖೆ ಮತ್ತು ನೀಡಿಕೆಯ ರೇಖೆಗಳನ್ನು ನಮೂದಿಸಲಾಗಿದೆ. x ಗೆ ಬೇರೆ ಬೇರೆ ಬೆಲೆಗಳನ್ನು ಕೊಟ್ಟಾಗ y ಯಾವ ಮೌಲ್ಯವನ್ನು ಪಡೆಯುತ್ತವೆ

ಎಂಬುದನ್ನು ಕೆಳಗಿನ ಪಟ್ಟಿಯಲ್ಲಿ ಲೆಕ್ಕ ಹಾಕಿ ನಂತರ ಅವುಗಳನ್ನು ನಕ್ಷೆಯಲ್ಲಿ ತೋರಿಸಲಾಗಿದೆ.

ಬೇಡಿಕೆ ಬಿಂಬಕ : y = ೨೦ - ೨x

| x | y |
|---|---|
| ೦ | ೨೦ |
| ೨ | ೧೬ |
| ೩ | ೧೪ |
| ೪ | ೧೨ |

ನೀಡಿಕೆ ಬಿಂಬಕ : y = ೮ + ೨ x

| x | y |
|---|---|
| ೦ | ೦೮ |
| ೧ | ೧೦ |
| ೩ | ೧೪ |
| ೪ | ೧೬ |




ಪ್ರಮಾಣ

ನಕ್ಷೆಯಲ್ಲಿ E ಸಮತೋಲನ ಬೆಲೆ ಮತ್ತು ಸಮತೋಲನ ಪ್ರಮಾಣವನ್ನು ವ್ಯಕ್ತಪಡಿಸುತ್ತದೆ. ಈ ಅಂಶದಲ್ಲಿ ಬೇಡಿಕೆ-ನೀಡಿಕೆಗಳು ಪರಸ್ಪರ ಸಮನಾಗಿವೆ. ಈ

ಅಂಶದಲ್ಲಿ ೩ ಅಂಶದಷ್ಟು ಬೇಡಲಾಗುತ್ತಿದೆ. ಬೆಲೆ ೧ಳ ಅಂಶಗಳಾಗಿವೆ. ಹೀಗೆ ಸರಳರೇಖೆ ಬಿಂಬಕಗಳನ್ನು ನಕ್ಷೆಯ ಮೇಲೆ ಮೂಡಿಸಬಹುದು.

**ವಕ್ರ ರೇಖೆ ಬಿಂಬಕ**

ಈಗ ತಾನೇ ನಾವು ಸರಳರೇಖೆ ಬಿಂಬಕವನ್ನು ಗಮನಿಸಿದೆವು. ಎರಡು ಚಲಗಳ ಸಂಬಂಧ ಸರಳರೇಖೆ ಬಿಂಬಕವಾಗಿರಬೇಕೆಂದೇನಿಲ್ಲ. ಅದು ಬೇರೆ ಬೇರೆ ಸ್ವರೂಪವನ್ನು ಪಡೆದುಕೊಳ್ಳಬಹುದು. ಉದಾಹರಣೆಗೆ :

$y = x^೨$ ಎಂಬ ಬಿಂಬಕ ಸಂಬಂಧವನ್ನು ಗಮನಿಸಿ.

ಇಲ್ಲಿ y ವಸ್ತುವಿನ ಬೆಲೆಯನ್ನೂ, x ವಸ್ತುವಿನ ನೀಡಿಕೆಯನ್ನೂ ಸೂಚಿಸುತ್ತದೆ ಎಂದು ಭಾವಿಸೋಣ. ಈ ಬಿಂಬಕ ಸಂಬಂಧವನ್ನು ಕೆಳಗಿನ ಪಟ್ಟಿಯ ಮೂಲಕ ವ್ಯಕ್ತಪಡಿಸಿ ನಂತರ ಅದನ್ನು ನಕ್ಷೆಯ ಮೇಲೆ ಮೂಡಿಸೋಣ.

$y = x^೨$

| x | y |
|---|---|
| ೦ | ೦ |
| -೨ | ೪ |
| -೩ | ೯ |
| ೨ | ೪ |
| ೩ | ೯ |




ನಾವು ಮೇಲಿನ ನಕ್ಷೆಯಲ್ಲಿ ನೋಡುವಂತೆ $y = x^೨$. Y - ಅಕ್ಷದ ಉಭಯ ಪಾರ್ಶ್ವಗಳಲ್ಲಿಯೂ ಸಮಾಂಗತೆಯನ್ನು ಹೊಂದಿದೆ. ಈ ಸ್ವರೂಪದ ರೇಖೆಯನ್ನು ಪರವಲಯ ಎಂದು ಕರೆಯಲಾಗುತ್ತದೆ. SS ಭಾಗವನ್ನು ನಾವು ನೀಡಿಕೆಯ ರೇಖೆ ಎಂದು

ಹೇಳಬಹುದು. Y ಅಕ್ಷದ ಭಾಗ ಅರ್ಥಶಾಸ್ತ್ರದಲ್ಲಿ ಅಷ್ಟು ಪ್ರಮುಖವಾದುದಲ್ಲ. ಏಕೆಂದರೆ ಇಲ್ಲಿ x ಮತ್ತು y ಋಣ ಸ್ವರೂಪವನ್ನು ಪಡೆಯುತ್ತವೆ.

ಮೇಲೆ ನಾವು ವಿವರಿಸಿರುವಂತೆ, ಸರಳರೇಖೆ ಬಿಂಬಕವನ್ನಾಗಲೀ ವಕ್ರರೇಖೆ ಬಿಂಬಕವನ್ನಾಗಲೀ x ಮತ್ತು y ಚಲಗಳಿಗೆ ಬೇರೆ ಬೇರೆ ಬೆಲೆಗಳನ್ನು ಕೊಡುವುದರ ಮೂಲಕ ನಕ್ಷೆಯ ಮೇಲೆ ಮೂಡಿಸಬಹುದು. ರೇಖೆಯ ಸ್ವರೂಪ ಹೇಗಿರುತ್ತದೆ ಎನ್ನುವುದು ಮುಖ್ಯವಾಗಿ ಬಿಂಬಕ ಸಂಬಂಧವನ್ನು ಅವಲಂಬಿಸುತ್ತದೆ. ಬೀಜಗಣಿತ ಮತ್ತು ರೇಖಾಗಣಿತದಲ್ಲಿ ಅನೇಕ ರೀತಿಯ ಸಮೀಕರಣಗಳ ಮೂಲಕ ಸಾಮಾನ್ಯ ಬಿಂಬಕಗಳು ನಕ್ಷೆಯ ಮೇಲೆ ಯಾವ ಸ್ವರೂಪವನ್ನು ಪಡೆಯುತ್ತವೆ ಎನ್ನುವುದನ್ನು ಗುರುತಿಸಲಾಗುತ್ತದೆ.

## ಅವಕಲನ

ಅವಕಲನಶಾಸ್ತ್ರವು ಗಣಿತ ಶಾಸ್ತ್ರದ ಅತ್ಯಂತ ಪ್ರಬಾವಶಾಲಿ ವಿಭಾಗಳಲ್ಲಿ ಒಂದು. ಈ ಶಾಸ್ತ್ರ ಚಲಗಳ ಪಾರಸ್ಪರಿಕ ಬದಲಾವಣೆಗೆ ಸಂಬಂಧಿಸಿದೆ. ಚಲಗಳ ಚಲನದ ಅಧ್ಯಯನವೇ ಅವಕಲನ ಶಾಸ್ತ್ರ (Calculus)ದ ಮುಖ್ಯ ಉದ್ದೇಶ. ಈ ಶಾಸ್ತ್ರವನ್ನುಕಂಡು ಹಿಡಿದ ಕೀರ್ತಿ ಇಂಗ್ಲೆಂಡಿನ ಸರ್ ಐಸಾಕ್ ನ್ಯೂಟನ್ ಮತ್ತು ಜರ್ಮನಿಯ ಲೈಬ್ನಿಜ್ (Leibnitz) ಅವರಿಗೆ ಸಲ್ಲುತ್ತದೆ. ಇವರಿಬ್ಬರೂ ಏಕಕಾಲದಲ್ಲಿ ಈ ಶಾಸ್ತ್ರವನ್ನು ಕಂಡು ಹಿಡಿದರು. ಇವರು ಕ್ರಮವಾಗಿ ೧೬೬೪ ಮತ್ತು ೧೬೭೩ ರಲ್ಲಿ ಈ ಶಾಸ್ತ್ರವನ್ನು ಕಂಡು ಹಿಡಿದರು. ನ್ಯೂಟನ್ ತನ್ನ ಭೌತಶಾಸ್ತ್ರದ ತತ್ವಗಳನ್ನು ನಿರೂಪಿಸಲು ಮತ್ತು ಲೈಬ್ನಿಜ್ ಜ್ಯಾಮಿತೀಯ ತತ್ವಗಳನ್ನು ನಿರೂಪಿಸಲು ಈ ಶಾಸ್ತ್ರವನ್ನು ಕಂಡುಹಿಡಿದರು. ಆದರೆ ಇಂದು ಈ ಶಾಸ್ತ್ರವನ್ನು ಬಳಸದೆ ಇರುವ ಅಧ್ಯಯನ ಭಾಗವೇ ಇಲ್ಲ. ಅರ್ಥಶಾಸ್ತ್ರದಲ್ಲಂತೂ ಇದರ ಉಪಯೋಗ ಅತೀವ. ಇದಕ್ಕೆ ಕಾರಣವೆಂದರೆ, ಆರ್ಥಿಕ ಚಲಗಳ ಪಾರಸ್ಪರಿಕ ಸಂಬಂಧಗಳನ್ನು ಅಧ್ಯಯನ ಮಾಡುವುದೇ ಅರ್ಥಶಾಸ್ತ್ರದ ಮುಖ್ಯವಾದ ಗುರಿ. ಅವಕಲನ ಶಾಸ್ತ್ರ ಇದನ್ನು ಸುಲಭವಾಗಿ ಮಾಡುವುದರಿಂದ, ಇದರ ಉಪಯೋಗ ಅರ್ಥಶಾಸ್ತ್ರದಲ್ಲಿ ಬಹಳವಾಗಿದೆ. ಇದು ನಿಮಗೆ ಮುಂದೆ ಸ್ಪಷ್ಟವಾಗುತ್ತದೆ.

ಒಂದು ಸರಳ ಉದಾಹರಣೆಯನ್ನು ಗಮನಿಸೋಣ;

ಕೆಳಗಿನ ಬಿಂಬಕವನ್ನು ಗಮನಿಸಿ.

$$A = f(R)$$

ಇಲ್ಲಿ A ಕೃಷಿ ಉತ್ಪನ್ನವನ್ನು ಮತ್ತು R ಮಳೆಯ ಪ್ರಮಾಣವನ್ನು ಸೂಚಿಸುವ ಚಲಗಳು ಎಂದು ಭಾವಿಸೋಣ. R ಎನ್ನುವುದು ಸ್ವತಂತ್ರ ಚಲ ಎನ್ನುವುದು ನಿಮಗೆ ತಿಳಿದಿದೆ. ಕೃಷಿ ಉತ್ಪಾದನೆ ಅವಲಂಬಿ ಚಲ. ಅದು ಮಳೆಯನ್ನು ಅವಲಂಬಿಸುತ್ತದೆ.

ಈಗ ಈ ಪ್ರಶ್ನೆಯನ್ನು ಕೇಳೋಣ. ಒಂದು ಇಂಚು ಮಳೆ ಹೆಚ್ಚಾದಾಗ, ಅಥವಾ ಕಡಿಮೆಯಾದಾಗ ಕೃಷಿ ಉತ್ಪಾದನೆ ಹೇಗೆ ವ್ಯತ್ಯಾಸವಾಗುತ್ತದೆ ? ಈ ಪ್ರಶ್ನೆಗೆ ಅವಕಲನ

ಶಾಸ್ತ್ರದಿಂದ ಉತ್ತರ ದೊರೆಯುತ್ತದೆ.

ಇದನ್ನು ಅರ್ಥ ಮಾಡಿಕೊಳ್ಳಲು ಒಂದು ಸಾರ್ವತ್ರಿಕ ಬಿಂಬಕವನ್ನು ಗಮನಿಸೋಣ.

Y = f (x) ಎಂಬ ಬಿಂಬಕ ವನ್ನು ಗಮನಿಸಿ. ಇಲ್ಲಿ x ಸ್ವತಂತ್ರ ಚಲ (ಮಳೆಯಾಗಿರಲಿ). Y ಅವಲಂಬಿಚಲ (ಕೃಷಿ ಉತ್ಪಾದನೆ). ಈಗ x ಸ್ವಲ್ಪ ಹೆಚ್ಚಾಗುತ್ತದೆ ಎಂದು ಭಾವಿಸೋಣ. (ಮಳೆ ಹೆಚ್ಚಾಗುತ್ತದೆ) ಸಹಜವಾಗಿಯೇ ಮಳೆಯನ್ನು ಅವಲಂಬಿಸಿರುವ ಕೃಷಿ ಉತ್ಪಾದನೆಯೂ ಹೆಚ್ಚಾಗುತ್ತದೆ ಎನ್ನುವುದನ್ನು $\Delta$ ಎಂಬುದರಿಂದ ಸೂಚಿಸೋಣ. ಆದ್ದರಿಂದ

$(x + \Delta x)$ ಎನ್ನುವುದು x ನ ಹೊಸ ಬೆಲೆ ಆಗಲಿ,

ಆಗ y ಸಹ ಹೊಸಬೆಲೆಯನ್ನು ಪಡೆಯುತ್ತದೆ. ಅದು $(y + \Delta y)$ ಆಗುತ್ತದೆ.

$y = f(x)$ ಬಿಂಬಕವಾದರೆ,

x ಹೆಚ್ಚಾದರೆ, ಅಂದರೆ $(x + \Delta x)$ ಆದರೆ Y, $(y + \Delta y)$ ಆಗಲಿ

ಆಗ, $(y + \Delta y) = f(x + \Delta x)$ ಆಗುತ್ತದೆ.

ಅಥವಾ $\Delta y = f(x + \Delta x) - y$

ಅಥವಾ $\Delta y = f(x + \Delta x) - f(x)$

ಈಗ $\Delta y/\Delta x$ ಪರಿಮಾಣವನ್ನು ಪರಿಶೀಲಿಸೋಣ.

$$\Delta y/\Delta x = \frac{f(x + \Delta x) - f(x)}{\Delta x}$$

x (ಮಳೆಯ ಪ್ರಮಾಣ) ಸೊನ್ನೆಯತ್ತ ಚಲಿಸಿದರೆ, y (ಕೃಷಿ ಉತ್ಪಾದನೆ) ಸಹ ಒಂದು ನಿದಿಷ್ಟ ಸಂಖ್ಯೆಯ ಕಡೆ ಚಲಿಸಬೇಕು. ಸೊನ್ನೆ ಕಡೆಗೆ ಚಲಿಸುವುದನ್ನು

$\Delta x \rightarrow o$ ಎಂದು ಬರೆಯೋಣ.

ಆಗ

$$\underset{\text{Lim } x \rightarrow o}{\Delta y/\Delta x} = \text{Lim } x \; o \; \frac{f(x + \Delta x) - f(x)}{\Delta x}$$ ಆಗುತ್ತದೆ.

$\text{Lim } x \rightarrow o$ ಆದಾಗ ಒಂದು ನಿದಿಷ್ಟ ಪ್ರಮಾಣದ ಕೃಷಿ ಉತ್ಪಾದನೆ ಇರುತ್ತದೆ ಎಂದು ಭಾವಿಸೋಣ. ಹೀಗೆ ನಿದಿಷ್ಟ ಪ್ರಮಾಣ ಲಭ್ಯವಿದ್ದರೆ f (x) ಬಿಂಬಕವು X ನ ಬೆಲೆಯಲ್ಲಿ ಅವಕಲನೀಯ ಎಂದು ಹೇಳಲಾಗುತ್ತದೆ. ಹೀಗೆ ಅವಕಲನವಾಗುವುದನ್ನು f' (x) ಅಥವಾ dy/dx ಎನ್ನುವ ಸಂಕೇತ ದಿಂದ ಸೂಚಿಸಲಾಗುತ್ತದೆ. ಆದ್ದರಿಂದ.

$$dy/dx = \lim_{\Delta x \rightarrow o} \frac{\Delta y}{\Delta x} \quad \lim_{\Delta x \rightarrow o} \frac{f(x + \Delta x) - f(x)}{\Delta x}$$

ಈ ತತ್ವವನ್ನು ಉಪಯೋಗಿಸಿ ಪಡೆಯುವ ಸ್ಥಿರ ಸಂಖ್ಯೆಅಥವಾ ಬಿಂಬಕವನ್ನು

'ಪ್ರಥಮ ಆವರ್ತ ಅವಕಲನೀಯತೆ' (First order derivative) ಎಂದು ಕರೆಯಲಾಗುತ್ತದೆ. ಆದ್ದರಿಂದ dy/dx ಎನ್ನುವುದು y = f(x) ಬಿಂಬಕದ ಪ್ರಥಮ ಆವರ್ತ ಅವಕಲನೀಯತೆ. ಇದಕ್ಕೆ ಸಂಬಂಧಿಸಿದಂತೆ ಎರಡು ವಿಷಯಗಳನ್ನು ಗಮನಿಸಬೇಕು.

y = f (x) ಬಿಂಬಕಕ್ಕೆ ಸಂಬಂಧಿಸಿದಂತೆ ಪ್ರಥಮ ಆವರ್ತ ಅವಕಲನೀಯತೆ dy/dx

೧. dy/dx ಬಿಂಬಕದ ಓಟದಗತಿಯನ್ನು (slope) ಸೂಚಿಸುತ್ತದೆ.

೨. dy/dx - ಸೀಮಾಂತ ಪರಿಭಾವನೆಯನ್ನು ಸೂಚಿಸುತ್ತದೆ.

ಇವರೆಡೂ ಅಂಶಗಳನ್ನು ಮುಂದೆ ವಿಸ್ತರಿಸಿ ವಿವರಿಸಲಾಗುತ್ತದೆ.

ಈಗ ಪ್ರಥಮ ಆವರ್ತ ಅವಕಲನೀಯತೆಯನ್ನು ಪ್ರಥಮ ತತ್ವದ ಮೂಲಕ ಹೇಗೆ ಪಡೆಯಲಾಗುತ್ತದೆ ಎನ್ನುವುದನ್ನು ಕೆಲವು ಉದಹಾರಣೆಗಳ ಮೂಲಕ ನೋಡೋಣ.

ಉದಾಹರಣೆಗಳು :

y = ೧೦ - x

ಪ್ರಥಮ ಅವಕಲನೀಯತೆ

$$dy / dx = \underset{\Delta x \to ೦}{Lt} \frac{f(x+\Delta x) - f(x)}{\Delta x}$$

ಎನ್ನುವುದು ಸೂತ್ರ. ಅಂದರೆ y ಮತ್ತು x ಅನ್ನು X ನಷ್ಟು $\Delta$x ಹೆಚ್ಚಿಸಿ ಬಿಂಬಕದ ಪರಿಮಿತಿಯನ್ನು ನೋಡೋಣ.

y + $\Delta$y = ೧೦ - (x + $\Delta$x)

$\Delta$y = { ೧೦ - (x+$\Delta$x)} - y

$\Delta$y = { ೧೦ - (x +$\Delta$x)} - {೧೦ - x}

$\Delta$y = ೧೦ - x - $\Delta$x - ೧೦ + x

$$\Delta x / \Delta y = \frac{Lim}{\Delta x \to ೦} \frac{-\Delta x}{\Delta x}$$

dy / dx = -೧

ಅಂದರೆ

y = ೧೦ - x ಎಂಬ ಬಿಂಬಕದ

ಪ್ರಥಮ ಆವರ್ತ ಅವಕಲನ - ೧ ಕ್ಕೆ ಸಮ.

-೧ ಎನ್ನುವುದು y = ೧೦ - x ಬಿಂಬಕದ ಓಟದ ಗತಿಯನ್ನು ಸೂಚಿಸುತ್ತದೆ. ಹಾಗೆಯೇ y = ೧೦-x ಎನ್ನುವುದು ಬೇಡಿಕೆ ಬಿಂಬಕವಾದರೆ - ೧ ಎನ್ನುವುದು ಸೀಮಾಂತ ಬೇಡಿಕೆ (Marginal demand) ಯನ್ನು ಸೂಚಿಸುತ್ತದೆ.

ಉದಾಹರಣೆ : ಪ್ರಥಮ ತತ್ವವನ್ನು ಅನುಸರಿಸಿ ಕೆಳಗಿನ ಬಿಂಬಕದ ಪ್ರಥಮ ಆವರ್ತ

ಅವಕಲನೆಯತೆಯನ್ನು ಕಂಡು ಹಿಡಿಯೋಣ.

$y = ೩x + ೫$

$(y + \Delta y) = ೩(x + \Delta x) + ೫$

$\Delta y = \{೩(x+\Delta x) + ೫\} - y$

$\Delta y = \{೩(x+\Delta x) + ೫\} - \{೩x + ೫\}$

$\Delta y = \{೩x+೩.\Delta x) + ೫\} - \{೩x + ೫\}$

$$dy/dx = \frac{\Delta y/\Delta x}{\text{Lim}\ \Delta x\ \ ೦} = \text{Lim}\ \Delta x \to ೦ \ \frac{\{೩x+೩.\Delta x) + ೫\} - \{೩x + ೫\}}{\Delta x}$$

$dy / dx = ೩.\Delta x / \Delta x = ೩$

ಪ್ರಥಮ ತತ್ವನ್ನು ಆಧರಿಸಿ, ಅವಕಲನೀಯತೆಯನ್ನು ಕಂಡು ಹಿಡಿಯುವುದಕ್ಕೆ ಸಮಯ ಹಿಡಿಯುತ್ತದೆ. ಆದ್ದರಿಂದ ಈ ತತ್ವವನನ್ನು ಆಧರಿಸಿ ಗಣಿತದಲ್ಲಿ ಅನೇಕ ನಿಯಮಗಳನ್ನು ರೂಪಿಸಲಾಗಿದೆ. ಈ ನಿಯಮಗಳನ್ನು ಅನುಸರಿಸಿ 'ಪ್ರಥಮ ಆವರ್ತ ಅವಕಲನೀಯತೆಯನ್ನು' ಸುಲಭವಾಗಿ ಕಂಡು ಹಿಡಿಯಬಹುದು. ಕೆಳಗೆ ನಾವು ಬೀಜಗಣಿತಕ್ಕೆ ಸಂಬಂಧಿಸಿದಂತೆ ೭ ನಿಯಮಗಳನ್ನು ಉದಾಹರಣೆಗಳ ಸಹಿತಕೊಟ್ಟಿದ್ದೇವೆ. ಹೀಗೆಯೇ, ಟ್ರಿಗ್ನಾಮಿಟ್ರಿಕ್ ಬಿಂಬಕಗಳು, ಎಕ್ಸ್‌ಪೋನೆನ್ಸಿಯಲ್ ಬಿಂಬಕಗಳು, ಲಾಗರದಮಿಕ್ ಬಿಂಬಕಗಳಿಗೆ ಸಂಬಂಧಿಸಿದ ನಿಯಮಗಳು ಸಹ ಇವೆ, ಅವುಗಳನ್ನು ಇಲ್ಲಿ ಚರ್ಚಿಸಿಲ್ಲ. ಈ ನಿಯಮಗಳ ಜೊತೆಗೆ, ಕೆಲವು ಸರಳವಾದ ಅರ್ಥಶಾಸ್ತ್ರ ಅನ್ವಯಗಳನ್ನು ಸಹ ಕೊಡಲಾಗಿದೆ.

ನಿಯಮ ೧ :

$y = c$ ಆದರೆ ಮತ್ತು $c$ ಒಂದು ಸ್ಥಿರಾಂಕವಾದರೆ

$dy/dx = ೦$.

ಉದಾಹರಣೆಗಳು :

೧) $y = ೧೦$ ಆದರೆ

$dy/dx = ೦$.

೨) $y = ೫$ ಆದರೆ

$dy/dx = ೦$.

೩) $Y = a$ ಆಗಿದ್ದು $a$ ಸ್ಥಿರಾಂಕವಾದರೆ.

$dy/dx = ೦$.

ನಿಯಮ ೨ :

$y = x^n$ ಆದರೆ

$dy/dx = n.x^{n-೧}$

ಉದಾಹರಣೆಗಳು :

೧. $y = x^{೩}$ ಆದರೆ

$dy/dx = ೩x^{೨}$

೨. $y = x^{೪}$ ಆದರೆ

$dy/dx = ೪x^{೩}$

೩. $y = x^{೬}$

$dy/dx = ೬x^{೫}$

**ನಿಯಮ ೩ :**

$y = u + v$ ಆದರೆ

ಮತ್ತು $u = f(x)$ ಹಾಗೂ $v = g(x)$ ಆದರೆ

$dy/dx = du/dx + dv/dx$

ಉದಾಹರಣೆಗಳು :

೧. $y = x^{೩} + x^{೨}$ ಆದರೆ

$dy/dx = ೩x^{೨} + ೨x.$

೨. $y = x^{೪} + x^{೩}$ ಆದರೆ

$dy/dx = ೪x^{೩} + ೩x^{೨}.$

೩. $y = x^{೫} - x^{೪} + ೮$ ಆದರೆ

$dy/dx = ೫x^{೪} - ೪x^{೩}$

**ನಿಯಮ ೪ :**

$y = c.x^{n}$ ಆದರೆ ಮತ್ತು C ಒಂದು ಸ್ಥಿರಾಂಕವಾಗಿದ್ದರೆ.

$dy/dx = c.n.x^{n-೧}$

**ನಿಯಮ ೫ :**

$y = u \times v$ ಆದರೆ

ಮತ್ತು $u = f(x)$ ಮತ್ತು $v = g(x)$ ಆದರೆ,

$dy/dx = u.\ dv/dx + v.\ du/dx.$

ಉದಾಹರಣೆಗಳು :

೧. $y = (x^{೨}+೨)(x^{೩}+೧)$ ಆದರೆ,

$dy/dx = \{(x^{೨}+೨)\ ೩x^{೨}\} + \{(x^{೩}+೧)೨x\}.$

೨. $y = (x^{೪} + x^{೩} + x^{೨} + ೧)(x^{೩}-೧)$ ಆದರೆ,

$dy/dx = (x^{೪}+x^{೩}+x^{೨}+೧)(೩x^{೨})+(x^{೩}-೧)(೪x^{೩}+೩x^{೨}+೨x).$

೩. $y = (x+೧)(x+೨)$ ಆದರೆ,

$dy/dx = (x+೧)(x+೨)$.

**ನಿಯಮ ೬ :**

$y = u/v$ ಆದರೆ $u = f(x)$ ಹಾಗು $v = g(x)$ ಆದರೆ.

$$dy/dx = \frac{v.\, du/dx - u.\, dv/dx}{v^{೨}}$$

ಉದಾಹರಣೆಗಳು :

೧. $y = (x^{೨} + x) / (೧-x)$ ಆದರೆ,

$dy/dx = (೧-x)(೨x+೧) - (x^{೨}+x)(-೧) / (೧-x)^{೨}$.

೨. $y = (x^{೩}+x^{೨}+x+೮) / (x^{೨}-೧)$ ಆದರೆ

$dy/dx = \{(x^{೨}-೧)(೩x^{೨}+೨x+೧)\} - \{(x^{೩}+x^{೨}+x+೮)೨x\} / (x^{೨}-೧)^{೨}$.

೩. $y = (x+೧) / (x^{೩}-೧)$ ಆದರೆ

$dy/dx = (x^{೩}-೧) - (x+೧)೩x^{೨} / (x^{೩}-೧)^{೨}$.

**ನಿಯಮ ೭ :**

$y = u^{n}$ ಆದರೆ ಮತ್ತು $u =x\, f(x)$ ಆದರೆ

$dy/dx = n.u^{n-೧}.\, du/dx$.

ಉದಾಹರಣೆ :

೧. $y = (x^{೩}+೨)^{೩}$ ಆದರೆ

$dy/dx = ೩(x^{೩}+೨)^{೨}.\, ೩x^{೨}$

$= ೯x^{೨}(x^{೩} + ೨)^{೨}$.

೨. $y = (x^{೩}+೩)^{೪}$ ಆದರೆ

$dy/dx = ೪(x^{೩}+೩)^{೩}.\, ೩x^{೨}$

$= ೧೨x^{೨}(x^{೩}+೩)^{೩}$.

೩. $y = (x+೧)^{೫}$ ಆದರೆ

$dy/dx = ೫(x+೧)^{೪}$.

## ಅರ್ಥಶಾಸ್ತ್ರದಲ್ಲಿ ಕೆಲವು ಅನ್ವಯಗಳು

ವೆಚ್ಚ ಬಿಂಬಕಗಳು : $y = f(x)$

ಬಿಂಬಕದಲ್ಲಿ y ಒಟ್ಟು ವೆಚ್ಚವನ್ನು, x ಉತ್ಪಾದನೆಯ ಪ್ರಮಾಣವನ್ನು ಸೂಚಿಸುತ್ತವೆ ಎಂದಿಟ್ಟು ಕೊಳ್ಳೋಣ. ಆಗ

ಒಟ್ಟು ವೆಚ್ಚ ಬಿಂಬಕ : y = f (x)

ಸರಸಾರಿ ವೆಚ್ಚ ಬಿಂಬಕ : y/x = f (x)/x

ಸೀಮಾಂತ ವೆಚ್ಚ ಬಿಂಬಕ : dy/dx = $f^{೧}$ (x)

ಉದಾಹರಣೆ :

ಒಟ್ಟು ವೆಚ್ಚ ಬಿಂಬಕ : y = ೧೦ $x^{೨}$ + x + ೫ ಆಗಿದ್ದರೆ.

ಸರಾಸರಿ ವೆಚ್ಚ ಬಿಂಬಕ : y/x = y = ೧೦x + ೧ + ೫/x

ಸೀಮಾಂತ ವೆಚ್ಚ ಬಿಂಬಕ : dy / dx = ೨೦x+೧

ಒಟ್ಟು ಉತ್ಪಾದನೆ : x = ೨ ಆಗಿರುವಾಗ

ಒಟ್ಟು ವೆಚ್ಚ : y=೧೦$x^{೨}$ + x + ೫ ಆದರೆ

x = ೨ ನಲ್ಲಿ y = ೧೦$(೨)^{೨}$ + ೨ + ೫

y = ೪೦ + ೨ + ೫ = ೪೭ ಘಟಕಗಳು

ಸರಾಸರಿ ವೆಚ್ಚ : y = ೧೦x+೧ + ೫/x

x = ೨ ರಲ್ಲಿ y = ೧೦(೨)+೧ + ೫/೨

y = ೨೦+೩.೫

y = ೨೩.೫.

ಸೀಮಾಂತ ವೆಚ್ಚ : dy / dx = ೨೦x+೧

x = ೨ ರಲ್ಲಿ ಸೀಮಾಂತವೆಚ್ಚ dy / dx = ೨೦(೨)+೧

dy / dx = ೪೧.

## ಬೇಡಿಕೆ ಬಿಂಬಕ

y = ಬೇಡಿಕೆಯಾಗಿರಲಿ

x = ಬೆಲೆಯಾಗಿರಲಿ

y = f (x) ಬೇಡಿಕೆ ಬಿಂಬಕವಾಗಿದ್ದರೆ ಇದು ಸರಾಸರಿ ಆದಾಯ ಬಿಂಬಕ ಸಹ ಆಗಿರುತ್ತದೆ.

ಆದ್ದರಿಂದ ಸರಾಸರಿ ಆದಾಯ ಬಿಂಬಕ = y = f (x)

ಒಟ್ಟು ಆದಾಯ ಬಿಂಬಕ = y x x = f (x).x

ಒಟ್ಟು ಆದಾಯ R = xy ಆದರೆ

ಒಟ್ಟು ಆದಾಯ R = x.f. (x)

ಸೀಮಾಂತ ಆದಾಯ dR/dx = x. $f^{೧}$ (x) + f(x).

ಉದಾಹರಣೆ :

y = -೨x + ೧೦ ಆದರೆ

ಒಟ್ಟು ಆದಾಯ ಬಿಂಬಕ = $y \text{ x } x = -೨x^{೨}+೧೦x$

ಅಥವಾ $R = -೨x^{೨} + ೧೦x$.

ಸೀಮಾಂತ ಆದಾಯ $dR / dx = -೪x+೧೦$.

ಬೆಲೆ $x = ೧$ ಆದರೆ

ಸರಾಸರಿ ಆದಾಯ : $y = -೨ \text{ x } ೧+೧೦$

$y = ೧೦ - ೨ = ೮$.

ಒಟ್ಟು ಆದಾಯ : $-೨x^{೨}+೧೦x$

$x = ೧$ ಆದರೆ, ಒಟ್ಟು ಆದಾಯ = ೮

$x = ೧$, ಆದಾಗ, ಸೀಮಾಂತ ಆದಾಯ = $-೪ + ೧೦ = ೬$ ಆಗುತ್ತದೆ.

## ೧.೫. ಸಾರಾಂಶ

**ಅರ್ಥಶಾಸ್ತ್ರದ ವ್ಯಾಖ್ಯೆಗಳು**

ಅರ್ಥಶಾಸ್ತ್ರದ ವಿಷಯ ವಸ್ತು ಯಾವುದು ಎಂಬುದನ್ನು ನಿರ್ದಿಷ್ಟವಾಗಿ ವಿವರಿಸುವ ಕ್ರಮವನ್ನು ವ್ಯಾಖ್ಯೆಯೆಂದು ಕರೆಯಲಾಗಿದೆ.

ಚಾರಿತ್ರಿಕವಾಗಿ ಅರ್ಥಶಾಸ್ತ್ರದ ನಾಲ್ಕು ವ್ಯಾಖ್ಯೆಗಳನ್ನು ನಾವು ಗುರುತಿಸಬಹುದು.

೧. ಆಡಂ ಸ್ಮಿತ್‌ನ ಸಂಪತ್ತಿನ ವ್ಯಾಖ್ಯೆ

೨. ಆಲ್‌ಫ್ರೆಡ್ ಮಾರ್ಷಲ್‌ನ ಕ್ಷೇಮಾಭ್ಯುದಯ ವ್ಯಾಖ್ಯೆ

೩. ಲಿಯೋನಲ್ ರಾಬಿನ್ಸ್‌ರ ವಿರಳತೆಯ ವ್ಯಾಖ್ಯೆ

೪. ಸಾಮುಯಲ್‌ಸನ್‌ರ ಬೆಳವಣಿಗೆ ವ್ಯಾಖ್ಯೆ

"ಸಂಪತ್ತನ್ನು ಕುರಿತಂತೆ ಅಧ್ಯಯನ ಮಾಡುವ ಶಾಸ್ತ್ರವೇ ಅರ್ಥಶಾಸ್ತ್ರ". ಇದು ಆಡಂಸ್ಮಿತ್‌ನ ವ್ಯಾಖ್ಯೆ. ಈ ವ್ಯಾಖ್ಯೆಯು ಅನೇಕ ತತ್ವಶಾಸ್ತ್ರಜ್ಞರಿಂದ ತೀವ್ರ ಟೀಕೆಯನ್ನು ಎದುರಿಸಬೇಕಾಯಿತು. ಸಂಪತ್ತಿನ ಸಂಗ್ರಹವು ಸಮಾಜದಲ್ಲಿ ಸ್ವಾರ್ಥವನ್ನು ಉಂಟು ಮಾಡುತ್ತದೆ ಎಂಬುದು ಅವರ ಟೀಕೆಯಾಗಿತ್ತು.

ಮುಂದೆ ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಆಲ್‌ಫ್ರೆಡ್ ಮಾರ್ಷಲ್ ಅವರು ಕ್ಷೇಮಾಭ್ಯುದಯ ವ್ಯಾಖ್ಯೆಯನ್ನು ನೀಡಿದರು. ಮಾನವನ ಆರ್ಥಿಕ ಚಟುವಟಿಕೆಗಳು ಅರ್ಥಶಾಸ್ತ್ರದ ವಿಷಯವಸ್ತು ಎಂಬುದು ಅವನ ವ್ಯಾಖ್ಯೆಯಾಗಿದೆ. ಮಾರ್ಷಲ್ ಪ್ರಕಾರ ಭೌತಿಕ ಸಂಪತ್ತಿನ ಉತ್ಪಾದನೆ ಹಾಗೂ ಅನುಭೋಗವನ್ನು ಅಭ್ಯಸಿಸುವ ಶಾಸ್ತ್ರವೇ ಅರ್ಥಶಾಸ್ತ್ರ. ಈ ಭೌತಿಕ ಸಂಪತ್ತಿನ ಉತ್ಪಾದನೆ ಮತ್ತು ಅನುಭೋಗದ ಮೂಲ ಉದ್ದೇಶ ಕಲ್ಯಾಣ ಅಥವಾ ಕ್ಷೇಮಾಭ್ಯುದಯ.

ಮಾರ್ಷಲ್‌ನ ವ್ಯಾಖ್ಯೆಯು ೨೦ನೆಯ ಶತಮಾನದ ಆದಿಭಾಗದಲ್ಲಿ ರಾಬಿನ್ಸ್‌ರವರಿಂದ ತೀವ್ರ ಟೀಕೆಗೆ ಒಳಗಾಯಿತು. ಏಕೆಂದರೆ ಇದು ಭೌತಿಕ ಸಂಪತ್ತನ್ನು ಮಾತ್ರ ಪರಿಗಣಿಸು ತ್ತದೆ. ರಾಬಿನ್ಸ್ ಪ್ರಕಾರ ಅಭೌತಿಕ ಸಂಪತ್ತು ಕೂಡ ಅರ್ಥಶಾಸ್ತ್ರದ ವಿಷಯ ವಸ್ತು ವಾಗಿದೆ. ಇದನ್ನು ಮಾರ್ಷಲ್ ಪರಿಗಣಿಸಿಲ್ಲ. ಈ ವ್ಯಾಖ್ಯೆಯಲ್ಲಿ ಮಾರ್ಷಲ್ ಅವರು ಮಾನವನನ್ನು ಸಮಾಜದ ಒಂದು ಅಂಗವಾಗಿ ಪರಗಣಿಸುತ್ತಾರೆ. ಸಮಾಜದ ಚೌಕಟ್ಟಿನಿಂದ ಹೊರಗಿರುವ ಮನುಷ್ಯನ ಆರ್ಥಿಕ ಚಟುವಟಿಕೆಗಳು ಇಲ್ಲಿ ಮುಖ್ಯವಾಗುವುದಿಲ್ಲ.

ಈ ಮಿತಿಗಳಿಂದಾಗಿ ಹೊಸ ವ್ಯಾಖ್ಯೆಯ ಅಗತ್ಯ ಕಂಡುಬಂದಿತು. ರಾಬಿನ್ಸ್ ಅವರು ೧೯೩೨ರಲ್ಲಿ ಅರ್ಥಶಾಸ್ತ್ರ ಕುರಿತಂತೆ ಹೊಸ ವ್ಯಾಖ್ಯೆ ನೀಡಿದರು.

"ಅಪರಿಮಿತ ಬಯಕೆಗಳು, ಮಿತಿಯುಳ್ಳ ಹಾಗೂ ವಿವಿಧ ಉಪಯೋಗವುಳ್ಳ ಸಾಧನ ಗಳ ನಡುವಿನ ಸಂಬಂಧದಿಂದ ಉಂಟಾಗುವ ಆಯ್ಕೆಗಳನ್ನು ಅಧ್ಯಯನ ಮಾಡುವುದೇ ಅರ್ಥಶಾಸ್ತ್ರ". ಇದು ರಾಬಿನ್ಸ್‌ರ ವ್ಯಾಖ್ಯೆ.

ಈ ವ್ಯಾಖ್ಯೆಯಲ್ಲಿ ಮೂರು ಮುಖ್ಯ ಸಂಗತಿಗಳಿವೆ.

೧. ಮಾನವನ ಬಯಕೆಗಳು ಅಪರಿಮಿತ.

೨. ಬಯಕೆಗಳನ್ನು ಈಡೇರಿಸಿಕೊಳ್ಳಲು ಅಗತ್ಯವಾದ ಸಂಪನ್ಮೂಲಗಳು ಪರಿಮಿತ.

೩. ಸಂಪನ್ಮೂಲಗಳಿಗೆ ವಿವಿಧ ಉಪಯೋಗಗಳಿರುತ್ತವೆ.

ಈ ಕಾರಣದಿಂದಾಗಿ ಯಾವ ಬಯಕೆಯ ಈಡೇರಿಕೆಗೆ ಯಾವ ಸಂಪನ್ಮೂಲ ಬಳಸಬೇಕೆಂಬ ಆಯ್ಕೆಯ ಪ್ರಶ್ನೆ ಇಲ್ಲಿ ಮುಖ್ಯವಾಗುತ್ತದೆ.

ಈ ವ್ಯಾಖ್ಯೆಯ ಬಗ್ಗೆ ಅನೇಕ ಟೀಕೆಗಳಿವೆ.

ಆರ್ಥಿಕ ಸಮಸ್ಯೆಗಳು ವಿರಳತೆಯಿಂದ ಉಂಟಾಗುವಂತೆ ಹೇರಳತೆಯಿಂದಲೂ ಉಂಟಾಗಬಹುದು. ಈ ವ್ಯಾಖ್ಯೆಯ ಕಾಲಾವಧಿಯನ್ನು ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

ನಾಲ್ಕನೆಯ ಬೆಳವಣಿಗೆ ವ್ಯಾಖ್ಯೆಯು ೧೯೪೦ರ ನಂತರ ಚಲಾವಣೆಗೆ ಬಂದಿದೆ. ಅನೇಕ ಅರ್ಥಶಾಸ್ತ್ರಜ್ಞರು ಇದರ ವ್ಯಾಖ್ಯೆ ನೀಡಿದ್ದಾರೆ. ಅವುಗಳಲ್ಲಿ ಸಾಮುಯಲ್‌ಸನ್ ಅವರ ವ್ಯಾಖ್ಯೆ ತುಂಬಾ ಪ್ರಸಿದ್ಧವಾಗಿದೆ. ಬೆಳವಣಿಗೆ ವ್ಯಾಖ್ಯೆ ಹೀಗಿದೆ.

"ಮಾನವ ಮತ್ತು ಆರ್ಥಿಕತೆಗಳು ಹಣವನ್ನು ಉಪಯೋಗಿಸಿ ಅಥವಾ ಉಪಯೋಗಿಸದೆ, ವಿರಳವಾದ ಉತ್ಪಾದನಾ ಸಂಪನ್ಮೂಲಗಳನ್ನು ಹೇಗೆ ವಿವಿಧ ಸರಕುಗಳ ಉತ್ಪಾದನೆಗೆ ವಿನಿಯೋಗಿಸುತ್ತಾರೆ ಎಂಬುದನ್ನು ಅಭ್ಯಾಸ ಮಾಡುವುದೇ ಅರ್ಥಶಾಸ್ತ್ರ. ಸರಕುಗಳ ಉತ್ಪಾದನೆಯು ಪ್ರಸ್ತುತ ಕಾಲಘಟ್ಟವನ್ನು ಗುರಿಯಾಗಿಟ್ಟುಕೊಳ್ಳುವುದರ ಜೊತೆಗೆ ಭವಿಷ್ಯದ ಅಗತ್ಯಗಳನ್ನು ಗಮನದಲ್ಲಿರಿಸಿಕೊಳ್ಳುತ್ತದೆ".

ಈ ವ್ಯಾಖ್ಯೆಯ ವ್ಯಾಪ್ತಿ ವಿಶಾಲವಾದುದು. ವ್ಯಾಖ್ಯೆಯ ಗೊಡವೆಯೆ ಬೇಡವೆಂಬ ಅರ್ಥವಿಜ್ಞಾನಿಗಳ ಗುಂಪು ಕೂಡ ಇದೆ. ವ್ಯಾಖ್ಯೆಗೆ ಸಂಬಂಧಿಸಿದ ವಿವಾದದ ಹಿನ್ನೆಲೆಯಲ್ಲಿ ಇಂತಹ ನಿರಾಶವಾದ ಮೂಡಿದೆ. ವ್ಯಾಖ್ಯೆಯೆ ಬೇಡ ಎಂಬುದರಲ್ಲಿ ಅರ್ಥವಿಲ್ಲ. ಬದಲಾದ ಸಮಯ ಮತ್ತು ಸನ್ನಿವೇಶದಲ್ಲಿ ವ್ಯಾಖ್ಯೆ ಅಪ್ರಸ್ತುತವಾಗಬಹುದು. ಆಗ ಹೊಸ ವ್ಯಾಖ್ಯೆ ಹುಟ್ಟಿಕೊಳ್ಳುತ್ತದೆ.

## ಆರ್ಥಿಕ ಸಮಸ್ಯೆಗಳು

ಉತ್ಪಾದನೆಯನ್ನು ನಿರ್ವಹಿಸುವ ಸಾಂಸ್ಥಿಕ ವ್ಯವಸ್ಥೆಯನ್ನು ಆರ್ಥಿಕತೆಯೆಂದು ಕರೆಯಲಾಗಿದೆ. ಉತ್ಪಾದನೆಯ ನಿರ್ವಹಣೆಯೆಂದರೆ ಅಲ್ಲಿ ಅನೇಕ ಸಂಗತಿಗಳು ಮುಖ್ಯವಾಗುತ್ತವೆ. ಆರ್ಥಿಕತೆ ಒಳಗೊಳ್ಳುವ ಸಂಗತಿಗಳೆಂದರೆ ಅನುಭೋಗ, ಉತ್ಪಾದನೆ, ವಿನಿಮಯ ಮತ್ತು ವಿತರಣೆ. ಈ ಎಲ್ಲ ಕಾರ್ಯಗಳನ್ನು ನಿರ್ವಹಿಸುವ ಯಂತ್ರವನ್ನು ಆರ್ಥಿಕತೆ ಎನ್ನಲಾಗಿದೆ. ಅಮೆರಿಕಾ ಆರ್ಥಿಕತೆ, ಭಾರತೀಯ ಆರ್ಥಿಕತೆ, ಜಪಾನ್ ಆರ್ಥಿಕತೆ ಎಂದು ಕರೆದಾಗ ಅದು ಅಲ್ಲಿನ ಉತ್ಪಾದನಾ ವ್ಯವಸ್ಥೆಗೆ ಸ್ವರೂಪಕ್ಕೆ ಸಂಬಂಧಿಸಿದ್ದಾಗಿದೆ.

ಆರ್ಥಿಕತೆ ಎಂದು ಕರೆದಾಗ ಅದು ಅಲ್ಲಿನ ಉತ್ಪಾದನಾ ವ್ಯವಸ್ಥೆಯ ಸ್ವರೂಪಕ್ಕೆ ಸಂಬಂಧಿಸಿದ್ದಾಗಿದೆ.

ಆರ್ಥಿಕತೆಯ ಪ್ರಭೇದ ಯಾವುದೇ ಇರಲಿ, ಎಲ್ಲ ಆರ್ಥಿಕತೆಗಳಿಗೂ ಸಾಮಾನ್ಯವಾದ ಐದು ಆರ್ಥಿಕ ಸಮಸ್ಯೆಗಳಿವೆ.

೧. ಏನನ್ನು - ಯಾವ ಬಗೆಯ ಸರಕುಗಳನ್ನು ಉತ್ಪಾದಿಸಬೇಕು?
೨. ಯಾವ ತಂತ್ರ - ಉತ್ಪಾದನಾ ಕ್ರಮದಿಂದ ಉತ್ಪಾದನೆ ಮಾಡಬೇಕು?
೩. ಉತ್ಪಾದಿತ ಸರಕುಗಳನ್ನು ಜನರ ನಡುವೆ ಹೇಗೆ ಹಂಚಬೇಕು?
೪. ಲಭ್ಯವಿರುವ ಉತ್ಪಾದನಾಂಗಗಳನ್ನು ಯಾವ ಮಟ್ಟದವರೆಗೆ ಉತ್ಪಾದನೆಯಲ್ಲಿ ತೊಡಗಿಸಬೇಕು.
೫. ರಾಷ್ಟ್ರವೊಂದರ ಉತ್ಪಾದನಾ ಕ್ಷಮತೆಯು ಸ್ಥಾಯಿಯಾದುದೊ ಅಥವಾ ಚಲನಶೀಲವಾದುದೊ?

ಈ ಆರ್ಥಿಕ ಸಮಸ್ಯೆಗಳನ್ನು ವಿವಿಧ ಪ್ರಭೇದದ ಆರ್ಥಿಕತೆಗಳು ವಿವಿಧ ರೀತಿಯಲ್ಲಿ ನಿರ್ವಹಿಸುತ್ತವೆ.

## ಅರ್ಥಶಾಸ್ತ್ರದ ವಿಶ್ಲೇಷಣಾ ವಿಧಾನ

**ಅಂಶಲಕ್ಷಿ ಅರ್ಥಶಾಸ್ತ್ರ :** ಅರ್ಥಶಾಸ್ತ್ರವು ಉದಯವಾದ ಕಾಲದಿಂದಲೂ ಇದು ಪ್ರಚಲಿತದಲ್ಲಿರುವ ವಿಶ್ಲೇಷಣಾ ವಿಧಾನವಾಗಿದೆ. ಆರ್ಥಿಕತೆಯ ಬಿಡಿ ಭಾಗಗಳನ್ನು ವಿವರವಾಗಿ ಅಧ್ಯಯನ ಮಾಡುವ ಪರಿಯೇ ಅಂಶಲಕ್ಷಿ ಅರ್ಥಶಾಸ್ತ್ರ. ಒಂದು ವಸ್ತುವಿನ ಬೆಲೆ ಹೇಗೆ ನಿಗದಿಯಾಗುತ್ತದೆ? ಒಂದು ಉದ್ದಿಮೆ ಸಮತೋಲನ ಹೇಗೆ ಸಾಧಿಸಿಕೊಳ್ಳುತ್ತದೆ? ಅನುಭೋಗಿಯು ಪರಿಮೋಚ್ಚ ತೃಪ್ತಿಯನ್ನು ಹೇಗೆ ಪಡೆಯುತ್ತವೆ?- ಇವು ಅಂಶಲಕ್ಷಿ ಅರ್ಥಶಾಸ್ತ್ರದ ಮುಖ್ಯ ಸಂಗತಿಗಳು.

**ಸಮಗ್ರ ಲಕ್ಷಿ ಅರ್ಥಶಾಸ್ತ್ರ :** ಇದರಲ್ಲಿ ಆರ್ಥಿಕತೆಯ ಬಿಡಿ ಭಾಗಗಳಿಗೆ ಪ್ರತಿಯಾಗಿ ಸಮಗ್ರ ಆರ್ಥಿಕತೆಗೆ ಸಂಬಂಧಿಸಿದ ಚಲಗಳಾದ ರಾಷ್ಟ್ರೀಯ ಆದಾಯ, ಬೆಲೆಮಟ್ಟ, ಬಂಡವಾಳ ಹೂಡಿಕೆ ಮುಂತಾದ ಸಂಗತಿಗಳನ್ನು ಅಭ್ಯಸಿಸಲಾಗುತ್ತದೆ.

ಅಂಶಲಕ್ಷಿ ಮತ್ತು ಸಮಗ್ರಲಕ್ಷಿ - ಇವೆರಡೂ ಪರಸ್ಪರ ಪೂರಕವಾದ ವಿಶ್ಲೇಷಣಾ ಪ್ರಭೇದಗಳೇ ವಿನಾ ಪೈಪೋಟಿ ನಡೆಸುವ ವಿಧಾನಗಳಲ್ಲ.

ಅಂಶಲಕ್ಷಿಯಲ್ಲಿ ಮೂರು ಭಾಗಗಳಿವೆ.

೧. ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ
೨. ತುಲಾನಾತ್ಮಕ ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ
೩. ಕ್ರಿಯಾತ್ಮಕ ಅಂಶಲಕ್ಷಿ ವಿಶ್ಲೇಷಣೆ

ಸಮಗ್ರಲಕ್ಷಿಯಲ್ಲಿ ಮೂರು ವಿಧಗಳಿವೆ.

೧. ಸಮಷ್ಠಿತಿ ಸಮಗ್ರಲಕ್ಷಿ ವಿಶ್ಲೇಷಣೆ.

೨. ತುಲನಾತ್ಮಕ ಸಮಷ್ಠಿತಿ ಸಮಗ್ರಲಕ್ಷಿ ವಿಶ್ಲೇಷಣೆ.

೩. ಕ್ರಿಯಾತ್ಮಕ ಸಮಗ್ರಲಕ್ಷಿ ವಿಶ್ಲೇಷಣೆ.

ಸಮಗ್ರಲಕ್ಷಿ ವಿಶ್ಲೇಷಣೆಯೆಂದರೆ ಸಮತೋಲನ ಸ್ಥಿತಿಯ ಅಧ್ಯಯನ. ತುಲನಾತ್ಮಕ ಸಮಷ್ಠಿತಿಯೆಂದರೆ ಎರಡು ಸಮತೋಲನ ಸ್ಥಿತಿಗಳ ಅಧ್ಯಯನ.

ಕ್ರಿಯಾತ್ಮಕ ವಿಶ್ಲೇಷಣೆಯೆಂದರೆ ಎರಡು ಸಮತೋಲನಗಳ ನಡುವೆ ಉಂಟಾಗಿರುವ ಬದಲಾವಣೆಗಳ ಅಧ್ಯಯನ.

**ನಿಗಮನ ಪದ್ಧತಿ :** ಇದೊಂದು ವಿಶ್ಲೇಷಣಾ ಪದ್ಧತಿ. ನಿರ್ದಿಷ್ಟದಿಂದ ಸಮಷ್ಟಿ ಕಡೆಗೆ ಸಾಗುವ ವಿಧಾನ. ನಿರ್ದಿಷ್ಟ ಅನುಭವಗಳನ್ನು ಸಾಮಾನ್ಯೀಕರಿಸುವ ವಿಧಾನ ಇದಾಗಿದೆ.

**ಅನುಗಮನ ವಿಧಾನ :** ಸಮಷ್ಟಿಯಿಂದ ನಿರ್ದಿಷ್ಟದ ಕಡೆ ಹರಿಯುವ ವಿಧಾನ ಇದಾಗಿದೆ. ಸಮಷ್ಟಿ ಅನುಭವವನ್ನು ನಿರ್ದಿಷ್ಟತೆಗೆ ಅನ್ವಯಿಸುವ ವಿಧಾನ ಇದಾಗಿದೆ.

## ೧.೬. ಪಾರಿಭಾಷಿಕ ಕೋಶ

ವ್ಯಾಖ್ಯೆ - Definition = ಜ್ಞಾನಶಾಖೆಯನ್ನು ಕುರಿತಂತೆ ಸಂಕ್ಷಿಪ್ತವಾಗಿ ಅದರ ವಿಷಯವಸ್ತು ಯಾವುದು ಎಂಬುದನ್ನು ಖಚಿತವಾಗಿ ವಿವರಿಸುವ ಕ್ರಮ.

ಆಸ್ತಿ-ಭೌತಿಕ ಸಂಪನ್ಮೂಲಗಳು - Physical Resources = ಪ್ರಕೃತಿದತ್ತವಾದ ಭೌತಿಕ ಸ್ವರೂಪದ ಸಾಧನ ಸಾಮಗ್ರಿಗಳು.

ಮಾನವ ಸಂಪನ್ಮೂಲ - Human Resources = ಶಾರೀರಿಕ ಶ್ರಮ, ಕುಶಲತೆ, ಜ್ಞಾನ, ಅರಿವು ಮುಂತಾದ ಗುಣಗಳನ್ನು ಹೊಂದಿರುವ ಜನಸ್ತೋಮ.

ಸಂಪತ್ತು - Wealth = ಸಂಪತ್ತು ಎಂದರೆ ಹಣವಲ್ಲ. ಒಂದು ದೇಶದಲ್ಲಿ ಉತ್ಪಾದಿಸಿದ ಸರಕು ಮತ್ತು ಸೇವೆಗಳ ಮೊತ್ತ.

ಕ್ಷೇಮಾಭ್ಯುದಯ/ಯೋಗಕ್ಷೇಮ/ಕಲ್ಯಾಣ - Welfare = ಇದೊಂದು ಅಮೂರ್ತ ಅನುಭವ. ಆರ್ಥಿಕ ಸರಕು ಮತ್ತು ಸೇವೆಗಳನ್ನು ಬಳಸುವುದರಿಂದ ಜನರಿಗೆ ದೊರೆಯುವ ತೃಪ್ತಿ-ಸುಖ-ಸಂತೋಷ.

ವಿರಳತೆ - Scarcity = ಇದೊಂದು ಸಾಪೇಕ್ಷ ಅರ್ಥವಿರುವ ನುಡಿ. ಬೇಡಿಕೆಗೆ ಪ್ರತಿಯಾಗಿ ಪೂರೈಕೆಯಲ್ಲಿನ ಕೊರತೆಯೇ ವಿರಳತೆ. ನಿರಪೇಕ್ಷವಾಗಿ ಸರಕೊಂದರ ಪೂರೈಕೆ ಅಮಿತವಾಗಿರಬಹುದು. ಆದರೆ ಸಾಪೇಕ್ಷವಾಗಿ ಅದರ ಪೂರೈಕೆ ಬೇಡಿಕೆಗೆ ಹೋಲಿಸಿದಾಗ ಕಡಿಮೆಯಿರಬಹುದು.

ಆರ್ಥಿಕ ಬೆಳವಣಿಗೆ - Economic growth = ಆರ್ಥಿಕತೆಯ ಸಂಪತ್ತಿನಲ್ಲಿ - ಆದಾಯದಲ್ಲಿ - ಅಂದರೆ ಸರಕು ಮತ್ತು ಸೇವೆಗಳ ಪರಿಮಾಣದಲ್ಲಿ ಉಂಟಾಗುವ ವಾರ್ಷಿಕ ಏರಿಕೆ.

ಆರ್ಥಿಕತೆ - Economy = ಒಂದು ದೇಶದ/ಪ್ರದೇಶದ ಉತ್ಪಾದನಾ ನಿರ್ವಹಣೆಯ ಸಾಂಸ್ಥಿಕ ವ್ಯವಸ್ಥೆಯೇ ಆರ್ಥಿಕತೆ. ಕರ್ನಾಟಕ ಆರ್ಥಿಕತೆಯೆಂದರೆ ಕರ್ನಾಟಕದಲ್ಲಿನ ಉತ್ಪಾದನಾ ವ್ಯವಸ್ಥೆಯ ನಿರ್ವಹಣೆಯ ಸ್ವರೂಪ.

ಉತ್ಪಾದನೆ - Production = ನಾಲ್ಕು ಉತ್ಪಾದನಾಂಗಗಳ ಸಂಯುಕ್ತ ಪ್ರಯತ್ನದ ಫಲವಾಗಿ ಉಂಟಾಗುವ ಸರಕು ಸೇವೆಗಳ ಪರಿಮಾಣ.

ಅನುಭೋಗ/ಉಪಭೋಗ - Consumption = ಬಯಕೆಗಳ ತೃಪ್ತಿಗಾಗಿ ಸರಕುಸೇವೆಗಳ ಬಳಕೆ.

ವಿತರಣೆ/ಹಂಚಿಕೆ - Distribution = ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ಆಯಾ ಉತ್ಪಾದನಾಂಗಗಳ ಪಾಲಿಗನುಗುಣವಾಗಿ ಹಂಚುವುದು. ನಾಲ್ಕು ಉತ್ಪಾದನಾಂಗ ಗಳಿಗೆ ಆಯಾ ಉತ್ಪಾದನಾಂಗಗಳ ಪಾಲನ್ನು ಹಂಚಿದ ಮೇಲೆ ಒಟ್ಟು ರಾಷ್ಟ್ರೀಯ ಉತ್ಪನ್ನ ಖಾಲಿಯಾಗಿಬಿಡುತ್ತದೆ.

ಉತ್ಪಾದನಾಂಗಗಳು/ಉತ್ಪಾದನಾ ಅವಯವಗಳು - Factor of Production = ಸರಕು ಮತ್ತು ಸೇವೆಗಳ ಉತ್ಪಾದನೆಗೆ ನಾಲ್ಕು ಸಾಮಗ್ರಿಗಳು ಬೇಕು. ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆ. ಈ ನಾಲ್ಕು ಅಂಶಗಳನ್ನು ಉತ್ಪಾದನಾಂಗಗಳೆಂದು ಕರೆಯುತ್ತಾರೆ.

ಅಂಶಲಕ್ಷಿ ಅರ್ಥಶಾಸ್ತ್ರ - Micro Economics = ಆರ್ಥಿಕತೆಯ ಬಿಡಿ ಭಾಗಗಳನ್ನು ಪ್ರತ್ಯೇಕವಾಗಿ ಅಭ್ಯಸಿಸುವ ವಿಧಾನ. ಒಂದು ವಸ್ತುವಿನ ಬೆಲೆ, ಒಂದು ಉದ್ದಿಮೆಯ ಸಮತೋಲನ, ಅನುಭೋಗಿಯ ವರ್ತನೆ ಮುಂತಾದವು ಇದಕ್ಕೆ ಉದಾಹರಣೆಗಳು.

ಸಮಗ್ರ ಲಕ್ಷಿ ಅರ್ಥಶಾಸ್ತ್ರ - Macro Economics = ಆರ್ಥಿಕತೆಗೆ ಅನ್ವಯವಾಗುವ ರಾಷ್ಟ್ರೀಯ ಆದಾಯ. ಬೆಲೆಗಳ ಮಟ್ಟ, ಬಂಡವಾಳ ಹೂಡಿಕೆ ಮುಂತಾದವುಗಳ ಅಧ್ಯಯನ ವಿಧಾನವೇ ಸಮಗ್ರ ಲಕ್ಷಿ ಅರ್ಥಶಾಸ್ತ್ರ.

ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣೆ - Micro Static Analysis

ಕ್ರಿಯಾತ್ಮಕ ಅಂಶಲಕ್ಷಿ ವಿಶ್ಲೇಷಣೆ - Micro Camparative Static Analysis

ತುಲನಾತ್ಮಕ ಅಂಶಲಕ್ಷಿ ವಿಶ್ಲೇಷಣೆ - Micro Dynamics

ನಿಗಮನ ಪದ್ಧತಿ - Deductive method

ಅನುಗಮನ ಪದ್ಧತಿ - Inductive method

ಸ್ವಾಭಾವಿಕ ಸಂಖ್ಯೆ - Natural Numbers

ಪೂರ್ಣ ಸಂಖ್ಯೆ ಪೂರ್ಣಾಂಶ - Integers

ಭಿನ್ನರಾಶಿ - Fractions

ಬಿಂಬಕ - Function

ಬಿಂಬಿಕ ಸಂಬಂಧ - Functional Relations

ಸ್ಥಿರ ಸಂಖ್ಯೆ - Constant

ಚಲ - Variable

ಸ್ಥಿರಚಲಾಂಕ - parameter

ಅವಲಂಬಿ ಚಲ - Dependent variable

ಸ್ವತಂತ್ರ ಚಲ - Independent Varible

ಆರೋಹಣ ಬಿಂಬಿಕ - Increacing function

ಅವರೋಹಣ ಬಿಂಬಿಕ - Decreasing Function

ವ್ಯಕ್ತ ಬಿಂಬಕ - Explicit Function

ಅವ್ಯಕ್ತ ಬಿಂಬಕ - Implicit Function

ನಿತ್ಯ ಸಮೀಕರಣ - Identity

ಸಮೀಕರಣ - Equation
ಸರಳರೇಖೆ ಬಿಂಬಕ - Linear Function
ವಕ್ರರೇಖೆ ಬಿಂಬಕ - Non Linear Function
ಬೇಡಿಕೆ ಬಿಂಬಕ - Demand Function
ಪೂರೈಕೆ ಬಿಂಬಕ - Supply Function
ಪರವಲಯ - Para-bola

## ೧.೭. ಪ್ರಶ್ನೆಗಳು

**I. ಒಂದು ವಾಕ್ಯದಲ್ಲಿ ಉತ್ತರಿಸಿ. (೧ ಅಂಕ)**

೧. ಆಸ್ತಿ ಸಂಪನ್ಮೂಲಗಳೆಂದರೇನು?

೨. ಮಾನವ ಸಂಪನ್ಮೂಲವೆಂದರೇನು?

೩. ವಿರಳತೆಯನ್ನು ಅರ್ಥಶಾಸ್ತ್ರದಲ್ಲಿ ನಿರಂಕುಶ ಅರ್ಥದಲ್ಲಿ ಬಳಸಲಾಗಿದೆಯೋ ಅಥವಾ ಸಾಪೇಕ್ಷ ನೆಲೆಯಲ್ಲಿ ಬಳಸಲಾಗಿದೆಯೋ?

೪. ಆಡಂಸ್ಮಿತ್‌ನ ಕೃತಿಯ ಶೀರ್ಷಿಕೆಯನ್ನು ಬರೆಯಿರಿ.

೫. ಎ.ಸಿ.ಪಿಗೋ ಅರ್ಥಶಾಸ್ತ್ರಕ್ಕೆ ನೀಡಿದ ಕ್ಷೇಮಾಭ್ಯುದಯ ವ್ಯಾಖ್ಯೆ ನೀಡಿ.

೬. ಲಿಯೋನಲ್ ರಾಬಿನ್ಸ್‌ರವರು ಅರ್ಥಶಾಸ್ತ್ರದ ವಿರಳತೆ ವ್ಯಾಖ್ಯೆಯನ್ನು ತಮ್ಮ ಯಾವ ಗ್ರಂಥದಲ್ಲಿ ನೀಡಿದ್ದಾರೆ.

೭. ಉಳಿದೆಲ್ಲ ವ್ಯಾಖ್ಯೆಗಳಿಗಿಂತ ಸಾಮುಯಲ್‌ಸನ್‌ರವರ ವ್ಯಾಖ್ಯೆಯು ಉತ್ತಮವಾಗಿರುವುದಕ್ಕೆ ಒಂದು ಕಾರಣ ನೀಡಿ.

೮. ಅಂಶಲಕ್ಷಿ ಅರ್ಥಶಾಸ್ತ್ರವೆಂದರೇನು?

೯. ಸಮಗ್ರಲಕ್ಷಿ ಅರ್ಥಶಾಸ್ತ್ರವನ್ನು ಅಭಿವೃದ್ಧಿಪಡಿಸಿದ ಮುಖ್ಯ ಅರ್ಥಶಾಸ್ತ್ರಜ್ಞ ಯಾರು?

೧೦. ನಿರ್ದಿಷ್ಟ ಸಂಗತಿಗಳಿಂದ ಸಮಷ್ಟಿ ಸಂಗತಿಗಳಿಗೆ ಹರಿಯುವ ವಿಶ್ಲೇಷಣಾ ವಿಧಾನದ ಹೆಸರೇನು?

೧೧. ಸ್ವಾಭಾವಿಕ ಸಂಖ್ಯಾಗಣದಲ್ಲಿ ಶೂನ್ಯವು ಒಂದು ಅಂಕಿಯಾಗಿ ಸೇರುತ್ತದೆಯೆ?

೧೨. ಯಾವುದೇ ಎರಡು ಭಾಗಲಬ್ಧ ಸಂಖ್ಯೆಗಳ ನಡುವೆ ಎಷ್ಟು ಭಾಗಲಬ್ಧ ಸಂಖ್ಯೆಗಳಿರುತ್ತವೆ.

**II. ಪ್ರತಿಯೊಂದಕ್ಕೆ ೪ ವಾಕ್ಯಗಳಲ್ಲಿ ಉತ್ತರಿಸಿರಿ. (೨ ಅಂಕಗಳು)**

೧. ಆರ್ಥಿಕತೆಯ ಯಾವುದಾದರೂ ಮೂರು ಸಮಸ್ಯೆಗಳನ್ನು ಬರೆಯಿರಿ.

೨. ಆಡಂಸ್ಮಿತ್‌ನ ಅರ್ಥಶಾಸ್ತ್ರದ ವ್ಯಾಖ್ಯೆಯನ್ನು ಟೀಕಿಸಿದ ತತ್ವಶಾಸ್ತ್ರಜ್ಞರು ಯಾರು? ಅವರ ಟೀಕೆಯೇನು?

೩. $Y = X^3 + X^2 + X + 1$. ಈ ಸಮೀಕರಣದಲ್ಲಿ ‘Y’ ಒಟ್ಟು ವೆಚ್ಚವನ್ನು ಮತ್ತು ‘X’ ಉತ್ಪಾದನಾವಸ್ತುಗಳ ಪ್ರಮಾಣವನ್ನು ಸೂಚಿಸುತ್ತವೆ. ಈ ಸಮೀಕರಣದಲ್ಲಿ ‘X’ ನ ಮೌಲ್ಯ ೫ ಆಗಿದ್ದರೆ ಒಟ್ಟು ವೆಚ್ಚವನ್ನು ಕಂಡುಹಿಡಿಯಿರಿ.

೪. ಅಂಶಲಕ್ಷಿ ಹಾಗೂ ಸಮಗ್ರಲಕ್ಷಿ ಅರ್ಥಶಾಸ್ತ್ರಗಳಿಗೆ ಸಂಬಂಧಿಸಿದಂತೆ ತಲಾ ಎರಡೆರಡು ಉದಾಹರಣೆ ನೀಡಿ.

೫. ಕ್ಷೇಮಾಭ್ಯುದಯ ವ್ಯಾಖ್ಯೆಯ ಟೀಕೆಗಳನ್ನು ಬರೆಯಿರಿ.

೬. ಅನುಗಮನ ಪದ್ಧತಿಯನ್ನು ವಿವರಿಸಿ.

III. ಪ್ರತಿಯೊಂದಕ್ಕೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ. (೫ ಅಂಕಗಳು)

೧. ರಾಬಿನ್ಸ್‌ನ ಅರ್ಥಶಾಸ್ತ್ರ ವ್ಯಾಖ್ಯೆಯ ವಿಶಿಷ್ಟತೆಗಳನ್ನು ವಿವರಿಸಿ.

೨. ಸಮಸ್ಥಿತಿ ಅಂಶಲಕ್ಷಿ ವಿಶ್ಲೇಷಣಾ ವಿಧಾನವನ್ನು ವಿವರಿಸಿ.

೩. ಕ್ರಿಯಾತ್ಮಕ ಸಮಗ್ರಲಕ್ಷಿ ವಿಶ್ಲೇಷಣಾ ವಿಧಾನವನ್ನು ವಿವರಿಸಿ.

೪. ಏನನ್ನು ಉತ್ಪಾದಿಸಬೇಕು ಎಂಬ ಸಮಸ್ಯೆಯನ್ನು ವಿವಿಧ ಅರ್ಥವ್ಯವಸ್ಥೆಗಳಲ್ಲಿ ಬಗೆಹರಿಸಿಕೊಳ್ಳುವ ಪರಿಯನ್ನು ವಿವರಿಸಿ.

೫. R = 5x+ 15. ಈ ಸಮೀಕರಣದಲ್ಲಿ 'R' ಒಟ್ಟು ಆದಾಯವನ್ನು ಮತ್ತು 'X' ಮಾರಾಟದ ಪ್ರಮಾಣವನ್ನು ಸೂಚಿಸುತ್ತವೆ. ಮಾರಾಟದ ಪ್ರಮಾಣ ೫ ಆಗಿರುವಾಗ ಒಟ್ಟು ಆದಾಯ ಮತ್ತು ಸರಾಸರಿ ಆದಾಯಗಳನ್ನು ಕಂಡುಹಿಡಿಯಿರಿ.

IV. ಪ್ರತಿಯೊಂದಕ್ಕೆ ೪೦ ವಾಕ್ಯಗಳಲ್ಲಿ ಉತ್ತರಿಸಿ. (೧೦ ಅಂಕಗಳು)

೧. ರಾಬಿನ್ಸ್‌ರ ಅರ್ಥಶಾಸ್ತ್ರದ ವ್ಯಾಖ್ಯೆಯನ್ನು ವಿಮರ್ಶಾತ್ಮಕವಾಗಿ ಚರ್ಚಿಸಿರಿ.

೨. ಅಂಶಲಕ್ಷಿ ಅರ್ಥಶಾಸ್ತ್ರವೆಂದರೇನು? ಅಂಶಲಕ್ಷಿ ಅರ್ಥಶಾಸ್ತ್ರದ ಮೂರು ವಿಧಾನಗಳನ್ನು ವಿವರಿಸಿ.

೩. ಸಮಗ್ರ ಲಕ್ಷಿ ಅರ್ಥಶಾಸ್ತ್ರವೆಂದರೇನು? ಸಮಗ್ರಲಕ್ಷಿ ಅರ್ಥಶಾಸ್ತ್ರದ ಮೂರು ವಿಧಗಳನ್ನು ವಿವರಿಸಿ.

೪. ಮಾರ್ಷಲ್ ಮತ್ತು ರಾಬಿನ್ಸ್‌ರವರ ವ್ಯಾಖ್ಯೆಗಳ ನಡುವಣ ವ್ಯತ್ಯಾಸಗಳನ್ನು ಗುರುತಿಸಿ. ಇವೆರಡರಲ್ಲಿ ಯಾವುದು ಉತ್ತಮ ಚರ್ಚಿಸಿ.

೫. ಆರ್ಥಿಕತೆಯ ಸಾಮಾನ್ಯ ಆರ್ಥಿಕ ಸಮಸ್ಯೆಗಳನ್ನು ವಿವರಿಸಿ.

# ಅಧ್ಯಾಯ ೨

# ಅನುಭೋಗ

## ೨.೧. ಮಾನವನ ಬಯಕೆಗಳು

ಮಾನವನ ಬಯಕೆಗಳು ಅಪಾರ. ಬಯಕೆಗಳೆಂದರೆ ಯಾವುದೇ ವಸ್ತುವನ್ನು ಅನುಭವಿಸುವ ಅಭಿಪ್ಸೆ. ಇದು ಮಾನವನಲ್ಲಿ ಅಪಾರವಾದುದು ಮತ್ತು ಅಪರಿಮಿತ ವಾದುದು. ಹಾಗೆಯೇ ಅನುಭವಿಸಿದ ನಂತರ ಬಯಕೆಗಳು ಸ್ಥಗಿತವಾಗುವುದಿಲ್ಲ. ಅದು ಮಾನವನಲ್ಲಿ ನಿರಂತರವಾಗಿರುತ್ತದೆ. ಕೆಲವು ಬಯಕೆಗಳು ಅವಶ್ಯಕವಾಗಿರುತ್ತದೆ. ಇನ್ನೂ ಕೆಲವು ಸುಖದಾಯಕವಾಗಿರುತ್ತದೆ. ಇನ್ನು ಕೆಲವು ಸಾಮಾಜಿಕವಾಗಿ ಅವಶ್ಯಕ ಮತ್ತು ಘನತೆಯ ಜೀವನಶೈಲಿಯಿಂದ ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಮಾನವನ ಬಯಕೆಗಳು ವೈವಿಧ್ಯಮಯ. ವ್ಯಕ್ತಿ ಇನ್ನೊಬ್ಬನಿಂದ ಹೇಗೆ ವಿಭಿನ್ನನಾಗಿರುತ್ತಾನೋ ಹಾಗೇ ಬಯಕೆ ಗಳು ಒಬ್ಬನಿಂದ ಇನ್ನೊಬ್ಬನಿಗೆ ವಿಭಿನ್ನವಾಗಿರುತ್ತದೆ. ಉದಾ. ಆಹಾರ, ಬಟ್ಟೆ, ವಸತಿ, ಮೋಜು, ಪೀಠೋಪಕರಣ, ಟಿ.ವಿ., ರೇಡಿಯೋ ಇತ್ಯಾದಿ ಇಂತಹ ಸಾವಿರಾರು ವಸ್ತು ಗಳನ್ನು ಪಡೆಯುವುದು, ಅನುಭವಿಸುವುದು ಬಯಕೆಯಾಗಿದೆ.

ಮಾನವನು ಇಷ್ಟಪಡುವ, ಬೇಕೆಂದು ಇಚ್ಛಿಸುವ ಎಲ್ಲ ಅಂಶಗಳನ್ನು ಬಯಕೆಗಳು ಎಂದು ಕರೆಯುತ್ತೇವೆ. ಬಯಕೆಯು ಹಲವಾರು ಕಾರಣಗಳಿಂದ ಹುಟ್ಟಿಕೊಳ್ಳುತ್ತದೆ. ಅವುಗಳೆಂದರೆ

೧. **ಮೂಲಭೂತ ಸೌಕರ್ಯವನ್ನು ಪಡೆಯುವ ಬಯಕೆ :** ಪ್ರತಿಯೊಬ್ಬ ಮನುಷ್ಯನಿಗೆ ಬದುಕಲು ಮೂಲಭೂತ ಸರಕುಗಳು ಬೇಕಾಗುತ್ತವೆ. ಅವು ನೈಸರ್ಗಿಕವಾಗಿರುತ್ತದೆ. ಉದಾ. ಹಸಿವು, ನೀರಡಿಕೆ, ನಿದ್ರೆ ಇತ್ಯಾದಿ. ಇವುಗಳಿಗಾಗಿ ಆಹಾರ, ವಸತಿ, ಬಟ್ಟೆಗಳನ್ನು ಪಡೆಯುವ ಬಯಕೆಗಳುಂಟಾಗುತ್ತದೆ.

೨. **ಸುಖದಾಯಕ ಜೀವನ ನಡೆಸುವ ಬಯಕೆ :** ಬರಿ ಅಗತ್ಯ ವಸ್ತುಗಳಿಂದಷ್ಟರಲ್ಲೇ ಮಾನವ ತೃಪ್ತನಾಗುವುದಿಲ್ಲ. ಅವನಿಗೆ ಹಲವಾರು ಸುಖ, ವಿಲಾಸೀ ಜೀವನದ ಬಯಕೆ ಯಿರುತ್ತದೆ. ಆದ್ದರಿಂದ ಅಂತಹ ಆಸೆಗಳು ಹುಟ್ಟುತ್ತವೆ. ಉದಾ. ಟಿ.ವಿ. ಕಾರು, ರುಚಿ ಯಾದ ಊಟ, ಉತ್ತಮ ಬಟ್ಟೆ ಇತ್ಯಾದಿ.

೩. **ಘನತೆ, ಉತ್ತಮ ಜೀವನಮಟ್ಟ ಇಟ್ಟುಕೊಳ್ಳುವ ಬಯಕೆ :** ಮನುಷ್ಯ ನಾಗರಿಕನಾದಂತೆ ಅವನ ಬಯಕೆಗಳು ಬದಲಾಗುತ್ತದೆ. ಸಮಾಜದಲ್ಲಿ ತನ್ನ ಸ್ಥಾನಮಾನ ಕಾಪಾಡಿಕೊಳ್ಳಲು ಪ್ರತಿಷ್ಠೆ, ಘನತೆ ಹೆಚ್ಚಿಸುವಂತಹ ವಸ್ತುಗಳನ್ನು ಪಡೆಯುವ ಬಯಕೆಗಳಾಗುತ್ತದೆ. ಉದಾ. ಆಭರಣಗಳು, ದುಬಾರಿ ಬೆಲೆಯ ಉಡುಗೆಗಳು, ಇತ್ಯಾದಿ.

೪. **ಜೀವನ ಭದ್ರತೆಗೆ - ಕುಟುಂಬದ ಮೇಲಿನ ಪ್ರೀತಿಯಿಂದಾಗಿ :** ತನ್ನ ಕುಟುಂಬ ವರ್ಗದವರ ಭದ್ರತೆಗೆ, ತನ್ನ ಜೀವನ ಭದ್ರತೆಗೆ ಕುಟುಂಬದ ಮೇಲಿನ ಪ್ರೀತಿಯಿಂದಾಗಿ ಅನೇಕ ಬಯಕೆಗಳು ಹುಟ್ಟಿಕೊಳ್ಳುತ್ತವೆ. ಉದಾ. ಆಸ್ತಿ ಮಾಡುವುದು, ಕಟ್ಟಡಗಳನ್ನು ಕಟ್ಟಿಸುವುದು, ಜೀವವಿಮೆ ಪಾಲಿಸಿ ತೆಗೆಯುವುದು, ಪಿಸ್ತೂಲು ಮುಂತಾದ ಜೀವರಕ್ಷಕ ವಸ್ತುಗಳನ್ನು ಇಟ್ಟುಕೊಳ್ಳುವುದು ಇತ್ಯಾದಿ.

೫. **ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರ್ಯಗಳಿಂದಾಗಿ :** ಮಾನವನು ಸಮಾಜ ಜೀವಿ. ಸಮಾಜದಲ್ಲಿನ ರೂಢಿ, ಸಂಪ್ರದಾಯ ಧರ್ಮ, ಪೂಜೆ, ಹುಟ್ಟು, ಸಾವು, ಮದುವೆ, ಮುಂಜಿ, ಮುಂತಾದ ಸಂಪ್ರದಾಯಗಳನ್ನು ನೆರವೇರಿಸಲು ಅನೇಕ ವಸ್ತುಗಳ ಬಯಕೆಗಳು ಹುಟ್ಟಿಕೊಳ್ಳುತ್ತದೆ.

೬. **ತಾಂತ್ರಿಕತೆ, ಶಿಕ್ಷಣ, ಆರ್ಥಿಕ ಬದಲಾವಣೆಗಳಿಂದಾಗಿ :** ಹೊಸ ಹೊಸ ವೈಜ್ಞಾನಿಕ ಸಂಶೋಧನೆಗಳಾದಂತೆ, ತಾಂತ್ರಿಕತೆಯಲ್ಲಿ ಆವಿಷ್ಕಾರವಾದಂತೆ, ಶಿಕ್ಷಣ, ಸಾಕ್ಷರತೆ ವ್ಯಾಪಕವಾದಂತೆ ದೇಶದ, ಪ್ರಪಂಚದ ಆರ್ಥಿಕ ನೀತಿಗಳು, ಸರ್ಕಾರದ ನೀತಿ ಬದಲಾದಂತೆಲ್ಲ ಅನೇಕ ಹೊಸ ಹೊಸ ಬಯಕೆಗಳು ಹುಟ್ಟಿಕೊಳ್ಳುತ್ತವೆ.

**ಬಯಕೆಗಳ ಲಕ್ಷಣಗಳು :** ಮಾನವನ ಬಯಕೆಗಳು ಅಪರಿಮಿತ ಮತ್ತು ವೈವಿಧ್ಯಮಯವಾದುದು. ಬಯಕೆಗಳಿಗೆ ಕೆಲವು ಲಕ್ಷಣಗಳಿವೆ. ಅವುಗಳೆಂದರೆ,

೧. **ಬಯಕೆಗಳು ಅಪರಿಮಿತ :** ಮಾನವನು ಬಯಕೆಗಳ ಆಗರ. ಅವನ ಬಯಕೆಗಳಿಗೆ ಮಿತಿಯೇ ಇಲ್ಲ. ಒಂದು ಬಯಕೆ ಪೂರೈಸಿದರೆ ಇನ್ನೊಂದು ಹುಟ್ಟಿಕೊಳ್ಳುತ್ತದೆ. ಒಂದನ್ನು ತೃಪ್ತಿಪಡಿಸಿದರೆ ಇನ್ನೊಂದು ಹಿಂದೆಯೇ ಉದ್ಭವಿಸುತ್ತದೆ. ಅವುಗಳಿಗೆ ಕೊನೆಯೇ ಇಲ್ಲ. ಮಾನವನಲ್ಲಿ ಪ್ರಾಣ ಇರುವವರೆಗೂ ಬಯಕೆಗಳು ಇದ್ದೇ ಇರುತ್ತವೆ.

೨. **ಕೆಲವು ಬಯಕೆಗಳು ಪೂರಕವಾಗಿರತ್ತವೆ :** ಒಂದು ಬಯಕೆಯಿಂದ ತೃಪ್ತಿ ಪಡೆಯಬೇಕೆಂದರೆ ಒಂದೆ ವಸ್ತುವಿನಿಂದ ಸಾಧ್ಯವಿಲ್ಲ. ಅದಕ್ಕೆ ಪೂರಕ ವಸ್ತುಗಳು ಬೇಕಾಗುತ್ತವೆ. ಉದಾ. ಟೀ ಕುಡಿಯುವ ಬಯಕೆಯಾದರೆ ಟೀ ಸೊಪ್ಪಷ್ಟೇ ಸಾಲದು. ಹಾಲು, ಸಕ್ಕರೆ, ನೀರು ಬೇಕಾಗುತ್ತದೆ. ಕಾರು ಮತ್ತು ಪೆಟ್ರೋಲ್, ಪೆನ್ ಮತ್ತು ಇಂಕ್ ಬ್ರೆಡ್ ಮತ್ತು ಬೆಣ್ಣೆ, ಇತ್ಯಾದಿ ಬಯಕೆಗಳ ಪೂರಕತೆಗೆ ಉದಾಹರಣೆಗಳಾಗಿವೆ.

೩. **ಕೆಲವು ಬಯಕೆಗಳು ಪರಸ್ಪರ ಸ್ಪರ್ಧಾತ್ಮಕವಾಗಿರುತ್ತದೆ :** ಬಯಕೆಗಳು ಅಪರಿಮಿತ. ಆದರೆ ಅವುಗಳನ್ನು ಈಡೇರಿಸಲು ಇರುವ ಸಂಪನ್ಮೂಲಗಳು ಮಿತವಾಗಿರುತ್ತದೆ. ಇದರಿಂದಾಗಿ ಮಿತಹಣದಿಂದ ಎಲ್ಲಾ ಬಯಕೆಗಳನ್ನು ಈಡೇರಿಸಲು ಸಾಧ್ಯವಿಲ್ಲ.

ಆದ್ದರಿಂದ ಯಾವುದನ್ನು ಕೊಳ್ಳಬೇಕು ಯಾವುದನ್ನು ಬಿಟ್ಟುಕೊಡಬೇಕು ಎಂದು ನಿರ್ಧರಿಸಬೇಕಾಗುತ್ತದೆ. ಉದಾ. ಒಬ್ಬ ವ್ಯಕ್ತಿಯ ಬಳಿ ರೂ ೫೦ ಇರುತ್ತದೆ. ಅವನ ಬಯಕೆ ಹಲವಾರು. ಸಿನಿಮಾ ನೋಡುವ ಬಯಕೆ, ಪುಸ್ತಕ ಕೊಳ್ಳುವ ಬಯಕೆ, ಚಪ್ಪಲಿ ಕೊಳ್ಳುವ ಬಯಕೆ. ಇದರಿಂದಾಗಿ ಬಯಕೆಗಳನ್ನು ಆದ್ಯತೆಯ ಮೇಲೆ ತೃಪ್ತಿಪಡಿಸಕೊಳ್ಳ ಬೇಕಾಗುತ್ತದೆ.

೪. **ಕೆಲವು ಬಯಕೆಗಳು ಪುನಃ ಪುನಃ ಉದ್ಭವಿಸುತ್ತವೆ:** ಕೆಲವು ಬಯಕೆಗಳನ್ನು ಅನುಭವಿಸಿದ ನಂತರವೂ ಉದ್ಭವಿಸುತ್ತಲೇ ಇರುತ್ತವೆ. ಉದಾ. ಹಸಿವು, ಬಾಯಾರಿಕೆ ಇತ್ಯಾದಿ. ಕೆಲವು ಬಯಕೆಗಳು ಒಮ್ಮೆ ಮಾತ್ರ ಬರುತ್ತವೆ. ಅದು ಮತ್ತೆ ಮತ್ತೆ ಉದ್ಭವಿಸುವುದಿಲ್ಲ. ಉದಾ. ಟಿ.ವಿ. ಸ್ವಂತ ಮನೆ ಕಟ್ಟಿಸುವುದು ಇತ್ಯಾದಿ.

೫. **ಒಂದೇ ಬಯಕೆಯನ್ನು ವಿವಿಧ ವಸ್ತುಗಳಿಂದ ತೃಪ್ತಿಪಡಿಸಬಹುದು :** ಕೆಲವು ಬಯಕೆಗಳಿಗೆ ಬದಲಿ ವಸ್ತುಗಳಿರುತ್ತವೆ. ಹಲವಾರು ಮಾರ್ಗಗಳಿಂದ ಅವುಗಳನ್ನು ತೃಪ್ತಿಪಡಿಸಬಹುದು. ಉದಾ. ಬಾಯಾರಿದಾಗ ನೀರನ್ನು ಕುಡಿಯಬಹುದು ಅಥವಾ ಪಾನಕದಿಂದಲೂ ಬಯಕೆಯನ್ನು ತೃಪ್ತಿಪಡಿಸಬಹುದು.

೬. **ಬಯಕೆಗಳು ಚಟಗಳಾಗಿ ಪರಿವರ್ತಿತವಾಗುತ್ತವೆ :** ಕೆಲವು ಬಯಕೆಗಳನ್ನು ನಿರಂತರವಾಗಿ ತೃಪ್ತಿಪಡಿಸುತ್ತಿದ್ದರೆ ಅವು ಚಟವಾಗಿ ಪರಿವರ್ತನೆಯಾಗಬಹುದು. ಉದಾ. ಸಿಗರೇಟು, ಕಾಫಿ ಸೇವನೆ, ಮದ್ಯಪಾನ, ಜರ್ದಾ, ಪಾನ್‌ಪರಾಗ್ ಜಗಿಯುವುದು ಇತ್ಯಾದಿ.

೭. **ಬಯಕೆಗಳು ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ, ಕಾಲದಿಂದ ಕಾಲಕ್ಕೆ ಬದಲಾಗುತ್ತದೆ :** ಒಬ್ಬ ವ್ಯಕ್ತಿಗೆ ಬೇಕಾದ ಬಯಕೆ ಇನ್ನೊಬ್ಬನಿಗೆ ಬೇಡವಾಗಿರಬಹುದು. ಉಷ್ಣ ಪ್ರದೇಶಗಳಲ್ಲಿರುವ ಜನರ ಬಯಕೆಗಳೇ ಬೇರೆ ಮತ್ತು ಶೀತ ಪ್ರದೇಶದಲ್ಲಿರುವ ಜನರ ಬಯಕೆಗಳೇ ಬೇರೆ.

೮. **ಯಾವುದೇ ಒಂದು ಬಯಕೆಯನ್ನು ಪೂರ್ಣವಾಗಿ ತೃಪ್ತಿಪಡಿಸಬಹುದು :** ಎಲ್ಲಾ ಬಯಕೆಗಳನ್ನು ತೃಪ್ತಿಪಡಿಸಲು ಸಾಧ್ಯವಿಲ್ಲ. ಏಕೆಂದರೆ ಎಲ್ಲಾ ಬಯಕೆಗಳನ್ನು ಈಡೇರಿಸಿಕೊಳ್ಳುವ ಶಕ್ತಿ ಮಾರ್ಗ ಮಿತವಾಗಿರುತ್ತದೆ.

೯. **ಕಾರಣ ವ್ಯತ್ಯಾಸ :** ಕೆಲವು ಬಯಕೆಗಳು ಜಾಹಿರಾತು, ಶೋಧನೆ, ಆವಿಷ್ಕಾರದಿಂದ ಪ್ರೇರಿತವಾಗಿರುತ್ತದೆ. ಉದಾ. ಸೌಂದರ್ಯವರ್ಧಕಗಳು, ವಿದ್ಯುತ್ ಸಲಕರಣೆಗಳು.

೧೦. **ತೀವ್ರತೆಯಲ್ಲಿ ವ್ಯತ್ಯಾಸ :** ಬಯಕೆಗಳ ತೀವ್ರತೆಯಲ್ಲಿ ವ್ಯತ್ಯಾಸವಿರುತ್ತದೆ. ಕೆಲವು ಬಯಕೆಗಳು ಹೆಚ್ಚು ತೀವ್ರವಾಗಿರುತ್ತವೆ. ಉದಾ. ಆಹಾರ, ನೀರು. ಕೆಲವು ಬಯಕೆಗಳ ತೀವ್ರತೆ ಕಡಿಮೆಯಾಗಿರುತ್ತದೆ. ಉದಾ. ಪಿಠೋಪಕರಣಗಳು.

ಹೀಗೆ ಬಯಕೆಗಳು ಅನೇಕ ಲಕ್ಷಣಗಳನ್ನು ಹೊಂದಿವೆ. ಮಾನವನ ಬಯಕೆಗಳು ಆರ್ಥಿಕ ಚಟುವಟಿಕೆಗಳ ಬಿಂದುವಾಗಿದೆ. ಅಪರಿಮಿತ ಬಯಕೆಗಳಿಗೆ ಮಿತ ಸಂಪನ್ಮೂಲ

ಗಳನ್ನು ಹೇಗೆ ಬಳಸಬೇಕು ಎನ್ನುವುದೇ ಅರ್ಥಶಾಸ್ತ್ರದ ಮೂಲಭೂತ ಸಮಸ್ಯೆಯಾಗಿದೆ. ಇದನ್ನು ಬಗೆಹರಿಸುವ ದೃಷ್ಟಿಯಿಂದ ಅರ್ಥಶಾಸ್ತ್ರದಲ್ಲಿ ಅನೇಕ ವಿಶ್ಲೇಷಣೆಗಳು-ಸಿದ್ಧಾಂತಗಳು ರಚಿತವಾಗಿದೆ. ಅನೇಕ ಅರ್ಥಶಾಸ್ತ್ರಜ್ಞರು ಈ ಅಧ್ಯಯನಕ್ಕೆ ಮಹಾನ್ ಕೊಡುಗೆಗಳನ್ನು ತಮ್ಮ ಸಿದ್ಧಾಂತಗಳ ಮೂಲಕ ನೀಡಿದ್ದಾರೆ.

## ಬಯಕೆಗಳ ವರ್ಗೀಕರಣ

ಬಯಕೆಗಳ ಅಗತ್ಯ, ಉಪಯೋಗ, ಲಕ್ಷಣಗಳನ್ನಾಧರಿಸಿ ಅವುಗಳನ್ನು ಎರಡು ವಿಧವಾಗಿ ವರ್ಗೀಕರಿಸಬಹುದು.

೧. ಪ್ರಾಥಮಿಕ ಅಥವಾ ಮೂಲ ಬಯಕೆಗಳು

೨. ಸಾಂಸ್ಕೃತಿಕ ಅಥವಾ ಹಿತದಾಯಕ ಬಯಕೆಗಳು

ಮೊದಲನೆಯ ವರ್ಗದಲ್ಲಿ ಅಗತ್ಯ ವಸ್ತುಗಳನ್ನು ಪಡೆಯುವ ಬಯಕೆಗಳಿರುತ್ತದೆ. ಎರಡನೆಯ ವರ್ಗದಲ್ಲಿ ವಿಲಾಸದಾಯಕ, ಸುಖ ನೀಡುವ, ಆರಾಮದಾಯಕ ಬಯಕೆಗಳಿರುತ್ತವೆ.




ಸಾಮಾನ್ಯವಾಗಿ ಸರಳೀಕರಣ ದೃಷ್ಟಿಯಿಂದ ಬಯಕೆಗಳನ್ನು ಮೂರು ವಿಧಗಳಾಗಿ ವಿಂಗಡನೆ ಮಾಡಲಾಗಿದೆ. ಅವುಗಳೆಂದರೆ,

೧. **ಅವಶ್ಯಕಗಳು :** ಮಾನವನು ಬದುಕಲು, ಜೀವನ ನಡೆಸಲು ಕೆಲವು ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ಆ ಬಯಕೆಗಳನ್ನು ಈಡೇರಿಸಿಕೊಳ್ಳದಿದ್ದರೆ ಅವನು ಬದುಕಿರಲಾರ. ಉದಾ. ಆಹಾರ, ನೀರು, ಬಟ್ಟೆ. ಇಂತಹ ಬಯಕೆಗಳಿಗೆ ಜೀವನಾವಶ್ಯಕ

ಬಯಕೆಗಳು ಎನ್ನಲಾಗುತ್ತದೆ. ಇದರ ಜೊತೆಗೆ ಉತ್ತಮ ಜೀವನಕ್ಕೆ, ಆರೋಗ್ಯಕ್ಕೆ, ಶಕ್ತಿಗೆ ಇನ್ನು ಕೆಲವು ಅಗತ್ಯ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ಅವನ ಕೆಲಸ ಮಾಡುವ ಸಾಮರ್ಥ್ಯವನ್ನು - ದಕ್ಷತೆಯನ್ನು ಹೆಚ್ಚಿಸುವುದರಿಂದ ಅದನ್ನು ದಕ್ಷತಾವಶ್ಯಕ ಬಯಕೆಗಳೆಂದು ವರ್ಗೀಕರಿಸಲಾಗಿದೆ. ಉದಾ. ಪೌಷ್ಟಿಕಾಂಶವುಳ್ಳ ಆಹಾರ ಪದಾರ್ಥಗಳಾದ ಬೆಣ್ಣೆ, ಹಾಲು, ಮೊಟ್ಟೆ ಇತ್ಯಾದಿ. ಕೆಲವು ವೇಳೆ ಸಾಂಪ್ರದಾಯಿಕ ಕಾರ್ಯ ನೆರವೇರಿಸಲು ಅಗತ್ಯವಾಗಿ ಕೆಲವು ಬಯಕೆಗಳನ್ನು ಈಡೇರಿಸಿಕೊಳ್ಳಬೇಕಾಗುತ್ತದೆ. ಉದಾ. ಹುಟ್ಟು ಸಾವು, ಮದುವೆ, ಹಬ್ಬ ಹರಿದಿನಗಳಲ್ಲಿ ಬಳಸುವ ಸರಕುಗಳು. ಇಂತಹ ಬಯಕೆಯನ್ನು ಸಾಂಪ್ರದಾಯಿಕ ಅತ್ಯಾವಶ್ಯಕ ಬಯಕೆಗಳು ಎಂದು ವರ್ಗೀಕರಿಸಲಾಗಿದೆ.

**೨. ಹಿತದಾಯಕಗಳು :** ಪ್ರತಿಯೊಬ್ಬ ಮಾನವನು ಸುಖ ಜೀವನ ನಡೆಸಲು ಇಚ್ಛೆ ಪಡುತ್ತಾನೆ. ಅಂದರೆ ಅವನು ಅನುಭೋಗಿಸುವ ವಸ್ತುಗಳಿಂದ ದೇಹಕ್ಕೆ-ಮನಸ್ಸಿಗೆ ಸಂತೋಷ ದೊರಕುವಂತಿರಬೇಕು. ಸುಖ ಕೊಡುವಂತಿರಬೇಕು. ಅಂತಹ ಬಯಕೆಗಳಿಗೆ ಹಿತದಾಯಕ ಅಥವಾ ಸುಖದಾಯಕ ಬಯಕೆಗಳು ಎನ್ನಲಾಗುತ್ತದೆ. ಉದಾ. ಉಣ್ಣೆಬಟ್ಟೆಗಳು, ಮಂಚ, ಹಾಸಿಗೆ, ಫ್ಯಾನು, ವಾಷಿಂಗ್ ಮೆಷಿನ್, ಹಣ್ಣು-ಹಂಪಲುಗಳು ಇತ್ಯಾದಿ.

**೩. ವಿಲಾಸಿ ಬಯಕೆಗಳು :** ಶ್ರೀಮಂತರು ತಮ್ಮ ಘನತೆ ಮೆರಯಲು ಈಡೇರಿಸಿಕೊಳ್ಳಬೇಕಾದ ಬಯಕೆಗಳನ್ನು ವಿಲಾಸೀ ಬಯಕೆಗಳು ಎನ್ನಲಾಗುತ್ತದೆ. ಉದಾ. ದೊಡ್ಡ ಬಂಗಲೆ, ಕಾರು ವಜ್ರಾಭರಣಗಳು ಇತ್ಯಾದಿ. ಇವು ಯಾವುದು ಇಲ್ಲದಿದ್ದರೂ ಮಾನವ ಬದುಕಬಲ್ಲ. ಆದರೂ ಹೆಚ್ಚು ಸುಖಕ್ಕೋಸ್ಕರ ಇಂತಹ ಬಯಕೆಗಳಿರುತ್ತವೆ. ವಿಲಾಸಿ ವಸ್ತುಗಳ ಬಯಕೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು. ಕೆಲವು ವಿಲಾಸಿ ವಸ್ತುಗಳ ಅತೀಯಾದ ಬಳಕೆಯಿಂದ - ಸೇವನೆಯಿಂದ ಅಮೃತವೂ ಅತಿಯಾದರೆ ವಿಷವಾಗುವಂತೆ, ದೇಹಕ್ಕೆ, ಆರೋಗ್ಯಕ್ಕೆ ಅಪಾಯಕಾರಿಯಾಗಬಹುದು. ಉದಾ. ಮದ್ಯಪಾನ, ಸಿಗರೇಟು, ಕುದುರೆ ಜುಜೂ ಇತ್ಯಾದಿ. ಇವುಗಳನ್ನು ಅಪಾಯಕಾರಿ ವಿಲಾಸಿ ಬಯಕೆಗಳು ಎನ್ನಲಾಗುತ್ತದೆ.

ಇನ್ನೂ ಕೆಲವು ವಿಲಾಸಿ ವಸ್ತುಗಳು ದುಬಾರಿಯಾಗಿರುತ್ತದೆ. ಹವಾ ನಿಯಂತ್ರಿತ ಮನೆ, ವಜ್ರ ವೈಢೂರ್ಯಗಳು. ವಿದೇಶೀ ಕಾರು ಇತ್ಯಾದಿ. ಇವುಗಳನ್ನು ಅಪಾಯರಹಿತ ವಿಲಾಸಿ ಬಯಕೆಗಳು ಎನ್ನಲಾಗುತ್ತದೆ. ಇನ್ನು ಕೆಲವು ವಸ್ತುಗಳು ಆಪತ್ಕಾಲಕ್ಕೆ, ಕಷ್ಟಕಾಲಕ್ಕೆ ನಿಧಿಯಾಗಿ ಪರಿವರ್ತಿತವಾಗುತ್ತವೆ. ಅವುಗಳನ್ನು ಸಂರಕ್ಷಣೆಯ ವಿಲಾಸಿ ವಸ್ತುಗಳು ಎನ್ನಲಾಗುತ್ತದೆ. ಉದಾ. ತೋಟ ಖರೀದಿಸುವುದು, ವಾಣಿಜ್ಯ ಪತ್ರ, ಶೇರು ಪತ್ರಗಳಲ್ಲಿ ಹಣ ತೊಡಗಿಸುವುದು, ಬಂಗಾರದ ಒಡವೆಗಳು ಇತ್ಯಾದಿ. ಇವುಗಳನ್ನು ಮಾರಾಟ ಮಾಡಿ ಕಷ್ಟ ಪರಿಹರಿಸಿಕೊಳ್ಳಬಹುದಾಗಿದೆ. ಇವು ಘನತೆ ಹೆಚ್ಚಿಸುವುದರ ಜೊತೆಗೆ ಅಪತ್ಕಾಲವಲ್ಲಿ ಅನುಕೂಲಕರವಾಗಿಯೂ ಇರುತ್ತದೆ.

## ೨.೨. ಸರಕುಗಳು ಮತ್ತು ಸೇವೆಗಳು

ಮಾನವನ ತೃಪ್ತಿಗಾಗಿ ಬಳಸುವ ಎಲ್ಲಾ ವಸ್ತುಗಳನ್ನು ಸರಕು ಮತ್ತು ಸೇವೆ ಎಂದು ಕರೆಯಲಾಗುತ್ತದೆ. ತುಷ್ಟಿಗುಣವನ್ನು ಹೊಂದಿದ ಏನನ್ನಾದರೂ ಸರಕು ಎನ್ನಬಹುದು. ಸರಕು ಮತ್ತು ಸೇವೆಗಳನ್ನು ಉತ್ಪಾದಿಸುವುದೆ ಆರ್ಥಿಕ ಚಟುವಟಿಕೆಯ ಮುಖ್ಯ ಕಾರ್ಯವಾಗಿದೆ. ಅವುಗಳ ವಿಶ್ಲೇಷಣೆ, ಅಧ್ಯಯನವು ಅರ್ಥಶಾಸ್ತ್ರದ ಮುಖ್ಯ ವಿಷಯವಾಗಿದೆ. ಪ್ರತಿಯೊಂದು ವಸ್ತುವನ್ನು ತನ್ನ ಬಯಕೆಗಳ ಈಡೇರಿಕೆಗಾಗಿ ಮಾನವ ಬಳಸುತ್ತಾನೆ. ಅದರಲ್ಲಿ ತುಷ್ಟಿಗುಣ ಅಥವಾ ತೃಪ್ತಿಯನ್ನು ನೀಡುವ ಗುಣವಿರುತ್ತದೆ. ಇಂತಹ ತೃಪ್ತಿ ಕೊಡುವ ಎಲ್ಲಾ ಗೋಚರ ಮತ್ತು ಅಗೋಚರ ವಸ್ತುಗಳನ್ನು ಸರಕು ಮತ್ತು ಸೇವೆಗಳು ಎನ್ನಲಾಗುತ್ತದೆ. ಉದಾ. ಗಾಳಿ, ನೀರು ಮನೆ, ಪುಸ್ತಕ, ಬ್ಯಾಂಕಿಂಗ್, ಜೀವವಿಮಾ ಸೇವೆ ಇತ್ಯಾದಿ. ನಿರ್ದಿಷ್ಟ ಬೆಲೆ ನೀಡಿ ಪಡೆಯಬಹುದಾದ ಸರಕುಗಳನ್ನು ಮಾತ್ರ ಆರ್ಥಿಕ ಸರಕುಗಳು ಎಂದು ವಿಶ್ಲೇಷಿಸಲಾಗಿದೆ.

ನಾವು ಬಳಸುವ ಆರ್ಥಿಕ ಸರಕುಗಳನ್ನು ಯಾವ ಉದ್ದೇಶಕ್ಕೆ ಬಳಸಲಾಗುತ್ತದೆ ಎನ್ನುವುದರ ಆಧಾರದ ಮೇಲೆ ಅವುಗಳನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು.

೧. **ಅನುಭೋಗಿ ಸರಕುಗಳು :** ನೇರವಾಗಿ ಬಳಸುವುದಕ್ಕೆ ಲಭ್ಯವಿರುವ ಸರಕುಗಳನ್ನು ಅನುಭೋಗಿ ಸರಕುಗಳು ಎನ್ನಲಾಗುತ್ತದೆ. ಇವು ಅಂತಿಮ ಸರಕುಗಳಾಗಿರುತ್ತವೆ. ಉದಾ. ಉಡುಪು, ಟಿ.ವಿ. ದೂರವಾಣಿ, ಚಪ್ಪಲಿ, ಫಲಹಾರ ಇತ್ಯಾದಿ.

೨. **ಉತ್ಪಾದಕ ಸರಕುಗಳು :** ಅನುಭೋಗಿ ಸರಕುಗಳ ಉತ್ಪಾದನೆಗೆ ಬೇಕಾದ ಸರಕುಗಳು ಉತ್ಪಾದಕ ಸರಕುಗಳು. ಇವುಗಳನ್ನು ಬಂಡವಾಳ ಸರಕುಗಳೆಂದು ಕರೆಯಲಾಗುತ್ತದೆ. ಉದಾ. ಯಂತ್ರಗಳು, ಸಲಕರಣೆಗಳು, ಕಚ್ಚಾ ಪದಾರ್ಥಗಳು ಇತ್ಯಾದಿ. ಏಕೆಂದರೆ ಈ ಸರಕುಗಳಲ್ಲಿ ಬಂಡವಾಳ ಹೂಡಿ ಉತ್ಪಾದನೆ ಕೈಗೊಳ್ಳಬೇಕಾಗುತ್ತದೆ. ಉದಾ. ಹತ್ತಿ ಉತ್ಪಾದಕ ಸರಕಾದರೆ ಬಟ್ಟೆ ಅನುಭೋಗಿ ಸರಕು. ಉಕ್ಕು, ಕಬ್ಬಿಣ, ಕಲ್ಲಿದ್ದಲು ಉತ್ಪಾದಕ ಸರಕುಗಳಾದರೆ ಕಾರು, ಸ್ಕೂಟರ್ ಅನುಭೋಗಿ ಸರಕುಗಳು.

೩. **ದೀರ್ಘ ಬಾಳಿಕೆ ವಸ್ತುಗಳು :** ಕೆಲವು ಸರಕುಗಳನ್ನು ಎಷ್ಟು ಬಾರಿ ಬಳಸಿದರೂ ಅವು ನಶಿಸಿ ಹೋಗುವುದಿಲ್ಲ. ದೀರ್ಘ ಕಾಲದವರೆಗೆ ಅವು ಬಳಕೆಗೆ ಲಭ್ಯವಾಗುತ್ತದೆ. ಇವುಗಳನ್ನು ದೀರ್ಘ ಬಾಳಿಕೆ ಸರಕುಗಳು ಎನ್ನಲಾಗುತ್ತದೆ. ಉದಾ. ಮೇಜು, ಕುರ್ಚಿ, ಸೈಕಲ್, ಪಾತ್ರೆಗಳು ಇತ್ಯಾದಿ.

೪. **ಏಕ ಬಳಕೆ ಅಥವಾ ಅಲ್ಪಾಯುಷಿ ಸರಕುಗಳು :** ಬಳಸಿದ ಬಳಿಕ ಪುನಃ ಬಳಕೆಗೆ ಲಭ್ಯವಿಲ್ಲದ ಸರಕುಗಳನ್ನು ಏಕ ಬಳಕೆ ಅಥವಾ ಅಲ್ಪಾಯುಷಿ ಸರಕು ಎನ್ನಲಾಗುತ್ತದೆ. ಉದಾ. ಹಾಲು, ಹಣ್ಣು, ತರಕಾರಿಗಳು ಇತ್ಯಾದಿ. ಇವುಗಳನ್ನು ದೀರ್ಘಕಾಲದವರೆಗೆ ಸಂಗ್ರಹಿಸಿಟ್ಟುಕೊಳ್ಳಲು ಸಾಧ್ಯವಾಗುವುದಿಲ್ಲ. ಇವುಗಳಲ್ಲಿ ಅನೇಕ ನೇರ ಅನುಭೋಗಿ ಸರಕುಗಳೂ ಇರುತ್ತವೆ.

೫. **ಖಾಸಗಿ ಸರಕುಗಳು :** ಖಾಸಗಿ ವ್ಯಕ್ತಿಗಳಿಗೆ ಲಭ್ಯವಿರುವ ಅವರ ಸ್ವಂತ ಅನುಭೋಗದ ಸರಕುಗಳು ಖಾಸಗಿ ಸರಕುಗಳಾಗಿವೆ. ಉದಾ. ಸ್ವಂತ ಕಾರು, ಸ್ವಂತ ಬಾವಿ, ಇತ್ಯಾದಿ. ಅನುಭೋಗಿ ತಾನು ಮಾತ್ರ ಬಳಸಬಹುದಾದ ಇತರರಿಗೆ ಅದರ ಮೇಲೆ ಒಡೆತನವಿಲ್ಲದ ಎಲ್ಲ ಸರಕುಗಳು ಖಾಸಗಿ ಸರಕುಗಳಾಗಿವೆ.

೬. **ಸಾರ್ವಜನಿಕ ಸರಕುಗಳು :** ಸಾರ್ವಜನಿಕರೆಲ್ಲರೂ ಬಳಸಬಹುದಾದ ಸರಕು ಮತ್ತು ಸೇವೆಗಳಿಗೆ ಸಾರ್ವಜನಿಕ ಸರಕಗಳು ಎನ್ನಲಾಗುತ್ತದೆ. ಆಧುನಿಕ ಸರ್ಕಾರಗಳು ಕಲ್ಯಾಣ ಸರ್ಕಾರಗಳು. ಅವು ಜನ ಹಿತಕ್ಕಾಗಿ ಅನೇಕ ಸರಕು ಮತ್ತು ಸೇವೆಗಳನ್ನು ಪೂರೈಸುತ್ತದೆ. ಅವನ್ನು ಎಲ್ಲಾ ಪ್ರಜೆಗಳು ಬಳಸಬಹುದಾಗಿದೆ. ಅವನ್ನು ಸಾರ್ವಜನಿಕ ಸರಕುಗಳು - ಸೇವೆಗಳು ಎನ್ನಲಾಗುತ್ತದೆ. ಉದಾ. ಸರ್ಕಾರಿ ಆಸ್ಪತ್ರೆಗಳು, ಸರ್ಕಾರಿ ಶಾಲೆಗಳು, ಸಾರ್ವಜನಿಕ ಉದ್ಯಾನವನಗಳು, ಸಾರ್ವಜನಿಕ ಶೌಚಾಲಯಗಳು, ಕೇಂದ್ರ ಗ್ರಂಥಾಯಲಗಳು ಇತ್ಯಾದಿ.

**ಸರಕುಗಳು**

**(ಬಳಕೆಯ ಆಧಾರಕ್ಕೆ ಅನುಗುಣವಾಗಿ)**

| | | |
|---|---|---|
| **ಅನುಭೋಗಿ ಸರಕುಗಳು**<br>ಅಂತಿಮ ಸರಕುಗಳು<br>ಉದಾ. ದೂರವಾಣಿ<br>ರೇಡಿಯೋ, ಟೆಲಿವಿಷನ್<br>ಮೋಟಾರುವಾಹನ | **ದೀರ್ಘ ಬಾಳಿಕೆ ಸರಕುಗಳು**<br>ಉದಾ. ಪೀಠೋಪಕರಣಗಳು,<br>ವಾಹನಗಳು, ಟಿ.ವಿ.<br>ರೇಡಿಯೋ, ಮೊಬೈಲ್<br>ಫೋನುಗಳು ಇತ್ಯಾದಿ | **ಖಾಸಗಿ ಸರಕುಗಳು**<br>ಖಾಸಗಿ ಯಾಜಮಾನ್ಯವನ್ನು<br>ಹೊಂದಿದ ಹಾಗೂ ಸ್ವಂತಕ್ಕೆ<br>ಬಳಕೆಯಾಗುವ ಎಲ್ಲ<br>ಸರಕುಗಳು<br>ಉದಾ. ಖಾಸಗಿ ವಾಹನ<br>ಖಾಸಗಿ ವಸತಿ ಇತ್ಯಾದಿ |
| **ಉತ್ಪಾದಕ ಸರಕುಗಳು**<br>ಕಚ್ಚಾ ಪದಾರ್ಥಗಳು,<br>ಯಂತ್ರಗಳು, ಸಲಕರಣೆಗಳು | **ಏಕ ಬಳಕೆ ಸರಕುಗಳು**<br>ಒಂದೇ ಸಲ ಬಳಸಬಹುದಾದ<br>ಹಾಲು, ಮೊಟ್ಟೆ, ತರಕಾರಿ | **ಸಾರ್ವಜನಿಕ ಸರಕುಗಳು**<br>ಸಾರ್ವಜನಿಕ ಯಾಜಮಾನ್ಯವನ್ನು<br>ಹೊಂದಿದ ಮತ್ತು<br>ಸಾರ್ವಜನಿಕವಾಗಿ ಬಳಸ<br>ಬಹುದಾದ ಸರಕುಗಳು<br>ಉದಾ. ಗ್ರಂಥಾಲಯ<br>ಈಜುಕೊಳ, ರಸ್ತೆ ಇತ್ಯಾದಿ |

ಇದಲ್ಲದೆ ವಿನಿಮಯ ಮೌಲ್ಯವನ್ನು ಗಣನೆಗೆ ತೆಗೆದುಕೊಂಡು ಸರಕುಗಳನ್ನು ಉಚಿತ ವಸ್ತುಗಳು ಮತ್ತು ಆರ್ಥಿಕ ವಸ್ತುಗಳು ಎಂದು ವರ್ಗೀಕರಿಸಲಾಗಿದೆ. ನಿಸರ್ಗದಲ್ಲಿ ಉಚಿತವಾಗಿ ದೊರೆಯುವ ವಸ್ತುಗಳೇ ಉಚಿತ ವಸ್ತುಗಳು. ಉದಾ. ಗಾಳಿ, ನೀರು, ಬೆಳಕು

ಇವು ಉಪಯೋಗದ ಮೌಲ್ಯ ಹೊಂದಿರುತ್ತದೆ. ವಿನಿಮಯ ಮೌಲ್ಯವನ್ನಲ್ಲ. ಇವು ಬೆಲೆಗೆ ಮಾರುಕಟ್ಟೆಯಲ್ಲಿ ಕೊಳ್ಳುವ ವಸ್ತುಗಳಲ್ಲ. ಮಾನವ ನಿರ್ಮಿತ ವಸ್ತುಗಳು ಆರ್ಥಿಕ ವಸ್ತುಗಳು. ಸಂಪನ್ಮೂಲಗಳನ್ನು ಬಳಸಿ ಶ್ರಮ-ಬಂಡವಾಳ ಸಂಯೋಜನೆಯಿಂದ ಉತ್ಪಾದಿಸಿದ ಸರಕುಗಳು ಇವು. ಅವುಗಳ ಮೌಲ್ಯವನ್ನು ಹಣದಿಂದ ನಿರ್ಧರಿಸುವುದರಿಂದ ಅವುಗಳಿಗೆ ವಿನಿಮಯ ಮೌಲ್ಯವಿರುತ್ತದೆ. ಉದಾ. ಟಿ.ವಿ. ಕಾರು, ವಿದ್ಯುತ್ ಸಲಕರಣೆಗಳು ಇತ್ಯಾದಿ.

ಈ ರೀತಿಯ ವರ್ಗೀಕರಣವು ಕಟ್ಟು ನಿಟ್ಟಿನದಲ್ಲ. ಒಂದು ಸ್ಥಳದಲ್ಲಿ ಉಚಿತ ವಸ್ತುಗಳಾಗಿದ್ದರೆ, ಬೇರೊಂದು ಸ್ಥಳದಲ್ಲಿ ಅವು ಆರ್ಥಿಕ ವಸ್ತುಗಳಾಗಬಹುದು.

ಯಾವ ಸರಕುಗಳನ್ನು ಮುಟ್ಟಬಹುದೋ, ನೋಡಬಹುದೊ, ಲೆಕ್ಕಮಾಡಬಹುದೋ ಆ ಸರಕುಗಳಿಗೆ ಸ್ಪರ್ಶನೀಯ ಗೋಚರ ವಸ್ತುಗಳು ಎನ್ನಲಾಗುತ್ತದೆ. ಯಾವ ಸರಕುಗಳನ್ನು ನೋಡಲು ಮತ್ತು ಸ್ಪರ್ಶಿಸಲು ಅಸಾಧ್ಯವೋ ಆ ವಸ್ತುಗಳನ್ನು ಅಗೋಚರ ವಸ್ತುಗಳು ಎನ್ನಲಾಗುತ್ತದೆ. ಉದಾ. ವೈದ್ಯರ ಸೇವೆ, ವಕೀಲರ ಸೇವೆ, ಬ್ಯಾಂಕಿಂಗ್ ಮತ್ತು ಜೀವವಿಮಾ ಸೇವೆ ಇತ್ಯಾದಿ.

## ೨.೩. ಅನುಭೋಗ

ಅರ್ಥಶಾಸ್ತ್ರದಲ್ಲಿ ನಾಲ್ಕು ಪ್ರಮುಖ ಭಾಗಗಳಿವೆ.

೧. ಅನುಭೋಗ, ೨ ಉತ್ಪಾದನೆ ೩. ವಿತರಣೆ ೪. ವಿನಿಮಯ. ಅನುಭೋಗಕ್ಕೂ ಉತ್ಪಾದನೆಗೂ ನಡುವೆ ನಡೆಯುವ ಆರ್ಥಿಕ ಚಟುವಟಿಕೆಗಳು ಅರ್ಥಶಾಸ್ತ್ರದ ವಸ್ತು ವಿಷಯವಾಗಿವೆ. ಆದ್ದರಿಂದ ಆರ್ಥಿಕ ವಿಶ್ಲೇಷಣೆಯಲ್ಲಿ ಅನುಭೋಗ ಪರಿಭಾವನೆಗೆ ವಿಶೇಷ ಮಹತ್ವವಿದೆ. ಉತ್ಪಾದನೆ ಹೇಗೆ ಉತ್ಪಾದಕನಿಗೆ ಸಂಬಂಧಪಟ್ಟಿದಿಯೋ ಹಾಗೆ ಅನುಭೋಗ ಅನುಭೋಗಿಗೆ ಸಂಬಂಧಪಟ್ಟದ್ದಾಗಿದೆ.

ಅನುಭೋಗಿಸುವುದು, ಅನುಭೋಗಿ - ಎನ್ನುವ ಪರಭಾವನೆಗಳು ಬಹಳ ಬಳಕೆಯಲ್ಲಿದ್ದು ಸಾಮಾನ್ಯವಾಗಿದ್ದರೂ ಅದನ್ನು ವ್ಯಾಖ್ಯಾನಿಸುವುದು ಅಷ್ಟೊಂದು ಸರಳವಾಗಿಲ್ಲ. ಪ್ರತಿಯೊಂದು ಸರಕಿನಲ್ಲಿ ತುಷ್ಟಿಗುಣವಿರುತ್ತದೆ. ಆ ತುಷ್ಟಿಗಣವನ್ನು ಉಪಯೋಗಿಸುವ ಕ್ರಿಯೆಗೆ ಅನುಭೋಗ ಎನ್ನಲಾಗುತ್ತದೆ. ವಿಶಾಲಾರ್ಥದಲ್ಲಿ ಬಯಕೆಗಳನ್ನು ತೃಪ್ತಿಪಡಸಲು ಸರಕು-ಸೇವೆಗಳನ್ನು ಉಪಯೋಗಿಸುವ ಕ್ರಿಯೆಗೆ ಅನುಭೋಗ ಎಂದು ಹೆಸರು. ಅಥವಾ ಅದು ಸರಕು ಮತ್ತು ಸೇವೆಗಳನ್ನು ಬಳಸಿಕೊಂಡು ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುವ ಕ್ರಿಯೆಯಾಗಿದೆ. ಉದಾ. ಹಣ್ಣನ್ನು ತಿನ್ನುವುದು, ಹಸಿವಾದಾಗ ಊಟ ಮಾಡುವುದು, ಬಾಯಾರಿದಾಗ ತಂಪು ಪಾನೀಯ ಕುಡಿಯುವುದು ಇತ್ಯಾದಿ.

### ಅನುಭೋಗದ ಪ್ರಕಾರಗಳು

ಬಯಕೆಯನ್ನು ತೃಪ್ತಿಪಡಿಸಿಕೊಳ್ಳುವಾಗ ಹೇಗೆ, ಯಾವ ವಿಧದಲ್ಲಿ ತೃಪ್ತಿಪಡಿಸಿಕೊಳ್ಳಲಾಗುತ್ತದೆ ಎನ್ನುವುದರ ಆಧಾರದ ಮೇಲೆ ಅನುಭೋಗವನ್ನು ಕೆಳಗಿನ ಪ್ರಕಾರಗಳಾಗಿ ವರ್ಗೀಕರಿಸಬಹುದು.

೧. **ನೇರ ಅನುಭೋಗ :** ಬಯಕೆಯನ್ನು ತೃಪ್ತಿಪಡಿಸುವಾಗ ಆ ವಸ್ತುವನ್ನು ನೇರವಾಗಿ ಉಪಯೋಗಿಸುವುದಕ್ಕೆ ಪ್ರತ್ಯಕ್ಷ ಅಥವಾ ನೇರ ಅನುಭೋಗ ಎನ್ನಲಾಗುತ್ತದೆ. ಉದಾ. ಪಾನೀಯ ಸೇವಿಸುವುದು, ಹಣ್ಣನ್ನು ತಿನ್ನುವುದು ಇತ್ಯಾದಿ.

೨. **ಪರೋಕ್ಷ ಅನುಭೋಗ :** ಸರಕು ಮತ್ತು ಸೇವೆಗಳನ್ನು ಪರೋಕ್ಷವಾಗಿ ಉಪಯೋಗಿಸಿ ಅನುಭವಿಸುವುದಕ್ಕೆ ಪರೋಕ್ಷ ಅನುಭೋಗ ಎನ್ನಲಾಗುತ್ತದೆ. ಉದಾ. ಕಚ್ಚಾ ಪದಾರ್ಥಗಳು, ಯಂತ್ರೋಕರಣಗಳು ಇತ್ಯಾದಿ. ನಾವು ಬಟ್ಟೆಯನ್ನು ಧರಿಸುವುದು ನೇರ ಅನುಭೋಗ. ಆದರೆ ಅದನ್ನು ಹತ್ತಿಯಿಂದ ದಾರ ತೆಗೆದು ನೇಯ್ದು ತಯಾರಿಸಲಾಗುತ್ತದೆ. ಆದ್ದರಿಂದ ಬಟ್ಟೆ ನೇರ ಅನುಭೋಗವಾದರೆ ಹತ್ತಿ ಪರೋಕ್ಷ ಅನುಭೋಗವಾಗಿದೆ. ಕಾಫಿ ಕುಡಿಯುವುದು ನೇರ ಅನುಭೋಗವಾದರೆ ಕಾಫಿ ಬೀಜ ಪರೋಕ್ಷ ಅನುಭೋಗವಾಗಿದೆ.

೩. **ವಿನಾಶಕ ಅನುಭೋಗ :** ಇತರರನ್ನು ನಾಶ ಮಾಡಲು, ಸಂಪತ್ತನ್ನು ವಿಧ್ವಂಸ ಮಾಡಲು ಸರಕುಗಳನ್ನು ಬಳಸುವ ಕ್ರಿಯೆಗೆ ವಿಧ್ವಂಸಕ ಅಥವಾ ವಿನಾಶಕ ಅನುಭೋಗ ಎನ್ನಲಾಗುತ್ತದೆ. ಉದಾ. ಬಂದೂಕು, ಸ್ಫೋಟಕ ವಸ್ತುಗಳ ಬಳಕೆ ಇತ್ಯಾದಿ.

**ಅನುಭೋಗದ ಮಹತ್ವ :** ಅನುಭೋಗವು ಎಲ್ಲಾ ಆರ್ಥಿಕ ಚಟುವಟಿಕೆಗಳ ಆರಂಭವಾಗಿದೆ. ಅನುಭೋಗಕ್ಕಾಗಿಯೇ ಉತ್ಪಾದನೆಯಾಗುವುದರಿಂದ ಉತ್ಪಾದಕನಿಗೆ ಏನನ್ನು ಉತ್ಪಾದಿಸಬೇಕು ಎನ್ನುವ ನಿರ್ಧಾರಕ್ಕೆ ಅದು ಮಾರ್ಗಸೂಚಿಯಾಗಿದೆ. ವಸ್ತುಗಳನ್ನು ಅನುಭೋಗಿಸುವುದಕ್ಕಾಗಿ ವ್ಯಕ್ತಿಯು ದುಡಿಯುತ್ತಾನೆ. ಇದರಿಂದ ಉತ್ಪಾದನೆ ಮತ್ತು ಆರ್ಥಿಕ ಚಟುವಟಿಕೆ ಉಂಟಾಗುತ್ತದೆ. ಅನುಭೋಗಿಯ ಬಯಕೆ ಆಕಾಂಕ್ಷೆ, ಅಭಿರುಚಿಗೆ ತಕ್ಕಂತೆ ಉತ್ಪಾದಿಸಬೇಕಾದ್ದರಿಂದ ಆರ್ಥಿಕ ವಿಶ್ಲೇಷಣೆಯಲ್ಲಿ ಉತ್ಪಾದನೆಗಿಂತ ಅನುಭೋಗಕ್ಕೆ ಹೆಚ್ಚಿನ ಸ್ಥಾನವಿದೆ. ಈ ದೃಷ್ಟಿಯಿಂದ ಅನುಭೋಗಿಯನ್ನು ಸಾರ್ವಭೌಮ ಎಂದು ಕರೆಯಲಾಗುತ್ತದೆ.

ಅನುಭೋಗವು ಉದ್ಯೋಗ, ಹಾಗೂ ವರಮಾನಗಳ ಪ್ರಮಾಣ ಮತ್ತು ಜೀವನಮಟ್ಟವನ್ನು ನಿರ್ಧರಿಸುತ್ತದೆ. ಸಮಗ್ರ ಅರ್ಥಶಾಸ್ತ್ರದಲ್ಲಿ ಆದಾಯ ಮತ್ತು ಉದ್ಯೋಗದ ನಿಧಾರ್ರಕ ಅನುಭೋಗವಾಗಿದೆ. ಆದುನಿಕ ಅರ್ಥಶಾಸ್ತ್ರದಲ್ಲಿ ಅನುಭೋಗಕ್ಕೆ ಕೇನ್ಸನು ಅಗ್ರಸ್ಥಾನ ನೀಡಿದ್ದಾನೆ. ನಿರುದ್ಯೋಗಕ್ಕೆ ಆರ್ಥಿಕ ಮುಗ್ಗಟ್ಟಿಗೆ ಅನುಭೋಗದಲ್ಲಿ ಉಂಟಾಗುವ ಕಡಿತದ ಪ್ರವೃತ್ತಿಯೇ ಮೂಲ ಕಾರಣ ಎಂಬ ಮಹತ್ತರ ವಿಶ್ಲೇಷಣೆ ನೀಡಿ, ಅನುಭೋಗವನ್ನು ಹೆಚ್ಚಿಸುವುದರ ಮೂಲಕ ಸಮಸ್ಯೆಗಳನ್ನು ಪರಿಹರಿಸಬಹುದು ಎಂದಿದ್ದಾನೆ.

## ೨.೪. ತುಷ್ಟಿಗುಣ

ತುಷ್ಟಿಗುಣ ಎನ್ನುವ ಪರಿಕಲ್ಪನೆಯನ್ನು ಮೊದಲಿಗೆ ವಿಲಿಯಂ ಸ್ಟೇನಲ್ ಜೆವನ್ಸ್ ಎನ್ನುವ ಇಂಗ್ಲಿಷ್ ಅರ್ಥಶಾಸ್ತ್ರಜ್ಞ ಪರಿಚಯಿಸಿದ್ಧು ನಂತರ ಮಾರ್ಷಲ್, ಜೆ.ಆರ್. ಹಿಕ್ಸ್ ಮುಂತಾದ ಅರ್ಥಶಾಸ್ತ್ರಜ್ಞರು ಅನುಭೋಗಿಯ ವರ್ತನೆ, ಅನುಭೋಗದ ಸಿದ್ಧಾಂತ ಗಳನ್ನು ರಚಿಸುವಾಗ ಅದನ್ನು ಅರ್ಥಪೂರ್ಣವಾಗಿ ಅಳವಡಿಸಿಕೊಂಡಿದ್ದಾರೆ. ಸೂಕ್ಷ್ಮ ಅರ್ಥಶಾಸ್ತ್ರಕ್ಕೆ ಇದರ ಸಿದ್ಧಾಂತವನ್ನು ನೀಡಿ ಮಹಾನ್ ಕೊಡುಗೆ ಸಲ್ಲಿಸಿದ್ದಾರೆ. ಅನುಭೋಗಿಯ ವರ್ತನೆಯನ್ನು ವಿಶ್ಲೇಷಿಸಲು ಇದು ಮುಖ್ಯವಾದ ಮಾರ್ಗವಾಗಿದೆ ಹಾಗೂ ಸಲಕರಣೆಯಾಗಿದೆ.

ಸಾಮಾನ್ಯವಾಗಿ ತುಷ್ಟಿಗುಣ, ತೃಪ್ತಿ ಮತ್ತು ಉಪಯುಕ್ತತೆ ಇವುಗಳನ್ನು ಸಮಾನಾರ್ಥದ ಪರಿಭಾವನೆಗಳೆಂದು ಬಳಸಲಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಇವು ಮೂರು ಬೇರೆ ಬೇರೆ ಅರ್ಥವುಳ್ಳ ಪರಿಭಾವನೆಗಳಾಗಿದೆ.

ತುಷ್ಟಿಗುಣವೆಂದರೆ ಅರ್ಥಶಾಸ್ತ್ರದಲ್ಲಿ "ಮಾನವನ ಬಯಕೆಗಳನ್ನು ಈಡೇರಿಸುವ ವಸ್ತುವಿನ ಸಾಮರ್ಥ್ಯವಾಗಿದೆ" ಅಥವಾ ವಸ್ತುವಿನಲ್ಲಿರುವ ಬಯಕೆಯನ್ನು ತೃಪ್ತಿಪಡಿಸುವ ಗುಣವಾಗಿದೆ. ವಸ್ತುವಿನಲ್ಲಿರುವ ಬಯಕೆಗಳನ್ನು ತೃಪ್ತಿಪಡಿಸುವ ಸಾಮರ್ಥ್ಯ ತುಷ್ಟಿಗುಣ ವಾಗಿದೆ. ಆದರೆ ಆ ಗುಣವೇ ತೃಪ್ತಿಯಲ್ಲ. ವಸ್ತುವನ್ನು ಅನುಭೋಗಿಸಿದಾಗ ದೊರಕುವ ಅನುಭವವೇ ತೃಪ್ತಿ. ಒಂದು ವಸ್ತುವಿನ ಅನುಭೋಗದಿಂದ ನಮಗೆ ಏನು ಸಿಗುವುದೋ ಅದುವೇ ತೃಪ್ತಿ. ತುಷ್ಟಿಗುಣವೇ ತೃಪ್ತಿಯಲ್ಲ.

ತೃಪ್ತಿ ಸಿಗಬೇಕಾದರೆ ವಸ್ತುವಿನಲ್ಲಿ ತುಷ್ಟಿಗುಣವಿರಬೇಕು. ಆದ್ದರಿಂದ ತೃಪ್ತಿಯೇ ಬೇರೆ, ತುಷ್ಟಿಗುಣವೇ ಬೇರೆ. ತುಷ್ಟಿಗುಣವೇ ಬೇರೆ, ಉಪಯುಕ್ತತೆಯೇ ಬೇರೆ. ಒಂದು ವಸ್ತು ನಮಗೆ ಉಪಯೋಗಕ್ಕೆ ಬಾರದಿರಬಹುದು. ಆದರೆ ಅದು ಬಯಕೆಗಳನ್ನು ತೃಪ್ತಿ ಪಡಿಸುವಂತಿದ್ದರೆ ಅದು ಉಪಯೋಗಕ್ಕೆ ಬಾರದಿದ್ದರೂ ಅದು ತುಷ್ಟಿಗುಣ ಪಡೆದಿರುತ್ತದೆ. ಉದಾ.ಸೀಮೆಸುಣ್ಣ. ಒಬ್ಬ ಶಿಕ್ಷಕನಿಗೆ ತುಷ್ಟಿಗುಣ ಕೊಡುತ್ತದೆ. ಉಪಯೋಗಕ್ಕೆ ಬರುತ್ತದೆ. ಆದರೆ ಅದು ಒಬ್ಬ ಕೂಲಿಗೆ ಉಪಯೋಗಕ್ಕೆ ಬರುವುದಿಲ್ಲ.

### ತುಷ್ಟಿಗುಣದ ಲಕ್ಷಣಗಳು

ಮಾನವನ ಬಯಕೆಯನ್ನು ಈಡೇರಿಸುವ ವಸ್ತುವಿನ ಸಾಮರ್ಥ್ಯದ ತುಷ್ಟಿಗುಣಕ್ಕೆ ವಿಶಿಷ್ಟವಾದ ಲಕ್ಷಣಗಳಿವೆ. ಅವುಗಳೆಂದರೆ,

೧. **ತುಷ್ಟಿಗುಣವು ಮಾನಸಿಕವಾದುದು** : ನಮಗೆ ಸರಕುಗಳಿಂದ ದೊರೆಯುವ ತುಷ್ಟಿಗುಣವು ಮಾನಸಿಕವಾದುದು. ಅಂದರೆ ಅದನ್ನು ನೋಡುವುದಕ್ಕಾಗುವುದಿಲ್ಲ. ಅದಕ್ಕೆ ಭೌತಿಕ ಅಸ್ತಿತ್ವವಿಲ್ಲ. ಅದೊಂದು ಮಾನಸಿಕ ಭಾವನೆ. ದುಃಖ, ಸಂತೋಷದಂತೆ

ಅನುಭವಕ್ಕೆ ಬರುವಂತಹದು. ಉದಾ. ಪುಸ್ತಕ ಓದಿದಾಗ ದೊರೆಯುವ ತುಷ್ಟಿಗುಣವನ್ನು ಸಂಖ್ಯೆಗಳಲ್ಲಿ ಮಾಪನ ಮಾಡಲಿಕ್ಕಾಗುವುದಿಲ್ಲ.

೨. **ತುಷ್ಟಿಗುಣಕ್ಕೆ ನೈತಿಕ ಮೌಲ್ಯವಿಲ್ಲ :** ನಮ್ಮ ಬಯಕೆಗಳ ತೃಪ್ತಿಗಾಗಿ ವಸ್ತುವನ್ನು ಅನುಭೋಗಿಸುವಾಗ ಅದು ಒಳ್ಳೆಯದಾಗಿರಬಹುದು. ಅಥವಾ ಕೆಟ್ಟದ್ದಾಗಿರಬಹುದು. ವಸ್ತುವಿನಲ್ಲಿ ಬಯಕೆಯನ್ನು ತೃಪ್ತಿಪಡಿಸುವ ಗುಣ ಇದ್ದರೆ ಅದು ತುಷ್ಟಿಗುಣ ಹೊಂದಿದೆ ಎಂದು ಹೇಳುತ್ತೇವೆ. ಉದಾ. ಕಳ್ಳ ಭಟ್ಟಿ ತಯಾರಿ, ಜೂಜಾಟ ಇತ್ಯಾದಿ.

೩. **ತುಷ್ಟಿಗುಣವನ್ನು ಅಳೆಯಲುಬಾರದು :** ವಸ್ತುನಿಂದ ದೊರೆತ ತುಷ್ಟಿಗುಣವನ್ನು ಯಾವುದೇ ಆಳತೆಗೋಲಿನಿಂದ ಅಳೆಯಲು ಸಾಧ್ಯವಿಲ್ಲ. ಅದು ಮಾನಸಿಕವಾದ್ದರಿಂದ ತುಷ್ಟಿಗುಣದ ಅಳತೆ ಅಸಾಧ್ಯ. ಉದಾ. ಮಾವಿನ ಹಣ್ಣಿನಿಂದ ಪಡೆದ ತೃಪ್ತಿಯನ್ನು ಇಷ್ಟು ಕೇಜಿ ಎಂದು ಹೇಳುವುದು ಸಾಧ್ಯವಿಲ್ಲ.

೪. **ತುಷ್ಟಿಗುಣವು ಸಾಪೇಕ್ಷವಾದುದು :** ಅದು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ ಮತ್ತು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುತ್ತದೆ. ಉದಾ. ಸಿಗರೇಟು ಸೇದುವವನಿಗೆ ಅದರಿಂದ ತೃಪ್ತಿ ಸಿಗುತ್ತದೆ. ಅದರ ಚಟವಿಲ್ಲದವನಿಗೆ ತೃಪ್ತಿ ಸಿಗುವುದಿಲ್ಲ. ಚಳಿಗಾಲದಲ್ಲಿ ಬಿಸಿ ಪೇಯ ಮತ್ತು ಸೆಕೆಗಾಲದಲ್ಲಿ ತಂಪು ಪೇಯ ತುಷ್ಟಿಗುಣ ಹೊಂದಿರುತ್ತದೆ. ಉಣ್ಣೆಯ ಬಟ್ಟೆಗಳು ಶೀತ ಪ್ರದೇಶದಲ್ಲಿ ತುಷ್ಟಿಗುಣ ಪಡೆದಿದ್ದರೆ ಉಷ್ಣಪ್ರದೇಶದಲ್ಲಿ ತುಷ್ಟಿಗುಣ ಪಡೆದಿರುವುದಿಲ್ಲ.

೫. **ತುಷ್ಟಿಗುಣವು ಸಂತೋಷ ನೀಡಲೇಬೇಕೆಂಬುದಿಲ್ಲ :** ವಸ್ತುವಿಗೆ ತುಷ್ಟಿಗುಣವಿದ್ದು ಅದನ್ನು ಅನುಭೋಗಿಸಿದಾಗ ಸಂತೋಷವಾಗದಿರಬಹುದು. ಉದಾ. ರೋಗವಿದ್ದಾಗ ಸೇವಿಸುವ ಔಷಧಿ.

೬. **ತುಷ್ಟಿಗುಣವು ಒಂದು ಸರಕಿಗಿರುವ ಬೇಡಿಕೆಯನ್ನು ನಿರ್ಧರಿಸುತ್ತದೆ.**

ಏಕೆಂದರೆ ಯಾವುದೇ ಸರಕಿನ ಬೇಡಿಕೆ ಅದರಲ್ಲಿರುವ ತುಷ್ಟಿಗುಣವನ್ನು ಅವಲಂಬಿಸಿರುತ್ತದೆ. ಸರಕಿನಿಂದ ನಿರೀಕ್ಷಿಸುವ ತೃಪ್ತಿ ಅಧಿಕವಿದ್ದಲ್ಲಿ ಅನುಭೋಗಿಗಳು ಆ ಸರಕನ್ನು ಅಧಿಕ ಪ್ರಮಾಣದಲ್ಲಿ ಕೊಳ್ಳುತ್ತಾರೆ.

ತುಷ್ಟಿಗುಣವನ್ನು ಅಳೆಯಲು ಸಾಧ್ಯವಿಲ್ಲ. ಆದರೆ ನಮಗೆ ದೊರಕುವ ತೃಪ್ತಿಯನ್ನು ಪರೋಕ್ಷವಾಗಿ ವಸ್ತುವಿನ ಬೆಲೆಯಿಂದ ಅಳೆಯಬಹುದು. ನಿರೀಕ್ಷಿತ ತೃಪ್ತಿ ಅಧಿಕವಿದ್ದಾಗ ಅನುಭೋಗಿಗಳು ಅಧಿಕ ಬೆಲೆ ನೀಡಲು ತಯಾರಿರುತ್ತಾರೆ.

## ತುಷ್ಟಿಗುಣದ ವಿಧಗಳು

ತುಷ್ಟಿಗುಣವನ್ನು ಈ ಕೆಳಗಿನ ಪ್ರಕಾರಗಳಾಗಿ ವಿಂಗಡಿಸಬಹುದು.

೧. **ರೂಪ ತುಷ್ಟಿಗುಣ :** ವಸ್ತುವಿನ ಆಕಾರ ಅಥವಾ ರೂಪವನ್ನು ಬದಲಾಯಿಸಿ ತುಷ್ಟಿಗುಣ ನಿರ್ಮಾಣ ಮಾಡಿದರೆ ಅದನ್ನು ರೂಪ ತುಷ್ಟಿಗುಣ ಎನ್ನಲಾಗುತ್ತದೆ. ಉದಾ.

ಮರದ ದಿಮ್ಮಿಯಿಂದ ಪೀಠೋಪಕರಣ ತಯಾರಿಸುವುದು, ಕಚ್ಚಾ ಪದಾರ್ಥದಿಂದ ಸಿದ್ಧಪಡಿಸಿದ ವಸ್ತುಗಳನ್ನು ತಯಾರಿಸುವುದು ಮುಂತಾದವು.

೨. **ಸ್ಥಳ ತುಷ್ಟಿಗುಣ** : ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಸ್ತುಗಳನ್ನು ವರ್ಗಾಯಿಸಿ ತುಷ್ಟಿಗುಣವನ್ನು ಸೃಷ್ಟಿಸುವುದಕ್ಕೆ ಅಥವಾ ನಿರ್ಮಾಣ ಮಾಡುವುದಕ್ಕೆ ಸ್ಥಳ ತುಷ್ಟಿಗುಣ ಎನ್ನಲಾಗುತ್ತದೆ. ಯಾವ ಸ್ಥಳದಲ್ಲಿ ತುಷ್ಟಿ ಗುಣ ಇರುವುದಿಲ್ಲವೊ ಅಲ್ಲಿಂದ ವಸ್ತುವಿಗೆ ತುಷ್ಟಿಗುಣವಿರುವ ಸ್ಥಳಕ್ಕೆ ವರ್ಗಾಯಿಸಿದರೆ ಅದು ಸ್ಥಳ ತುಷ್ಟಿಗುಣವಾಗುತ್ತದೆ. ಉದಾ. ಕಲ್ಲಿದ್ದಲನ್ನು ಗಣಿಯಿಂದ ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆಗೆ ರವಾನಿಸಿ ಕಲ್ಲಿದ್ದಲಿಗೆ ತುಷ್ಟಿಗಣ ನಿರ್ಮಾಣ ಮಾಡುವುದು.

೩. **ಕಾಲ ತುಷ್ಟಿಗುಣ** : ಕಾಲ ತುಷ್ಟಿಗುಣವೆಂದರೆ ಸರಕುಗಳು ಅದಿಕ ಪ್ರಮಾಣದಲ್ಲಿದ್ದಾಗ ಅದನ್ನು ದಾಸ್ತಾನು ಮಾಡಿಟ್ಟು ಅದರ ಕೊರತೆ ಬಿದ್ದಾಗ, ಅಭಾವವಿದ್ದಾಗ ಅದನ್ನು ಪೂರೈಸಿ ತುಷ್ಟಿಗುಣ ನಿರ್ಮಾಣಮಾಡುವುದು. ಕೆಲವು ಸರಕುಗಳು ಕೆಲವೊಂದು ಕಾಲದಲ್ಲಿ ಮಾತ್ರ ತುಷ್ಟಿಗುಣ ಪಡೆದಿರುತ್ತವೆ. ಉದಾ. ಹತ್ತಿ ಬಟ್ಟೆ ಬೇಸಿಗೆಯಲ್ಲಿ, ಚಳಿಗಾಲದಲ್ಲಿ ಉಣ್ಣೆ ಬಟ್ಟೆಗಳು.

### ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮ

ತುಷ್ಟಿಗುಣ ವಿಶ್ಲೇಷಣೆಗೆ ಸಂಬಂಧಿಸಿದಂತೆ ಅನುಭೋಗಿಯ ವರ್ತನೆಯನ್ನು ವಿವರಿಸುವಾಗ ಡಾ. ಅಲ್ಫ್ರೆಡ್ ಮಾರ್ಷಲ್ ಈ ನಿಯಮವನ್ನು ರಚಿಸಿದ್ದಾರೆ. ಅನುಭೋಗಕ್ಕೆ ತುಷ್ಟಿಗುಣವೇ ಮೂಲಕಾರಣವಾದ್ದರಿಂದ ಈ ನಿಯಮವು ಅನುಭೋಗಿಯ ದಿನನಿತ್ಯದ ಅನುಭವವನ್ನು ವಿಶ್ಲೇಷಿಸುತ್ತದೆ.

ಈ ನಿಯಮವನ್ನು ಮೊದಲ ಬಾರಿಗೆ ವಿವರಿಸಿದವರು ಎಚ್.ಎಚ್. ಗೋಸೆನ್ ಎನ್ನುವ ಜರ್ಮನ್ ಅರ್ಥಶಾಸ್ತ್ರಜ್ಞ. ಅನಂತರ ಅದನ್ನು ಜನಪ್ರಿಯಗೊಳಿಸಿದವರು ಪ್ರೊ. ಆಲ್ಫ್ರೆಡ್ ಮಾರ್ಷಲ್. ಈ ನಿಯಮವು ಹೀಗಿದೆ. ಒಬ್ಬ ಅನುಭೋಗಿಯು ನಿರ್ದಿಷ್ಟ ಸಮಯದಲ್ಲಿ ಯಾವುದಾದರೊಂದು ವಸ್ತುವಿನ ವಿವಿಧ ಘಟಕಗಳನ್ನು ಒಂದಾದರೊಂದರಂತೆ ಸೇವಿಸುತ್ತಾ ಹೋದರೆ ಆ ವಸ್ತುವಿನ ಸೀಮಾಂತ ಘಟಕದಿಂದ ದೊರೆಯುವ ತುಷ್ಟಿಗುಣ ಇಳಿಮುಖವಾಗುತ್ತದೆ. ಆದ್ದರಿಂದ ಈ ನಿಯಮವನ್ನು ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮ ಎನ್ನಲಾಗಿದೆ.

ಮಾರ್ಷಲ್‌ರವರು ಈ ನಿಯಮವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ. "ಒಬ್ಬ ವ್ಯಕ್ತಿಯ ಬಳಿ ಈಗಾಗಲೇ ಇರುವ ವಸ್ತುವಿನ ಸಂಗ್ರಹ ಹೆಚ್ಚಿದಂತೆಲ್ಲಾ ಹೆಚ್ಚಿದ ಸಂಗ್ರಹದಿಂದ ಲಭ್ಯವಾಗುವ ಹೆಚ್ಚುವರಿ ಪ್ರಯೋಜನ ಇಳಿಮುಖವಾಗುತ್ತದೆ".

ಈ ನಿಮಯವನ್ನು ಒಂದು ಉದಾಹರಣೆಯ ಮೂಲಕ ವಿವರಿಸಬಹುದು. ಒಬ್ಬ ಅನುಭೋಗಿಗೆ ತುಂಬಾ ಹಸಿವಾಗಿದೆ ಎಂದಿಟ್ಟುಕೊಳ್ಳೋಣ. ಅವನು ಮೊದಲಿಗೆ ಒಂದು

ದೋಸೆಯನ್ನು ತಿಂದಾಗ ಬಹಳ ತೃಪ್ತಿಯಾಗುತ್ತದೆ. ಎರಡನೆ ದೋಸೆಯನ್ನು ತಿಂದಾಗಲೂ ತೃಪ್ತಿಯಾಗುತ್ತದೆ. ಆದರೆ ಮೊದಲನೆಯ ದೋಸೆಯಷ್ಟಲ್ಲ. ಹೀಗೆ ಅವನು ಮೂರು, ನಾಲ್ಕು, ಐದು, ದೋಸೆಯೆಂದು ತಿನುತ್ತಾ ಹೋದಲ್ಲಿ ಐದನೇ ದೋಸೆಯಾಗುವಾಗ ಸಾಕಾಗುತ್ತದೆ. ಅದನ್ನು ನಿರಾಕರಿಸುವಂತಾಗುತ್ತದೆ. ಅಂದರೆ ಎರಡು ಮೂರು, ನಾಲ್ಕು ದೋಸೆಗಳಿಂದ ದೊರೆಯುವ ತೃಪ್ತಿಯು ಕಡಿಮೆಯಾಗುತ್ತಾ ಹೋಗುತ್ತದೆ. ಇಂತಹ ಅನುಭವನ್ನು ಎಲ್ಲಾ ಅನುಭೋಗಿಗಳಿಗೆ ಆಗೇ ಇರುತ್ತದೆ. ಯಾವುದೇ ವಸ್ತುವನ್ನು ನಿರಂತರವಾಗಿ ಸೇವಿಸಿದಾಗ ಪ್ರತಿಯೊಂದು ಘಟಕದಿಂದ ದೊರೆಯುವ ತುಷ್ಟಿಗುಣ ಕಡಿಮೆಯಾಗುತ್ತಾ ಹೋಗುತ್ತದೆ.

ಇಂತಹ ಅನುಭವವಾಗುವಾಗ ಮತ್ತು ಈ ನಿಯಮ ಅನ್ವಯವಾಗಬೇಕಿದ್ದಲ್ಲಿ ಕೆಲವೊಂದು ಕಲ್ಪನೆಗಳನ್ನು ಅಥವಾ ನಿಬಂಧನೆಗಳನ್ನು ಮಾಡಿಕೊಳ್ಳಲಾಗುತ್ತದೆ. ಮಾರ್ಷಲ್ ಈ ನಿಯಮವನ್ನು ರಚಿಸುವಾಗ ಕೆಲವೊದು ಕಲ್ಪನೆಗಳನ್ನು ಮಾಡಿಕೊಂಡಿದ್ದಾರೆ. ಅವುಗಳು ಹೀಗಿವೆ.

೧. ಇತರ ಸ್ಥಿತಿಗತಿಗಳು ಸ್ಥಿರವಾಗಿರಬೇಕು. ಅಂದರೆ ಅನುಭೋಗಿಯ ಅಭಿರುಚಿ, ವಸ್ತುವಿನ ಬೆಲೆ, ಆದಾಯ ಸ್ಥಿರವಾಗಿರಬೇಕು. ಇವುಗಳಲ್ಲಿ ಬದಲಾವಣೆಯಾದರೆ ನಿಯಮ ಕಾರ್ಯಗತವಾಗುವುದಿಲ್ಲ.

೨. ಪ್ರತಿಯೊಂದು ಘಟಕವು ಒಂದೇ ಗಾತ್ರದ್ದಿರಬೇಕು. ಒಂದು ಘಟಕ ಅತೀ ಚಿಕ್ಕದು ಇನ್ನೊಂದು ಘಟಕ ದೊಡ್ಡ ಗಾತ್ರದ್ದಿರಬಾರದು.

೩. ಅನುಭೋಗಿಯು ಘಟಕಗಳನ್ನು ನಿರಂತರವಾಗಿ ಸಮಯದ ಅಂತರವಿಲ್ಲದೆ ನಿರ್ದಿಷ್ಟ ಸಮಯದಲ್ಲೇ ಸೇವಿಸಬೇಕು. ಉದಾ. ಬೆಳಿಗ್ಗೆ ಒಂದು ಘಟಕ ನಂತರ ಮಧ್ಯಾಹ್ನ ಒಂದು ಘಟಕ ಸೇವಿಸಿದರೆ ತುಷ್ಟಿಗಣದಲ್ಲಿ ಇಳಿಮುಖವಿರುವುದಿಲ್ಲ.

೪. ವಸ್ತುವಿನ ಎಲ್ಲಾ ಘಟಕಗಳು ಒಂದೇ ಜಾತಿಯದ್ದಾರಬೇಕು. ಉದಾ. ಹಸಿವಾದಾಗ, ಬಾಯಾರಿಕೆಯಾದಾಗ ಮೊದಲ ಘಟಕ ದೋಸೆಯಾಗಿದ್ದು, ಎರಡನೇ ಘಟಕ ಇಡ್ಲಿಯಾದರೆ ತುಷ್ಟಿಗುಣ ಇಳಿಮುಖವಾಗುವುದಿಲ್ಲ.

೫. ವಸ್ತುವಿನ ಘಟಕದಿಂದ ದೊರೆಯುವ ತುಷ್ಟಿಗುಣವನ್ನು ಅಂಕಿಗಳ ಮೂಲಕ ಸೂಚಿಸಬಹುದಾಗಿದೆ. ಉದಾ. ಮಾವಿನ ಹಣ್ಣಿನಿಂದ ದೊರೆತ ತೃಪ್ತಿ ೫೦, ದೋಸೆಯಿಂದ ದೊರೆತ ತುಷ್ಟಿಗುಣ ೨೦ ಇತ್ಯಾದಿ. ವಾಸ್ತವ ಮಾರುಕಟ್ಟೆಯಲ್ಲಿ ತುಷ್ಟಿಗುಣವನ್ನು ವಸ್ತುವಿನ ಬೆಲೆಯ ಮೂಲಕ ಅಳೆಯಬಹುದಾಗಿದೆ.

೬. ಈ ನಿಯಮವು ಸಾಮಾನ್ಯ, ವಿಚಾರವಂತ, ವಿವೇಕವುಳ್ಳ ಅನುಭೋಗಿಗೆ ಅನ್ವಯವಾಗುತ್ತದೆ.

ಈ ನಿಯಮವನ್ನು ಕೆಳಗಿನ ಪಟ್ಟಿಯಿಂದ, ರೇಖಾ ಚಿತ್ರದ ಮೂಲಕ ಸ್ಪಷ್ಟಪಡಿಸಬಹುದು.

ಇದನ್ನು ವಿವರಿಸುವಾಗ ಎರಡು ಪರಿಭಾವನೆಗಳನ್ನು ಅರ್ಥಮಾಡಿಕೊಳ್ಳಬೇಕು:

೧. **ಸೀಮಾಂತ ತುಷ್ಟಿಗುಣ :** ಅಂದರೆ ಹೊಸದಾದ ಘಟಕದಿಂದ ದೊರೆಯುವ ತೃಪ್ತಿ.

೨. **ಒಟ್ಟು ತುಷ್ಟಿಗುಣ :** ಅಂದರೆ ಒಂದು ವಸ್ತುವಿನ ಎಲ್ಲಾ ಘಟಕಗಳಿಂದ ದೊರೆಯುವ ತುಷ್ಟಿಗುಣ.

ಕೆಳಗಿನ ಕೋಷ್ಟಕದಲ್ಲಿ ದೋಸೆಯನ್ನು ಉದಾಹರಣೆಗೆ ತೆಗೆದುಕೊಳ್ಳಲಾಗಿದೆ. ಮೊದಲನೆಯ ಅಂಕಣದಲ್ಲಿ ದೋಸೆಯ ಪ್ರಮಾಣ ತೋರಿಸಲಾಗಿದೆ. ಎರಡನೆಯ ಅಂಕಣ ಸೀಮಾಂತ ತುಷ್ಟಿಗುಣವನ್ನು ತೋರುತ್ತದೆ. ಮೂರನೆ ಅಂಕಣ ಒಟ್ಟು ತುಷ್ಟಿಗುಣವನ್ನು ತೋರಿಸುತ್ತದೆ.

**ಕೋಷ್ಟಕ ೨.೧**

**ತುಷ್ಟಿಗುಣ ಅನುಸೂಚಿ**

| ದೋಸೆಯ ಸಂಖ್ಯೆ | ಸೀಮಾಂತ ತುಷ್ಟಿಗುಣ | ಒಟ್ಟು ತುಷ್ಟಿಗುಣ |
|---|---|---|
| ೧ | ೧೫ | ೧೫ |
| ೨ | ೧೨ | ೨೭ |
| ೩ | ೦೮ | ೩೫ |
| ೪ | ೦೪ | ೩೯ |
| ೫ | ೦೧ | ೪೦ |
| ೬ | ೦೦ | ೪೦ |
| ೭ | -೨ | ೩೮ |

ಮೇಲಿನ ಕೋಷ್ಟಕದಿಂದ ತಿಳಿಯುವುದೆಂದರೆ ಅನುಭೋಗಿಯು ಮೊದಲನೆ ದೋಸೆಯನ್ನು ಅನುಭೋಗಿಸಿದಾಗ ಅವನಿಗೆ ದೊರೆಯುವ ತುಷ್ಟಿಗುಮ ೧೫ ಯೂನಿಟ್ಟು. ಎರಡನೆ ದೋಸೆಯಿಂದ ದೊರೆಯುವ ತುಷ್ಟಿಗುಣ ೧೨ ಯುನಿಟ್ಟು. ಎರಡೂ ದೋಸೆಗಳಿಂದ ದೊರೆಯುವ ಒಟ್ಟು ತುಷ್ಟಿಗುಣ ೨೭. ಹಾಗೆಯೇ ಮೂರನೆ, ನಾಲ್ಕನೆ ದೋಸೆಗಳನ್ನು ಅನುಭೋಗಿಸುತ್ತ ಹೋದಂತೆಲ್ಲ ಪ್ರತಿ ದೋಸೆಯಿಂದ ದೊರೆಯುವ ಸೀಮಾಂತ ತುಷ್ಟಿಗುಣ ಕಡಿಮೆಯಾಗುತ್ತಾ ಕೊನೆಗೆ ಆರನೆಯ ದೋಸೆ ಅನುಭೋಗಿಸುವ ವೇಳೆಗೆ ಶೂನ್ಯವಾಗುತ್ತದೆ. ಸೀಮಾಂತ ತುಷ್ಟಿಗುಣ ಶೂನ್ಯವಾದಾಗ ಒಟ್ಟು ತುಷ್ಟಿಗುಣ ಗರಿಷ್ಠವಿರುತ್ತದೆ. ಸೀಮಾಂತ ತುಷ್ಟಿಗುಣ ಋಣಾತ್ಮಕವಾದಾಗ ಒಟ್ಟು ತುಷ್ಟಿಗುಣ ಇಳಿಮುಖವಾಗುತ್ತದೆ.

ಚಿತ್ರ ೨.೧.

ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮ




ಕೆಳಗಿನ ರೇಖಾಚಿತ್ರದಲ್ಲಿ ox ತಲಾಕ್ಷವು ದೋಸೆಯ ಸಂಖ್ಯೆಯನ್ನು ಸೂಚಿಸುತ್ತದೆ. oy ಲಂಬಾಕ್ಷವು ತುಷ್ಟಿಗುಣವನ್ನು ತೋರಿಸುತ್ತದೆ. TU ಒಟ್ಟು ತುಷ್ಟಿಗುಣವನ್ನು ತೋರಿಸುವ ರೇಖೆಯಾಗಿದೆ. MU ಸೀಮಾಂತ ತುಷ್ಟಿಗುಣ ತೋರಿಸುವ ರೇಖೆಯಾಗಿದೆ.

ದೋಸೆಗಳನ್ನು ಒಂದಾದ ನಂತರ ಒಂದರಂತೆ ಸೇವಿಸುತ್ತಾ ಹೋದರೆ ತುಷ್ಟಿಗುಣವು ಇಳಿಯುತ್ತಾ ಹೋಗುತ್ತಿರುವುದನ್ನು ರೇಖೆಯು ತೋರಿಸುತ್ತದೆ. ಆರನೆ ದೋಸೆ ಸೇವಿಸಿದಾಗ ತುಷ್ಟಿಗುಣ ಶೂನ್ಯವಾಗುತ್ತದೆ. ಇನ್ನು ಮುಂದುವರೆದು ದೋಸೆ ಸೇವಿಸಿದಾಗ ಅತೃಪ್ತಿಯಾಗುತ್ತದೆ. ಆ ಬಳಿಕ ತುಷ್ಟಿಗುಣವು ಋಣಾತ್ಮಕವಾಗಿದೆ. ಮೇಲಿನ ಉದಾಹರಣೆಯಿಂದ ತಿಳಿದುಬರುವ ಅಂಶವೆಂದರೆ, ಪ್ರತಿಯೊಂದು ಹೆಚ್ಚುವರಿ ಘಟಕದಿಂದ ಸಿಗುವ ತೃಪ್ತಿಯು ಕಡಿಮೆಯಾಗುತ್ತ ಹೋಗುತ್ತದೆ. ಸೀಮಾಂತ ತುಷ್ಟಿಗುಣ ಶೂನ್ಯವಾದಾಗ ಒಟ್ಟು ತೃಪ್ತಿಯು ಗರಿಷ್ಟವಾಗಿರುತ್ತದೆ. ಸೀಮಾಂತ ತುಷ್ಟಿಗುಣ ಋಣಾತ್ಮಕವಾದಾದ ಒಟ್ಟು ತೃಪ್ತಿಯು ಕಡಿಮೆಯಾಗುತ್ತಾ ಹೋಗುತ್ತದೆ. ಸೀಮಾಂತ ತುಷ್ಟಿಗುಣ ಸೊನ್ನೆಯಾಗಿದ್ದು ಒಟ್ಟು ತುಷ್ಟಿಗುಣ ಗರಿಷ್ಠವಾದಾಗ ಅನುಭೋಗಿಯ ಸಮತೋಲನ ಸಾಧಿತವಾಗುತ್ತದೆ.

**ಈ ನಿಯಮಕ್ಕೆ ಕೆಲವು ಮಿತಿಗಳಿವೆ :**

೧. ಒಂದು ವಸ್ತುವಿನ ಎಲ್ಲಾ ಯುನಿಟ್ಟುಗಳು ಏಕರೂಪದ್ದಾಗಿರಬೇಕು. ಉದಾ. ಮೊದಲ ದೋಸೆ ಸಾದಾ ಆಗಿದ್ದು, ಎರಡನೇ ದೋಸೆ ಮಸಾಲೆ ಆಗಿದ್ದರೆ ಇಳಿಮುಖ ತುಷ್ಟಿಗುಣ ಉಂಟಾಗುವುದಿಲ್ಲ.

೨. ಅಭಿರುಚಿ, ಗಾತ್ರ, ಆದಾಯಲ್ಲಿ ಬದಲಾವಣೆಯಾದರೆ ತುಷ್ಟಿಗುಣ ಇಳಿಮುಖ ವಾಗುವುದಿಲ್ಲ.

೩. ತುಷ್ಟಿಗುಣವನ್ನು ನಿಖರವಾಗಿ ೨, ೫, ೧೦ ಎಂದು ಅಂಕಿಯಲ್ಲಿ ಸೂಚಿಸುವುದು ಸಾಧ್ಯವಿಲ್ಲ.

೪. ಹವ್ಯಾಸ, ಚಟದಿಂದ ಅನುಬೋಗಿಸುವವರಿಗೆ ಈ ನಿಯಮ ಅನ್ವಯವಾಗುವುದಿಲ್ಲ. ಉದಾ. ಅಪರೂಪದ ಕಲಾವಸ್ತುಗಳ ಸಂಗ್ರಹಕನಿಗೆ ಹೆಚ್ಚು ಸಂಗ್ರಹಿಸಿದಷ್ಟೂ ತುಷ್ಟಿಗುಣ ಹೆಚ್ಚು. ಸಿಗರೇಟು ಸೇದುವ ಚಟವಿರುವವರಿಗೆ ಹೆಚ್ಚು ಘಟಕ ಸೇವಿಸಿದಂತೆ ತುಷ್ಟಿಗುಣವು ಹೆಚ್ಚಾಗಬಹುದು.

೫. ಜಿಪುಣರಿಗೆ ಇದು ಅನ್ವಯವಾಗುವುದಿಲ್ಲ.

**ಈ ನಿಯಮದ ಪ್ರಾಯೋಗಿಕತೆ ಹೀಗಿದೆ :**

೧. ಜನತೆಯ ಮೇಲೆ ತೆರಿಗೆಯನ್ನು ಹೇರುವಾಗ ಸರ್ಕಾರಕ್ಕೆ ಇದು ಸಹಾಯಕ ವಾಗುವುದು. ಪ್ರಗತಿಪರ ತೆರಿಗೆಯನ್ನು ಈ ತತ್ವದ ಆಧಾರದ ಮೇಲೆ ರಚಿಸಲಾಗಿದೆ. ಅಧಿಕ ಆದಾಯವಿರುವ ಶ್ರೀಮಂತರಿಗೆ ಹಣದ ತುಷ್ಟಿಗುಣ ಕಡಿಮೆ ಇರುವುದರಿಂದ ಅವರ ಮೇಲೆ ಹೆಚ್ಚಿನ ತೆರಿಗೆ ಹಾಕಲಾಗುತ್ತದೆ. ಬಡವರಿಗೆ ಹಣದ ತುಷ್ಟಿಗುಣ ಹೆಚ್ಚು ಇರುವುದರಿಂದ ಅವರ ಮೇಲೆ ಕಡಿಮೆ ತೆರಿಗೆಯನ್ನು ಹಾಕಲಾಗುವುದು.

೨. ಅನುಬೋಗಿಗೆ ತನ್ನ ಆದಾಯಿಂದ ಗರಿಷ್ಟ ತೃಪ್ತಿಗಳಿಸಿಕೊಳ್ಳುವಲ್ಲಿ ಈ ನಿಯಮ ಸಹಾಯಕವಾಗಿದೆ. ಈ ನಿಯಮದ ಆಧಾರದಿಂದ ತನ್ನ ಮಿತವಾದ ಆದಾಯವನ್ನು ವಿವಿಧ ವಸ್ತುಗಳ ಮೇಲೆ ವೆಚ್ಚ ಮಾಡಿ ಗರಿಷ್ಠ ತೃಪ್ತಿಯನ್ನು ಪಡೆಯುತ್ತಾನೆ. ಪ್ರತಿಯೊಂದು ವಸ್ತುವನ್ನು ಕೊಳ್ಳುವಾಗ ತಾನು ಅದಕ್ಕೆ ಕೊಡುವ ಬೆಲೆ ಅದರಿಂದ ಸಿಗುವ ತೃಪ್ತಿಗೆ ಸಮವಾಗಿದೆಯೋ ಇಲ್ಲವೋ ಎಂಬುದನ್ನು ನೋಡುತ್ತಾನೆ.

೩. ಸರಕಿನ ಬೆಲೆ ನಿರ್ಧಾರದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಉತ್ಪಾದಕನು ತನ್ನ ಸರಕಿನಿಂದ ಅನುಭೋಗಿಗೆ ಅಧಿಕ ತುಷ್ಟಿಗುಣ ದೊರಕುತ್ತಿದೆ ಎಂದು ಅರಿವಾದಾಗ ಅವರ ಬೆಲೆಯನ್ನು ಹೆಚ್ಚಿಸಬಹದು. ಬೆಲೆ-ಬೇಡಿಕೆ ಪ್ರಮಾಣದ ನಿರ್ಧಾರ ತುಷ್ಟಿಗುಣದ ಮೇಲೆ ಅವಲಂಬಿಸಿರುತ್ತದೆ. ಅಧಿಕ ತುಷ್ಟಿಗುಣವಿದ್ದಲ್ಲಿ ಆ ಸರಕಿಗೆ ಬೇಡಿಕೆ ಅಧಿಕವಿರುತ್ತದೆ.

## ೨.೫. ಬೇಡಿಕೆ

ಬೇಡಿಕೆ ಅರ್ಥಶಾಸ್ತ್ರದ ವಿಶ್ಲೇಷಣೆಯಲ್ಲಿ ಮಹತ್ವದ ಒಂದು ಪರಿಕಲ್ಪನೆಯಾಗಿದೆ. ಬಯಕೆ, ಬೇಡಿಕೆ, ತೃಪ್ತಿ, ತುಷ್ಟಿಗುಣ, ಅನುಭೋಗ ಇವು ಪರಸ್ಪರ ಸಂಬಂಧ ಹೊಂದಿವೆ.

**ಅರ್ಥ** : ಸಾಮಾನ್ಯ ಭಾಷೆಯಲ್ಲಿ ಬೇಡಿಕೆ ಎಂದರೆ ಬಯಕೆ ಎಂದರ್ಥ. ಆದರೆ ಅರ್ಥಶಾಸ್ತ್ರದಲ್ಲಿ ಬೇಡಿಕೆ ಎಂದರೆ ಬಯಕೆಯ ಜೊತೆಗೆ ಅದನ್ನು ಪಡೆಯುವ, ಅನುಭೋಗಿಸುವ ಸಾಮರ್ಥ್ಯವೂ ಸೇರಿರುತ್ತದೆ. ಆದ್ದರಿಂದ ಬೇಡಿಕೆ ಎಂದರೆ "ಒಂದು ಸರಕನ್ನು ಪಡೆಯುವ ಬಯಕೆಯ ಜೊತೆಗೆ ಕೊಂಡುಕೊಳ್ಳುವ ಸಾಮರ್ಥ್ಯ ಮತ್ತು "ಕೊಂಡುಕೊಳ್ಳುವ ಮನಸ್ಸಿನಿಂದ ಬೆಂಬಲಿತವಾದ ಬಯಕೆ".

ಸರಕನ್ನು ಪಡೆಯುವ ಬಯಕೆ, ಕೊಂಡುಕೊಳ್ಳುವ ಮನಸ್ಸು, ಕೊಂಡುಕೊಳ್ಳುವ ಶಕ್ತಿ ಕೂಡಿದಾಗ ಬೇಡಿಕೆ ಎನಿಸಿಕೊಳ್ಳುತ್ತದೆ. ಉದಾ. ಒಬ್ಬ ವ್ಯಕ್ತಿಗೆ ಕಾರನ್ನು ಪಡೆಯುವ ಬಯಕೆ ಇರುತ್ತದೆ. ಆದರೆ ಅದಕ್ಕೆ ತೆರುವ ಬೆಲೆ, ಹಣದ ಸಾಮರ್ಥ್ಯ ಇರದಿದ್ದಲ್ಲಿ ಬೇಡಿಕೆ ಎನಿಸುವುದಿಲ್ಲ.

**ಬೇಡಿಕೆಯ ಬಿಂಬಕ :** ಬೇಡಿಕೆ ಸ್ವತಂತ್ರವಾದ ಚಲ ಪರಿಮಾಣವಲ್ಲ. ಇದನ್ನು ಇತರ ಸಂಬಂಧಿತ ಪರಿಭಾವನೆಯ ಜೊತೆಗೆ ಮಾತ್ರ ವಿವರಿಸಲು ಸಾಧ್ಯ. ಇದು ಕಾಲ, ಪರಿಮಾಣ ಮತ್ತು ಬೆಲೆಗೆ ಸಂಬಂಧಿಸಿರುತ್ತದೆ. ಅಥವಾ ಅವುಗಳ ಮೇಲೆ ಅವಲಂಬಿತವಾಗಿರುತ್ತದೆ. ಸಾಮಾನ್ಯವಾಗಿ ಬೇಡಿಕೆ ಬೆಲೆಯನ್ನು ಅವಲಂಬಿಸಿರುತ್ತದೆ. ಅದನ್ನು ಹೀಗೆ ಸೂಚಿಸಬಹುದು.

$D= f(P)$

D ಬೇಡಿಕೆಯನ್ನು P ಬೆಲೆಯನ್ನು ಸೂಚಿಸುತ್ತದೆ.

ಬೇಡಿಕೆಯ ಕ್ರಿಯೆಯು ಬೆಲೆಯಿಂದ ಉಂಟಾಗುತ್ತದೆ.

ಬೇಡಿಕೆಯ ವರ್ಗೀಕರಣ : ಬೇಡಿಕೆಯು ಅವಲಂಬಿತವಾಗಿರುವುದರಿಂದ ಚರಪರಿಮಾಣಗಳ ಆಧಾರದ ಮೇಲೆ ಆದನ್ನು ಮೂರು ವಿಧಗಳಾಗ ವರ್ಗೀಕರಿಸಬಹುದಾಗಿದೆ.

೧. **ಬೆಲೆ ಬೇಡಿಕೆ :** ಅನುಭೋಗಿಯು ಕೊಂಡುಕೊಳ್ಳುವ ಸರಕುಗಳ ಬೇಡಿಕೆಯು ಬೆಲೆಯನ್ನು ಅವಲಂಬಿಸಿದ್ದರೆ ಅದನ್ನು ಭೆಲೆ ಬೇಡಿಕೆ ಎನ್ನಲಾಗುತ್ತದೆ. ಇಲ್ಲಿ ಅನುಭೋಗಿಯ ಆದಾಯ, ಅಭಿರುಚಿ, ಇತರ ವಸ್ತುಗಳ ಬೆಲೆಗಳು ಗೌಣ. ಇಲ್ಲಿ ಕೇವಲ ಬೆಲೆಯ ಆಧಾರದಿಂದಲೆ ಬೇಡಿಕೆ ನಿರ್ಧಾರವಾಗುತ್ತದೆ $D=f [p]$.

೨. **ಆದಾಯ ಬೇಡಿಕೆ :** ಅನುಭೋಗಿಯು ಕೊಂಡುಕೊಳ್ಳುವ ಸರಕುಗಳ ಗಾತ್ರ ಆದಾಯವನ್ನಲಂಬಿಸಿದರೆ ಆದಾಯ ಬೇಡಿಕೆ ಎನ್ನಲಾಗುತ್ತದೆ. ಇಲ್ಲಿ ವಸ್ತುವಿನ ಬೆಲೆ, ಅಭಿರುಚಿ ಗೌಣವಾಗಿರುತ್ತದೆ $D=f [y]$.

೩. **ಛೇದಕ ಬೇಡಿಕೆ :** ಒಂದು ಸರಕಿನ ಬೇಡಿಕೆ ಇನ್ನೊಂದು ಸಂಬಂಧಿತ ವಸ್ತುವಿನ ಬೆಲೆಯನ್ನು ಅವಲಂಬಿಸಿದ್ದರೆ ಅದನ್ನು ಛೇದಕ ಬೇಡಿಕೆ ಎನ್ನಲಾಗುತ್ತದೆ. ಉದಾ.

ಬೆಣ್ಣೆಯ ಬೆಲೆ ಹೆಚ್ಚಾದರೆ ಬ್ರೆಡ್ಡ್‌ನ ಬೇಡಿಕೆ ಕಡಿಮೆಯಾಗುತ್ತದೆ Dx=f [py].

**ಬೇಡಿಕೆಯ ಅನುಸೂಚಿ :** ಬೇಡಿಕೆಯು ಸಾಮಾನ್ಯವಾಗಿ ಬೆಲೆಯ ಮೇಲೆ ಅವಲಂಬಿತವಾಗಿರುತ್ತದೆ. ಬೆಲೆಯು ಬದಲಾದಂತೆ ಬೇಡಿಕೆಯ ಪ್ರಮಾಣವು ಬದಲಾಗುತ್ತದೆ. ವಿವಿಧ ಬೆಲೆಗಳಲ್ಲಿ ಅನುಭೋಗಿಯು ಕೊಂಡುಕೊಳ್ಳುವ ಸರಕುಗಳ ಪರಿಮಾಣವನ್ನು ಸೂಚಿಸುವ ಪಟ್ಟಿಗೆ ಬೇಡಿಕೆಯ ಪಟ್ಟಿ ಅಥವಾ ಬೇಡಿಕೆಯ ಅನುಸೂಚಿ ಎಂದು ಹೆಸರು.

ವಿವಿಧ ಬೆಲೆಗಳಲ್ಲಿ ಒಬ್ಬ ಗ್ರಾಹಕನು ಕೊಂಡುಕೊಳ್ಳುವ ವಸ್ತುಗಳ ಪರಿಮಾಣಗಳ ಪಟ್ಟಿಗೆ ವೈಯಕ್ತಿಕ ಬೇಡಿಕೆ ಅನುಸೂಚಿ ಎಂತಲೂ, ಒಂದು ಮಾರುಕಟ್ಟೆಯಲ್ಲಿರುವ ಎಲ್ಲಾ ಗ್ರಾಹಕರು ಕೊಂಡುಕೊಳ್ಳುವ ವಸ್ತುಗಳ ಪರಿಮಾಣಗಳನ್ನು ತೋರಿಸುವ ಪಟ್ಟಿಗೆ ಮಾರುಕಟ್ಟೆ ಬೇಡಿಕೆ ಅನುಸೂಚಿ ಎಂದೂ ಹೆಸರು.

**ಬೇಡಿಕೆಯ ನಿಯಮ**

ಬೆಲೆ ಮತ್ತು ಬೇಡಿಕೆಯ ಸಂಬಂಧವನ್ನು ಮಾರ್ಷಲ್‌ರವರು ಬೇಡಿಕೆಯ ನಿಯಮದ ಮೂಲಕ ನೀಡಿದ್ದಾರೆ. ಇದು ಸಾಮಾನ್ಯವಾಗಿ ಅನುಭೋಗಿಯು ದಿನನಿತ್ಯ ಚಟುವಟಿಕೆಯಲ್ಲಿ ಹೇಗೆ ಬೆಲೆಗೆ ಬೇಡಿಕೆಯ ಮೂಲಕ ಪ್ರತಿಕ್ರಿಯಿಸುತ್ತಾನೆ ಎಂದು ತಿಳಿಸುತ್ತದೆ. ಪ್ರೊ. ಮಾರ್ಷಲ್ ಪ್ರಕಾರ "ಇತರ ಸ್ಥಿತಿಗತಿಗಳು ಸ್ಥಿರವಾಗಿದ್ದು ಒಂದು ವಸ್ತುವಿನ ಬೆಲೆ ಹೆಚ್ಚಾದರೆ ಆ ವಸ್ತುವಿನ ಬೇಡಿಕೆ ಕಡಿಮೆಯಾಗುತ್ತದೆ. ವಸ್ತುವಿನ ಬೆಲೆ ಕಡಿಮೆಯಾದರೆ ಬೇಡಿಕೆ ಹೆಚ್ಚಾಗುತ್ತದೆ". ಅಂದರೆ ಬೆಲೆಗೂ ಬೇಡಿಕೆಗೂ ವಿಲೋಮ ಸಂಬಂಧವಿದೆ. ಇದನ್ನು ಬೇಡಿಕೆಯ ಅನುಸೂಚಿಯಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೨.೨**

**ಬೇಡಿಕೆಯ ಅನುಸೂಚಿ**

| ಬೆಲೆ ರೂ.ಗಳಲ್ಲಿ | ಬೇಡಿಕೆಯ ಪ್ರಮಾಣ |
|---|---|
| ೧೦ | ೦೨ |
| ೦೫ | ೦೪ |
| ೦೩ | ೦೬ |
| ೦೨ | ೧೮ |
| ೦೧ | ೧೦ |

ಅನುಸೂಚಿಯಲ್ಲಿ ಬೆಲೆ ೧೦ ರೂ. ಇದ್ದಾಗ ಬೇಡಿಕೆ ೨ ಯೂನಿಟ್ ಇದೆ. ಅದೇ ವಸ್ತುವಿನ ಬೆಲೆ ರೂ ೧ ಕ್ಕೆ ಇಳಿದಾಗ ಅದರ ಬೇಡಿಕೆ ೧೨ಕ್ಕೆ ಹೆಚ್ಚಾಗಿದೆ. ಸಾಮಾನ್ಯವಾಗಿ ಅನುಭೋಗಿಯು ಬೆಲೆ ಹೆಚ್ಚಾದಾಗ ಕಡಿಮೆ ವಸ್ತುವನ್ನು ಕೊಂಡುಕೊಳ್ಳುತ್ತಾನೆ. ಬೆಲೆ ಕಡಿಮೆಯಾದರೆ ಕೊಂಡುಕೊಳ್ಳುವ ವಸ್ತುವಿನ ಪ್ರಮಾಣವು ಹೆಚ್ಚಾಗುತ್ತದೆ. ಈ

ನಿಯಮವು ಮಾರುಕಟ್ಟೆಯಲ್ಲಿ ಬೆಲೆಗೆ ಸಂಬಂಧಿಸಿದಂತೆ ಬೇಡಿಕೆ ಹೇಗೆ ಪ್ರತಿಕ್ರಿಯಿಸುತ್ತದೆ ಎನ್ನುವುದನ್ನು ವಿವರಿಸುತ್ತದೆ.

ಬೇಡಿಕೆಯ ಅನುಸೂಚಿಯನ್ನು ರೇಖಾಚಿತ್ರದ ಮೂಲಕ ವಿವರಿಸಬಹುದು. (ಚಿತ್ರ ೨.೪) ox ತಲಾಕ್ಷವು ಬೇಡಿಕೆಯನ್ನು oy ಲಂಬಾಕ್ಷವು ಬೆಲೆಯನ್ನು ಸೂಚಿಸುತ್ತದೆ.

ಬೇಡಿಕೆ ರೇಖೆಯು ಒಂದು ನಿರ್ದಿಷ್ಟ ಬೆಲೆಗೆ ಬೇಡಿಕೆಯ ಪ್ರಮಾಣ ಎಷ್ಟು ಎಂಬುದನ್ನು ಸೂಚಿಸುತ್ತದೆ. ಬೇಡಿಕೆಯ ರೇಖೆಯು ಯಾವಾಗಲೂ ಎಡದಿಂದ ಬಲಕ್ಕೆ ಇಳಿಮುಖವಾಗಿರುತ್ತದೆ. ಆ ಮೂಲಕ ಅದು ಬೆಲೆ ಹೆಚ್ಚಿದಂತೆಲ್ಲಾ ಕಡಿಮೆ ಪ್ರಮಾಣದಲ್ಲಿ ವಸ್ತುವನ್ನು ಕೊಳ್ಳಲಾಗುತ್ತದೆ ಎಂಬದುನ್ನು ಸೂಚಿಸುತ್ತದೆ. ಬೇಡಿಕೆಯ ನಿಯಮದಲ್ಲಿ ಕೆಲವು ಕಲ್ಪನೆಗಳನ್ನು ಮಾಡಿಕೊಳ್ಳಲಾಗಿದೆ. ಅದೆಂದರೆ "ಇತರ ಸ್ಥಿತಿಗತಿಗಳು ಸ್ಥಿರವಾಗಿರಬೇಕು" ಎಂದರೆ, ಇತರ ವಸ್ತುಗಳ ಬೆಲೆ, ಆದಾಯ, ಅಭಿರುಚಿ ಮುಂತಾದವುಗಳಲ್ಲಿ ಬದಲಾವಣೆ ಇರದಿದ್ದಾಗ ಮಾತ್ರ ಬೇಡಿಕೆಯ ನಿಯಮ ಅನುಷ್ಠಾನಗೊಳ್ಳುತ್ತದೆ.

**ಚಿತ್ರ ೨.೨.**

**ಬೇಡಿಕೆಯ ನಿಯಮ**




ಬೇಡಿಕೆಯ ನಿಯಮವು ಬೆಲೆ ಏರಿದಾಗ ಬೇಡಿಕೆ ಇಳಿಯುತ್ತದೆ, ಬೆಲೆ ಇಳಿದಾಗ ಬೇಡಿಕೆ ಹೆಚ್ಚಾಗುತ್ತದೆ ಎಂದು ಮಾತ್ರ ತಿಳಿಸುತ್ತದೆ. ಆದರೆ ಎಷ್ಟು ಪ್ರಮಾಣದಲ್ಲಿ ಯಾವ

ದರದಲ್ಲಿ ಬೇಡಿಕೆ ಬದಲಾಗುತ್ತದೆ ಎಂಬ ಸೂಕ್ಷ್ಮ ಅಳತೆಯನ್ನು ವಿವರಿಸುವುದಿಲ್ಲ. ಅದನ್ನು ಇನ್ನೊಂದು ಪರಿಕಲ್ಪನೆಯ ವಿವರಿಸುತ್ತದೆ. ಅದೇ ಬೇಡಿಕೆಯ ಸ್ಥಿತಿಸ್ಥಾಪಕತೆ.

**ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆ**

ಬೆಲೆ ಬೇಡಿಕೆಯ ಸ್ಥಿತಸ್ಥಾಪಕತೆ ಕುರಿತಂತೆ ಪೂರ್ಣ ಪ್ರಮಾಣದ ವಿವರಣೆ ನೀಡಿದ ಅರ್ಥಶಾಸ್ತ್ರಜ್ಞ ಆಲ್ಫ್ರೆಡ್ ಮಾರ್ಷಲ್. ಬೆಲೆ ಮತ್ತು ಬೇಡಿಕೆಗಳ ನಡುವೆ ವಿಲೋಮ ಸಂಬಂಧವಿದೆ. ಬೆಲೆಯ ಏರಿಳಿತದೊಂದಿಗೆ ಬೇಡಿಕೆಯ ಗಾತ್ರದಲ್ಲಿ ಸಂಭವಿಸುವ ಬದಲಾವಣೆಯ ಪ್ರಮಾಣವನ್ನು ಅಳೆಯುವ ಪರಿಕಲ್ಪನೆಯೆ ಬೇಡಿಕೆಯ ಸ್ಥಿತಿಸ್ಥಾಪಕತೆ. ಇದನ್ನು ಸೂತ್ರದ ಮೂಲಕ ಹೀಗೆ ವಿವರಿಸಬಹುದು.

$$\text{ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆ} = \frac{\text{ಬೇಡಿಕೆಯ ಪ್ರಮಾಣದಲ್ಲಿ ಶೇಕಡವಾರು ಬದಲಾವಣೆ}}{\text{ಬೆಲೆಯಲ್ಲಿ ಶೇಕಡಾವಾರು ಬದಲಾವಣೆ}}$$

ಉದಾಹರಣೆಗೆ :

ಬೆಲೆ ರೂ. ೧೦ ಇರುವಾಗ ೨ ತೆಂಗಿನಕಾಯಿಗಳನ್ನು ಓರ್ವ ಅನುಬೋಗಿ ಕೊಳ್ಳುತ್ತಾನೆ. ಬೆಲೆ ರೂ. ೫ ಕ್ಕೆ ಇಳಿದಾಗ ೧೦ ತೆಂಗಿನಕಾಯಿ ಕೊಳ್ಳುತ್ತಾನೆ. ಆಗ ಸ್ಥಿತಿಸ್ಥಾಪಕತೆಯು

$$ep = \frac{\%\Delta Q}{\%\Delta P} = \frac{\text{ಬೇಡಿಕೆಯ ಪ್ರತಿಶತ ಬದಲಾವಣೆ}}{\text{ಬೆಲೆಯ ಪ್ರತಿಶತ ಬದಲಾವಣೆ}}$$

$\Delta Q$ = ೮ ತೆಂಗಿನಕಾಯಿ (೨ - ೧೦ = ೮)

$$\%\Delta Q = \frac{8}{2} \times 100 = 400\%$$

$\Delta P$ = ರೂ ೧೦ ಮತ್ತು P = ೫ (ರೂ. ೧೦ - ೫ = ೫)

$$\%\Delta P = \frac{5}{2} \times 100 = 250\%$$

$$ep = \frac{\%\Delta Q}{\%\Delta P} = \frac{400\%}{250\%} = 1.6 \ (ep > 1)$$

ಇಲ್ಲಿ ಸ್ಥಿತಿಸ್ಥಾಪಕತೆಯು ಒಂದಕ್ಕಿಂತ ಅಧಿಕವಾಗಿದೆ.

೧. ಒಂದಕ್ಕಿಂತ ಅಧಿಕವಿದ್ದರೆ [ep>1] ಅದು ಸಾಪೇಕ್ಷ ಸ್ಥಿತಿಸ್ಥಾಪಕತೆ ಎನಿಸುತ್ತದೆ.

೨. ಒಂದು ಆಗಿದ್ದರೆ [ep=1] ಅದನ್ನು ಏಕಸಮಾನ ಸ್ಥಿತಿಸ್ಥಾಪಕತೆಯೆಂದು ಕರೆಯಲಾಗುತ್ತದೆ.

೩. ಒಂದಕ್ಕಿಂತ ಕಡಿಮೆಯಿದ್ದರೆ [ep<1] ಅದು ಸಾಪೇಕ್ಷ ಸ್ಥಿತಿಸ್ಥಾಪಕತೆ ಎನಿಸುತ್ತದೆ. ಸ್ಥಿತಿಸ್ಥಾಪಕತೆಯಲ್ಲಿ ಐದು ವಿಧಗಳಿವೆ.

**ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆಯ ಪ್ರಕಾರಗಳು**

ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆಯಲ್ಲಿ ಐದು ಪ್ರಕಾರಗಳಿವೆ.

೧. **ಪರಿಪೂರ್ಣ ಬೆಲೆ ಬೇಡಿಕೆ ಅಸ್ಥಿತಿಸ್ಥಾಪಕತೆ (e = 0) :** ವಸ್ತುವಿನ ಬೆಲೆಯಲ್ಲಿ ಯಾವುದೇ ಪ್ರಮಾಣದ ವ್ಯತ್ಯಾಸಗಳುಂಟಾದರೂ, ಅದರಿಂದ ಆ ವಸ್ತುವಿನ ಬೇಡಿಕೆಯಲ್ಲಿ ಯಾವುದೇ ವ್ಯತ್ಯಾಸ ಉಂಟಾಗದಿದ್ದರೆ ಅಂದರೆ ಬೇಡಿಕೆಯ ಪರಿಮಾಣವೂ ಎಲ್ಲ ಮಟ್ಟದ ಬೆಲೆಯಲ್ಲಿ ಒಂದೆ ಆಗಿದ್ದರೆ ಅದನ್ನು ಪರಿಪೂರ್ಣ ಬೆಲೆ ಬೇಡಿಕೆ ಅಸ್ಥಿತಿಸ್ಥಾಪಕತೆ ಎಂದು ಹೇಳಲಾಗುತ್ತದೆ.

೨. **ಸಾಪೇಕ್ಷ ಬೆಲೆ ಬೇಡಿಕೆ ಅಸ್ಥಿತಿಸ್ಥಾಪಕತೆ (e<1) :** ವಸ್ತುವಿನ ಬೆಲೆಯು ಪ್ರತಿಶತ ೧ ರಷ್ಟು ಬದಲಾವಣೆಯಾದಾಗ ಆ ವಸ್ತುವಿನ ಬೇಡಿಕೆಯ ಪ್ರಮಾಣದ ಬದಲಾವಣೆ ದರದಲ್ಲಿ ಪ್ರತಿಶತ ೧ ಕ್ಕಿಂತಲೂ ಕಡಿಮೆಯಾದಲ್ಲಿ ಅದು ಸಾಪೇಕ್ಷ ಬೆಲೆ ಬೇಡಿಕೆ ಅಸ್ಥಿತಿ ಸ್ಥಾಪಕತೆ ಆಗಿರುತ್ತದೆ. ಸಾಮಾನ್ಯವಾಗಿ ಜೀವನಾಶ್ಯಕ ವಸ್ತುಗಳಿಗೆ ಈ ತೆರನಾದ ಅಸ್ಥಿತಿಸ್ಥಾಪಕತೆ ಇರುತ್ತದೆ.

೩. **ಸರಿಸಮ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ (e=1) :** ಏಕಾಂಶ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ ಅಥವಾ ಸರಿಸಮ ಬೆಲೆಬೇಡಿಕೆ ಸ್ಥಿತಿಸ್ಥಾಪಕತ್ವದಲ್ಲಿ, ವಸ್ತುವಿನ ಬೆಲೆಯಲ್ಲಿ ಪ್ರತಿಶತ ಎಷ್ಟರಮಟ್ಟಿಗೆ ವ್ಯತ್ಯಾಸವುಂಟಾಗುವುದೋ ಅದೇ ಅಂದರೆ ಸರಿಸಮದ ವ್ಯತ್ಯಾಸ ಬೇಡಿಕೆಯ ಪ್ರಮಾಣದಲ್ಲಿ ಉಂಟಾಗುತ್ತದೆ.

೪. **ಸಾಪೇಕ್ಷ ಬೆಲೆಬೇಡಿಕೆ ಸ್ಥಿತಿಸ್ಥಾಪಕತೆ (e>1):** ವಸ್ತುವಿನ ಬೆಲೆಯು ಪ್ರತಿಶತ ೧ ರಷ್ಟು ಬದಲಾವಣೆಯಾದಾಗ ಬೇಡಿಕೆಯ ಪ್ರಮಾಣದಲ್ಲಿನ ಬದಲಾವಣೆಯು ಪ್ರತಿಶತ ೧ಕ್ಕಿಂತಲೂ ಹೆಚ್ಚಾಗಿದ್ದರೆ ಅದು ಸಾಪೇಕ್ಷ ಬೆಲೆಬೇಡಿಕೆ ಸ್ಥಿತಿಸ್ಥಾಪಕತೆ. ಸಾಮಾನ್ಯವಾಗಿ ಹಿತದಾಯಕ ಮತ್ತು ವಿಲಾಸೀ ವಸ್ತುಗಳು ಈ ಪ್ರಕಾರದ ಸ್ಥಿತಿಸ್ಥಾಪಕತೆಯನ್ನು ಹೊಂದಿವೆ.

೫. **ಪರಿಪೂರ್ಣ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ (e=x) :** ವಸ್ತುವಿನ ಬೆಲೆಯಲ್ಲಿ ಸ್ವಲ್ಪ ಬದಲಾವಣೆಯಾದರೂ ಸ್ವಲ್ಪ ಏರಿಕೆ ಉಂಟಾದರೆ ಬೇಡಿಕೆ ಶೂನ್ಯವಾಗುತ್ತದೆ. ಸ್ವಲ್ಪ ಇಳಿಕೆ ಕಂಡುಬಂದರೆ ಬೇಡಿಕೆ ಅನಂತವಾಗುತ್ತದೆ.

ನಿಜ ಜೀವನದಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಕಾರಗಳೆಂದರೆ ಸಾಪೇಕ್ಷ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ ಮತ್ತು ಸಾಪೇಕ್ಷ ಬೆಲೆಬೇಡಿಕೆ ಅಸ್ಥಿತಿಸ್ಥಾಪಕತೆ ಮಾತ್ರ. ಉಳಿದ ಪ್ರಕಾರಗಳು ಕೇವಲ ಕಾಲ್ಪನಿಕವಾದವು.

## ರೇಖಾಚಿತ್ರಗಳಲ್ಲಿ ಬೆಲೆ ಬೇಡಿಕೆ ಸ್ಥಿತಿ ಸ್ಥಾಪಕತೆ

ಪರಿಪೂರ್ಣ ಬೆಲೆ ಬೇಡಿಕೆ ಅಸ್ಥಿತಿಸ್ಥಾಪಕತೆ




ಚಿತ್ರ ೨.೩. ಸರಕಿನ ಪ್ರಮಾಣ

ಸಾಪೇಕ್ಷ ಬೆಲೆ ಬೇಡಿಕೆ ಅಸ್ಥಿತಿಸ್ಥಾಪಕತೆ




ಚಿತ್ರ ೨.೪. ಸರಕಿನ ಪ್ರಮಾಣ

ಸರಿಸಮ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ




ಚಿತ್ರ ೨.೫. ಸರಕಿನ ಪ್ರಮಾಣ

ಸಾಪೇಕ್ಷ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ




ಚಿತ್ರ ೨.೬. ಸರಕಿನ ಪ್ರಮಾಣ

ಪರಿಪೂರ್ಣ ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ




**ಚಿತ್ರ ೨.೭. ಸರಕಿನ ಪ್ರಮಾಣ**

**ಅನುಭೋಗಿಯ ಮಿಗುತೆ**

ಅನುಭೋಗಿಯ ವರ್ತನೆಯನ್ನು ವಿಶ್ಲೇಷಿಸುವಾಗ ಈ ಪರಿಕಲ್ಪನೆಯು ಅತ್ಯಂತ ಮಹತ್ವದ್ದಾಗಿದೆ. ಇದನ್ನು ಮೊದಲು ಪರಿಚಯಿಸಿದವರು ಎ.ಜೆ. ಡ್ಯೂಫಿಟ್ ಎನ್ನುವರು. ಇದನ್ನು ಅನುಭೋಗಿಯ ತುಷ್ಟಿಗುಣ ವಿಶ್ಲೇಷಣೆಗೆ ಅಳವಡಿಸಿಕೊಂಡ ಕೀರ್ತಿ ಆಲ್ಫ್ರೆಡ್ ಮಾರ್ಷಲ್‌ಗೆ ಸಲ್ಲುತ್ತದೆ. ಇದು ಆರ್ಥಿಕ ಸಿದ್ಧಾಂತಕ್ಕೆ ಮಾರ್ಷಲ್ ನೀಡಿದ ಕೊಡುಗೆಯಾಗಿದೆ.

ಅನುಭೋಗಿಯ ಅಧಿಕ ಮಿಗುತೆ ದಿನನಿತ್ಯದ ಕೊಳ್ಳುವಿಕೆಯಲ್ಲಿ ಸಾಮಾನ್ಯವಾಗಿ ಅನುಭವಕ್ಕೆ ಬರುವ ಸಂಗತಿಯಾಗಿದೆ. ಇದೊಂದು ಮಾನಸಿಕವಾಗಿ ಅನುಭವವಾಗಿದೆ. ತೃಪ್ತಿಯನ್ನು ಪಡೆಯುವುದಕ್ಕಾಗಿ ಅನುಭೋಗಿಯು ವಸ್ತವನ್ನು ಸೇವಿಸುತ್ತಾನೆ. ವಸ್ತುವನ್ನು ಪಡೆಯಬೇಕಾದರೆ ಅವನು ಬೆಲೆ ಕೊಡಬೇಕಾಗುತ್ತದೆ. ಆಕಸ್ಮಾತ್ ಮಾರುಕಟ್ಟೆಯಲ್ಲಿ ಆ ವಸ್ತುವಿನಿಂದ ದೊರೆಯುವ ತೃಪ್ತಿಯು ಆ ವಸ್ತುವಿಗೆ ಕೊಡುವ ಬೆಲೆಗಿಂತ ಹೆಚ್ಚಿದ್ದರೆ ಅನುಭೋಗಿಗೆ ಮಾನಸಿಕವಾಗಿ ಅಧಿಕ ತೃಪ್ತಿ ಪಡೆಯುವಂತ ಅನುಭವವಾಗುತ್ತದೆ. ಇದನ್ನೇ ನಾವು ಅನುಬೋಗಿಯ ಮಿಗುತೆ ಎಂದು ಕರೆಯುತ್ತೇವೆ.

ದೈನಂದಿನ ಜೀವನದಲ್ಲಿ ಕಂಡುಬರುವಂತೆ ಕೆಲವು ವಸ್ತುಗಳಿಂದ ದೊರೆಯುವ ತೃಪ್ತಿಯು ಆ ವಸ್ತುಗಳಿಗೆ ಅನುಭೋಗಿಗಳು ಕೊಡಲು ಸಿದ್ಧರಿರುವ ಬೆಲೆಗಿಂತ

ಹೆಚ್ಚಿರುತ್ತದೆ. ವಸ್ತುವಿಗೆ ಅನುಭೋಗಿಯು ಕೊಡುವ ಬೆಲೆ ಮತ್ತು ಅದರಿಂದ ದೊರೆಯುವ ತೃಪ್ತಿಯ ನಡುವಣ ವ್ಯತ್ಯಾಸವೇ ಅನುಭೋಗಿಯ ಮಿಗುತೆ.

ಇದು ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮದ ಆಧಾರದ ಮೇಲೆ ರಚಿತವಾಗಿದೆ. ಜೆ.ಆರ್. ಹಿಕ್ಸ್‌ನ ಪ್ರಕಾರ ಒಂದು ವಸ್ತುವಿನ ಸೀಮಾಂತ ಮೌಲ್ಯ ಮತ್ತು ಅದಕ್ಕೆ ನೀಡಿದ ಬೆಲೆಯ ನಡುವಿನ ವ್ಯತ್ಯಾಸವೇ ಅನುಭೋಗಿಯ ಮಿಗುತೆ. ಇನ್ನೂ ಸರಳವಾಗಿ ಅರ್ಥೈಸಬೇಕೆಂದರೆ,

ಅನುಭೋಗಿಯ ಮಿಗುತೆ = ಸುಪ್ತ ಬೆಲೆ - ವಾಸ್ತವ ಬೆಲೆ

ಸುಪ್ತ ಬೆಲೆ ಎಂದರೆ ಅನುಭೋಗಿ ವಸ್ತುವಿಗೆ ನೀಡಲು ಸಿದ್ಧವಾದ ಬೆಲೆ. ವಾಸ್ತವ ಬೆಲೆ ಎಂದರೆ ಈ ಅನುಭೋಗಿ ವಸ್ತುವಿಗೆ ನಿಜವಾಗಿ ನೀಡುವ ಬೆಲೆ.

ಅನುಭೋಗಿಯ ಮಿಗುತೆಯನ್ನು ಚಿತ್ರವೊಂದರ ಮೂಲಕ ತೋರಿಸಬಹುದು.

ಚಿತ್ರ ೨.೫ರಲ್ಲಿ OY ಲಂಬಾಕ್ಷವು ಬೆಲೆ ಮತ್ತು ತುಷ್ಟಿಗುಣವನ್ನು ಪ್ರತಿನಿಧಿಸುತ್ತದೆ. OX ಸಮತಲಾಕ್ಷವು ಸರಕುಗಳ ಪ್ರಮಾಣವನ್ನು ತೋರಿಸುತ್ತದೆ. D/MW ರೇಖೆಯು ಬೇಡಿಕೆ ಅಥವಾ ಸೀಮಾಂತ ತುಷ್ಟಿಗುಣವನ್ನು ಪ್ರತಿನಿಧಿಸುತ್ತದೆ.




ಡಾ. ಮಾರ್ಷಲ್‌ರ ಪ್ರಕಾರ ತುಷ್ಟಿಗುಣದಿಂದ ಬೆಲೆಯನ್ನು ಕಳೆದಾಗ ಅನುಭೋಗಿಯ ಮಿಗುತೆ ದೊರೆಯುತ್ತದೆ.

ಅನುಭೋಗಿಯ ಮಿಗುತೆ = ತುಷ್ಟಿಗುಣ - ಬೆಲೆ

= ORMQ-OPMQ=PRM

ಇಲ್ಲಿ PRM ಅನುಭೋಗಿಯ ಮಿಗುತೆಯಾಗಿರುತ್ತದೆ.

ಅನುಭೋಗಿಯ ಮಿಗುತೆಯು ಸಾಮಾನ್ಯವಾಗಿ ಅಗತ್ಯ ವಸ್ತುಗಳ ಕೊಳ್ಳುವಿಕೆಯಲ್ಲಿ ಗಮನಕ್ಕೆ ಬರುತ್ತದೆ. ಉದಾ. ಉಪ್ಪು, ಬೆಂಕಿಪೊಟ್ಟಣ, ಅಂಚೆಯ ಕಾರ್ಡು ಇತ್ಯಾದಿ. ಇಂತಹ ಪದಾರ್ಥಗಳಿಗೆ ನಾವು ವಾಸ್ತವವಾಗಿ ಬಹಳ ಕಡಿಮೆ ಬೆಲೆ ಕೊಡುತ್ತೇವೆ. ಆದರೆ ಅವುಗಳಿಂದ ದೊರೆಯುವ ತೃಪ್ತಿ ಅಗಣಿತವಾಗುತ್ತದೆ. ಇವುಗಳು ಅತ್ಯವಶ್ಯಕವಾಗಿ ಬೇಕಾಗಿರುತ್ತದೆ. ಎಷ್ಟೇ ಬೆಲೆ ಹೆಚ್ಚಿದ್ದರೂ ಇವುಗಳಿಂದ ದೊರೆಯುವ ತುಷ್ಟಿಗುಣ ಅಧಿಕವಾಗಿರುತ್ತದೆ.

ಅನುಭೋಗಿಯ ಮಿಗುತೆಯನ್ನು ಕರಾರುವಕ್ಕಾಗಿ ಅಳೆಯುವುದು ಸಾಧ್ಯವಿಲ್ಲವಾದರೂ, ಅದು ಬಹಳ ಮಹತ್ವದ್ದಾಗಿದೆ. ಅನುಭೋಗಿಯ ದೈನಂದಿನ ಅನುಭವಕ್ಕೆ ಬರುವಂತಹದ್ದಾಗಿದೆ.

೧. ಅದು ತೆರಿಗೆ ನೀತಿ ರಚಿಸಲು ಸಹಾಯಕವಾಗಿದೆ.

೨. ಏಕಸ್ವಾಮ್ಯ ಮಾರುಕಟ್ಟೆಯಲ್ಲಿ ಬೆಲೆ ನಿಗದಿ ಮಾಡಲು ಸಹಾಯಕವಾಗಿದೆ.

೩. ಈ ಭಾವನೆಯಿಂದ ಒಂದು ವಸ್ತುವಿನ ಉಪಯುಕ್ತ ಮೌಲ್ಯ ಮತ್ತು ವಿನಿಮಯ ಮೌಲ್ಯಗಳ ವ್ಯತ್ಯಾಸವನ್ನು ತಿಳಿದುಕೊಳ್ಳಬಹುದಾಗಿದೆ. ಈ ಪರಿಕಲ್ಪನೆಯು ತಾತ್ವಿಕ ಹಾಗೂ ಪ್ರಾಯೋಗಿಕ ಮಹತ್ವಗಳೆರಡನ್ನು ಪಡೆದಿದೆ.

ಈ ಕಾರಣಗಳಿಂದಾಗಿ ಅನುಭೋಗಿಯ ಮಿಗುತೆ ಪರಿಕಲ್ಪನೆಗೆ ಅರ್ಥಶಾಸ್ತ್ರದಲ್ಲಿ ವಿಶೇಷ ಮಹತ್ವವಿದೆ.

## ೨.೬. ಸಾರಾಂಶ

೧. ಬಯಕೆಗಳೆಂದರೆ ಸರಕು ಮತ್ತು ಸೇವೆಗಳನ್ನು ಬಳಸಿ ಇಷ್ಟಗಳನ್ನು ತೃಪ್ತಿಪಡಿಸಬೇಕೆಂಬ ತುಡಿತ.




೨. ಬಯಕೆಗಳ ವರ್ಗೀಕರಣ




೩. ಬೆಲೆ ಕೊಟ್ಟು ಪಡೆಯಬೇಕಾಗಿರುವ ಭೌತಿಕ ಉತ್ಪನ್ನಗಳು ಸರಕುಗಳು. ಆರ್ಥಿಕ ಚಟುವಟಿಕೆಗಳು ಸೇವೆಗಳು.



೪. ಸರಕು ಮತ್ತು ಸೇವೆಗಳನ್ನು ಬಳಸಿ ಬಯಕೆಗಳನ್ನು ತೃಪ್ತಿ ಪಡಿಸುವ ಕ್ರಿಯೆಗೆ ಅನುಭೋಗವೆಂದು ಹೆಸರು.




೫. ತುಷ್ಟಿಗುಣವು ಬಯಕೆಗಳನ್ನು ತೃಪ್ತಿಪಡಿಸುವ ಶಕ್ತಿಯಾಗಿದೆ.




೬. ಎಡೆಬಿಡದೆ ಒಂದೇ ಸರಕನ್ನು ಅನುಭೋಗಿಸುತ್ತಾ ಹೋದರೆ ಅದರಿಂದ ಸಿಗುವ ತುಷ್ಟಿಗುಣ ಕಡಿಮೆಯಾಗುತ್ತಾ ಹೋಗುವುದನ್ನು ಇಳಿಕೆಯ ಸೀಮಾಂತ ತುಷ್ಟಿಗುಣ ನಿಯಮ ತಿಳಿಸುತ್ತದೆ.



೭. ಬೇಡಿಕೆಯ ನಿಯಮವು ಬೆಲೆ ಮತ್ತು ಬೇಡಿಕೆಯ ಪ್ರಮಾಣದ ನಡುವಣ ವಿಲೋಮ ಸಂಬಂಧವನ್ನು ತಿಳಿಸುತ್ತದೆ. ಬೇಡಿಕೆಯ ರೇಖೆಯು ಎಡದಿಂದ ಬಲಕ್ಕೆ ಕೆಳಮುಖವಾಗಿ ಪ್ರಯಾಣ ಮಾಡುತ್ತದೆ.




೮. ಬೆಲೆ ಬದಲಾದಾಗ ಬೇಡಿಕೆಯ ಪ್ರಮಣದಲ್ಲಾಗುವ ಬದಲಾವಣೆಯನ್ನು ಮಾಪನ ಮಾಡಲು ಬಳಸುವ ಆರ್ಥಿಕ ಪರಿಕಲ್ಪನೆಗೆ ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆಯೆಂದು ಹೆಸರು.




$$ep = \frac{\% \Delta Q}{\% \Delta P}$$

$$ep = \frac{\Delta Q}{\Delta P} \times \frac{P}{Q}$$

$$ep = \frac{\Delta Q}{\Delta P} \times \frac{P+p_1}{Q+Q_1}$$

೯. ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆಯ ಶ್ರೇಣಿಗಳು

| ಶ್ರೇಣಿ | ಬೆಲೆಯಲ್ಲಿ ಬದಲಾವಣೆ | ಬೇಡಿಕೆಯಲ್ಲಿ ಬದಲಾವಣೆ |
|---|---|---|
| ೧. ಪರಿಪೂರ್ಣ ಸ್ಥಿತಿಸ್ಥಾಪಕತೆ | ಇಲ್ಲ | ಅಪಾರ |
| ೨. ಪರಿಪೂರ್ಣ ಅಸ್ಥಿತಿಸ್ಥಾಪಕ | ಇದೆ | ಇಲ್ಲ |
| ೩. ಏಕಸಮಾನ ಸ್ಥಿತಿಸ್ಥಾಪಕತೆ | ಒಂದೇ ರೀತಿ | ಒಂದೇ ರೀತಿ |
| ೪. ಸಾಪೇಕ್ಷ ಸ್ಥಿತಿಸ್ಥಾಪಕತೆ | ತುಂಬಾ ಬದಲಾವಣೆ | ಸ್ವಲ್ಪ ಬದಲಾವಣೆ |
| ೫. ಸಾಪೇಕ್ಷ ಅಸ್ಥಿತಿಸ್ಥಾಪಕತೆ | ಸ್ವಲ್ಪ ಬದಲಾವಣೆ | ತುಂಬಾ ಬದಲಾವಣೆ |

೧೦. ಅನುಭೋಗಿಯ ಮಿಗುತೆ = ತುಷ್ಟಿಗುಣ > ಬೆಲೆ

**ಅನುಭೋಗಿಯ ಮಿಗುತೆ**

| **ಮಿತಿಗಳು** | **ಮಹತ್ವ** |
| --- | --- |
| ೧. ತುಷ್ಟಿಗುಣದ ಸಂಖ್ಯಾಮಾಪನ ಕಲ್ಪನೆ | ೧. ಜೀವನಮಟ್ಟದ ತುಲನೆಗೆ ಬಳಕೆ |
| ೨. ಹಣದ ಸ್ಥಿರ ತುಷ್ಟಿಗುಣ ಕಲ್ಪನೆ | ೨. ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಬಳಕೆ |
| ೩. ಅನುಭೋಗಿಯ ವಿಚಾರಶೀಲತೆಯ ಕಲ್ಪನೆ | ೩. ಸಾರ್ವಜನಿಕ ಹಣಕಾಸಿನಲ್ಲಿ ಬಳಕೆ |
| ೪. ಇತರ ವಿಷಯಗಳ ಸ್ಥಿರತೆಯ ಕಲ್ಪನೆ | ೪. ಕಲ್ಯಾಣ ಅರ್ಥಶಾಸ್ತ್ರದ ಹುಟ್ಟಿಗೆ ಕಾರಣ |

## ೨.೭. ಪಾರಿಭಾಷಿಕ ಕೋಶ

ಅನುಭೋಗ - Consumption = ಸರಕು ಮತ್ತು ಸೇವೆಗಳನ್ನು ಬಳಸಿ ಬಯಕೆ ಗಳನ್ನು ತೃಪ್ತಿಪಡುಸುವ ಕ್ರಿಯೆ.

ತುಷ್ಟಿಗುಣ - Utility = ಸರಕು ಸೇವೆಗಳಲ್ಲಿ ಸುಪ್ತವಾಗಿರುವ ಬಯಕೆಗಳನ್ನು ತೃಪ್ತಿ ಪಡಿಸುವ ಶಕ್ತಿ.

ಬೇಡಿಕೆ - Demand = ಬಯಕೆ ಮತ್ತು ಕೊಳ್ಳುವ ಸಾಮರ್ಥ್ಯದ ಸಮ್ಮಿಲನ.

ಸ್ಥಿತಿಸ್ಥಾಪಕತೆ - Elasticity = ಚರಪರಿಮಾಣಗಳ ಬದಲಾವಣೆಗಳಿಗೆ ಪರಸ್ಪರ ಪ್ರತಿಸ್ಪಂದನ.

ಸರಕುಗಳು - Goods = ಬಯಕೆಗಳನ್ನು ತೃಪ್ತಿಪಡಿಸುವ ಭೌತಿಕ ವಸ್ತುಗಳು.

ಸೇವೆಗಳು - Services = ಬಯಕೆಗಳನ್ನು ತೃಪ್ತಿಪಡಿಸುವ ಅಗೋಚರ ಕ್ರಿಯೆಗಳು.

ಅನುಭೋಗಿಯ ಮಿಗುತೆ - Consumer Surplus = ಉಪಯೋಗವು ಬೆಲೆಗಿಂತ ಅಧಿಕವಾದಾಗ ಅನುಭೋಗಿಯ ಮನೋಸ್ಥಿತಿ.

ರೂಪ ತುಷ್ಟಿಗುಣ - Form utility = ರೂಪವನ್ನು ಬದಲಾಯಿಸಿ ಸೃಷ್ಟಿಸಿದ ಉಪಯೋಗ.

ಕಾಲ ತುಷ್ಟಿಗುಣ - Time utility =ಸಮಯದಿಂದಾಗಿ ಸೃಷ್ಟಿಯಾದ ಉಪಯೋಗ.

ಸ್ಥಳ ತುಷ್ಟಿಗುಣ - Place utility = ಸ್ಥಳ ಬದಲಾವಣೆಯಿಂದ ಸೃಷ್ಟಿಯಾದ ತುಷ್ಟಿಗುಣ.

## ೨.೮. ಪ್ರಶ್ನೆಗಳು

I. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ. (೧ ಅಂಕಗಳು)

೧. ಬಯಕೆಗಳು ಎಂದರೆ ಏನು?

೨. ಅವಶ್ಯಕ ಬಯಕೆಗಳು ಎಂದರೆ ಯಾವುದು?

೩. ಹಿತದಾಯಕ ಬಯಕೆಗಳಿಗೆ ಉದಾಹರಣೆ ನೀಡಿ.

೪. ವಿಲಾಸೀ ಬಯಕೆಗಳು ಎಂದರೆ ಯಾವುವು?

೫. ಸರಕು ಎಂದರೇನು?

೬. ಅನುಭೋಗಿ ಸರಕುಗಳ ಅರ್ಥ ನೀಡಿ.

೭. ಉತ್ಪಾದಕ ಸರಕುಗಳು ಯಾವುವು?

೮. ಯಾವ ಸರಕುಗಳನ್ನು ದೀರ್ಘ ಬಾಳಿಕೆ ಸರಕುಗಳು ಎನ್ನಬಹುದು?

೯. ಸಾರ್ವಜನಿಕ ಸರಕುಗಳ ವೈಶಿಷ್ಟ್ಯವೇನು?

೧೦. ತುಷ್ಟಿಗುಣ ಎಂದರೇನು?

೧೧. ತುಷ್ಟಿಗುಣವು ಉಪಯುಕ್ತತೆಗಿಂತ ಹೇಗೆ ಭಿನ್ನವಾಗಿದೆ?

೧೨. ರೂಪ ತುಷ್ಟಿಗುಣ ಎಂದರೇನು?

೧೩. ಸ್ಥಳ ತುಷ್ಟಿಗುಣ ಎಂದರೇನು?

೧೪. ಕಾಲ ತುಷ್ಟಿಗುಣ ಎಂದರೇನು?

೧೫. ಇಳಿಮುಖ ಸೀಮಾಂತ ತುಷ್ಟಿಗುಣದ ನಿಯಮವನ್ನು ಹೇಳಿ?

೧೬. ಪೂರಕ ಬಯಕೆಗಳಿಗೆ ಉದಾಹರಣೆ ನೀಡಿ.

೧೭. ಸೀಮಾಂತ ತುಷ್ಟಿಗುಣ ಎಂದರೇನು?

೧೮. ಒಟ್ಟು ತುಷ್ಟಿಗುಣವು ಯಾವ ದರದಲ್ಲಿ ಬದಲಾಗುತ್ತದೆ?

೧೯. ಒಟ್ಟು ತುಷ್ಟಿಗುಣ ಎಂದರೇನು?

೨೦. ಬೇಡಿಕೆ ಎಂದರೇನು?

೨೧. ಬೆಲೆಗೂ ಬೇಡಿಕೆಗೂ ಇರುವ ಸಂಬಂಧವೇನು?

೨೨. ಬೆಲೆಯು ಕಡಿಮೆಯಾದಾಗ ಬೇಡಿಕೆಯ ಪ್ರಮಾಣವು ಏಕೆ ಹೆಚ್ಚಾಗುತ್ತದೆ?

೨೩. ಬೇಡಿಕೆಯ ನಿಯಮವನ್ನು ತಿಳಿಸಿ.

೨೪. ಬೇಡಿಕೆ ರೇಖೆಯು ಹೇಗಿರುತ್ತದೆ?

೨೫. ಬೆಲೆ ಬೇಡಿಕೆ ಸ್ಥಿತಿಸ್ಥಾಪಕತೆ ಎಂದರೇನು?

೨೬. ಸ್ಥಿತಿಸ್ಥಾಪಕರಾಹಿತ್ಯ ಬೇಡಿಕೆಯನ್ನು ವ್ಯಾಖ್ಯಾನಿಸಿ.

೨೭. ಬೇಡಿಕೆಯ ಸ್ಥಿತಿಸ್ಥಾಪಕತೆ ಒಂದು ಆಗುವುದು ಯಾವಾಗ?

೨೮. ಅನುಭೋಗಿಯ ಮಿಗುತೆ ಎಂದರೇನು?

೨೯. ಸುಪ್ತ ಬೆಲೆ ಎಂದರೇನು?

೩೦. ಅನುಭೋಗಿಯ ಅಧಿಕ ಮಿಗುತೆ ಪರಿಕಲ್ಪನೆಯ ಪ್ರತಿಪಾದಕರು ಯಾರು?

**II. ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ. (೨ ಅಂಕಗಳು)**

೩೧. ಬಯಕೆಗಳ ವರ್ಗೀಕರಣವನ್ನು ಸೂಕ್ತ ಉದಾಹರಣೆಗಳೊಂದಿಗೆ ನೀಡಿ.

೩೨. ಖಾಸಗಿ ಮತ್ತು ಸಾರ್ವಜನಿಕ ಸರಕುಗಳನ್ನು ವಿಶ್ಲೇಷಿಸಿ.

೩೩. ನೇರ ಅನುಭೋಗ ಮತ್ತು ಪರೋಕ್ಷ ಅನುಭೋಗಗಳ ನಡುವಣ ವ್ಯತ್ಯಾಸವನ್ನು ಉದಾಹರಣೆ ಸಹಿತ ವಿವರಿಸಿ.

೩೪. ತುಷ್ಟಿಗುಣದ ವಿಧಗಳು ಯಾವುವು?

೩೫. ಸೀಮಾಂತ ತುಷ್ಟಿಗುಣ ಮತ್ತು ಒಟ್ಟು ತುಷ್ಟಿಗುಣಗಳ ನಡುವಣ ವ್ಯತ್ಯಾಸಗಳೇನು?

೩೬. ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮದ ಕಲ್ಪನೆಗಳು ಯಾವುವು?

೩೭. ಬೇಡಿಕೆ ಅನುಸೂಚಿಯನ್ನು ಒಂದು ಕಾಲ್ಪನಿಕ ಉದಾಹರಣೆಯೊಂದಿಗೆ ಪ್ರಸ್ತುತಪಡಿಸಿ.

೩೮. ಅನುಭೋಗಿಯ ಮಿಗುತೆಯ ಮಹತ್ವವೇನು?

೩೯. ಬೇಡಿಕೆ ನಿಯಮವು ಯಾವ ನಿಯಮದ ಆಧಾರದ ಮೇಲೆ ಪ್ರತಿಪಾದಿಸಲಾಗಿದೆ?

೪೦. ಬೇಡಿಕೆ ನಿಯಮದ ಅಪವಾದಗಳು ಯಾವುವು?

**III. ಕೆಳಗಿನ ಪ್ರಶ್ನೆಗಳಿಗೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ. (೫ ಅಂಕಗಳು)**

೪೧. ಬಯಕೆಗಳು ಹುಟ್ಟುವುದಕ್ಕೆ ಕಾರಣವಾಗಿರುವ ಅಂಶಗಳು ಯಾವುವು?

೪೨. ಆರ್ಥಿಕ ಚಟುವಟಿಕೆಗಳು ಬಯಕೆಗಳಿರುವುದರಿಂದಲೇ ಹುಟ್ಟಿಕೊಂಡಿವೆ, ಹೇಗೆ?

೪೩. ಬಯಕೆಗಳ ವರ್ಗೀಕರಣವನ್ನು ವಿವರಿಸಿ.

೪೪. ಆರ್ಥಿಕ ಸರಕುಗಳ ವರ್ಗೀಕರಣವನ್ನು ಸೂಕ್ತ ಉದಾಹರಣೆಗಳೊಂದಿಗೆ ವಿವರಿಸಿ.

೪೫. ಅನುಭೋಗದ ವಿವಿಧ ಪ್ರಕಾರಗಳು ಯಾವುವು?

೪೬. ತುಷ್ಟಿಗುಣದ ವಿಧಗಳು ಯಾವುವು?

೪೭. ತುಷ್ಟಿಗುಣದ ಲಕ್ಷಣಗಳನ್ನು ತಿಳಿಸಿ.

೪೮. ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತೆ ಎಂದರೇನು? ಅದರ ವಿವಿಧ ಪ್ರಕಾರಗಳು? ಯಾವುವು?

೪೯. ಅನುಭೋಗಿಯ ಮಿಗುತೆ ಪರಿಭಾವನೆಯನ್ನು ವಿವರಿಸಿ.

**IV. ಕೆಳಗಿನ ಪ್ರಶ್ನೆಗಳಿಗೆ ೪೦ ವಾಕ್ಯಗಳಲ್ಲಿ ಉತ್ತರಿಸಿ. (೧೦ ಅಂಕಗಳು)**

೫೦. ಮಾನವ ಬಯಕೆಗಳು ಎಂದರೇನು ಅವುಗಳ ಲಕ್ಷಣಗಳನ್ನು ವಿವರಿಸಿ.

೫೧. ಆರ್ಥಿಕ ಸರಕು ಮತ್ತು ಸೇವೆಗಳೆಂದರೇನು? ಆರ್ಥಿಕ ಸರಕುಗಳ ವಿವಿಧ

ಪ್ರಕಾರಗಳನ್ನು ವಿವರಿಸಿ.

೫೨. ಇಳಿಮುಖ ಸೀಮಾಂತ ತುಷ್ಟಿಗುಣದ ನಿಯಮವನ್ನು ರೇಖಾಚಿತ್ರದ ಸಹಿತ ವಿವರಿಸಿ.

೫೩. ಬೇಡಿಕೆಯ ನಿಯಮವನ್ನು ತಿಳಿಸಿ ಮತ್ತು ಬೇಡಿಕೆಯ ನಿಯಮವನ್ನು ರೇಖಾಚಿತ್ರದೊಂದಿಗೆ ವಿವರಿಸಿ.

# ಅಧ್ಯಾಯ ೩

# ಉತ್ಪಾದನೆ

## ೩.೧. ಪೂರೈಕೆ

'ಪೂರೈಕೆಗೆ' ಅರ್ಥಶಾಸ್ತ್ರದಲ್ಲಿ ಮಹತ್ವದ ಸ್ಥಾನವಿದೆ. 'ಅನುಭೋಗ' ಅಥವಾ 'ಬೇಡಿಕೆ' ಆರ್ಥಿಕ ಚಟುವಟಿಕೆಗಳ ಉಗಮಸ್ಥಾನ. ಅನುಭೋಗಕ್ಕೆ ವಸ್ತುಗಳ ಉತ್ಪಾದನೆ ಅಂದರೆ ಪೂರೈಕೆ ಇರಬೇಕು. ಪೂರೈಕೆ ಇಲ್ಲದಿದ್ದರೆ ಬೇಡಿಕೆಗೆ ಅರ್ಥವಿಲ್ಲ. ಪೂರೈಕೆ ಮತ್ತು ಬೇಡಿಕೆಗಳು ಜಂಟಿಯಾಗಿ ಬೆಲೆ ನಿರ್ಧಾರ ಮಾಡುತ್ತವೆ. ಆದುದರಿಂದಲೇ ಪೂರೈಕೆ ಬಹಳ ಪ್ರಮುಖವಾದ ಅಂಶ.

### ಪೂರೈಕೆಯ ಅರ್ಥ

'ಪೂರೈಕೆ' ಎಂದರೆ ಸಾಮಾನ್ಯವಾಗಿ ಉತ್ಪಾದಕರ ಬಳಿಯಲ್ಲಿ ದೊರೆಯುವ ಸಿದ್ಧ ವಸ್ತುಗಳ ಸಂಗ್ರಹವೆಂದು ತಿಳಿಯುವುದುಂಟು. ಆದರೆ ಇದು ಸರಿಯಲ್ಲ. ಅರ್ಥಶಾಸ್ತ್ರದಲ್ಲಿ ಪೂರೈಕೆಯೆಂದರೆ ಒಂದು ನಿರ್ದಿಷ್ಟ ಬೆಲೆಗೆ ಮಾರುಕಟ್ಟೆಗೆ ಮಾರಾಟ ಮಾಡಲು ಒದಗಿಸಿದ ವಸ್ತುಗಳ ಪ್ರಮಾಣ.

ಇಂತಿಷ್ಟು ಬೆಲೆಗೆ ಇಂತಿಷ್ಟು ಬೇಡಿಕೆ ಎಂದು ಹೇಳುವಂತೆ ಪೂರೈಕೆ ವಿಷಯದಲ್ಲಿ ಸಹ ಇಂತಿಷ್ಟು ಬೆಲೆಗೆ ಇಂತಿಷ್ಟು ಪೂರೈಕೆ ಎಂದು ಪ್ರಮಾಣವನ್ನು ಸ್ಪಷ್ಟಪಡಿಸುತ್ತೇವೆ. ಗ್ರಾಹಕರು ಬೇರೆ ಬೇರೆ ಬೆಲೆಗಳಿರುವಾಗ ಬೇರೆ ಬೇರೆ ಪ್ರಮಾಣದಲ್ಲಿ ವಸ್ತುಗಳನ್ನು ಬೇಡುತ್ತಾರೆ. ಅದೇ ರೀತಿ ಮಾರಾಟಗಾರರು ಬೇರೆ ಬೇರೆ ಬೆಲೆಗಳಿರುವಾಗ ಬೇರೆ ಬೇರೆ ಪ್ರಮಾಣದಲ್ಲಿ ವಸ್ತುಗಳನ್ನು ಪೂರೈಕೆ ಮಾಡುತ್ತಾರೆ. ಯಾವ ಪ್ರಕಾರವಾಗಿ ಗ್ರಾಹಕರು ಬೆಲೆಯನ್ನು ತಿಳಿದುಕೊಳ್ಳದೆ ತಮ್ಮ ಬೇಡಿಕೆಯ ಪ್ರಮಾಣವನ್ನು ತಿಳಿಸಲಾರರೋ ಅದೆ ಪ್ರಕಾರವಾಗಿ ಮಾರಾಟಗಾರರು ಸಹ ಸರಕುಗಳ ಬೆಲೆಯನ್ನು ತಿಳಿದುಕೊಳ್ಳದೆ ಪೂರೈಕೆಯ ಪ್ರಮಾಣವನ್ನು ತಿಳಿಸಲಾರರು. ಆದುದರಿಂದ ಬೆಲೆಯು ಪೂರೈಕೆ ಮತ್ತು ಬೇಡಿಕೆಗಳೆರಡಕ್ಕೂ ಸಂಬಂಧಿಸಿದ ಸಾಮಾನ್ಯ ಅಂಶವಾಗಿದೆ.

ಪೂರೈಕೆಯು ವ್ಯಕ್ತಿಯಿಂದ ವ್ಯಕ್ತಿಗೆ, ಅದರಂತೆ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಾ ಹೋಗುತ್ತದೆ. ಅಲ್ಲದೇ ಅದು ಕಾಲ ಕಾಲಕ್ಕೂ ಬದಲಾಗುತ್ತದೆ. ಅಂದರೆ ಪೂರೈಕೆಯು

ಎಲ್ಲ ಕಾಲಕ್ಕೂ, ಎಲ್ಲ ಸ್ಥಳಗಳಲ್ಲಿಯೂ ಮತ್ತು ಎಲ್ಲ ವ್ಯಕ್ತಿಗಳಲ್ಲಿಯೂ ಒಂದೇ ಪ್ರಮಾಣದಲ್ಲಿ ಇರಲಾರದು.

**ಪೂರೈಕೆ ಮತ್ತು ಸಂಗ್ರಹ**

ಪೂರೈಕೆ ಮತ್ತು ಸಂಗ್ರಹ ಒಂದೇ ಅಲ್ಲ. ಆದ್ದರಿಂದ ಅವುಗಳ ನಡುವಣ ವ್ಯತ್ಯಾಸ ವನ್ನು ತಿಳಿದುಕೊಳ್ಳುವುದು ಅವಶ್ಯಕ. ಸಂಗ್ರಹವೆಂದರೆ ಪರಿಸ್ಥಿತಿ ಅನುಕೂಲವಾಗಿದ್ದರೆ ಮಾರುಕಟ್ಟೆಗೆ ಪೂರೈಸಲ್ಪಡಬಹುದಾದ ವಸ್ತುಗಳ ಪ್ರಮಾಣ. ಪೂರೈಕೆಯೆಂದರೆ ಒಂದು ನಿರ್ದಿಷ್ಟ ಬೆಲೆಗೆ ಮಾರುಕಟ್ಟೆಯಲ್ಲಿ ಮಾರಾಟಕ್ಕಿರುವ ವಸ್ತುಗಳ ಪ್ರಮಾಣ. ಪೂರೈಕೆ ಎಂಬುದು ಸಂಗ್ರಹದ ಒಂದು ಭಾಗ ಅಷ್ಟೆ. ಅದು ಎಂದೂ ಸಂಗ್ರಹಕ್ಕಿಂತ ಹೆಚ್ಚಾಗಲಾರದು.

ಬೆಲೆಯ ಪರಿಸ್ಥಿತಿ ಮಾರಾಟಗಾರರಿಗೆ ಅನುಕೂಲವಾಗುವವರೆಗೆ ವಸ್ತುಗಳನ್ನು ಸಂಗ್ರಹದಲ್ಲಿಡುವ ಪ್ರವೃತ್ತಿ ಇರುತ್ತದೆ. ಬೆಲೆ ಅನುಕೂಲವಿದ್ದರೆ ಸಂಗ್ರಹವಿರುವ ಎಲ್ಲ ವಸ್ತುಗಳ ಪೂರೈಕೆಯಾಗಬಹುದು. ಮಾರುಕಟ್ಟೆಯಲ್ಲಿರುವ ಬೆಲೆ ಮತ್ತು ಬೇಡಿಕೆಯ ಪರಿಸ್ಥಿತಿಯಿಂದ ಪೂರೈಕೆಯ ಪ್ರಮಾಣ ನಿರ್ಧರಿಸಲ್ಪಡುತ್ತದೆ. ಬೆಲೆಗಳು ಏರಿದರೆ ವಸ್ತುಗಳನ್ನು ಅಧಿಕ ಪ್ರಮಾಣದಲ್ಲಿ ಸಂಗ್ರಹದಿಂದ ಮಾರುಕಟ್ಟೆಗೆ ಪೂರೈಸಲಾಗುವುದು. ಬೆಲೆಗಳು ಇಳಿದರೆ ವಸ್ತುಗಳನ್ನು ಕಡಿಮೆ ಪ್ರಮಾಣದಲ್ಲಿ ಪೂರೈಸಲಾಗುವುದು. ಸಂಗ್ರಹ ದಲ್ಲಿರುವ ವಸ್ತುಗಳನ್ನು ಪೂರೈಕೆಗಾಗಿಯೇ ಕಾಯ್ದಿಡಲಾಗುವುದು. ಅನುಕೂಲ ಬೆಲೆ ದೊರಕುವವರೆಗೆ ಅವುಗಳನ್ನು ಪೂರೈಸಲಾಗುವುದಿಲ್ಲ.

ಹಾಲು, ಹಣ್ಣು, ತರಕಾರಿ, ಮೊಟ್ಟೆ, ಮೀನು, ಮಾಂಸ ಮುಂತಾದ ಬೇಗ ನಾಶವಾಗುವ ಗುಣ ಹೊಂದಿರುವ ವಸ್ತುಗಳ ವಿಚಾರದಲ್ಲಿ ಪೂರೈಕೆ ಮತ್ತು ಸಂಗ್ರಹ ಒಂದೇ ಆಗಿರುತ್ತದೆ. ನಷ್ಟವಾಗುವುದಕ್ಕಿಂತ ಬಂದಷ್ಟು ಬೆಲೆಗೆ ಅವುಗಳನ್ನು ಮಾರ ಬೇಕಾಗುತ್ತದೆ. ಬಾಳಿಕೆ ಬರುವ ವಸ್ತುಗಳ ವಿಚಾರದಲ್ಲಿ ಪೂರೈಕೆ ಮತ್ತು ಸಂಗ್ರಹ ಬೇರೆ ಬೇರೆಯಾಗಿರುತ್ತವೆ. ಏಕೆಂದರೆ ಬಾಳಿಕೆ ಬರುವ ವಸ್ತುಗಳನ್ನು ಕೆಲಕಾಲ ಯೋಗ್ಯ ಬೆಲೆ ದೊರೆಯುವವರೆಗೆ ಸಂಗ್ರಹದಲ್ಲಿಡುವದು ಸಾಧ್ಯವಿರುತ್ತದೆ.

**ಪೂರೈಕೆಯ ಬಿಂಬಕ**

ಪೂರೈಕೆಯ ಪ್ರಮಾಣವನ್ನು ನಿರ್ಧರಿಸುವದರಲ್ಲಿ ಬೆಲೆ ಮಹತ್ವದ ಪಾತ್ರವಹಿಸುತ್ತವೆ. ಪೂರೈಕೆಯ ಪ್ರಮಾಣಕ್ಕೂ ಮತ್ತು ಬೆಲೆಗೆ ಇರುವ ಸಂಬಂಧವೇ ಪೂರೆಕೆಯ ಬಿಂಬಕ. ಇದನ್ನು 'ಪೂರೈಕೆಯ ಕಾರ್ಯ' ಎಂದೂ ಕರೆಯುವರು.

ಪೂರೈಕೆಯ ಬಿಂಬಕವನ್ನು ಬೀಜಗಣಿತ ರೂಪದಲ್ಲಿ ಒಂದು ಸೂತ್ರದ ಮೂಲಕ ಈ ಕೆಳಗಿನಂತೆ ವ್ಯಕ್ತಪಡಿಸಬಹುದು.

S=f(P)

ಈ ಸೂತ್ರದಲ್ಲಿ,

S= ಪೂರೈಕೆಯ ಪ್ರಮಾಣವನ್ನು,

P= ವಸ್ತುವಿನ ಬೆಲೆಯನ್ನು ಮತ್ತು

f= ಕ್ರಿಯಾತ್ಮಕ ಸಂಬಂಧವನ್ನು ಸೂಚಿಸುತ್ತದೆ.

'P' ಯಲ್ಲಿ ಬದಲಾವಣೆಯಾದರೆ 'S'ನಲ್ಲಿ ಬದಲಾವಣೆಯಾಗುತ್ತದೆ ಎಂಬುದನ್ನು ಮೇಲಿನ ಸೂತ್ರ ತಿಳಿಸುತ್ತದೆ. ಹೀಗಾಗಿ ವಸ್ತುವಿನ ಪೂರೈಕೆಯ ಪ್ರಮಾಣ ಅದರ ಬೆಲೆಯನ್ನು ಅವಲಂಬಿಸಿರುವುದರಿಂದ ವಸ್ತುವಿನ ಬೆಲೆ ಹೆಚ್ಚಾದರೆ ಪೂರೈಕೆಯ ಪ್ರಮಾಣ ಹೆಚ್ಚಾಗುತ್ತದೆ. ಮತ್ತು ಬೆಲೆ ಕಡಿಮೆಯಾದರೆ ಪೂರೈಕೆಯ ಪ್ರಮಾಣ ಕಡಿಮೆಯಾಗುತ್ತದೆ. ಈ ಪ್ರಕಾರ ಬೆಲೆ ಮತ್ತು ಪೂರೈಕೆಯ ಪ್ರಮಾಣಗಳ ನಡುವಿನ ತಾಂತ್ರಿಕ ಸಂಬಂಧವನ್ನು ವಿವರಿಸುವ ಕಾರ್ಯ ಪೂರೈಕೆಯ ಬಿಂಬಕವಾಗಿದೆ.

## ಪೂರೈಕೆಯ ನಿಯಮ

ಪೂರೈಕೆಯ ನಿಯಮವು ಪೂರೈಕೆಯ ಪ್ರಮಾಣ ಮತ್ತು ಬೆಲೆ ಇವುಗಳ ನಡುವಿನ ಸಂಬಂಧವನ್ನು ನಿರೂಪಿಸುತ್ತದೆ. "ಇತರೆ ಸಂಗತಿಗಳು ಸ್ಥಿರವಾಗಿದ್ದಾಗ ಬೆಲೆ ಹೆಚ್ಚಾದರೆ ಪೂರೈಕೆ ಹೆಚ್ಚುತ್ತದೆ. ಹಾಗೂ ಬೆಲೆ ಕಡಿಮೆಯಾದರೆ ಪೂರೈಕೆ ಕಡಿಮೆಯಾಗುತ್ತದೆ." ಇತರೆ ಸಂಗತಿಗಳಲ್ಲಿ ಬದಲಾವಣೆಯಾಗುವುದಿಲ್ಲವೆಂದು ಈ ನಿಯಮ ಊಹಿಸಿಕೊಳ್ಳುತ್ತದೆ. ಇಲ್ಲಿ ಪೂರೈಕೆ ಮತ್ತು ಬೆಲೆಗಳು ಒಂದೇ ದಿಕ್ಕಿನಲ್ಲಿ ಚಲಿಸುತ್ತವೆ.

ಬೆಲೆ ಹೆಚ್ಚಾದರೆ ಸಂಗ್ರಹದಲ್ಲಿರುವ ತಮ್ಮ ವಸ್ತುಗಳನ್ನು ಮಾರುಕಟ್ಟೆಗೆ ತರಲು ಮಾರಾಟಗಾರರು ಉದ್ಯುಕ್ತರಾಗುತ್ತಾರೆ. ಉತ್ಪಾದನೆಯನ್ನು ಹೆಚ್ಚಿಸಿ, ಪೂರೈಕೆಯ ಪ್ರಮಾಣವನ್ನು ಹೆಚ್ಚಿಸಲು ಉದ್ಯುಕ್ತರಾಗುತ್ತಾರೆ. ಹೊಸ ಉತ್ಪಾದಕರು ವಸ್ತುಗಳನ್ನು ಉತ್ಪಾದಿಸಿ ಮಾರುಕಟ್ಟೆಗೆ ತರುತ್ತಾರೆ. ಈ ಪ್ರಕಾರ ವಸ್ತುಗಳ ಪೂರೈಕೆ ಹೆಚ್ಚಾಗುತ್ತದೆ.

ಬೆಲೆ ಕಡಿಮೆಯಾದರೆ ಕೆಲವರು ತಮ್ಮ ಪೂರೈಕೆಯ ಕೆಲಭಾಗವನ್ನು ಮಾರುಕಟ್ಟೆಯಿಂದ ಹಿಂತೆಗೆದುಕೊಳ್ಳುತ್ತಾರೆ. ಕೆಲವರು ಉತ್ಪಾದನೆಯನ್ನು ನಿಲ್ಲಿಸುತ್ತಾರೆ. ಈ ಪ್ರಕಾರ ಬೆಲೆ ಕಡಿಮೆಯಾದರೆ ಪೂರೈಕೆ ತತ್ಕಾಲದಲ್ಲಿ, ಅಲ್ಪಕಾಲದಲ್ಲಿ ಮತ್ತು ದೀರ್ಘಕಾಲದಲ್ಲಿ ಕಡಿಮೆಯಾಗುತ್ತದೆ.

## ಪೂರೈಕೆಯ ಅನುಸೂಚಿ

ಯಾವ ಬೆಲೆಗೆ ಎಷ್ಟು ಪ್ರಮಾಣದಲ್ಲಿ ಒಂದು ವಸ್ತು ಪೂರೈಕೆಯಾಗುತ್ತದೆಂಬುದನ್ನು ಸೂಚಿಸುವ ಪಟ್ಟಿಯೇ ಪೂರೈಕೆಯ ಅನುಸೂಚಿ. ಇದರ ಸಹಾಯದಿಂದ ಪೂರೈಕೆಯ ನಿಯಮವನ್ನು ವಿವರಿಸಬಹುದಾಗಿದೆ.

ಪೂರೈಕೆ ಅನುಸೂಚಿಯು ವೈಯಕ್ತಿಕ ಅನುಸೂಚಿಯಾದರೂ ಆಗಬಹುದು ಅಥವಾ ಮಾರುಕಟ್ಟೆಯ ಅನುಸೂಚಿಯಾದರೂ ಆಗಬಹುದು. ಮಾರಾಟಗಾರನೊಬ್ಬನು ವಿವಿಧ ಬೆಲೆಗಳಲ್ಲಿ ಯಾವ ಪ್ರಮಾಣದಲ್ಲಿ ವಸ್ತುಗಳನ್ನು ಮಾರಾಟ ಮಾಡಲು ಸಿದ್ಧನಿರುತ್ತಾನೆ ಎಂಬುದನ್ನು ಸೂಚಿಸುವ ಅನುಸೂಚಿಯೇ "ವೈಯಕ್ತಿಕ ಪೂರೈಕೆ ಅನುಸೂಚಿ". ವಿವಿಧ ಮಾರಾಟಗಾರರು ವಿವಿಧ ಬೆಲೆಗಳಲ್ಲಿ ಮಾರಾಟ ಮಾಡುವ ವಸ್ತುಗಳ ಒಟ್ಟು ಪ್ರಮಾಣ ವನ್ನು ಸೂಚಿಸುವ ಅನುಸೂಚಿ "ಮಾರುಕಟ್ಟೆ ಪೂರೈಕೆ ಅನುಸೂಚಿ". ಸಾಮಾನ್ಯವಾಗಿ ಎಲ್ಲ ಮಾರಾಟಗಾರರ ಪೂರೈಕೆಯ ರೀತಿ ಒಂದೇ ಇರುವುದರಿಂದ ಎಲ್ಲ ಮಾರಾಟಗಾರರ ವೈಯಕ್ತಿಕ ಪೂರೈಕೆಯ ಅನುಸೂಚಿಯ ಪ್ರಮಾಣವನ್ನು ಸೂಚಿಸುವ ಮಾರುಕಟ್ಟೆಯ ಪೂರೈಕೆ ಅನುಸೂಚಿಯ ಸಹಾಯದಿಂದ ಪೂರೈಕೆಯ ನಿಯಮವನ್ನು ವಿವರಿಸಬಹುದಾಗಿದೆ.

**ಮಾರುಕಟ್ಟೆ ಪೂರೈಕೆ ಅನುಸೂಚಿ**

| ಪ್ರತಿ ಕ್ವಿಂಟಲ್ ಸಕ್ಕರೆಯ ಬೆಲೆ (ರೂ.ಗಳಲ್ಲಿ) | ಪೂರೈಕೆಯ ಪ್ರಮಾಣ (ಕ್ವಿಂಟಲ್‌ಗಳಲ್ಲಿ) |
|---|---|
| ೧,೬೦೦ | ೧೦೦ |
| ೧,೭೦೦ | ೨೦೦ |
| ೧,೮೦೦ | ೩೦೦ |
| ೧,೯೦೦ | ೪೦೦ |
| ೨,೦೦೦ | ೫೦೦ |

ಈ ಮೇಲಿನ ಅನುಸೂಚಿಯಿಂದ ಪೂರೈಕೆಯ ಪ್ರಮಾಣವನ್ನು ನಾವು ಸುಲಭವಾಗಿ ತಿಳಿದುಕೊಳ್ಳಬಹುದು. ಸಕ್ಕರೆಯ ಬೆಲೆ ಪ್ರತಿ ಕ್ವಿಂಟಲ್‌ಗೆ ರೂ. ೧೬೦೦ ಗಳಿದ್ದಾಗ ಪೂರೈಕೆಯು ಮಾರುಕಟ್ಟೆಯಲ್ಲಿ ೧೦೦ ಕ್ವಿಂಟಲ್ ಇರುತ್ತದೆ. ಬೆಲೆ ರೂ. ೧೭೦೦ ಗಳಿದ್ದಾಗ ಸಕ್ಕರೆ ಪೂರೈಕೆ ೨೦೦ ಕ್ವಿಂಟಲ್‌ಗಳಿಗೂ, ರೂ. ೧೮೦೦ ಗಳಿದ್ದಾಗ ೩೦೦ ಕ್ವಿಂಟಲ್‌ಗಳಿಗೂ ರೂ. ೧೯೦೦ ಗಳಿದ್ದಾಗ ೪೦೦ ಕ್ವಿಂಟಲ್‌ಗಳಿಗೂ ಮತ್ತು ರೂ. ೨೦೦೦ ಗಳಿದ್ದಾಗ ೫೦೦ ಕ್ವಿಂಟಲ್‌ಗಳಿಗೂ ಹೆಚ್ಚಿದೆ. ಹೀಗೆ ಬೆಲೆ ಹೆಚ್ಚಾದಂತೆ ಪೂರೈಕೆ ಹೆಚ್ಚಾಗಿರುವುದನ್ನು ನಾವು ಕಾಣಬಹುದು. ಬೆಲೆ ಮತ್ತು ಪೂರೈಕೆಗಳ ನಡುವೆ ನೇರ ಸಂಬಂಧವಿರುವುದನ್ನು ನಮಗೆ ಈ ಅನುಸೂಚಿ ಸ್ಪಷ್ಟಪಡಿಸುತ್ತದೆ.

ಈ ಅನುಸೂಚಿಯ ಆಧಾರದಿಂದ ಪೂರೈಕೆಯ ನಿಯಮವನ್ನು ಕೆಳಗಿನ ರೇಖಾಚಿತ್ರದ ಸಹಾಯದಿಂದ ವಿವರಿಸಬಹುದಾಗಿದೆ.

ಚಿತ್ರ. ೩.೧.




ಮೇಲಿನ ರೇಖಾಚಿತ್ರದಲ್ಲಿ OX ರೇಖೆಯು ಸಕ್ಕರೆಯು ಪೂರೈಕೆಯ ಪ್ರಮಾಣವನ್ನು ಮತ್ತು OY ರೇಖೆಯು ಸಕ್ಕರೆಯ ಬೆಲೆಯನ್ನು ಸೂಚಿಸುತ್ತದೆ. SS ಪೂರೈಕೆಯ ರೇಖೆಯಾಗಿದೆ. ಬೆಲೆ ಹೆಚ್ಚಿದಂತೆಲ್ಲ ಪೂರೈಕೆ ಹೆಚ್ಚುತ್ತದೆ ಎಂಬುದನ್ನು ಈ ಪೂರೈಕೆ ರೇಖೆ ಸ್ಪಷ್ಟಪಡಿಸುತ್ತದೆ.

## ೩.೨. ಉತ್ಪಾದನಾಂಗಗಳು

ಆಸೆಗಳನ್ನು ತೃಪ್ತಿಪಡಿಸಲು ಮಾನವ ಅನೇಕ ವಸ್ತುಗಳನ್ನು ಮತ್ತು ಸೇವೆಗಳನ್ನು ಭೋಗಿಸಬೇಕಾಗುತ್ತದೆ. ಈ ಅನುಭೋಗದ ಅವಶ್ಯಕತೆಯು ಉತ್ಪಾದನೆಗೆ ಅವಕಾಶ ಕಲ್ಪಿಸಿದೆ. ಏಕೆಂದರೆ ವಸ್ತುಗಳನ್ನು ಭೋಗಿಸಬೇಕಾದರೆ ಮೊದಲು ಉತ್ಪಾದನೆಯಾಗ ಬೇಕಾಗುತ್ತದೆ. ಉತ್ಪಾದನೆಯಿಲ್ಲದೇ ಅನುಭೋಗ ಅಸಾಧ್ಯ. ಈ ಕಾರಣದಿಂದಾಗಿ ಉತ್ಪಾದನೆಗೆ ಅರ್ಥಶಾಸ್ತ್ರದಲ್ಲಿ ಮಹತ್ವದ ಸ್ಥಾನವಿದೆ.

### ಉತ್ಪಾದನೆ

ಸಾಮಾನ್ಯವಾಗಿ ವಸ್ತುಗಳನ್ನು ತಯಾರಿಸುವುದಕ್ಕೆ ಉತ್ಪಾದನೆ ಎನ್ನುತ್ತಾರೆ. ಆದರೆ ಅರ್ಥಶಾಸ್ತ್ರದಲ್ಲಿ ಈ ಪದಕ್ಕೆ ವಿಶಾಲವಾದ ನಿರ್ದಿಷ್ಟವಾದ ಮತ್ತು ವಿಶಿಷ್ಟವಾದ ಅರ್ಥವಿದೆ. ವಸ್ತುವಿನ ಪ್ರಯೋಜನವನ್ನು ಹೆಚ್ಚಿಸಿ ತನ್ಮೂಲಕ ಅದರ ವಿನಿಮಯ ಮೌಲ್ಯವನ್ನು ಹೆಚ್ಚಿಸುವುದು ಅರ್ಥಶಾಸ್ತ್ರದಲ್ಲಿ 'ಉತ್ಪಾದನೆ'. ಅಂದರೆ, ಯಾವುದೇ ವಸ್ತುವಿಗೆ ತುಷ್ಟಿಗುಣವನ್ನು ಸೇರಿಸಿ ಅದರ ಪ್ರಯೋಜನವನ್ನು ಹೆಚ್ಚಿಸಿದರೆ ಆ ವಸ್ತುವಿನ ಉತ್ಪಾದನೆಯಾದಂತಾಯಿತು.

ವಾಸ್ತವವಾಗಿ ಉತ್ಪಾದನೆ ಎಂದರೆ ವಸ್ತುಗಳನ್ನು ಹೊಸದಾಗಿ ತಯಾರಿಸುವದೆಂದೇನಲ್ಲ. ಮಾನವನು ನಿಸರ್ಗದಲ್ಲಿ ಉಚಿತವಾಗಿ ದೊರೆತಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಅವುಗಳ ರೂಪವನ್ನೋ ಅಥವಾ ಸ್ಥಳವನ್ನೋ ಬದಲಾಯಿಸಿ ತನಗೆ ಉಪಯೋಗ ವಾಗುವಂತೆ ಮಾರ್ಪಾಡು ಮಾಡಿಕೊಳ್ಳುತ್ತಾನೆ. ಉದಾ ಅಡವಿಯಲ್ಲಿ ಅನೇಕ ಮರ ಗಳಿರುತ್ತವೆ. ಅವು ನಿರುಪಯೋಗಿಯಾಗಿರುತ್ತವೆ. ಆದರೆ ಬಡಿಗಿ ಆ ಮರಗಳನ್ನು ಕಡಿದು ಅವುಗಳ ದಿಮ್ಮಿಗಳನ್ನು ನಗರಕ್ಕೆ ಸಾಗಿಸಿ, ಕೊರೆದು ಮನೆಕಟ್ಟಲು ಮತ್ತು ಪಿಠೋಪಕರಣ ಗಳಿಗೆ ಉಪಯೋಗಿಸಿದರೆ ಆ ದಿಮ್ಮಿಗಳ ಪ್ರಯೋಜನ ಹೆಚ್ಚುತ್ತದೆ. ಆದ್ದರಿಂದ, ಯಾವುದೇ ವಸ್ತುವಿಗೆ ತುಷ್ಟಿಗುಣ ಸೇರಿಸಿ ಅದರ ಪ್ರಯೋಜನವನ್ನು ಮತ್ತು ಮೌಲ್ಯ ವನ್ನು ಹೆಚ್ಚಿಸಿದರೆ ಆ ವಸ್ತುವಿನ ಉತ್ಪಾದನೆಯಾಯಿತು ಎಂದು ನಾವು ಅರ್ಥಶಾಸ್ತ್ರದಲ್ಲಿ ಹೇಳುತ್ತೇವೆ. ಇವೇ ಅರ್ಥಶಾಸ್ತ್ರದಲ್ಲಿ ಉತ್ಪಾದನೆ ಎಂದೆನಿಸಿಕೊಳ್ಳುತ್ತದೆ.

### ಉತ್ಪಾದನಾಂಗಗಳು

ಉತ್ಪಾದನಾ ಕ್ರಿಯೆಯಲ್ಲಿ ಭಾಗವಹಿಸುವ ಅಂಶಗಳನ್ನು 'ಉತ್ಪಾದನಾಂಗಗಳು' ಎಂದು ಕರೆಯಲಾಗುತ್ತದೆ.

ಪ್ರೇಸರನ ಪ್ರಕಾರ, ಮೂಲ ಉತ್ಪಾದನಾ ಸಾಧನಗಳ ಒಂದು ಗುಂಪನ್ನು ಉತ್ಪಾದನಾ ಘಟಕಗಳೆಂದು ಕರೆಯಬಹುದು. ಈ ಒಂದೊಂದು ಗುಂಪಿನ ಬಿಡಿ ಸಾಧನಗಳಿಗೆ ಘಟಕಗಳೆಂದು ಹೆಸರು.

ಫ್ರೆಡೆರಿಕ್ ಬೆನ್‌ಹ್ಯಾಂ ಅಭಿಪ್ರಾಯದಲ್ಲಿ, "ಉತ್ಪಾದನೆಗೆ ನೆರವಾಗುವ ವಸ್ತು ಏನೇ ಇರಲಿ, ಅದು ಉತ್ಪಾದನಾಂಗವಾಗಿರುತ್ತದೆ".

ಉತ್ಪಾದನಾ ಕಾರ್ಯದಲ್ಲಿ ವಿವಿಧ ಅಂಶಗಳು ಪಾತ್ರವಹಿಸುತ್ತವೆ. ನೈಸರ್ಗಿಕ ಸಂಪತ್ತನ್ನು ಉಪಯೋಗಿಸಿಕೊಂಡು ಹೊಸ ವಸ್ತುಗಳನ್ನು ಉತ್ಪಾದಿಸಬೇಕಾದರೆ ಕಾರ್ಮಿಕರು ಮತ್ತು ಯಂತ್ರೋಪಕರಣಗಳು ಬೇಕು. ಇವುಗಳ ಜೊತೆಗೆ ಉತ್ಪಾದನಾ ಕಾರ್ಯವನ್ನು ಸಂಘಟಿಸಲು ಸಂಘಟನಾಕಾರ ಅಗತ್ಯ. ಹೀಗೆ ಯಾವುದೇ ಒಂದು ವಸ್ತುವನ್ನು ಉತ್ಪಾದಿಸಬೇಕಾದರೆ ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆ ಎಂಬ ನಾಲ್ಕು ಉತ್ಪಾದನಾಂಗಗಳು ಅವಶ್ಯಕ. ಇವುಗಳಲ್ಲಿ ಯಾವುದೇ ಒಂದು ಘಟಕ ಇಲ್ಲದಿದ್ದರೆ ಉತ್ಪಾದನೆ ಸಾಧ್ಯವಾಗುವುದಿಲ್ಲ.

**ಉತ್ಪಾದನಾ ಬಿಂಬಕ**

ವಸ್ತುಗಳ ಉತ್ಪಾದನೆಯಲ್ಲಿ ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆ ಅವಶ್ಯಕವಾಗಿದೆ. ಈ ಸಾಧನಗಳಿಲ್ಲದೇ ಉತ್ಪಾದನೆ ಅಸಾಧ್ಯ. ಈ ಉತ್ಪಾದನಾಂಗಗಳನ್ನು 'ಆದಾನ'ಗಳು ಎಂದು ಕರೆಯಲಾಗುತ್ತದೆ. ಅಂದರೆ ವಸ್ತುವಿನ ಉತ್ಪಾದನೆಯಲ್ಲಿ ಉತ್ಪಾದನಾಂಗಗಳನ್ನು (ಆದಾನಗಳನ್ನು) ತೊಡಗಿಸಬೇಕಾಗುತ್ತದೆ.

ಉತ್ಪಾದನಾ ವಿಧಾನದಲ್ಲಿ ಉತ್ಪಾದನೆಗೂ ಮತ್ತು ಉತ್ಪಾದನಾಂಗಗಳಿಗೂ ನಡುವೆ ಇರುವ ಸಂಬಂಧವನ್ನು ವ್ಯಕ್ತಪಡಿಸುವಂಥಹದ್ದೇ ಉತ್ಪಾದನಾ ಬಿಂಬಕ. ಉತ್ಪಾದನಾ ಬಿಂಬಿಕವನ್ನು 'ಉತ್ಪಾದನಾ ಕಾರ್ಯ' ಅಥವಾ 'ಉತ್ಪಾದನಾ ಸರಣಿ' ಎಂದೂ ಕರೆಯಲಾಗುವುದು. ಉತ್ಪಾದನಾ ಬಿಂಬಕ ಒಂದು ತಾಂತ್ರಿಕ ಸಂಗತಿಯಾಗಿದೆ.

ಉತ್ಪಾದನಾ ಬಿಂಬಕವನ್ನು ಇನ್ನೂ ಸರಳವಾಗಿ ಹೇಳುವುದಾದರೆ ಒಂದು ಉದ್ಯಮದಲ್ಲಿ ಎಷ್ಟು ಪ್ರಮಾಣದಲ್ಲಿ ಉತ್ಪಾದನಾಂಗಗಳನ್ನು ತೊಡಗಿಸಿ ಎಷ್ಟು ಪ್ರಮಾಣದ ಉತ್ಪಾದನೆಯನ್ನು ಪಡೆಯಲಾಗುತ್ತದೆ ಎಂಬುದರ ಸಂಬಂಧವನ್ನು ವ್ಯಕ್ತಪಡಿಸುತ್ತದೆ. ಉದಾ. ಆಟದ ಸಾಮಾನಿನ ಒಂದು ಸಣ್ಣ ಉದ್ದಿಮೆ ಪ್ರತಿ ದಿನ ೧೦೦ ಮರದ ಗೊಂಬೆಗಳನ್ನು ತಯಾರಿಸಿದರೆ ಅದರ ಉತ್ಪಾದನಾ ಬಿಂಬಕ - ಈ ಉತ್ಪಾದನೆಗೆ ಎಷ್ಟು ಮರ, ಬಣ್ಣ, ಸಮಯ, ಶ್ರಮ, ಸ್ಥಳಾವಕಾಶ, ಯಂತ್ರ, ತಂತ್ರಜ್ಞಾನ ಮುಂತಾದವುಗಳನ್ನು ಬಳಸಲಾಗಿದೆ ಎಂಬುದನ್ನು ಸ್ಪಷ್ಟವಾಗಿ ವಿವರಿಸುತ್ತದೆ. ಉತ್ಪನ್ನವು ಆಧಾನಗಳ ಪ್ರಮಾಣವನ್ನು ಅವಲಂಬಿಸಿರುತ್ತದೆ.

ಉತ್ಪಾದನಾ ಬಿಂಬಕವನ್ನು ಕೆಳಗಿನ ಒಂದು ಸೂತ್ರದ ಸಹಾಯದಿಂದ ವಿವರಿಸಬಹುದು.

Q=f (a, b, c, d ....T)

ಇಲ್ಲಿ,

Q= ಉತ್ಪನ್ನ

a, b, c, d = ಉತ್ಪಾದನಾಂಗಗಳು

T= ತಂತ್ರಜ್ಞಾನ ಮತ್ತು

f= ಕ್ರಿಯಾತ್ಮಕ ಸಂಬಂಧವನ್ನು ಸೂಚಿಸುತ್ತದೆ.

ಮೇಲಿನ ಸೂತ್ರದಲ್ಲಿ ಉತ್ಪನ್ನ (Q) ಅವಲಂಬಿ ಚಲ ಹಾಗೂ ಉತ್ಪಾದನಾಂಗಗಳು (a, b, c, d) ಮತ್ತು ತಂತ್ರಜ್ಞಾನ (T) ಸ್ವತಂತ್ರ ಚಲಗಳಾಗಿವೆ.

ಸೂತ್ರದಲ್ಲಿ ಸ್ಪಷ್ಟವಾದಂತೆ ಒಂದು ನಿರ್ದಿಷ್ಟ ಅವಧಿಯಲ್ಲಿ ಮತ್ತು ನಿದಿರ್ಷ್ಟ ತಂತ್ರಜ್ಞಾನದಲ್ಲಿ ಉತ್ಪಾದನೆಯ ಪ್ರಮಾಣ ಉತ್ಪಾದನಾ ಘಟಕಗಳ ಪ್ರಮಾಣಗಳನ್ನು ಅವಲಂಬಿಸಿರುತ್ತದೆ. ಈ ಪ್ರಕಾರ, ಉತ್ಪಾದನಾಂಗಗಳು ಮತ್ತು ಉತ್ಪನ್ನಗಳ ನಡುವಿನ ತಾಂತ್ರಿಕ ಸಂಬಂಧವನ್ನು ವಿವರಿಸುವ ಕಾರ್ಯ ಉತ್ಪಾದನಾ ಬಿಂಬಕವಾಗಿದೆ.

### ಪ್ರತಿಫಲದ ಪ್ರಮಾಣ

ಪ್ರತಿಫಲದ ನಿಯಮಗಳು ಮತ್ತು ಪ್ರತಿಫಲದ ಪ್ರಮಾಣಗಳು ಒಂದೇ ಅಲ್ಲ. ಅವುಗಳ ನಡುವೆ ವ್ಯತ್ಯಾಸವಿದೆ. ಪ್ರತಿಫಲದ ನಿಯಮದಲ್ಲಿ ಕನಿಷ್ಠ ಒಂದು ಘಟಕವನ್ನು ಸ್ಥಿರವಾಗಿರಿಸಿ, ಉಳಿದ ಘಟಕಗಳನ್ನು ಬೇರ ಬೇರೆ ಪ್ರಮಾಣದಲ್ಲಿ ಬದಲಾಯಿಸಿ ಪ್ರತಿಫಲದ ಮೇಲಿನ ಪರಿಣಾಮವನ್ನು ಅಧ್ಯಯನ ಮಾಡಲಾಗುತ್ತದೆ. ಆದರೆ ಪ್ರತಿಫಲ ಪ್ರಮಾಣದಲ್ಲಿ ಎಲ್ಲ ಉತ್ಪಾದನಾಂಗಗಳನ್ನು ಏಕಕಾಲದಲ್ಲಿ ಒಂದೇ ಪ್ರಮಾಣದಲ್ಲಿ ಹೆಚ್ಚು ಅಥವಾ ಕಡಿಮೆ ಮಾಡಿ ಉತ್ಪಾದನೆಯಲ್ಲಾಗುವ ಬದಲಾವಣೆಯನ್ನು ಅಭ್ಯಸಿಸ ಲಾಗುತ್ತದೆ. ಒಟ್ಟಿನಲ್ಲಿ ಪ್ರತಿಫಲ ಪರಿಣಾಮದಲ್ಲಿ ಎಲ್ಲ ಉತ್ಪಾದನಾಂಗಗಳನ್ನು ಒಂದೇ ಪ್ರಮಾಣದಲ್ಲಿ ಬದಲಾಯಿಸಲಾಗುತ್ತದೆ.

ಉತ್ಪಾದನಾಂಗಗಳ ಪ್ರಮಾಣದಲ್ಲಿ ಎಷ್ಟು ಹೆಚ್ಚಳವಾಗುತ್ತದೋ ಅದೇ ಪ್ರಮಾಣದಲ್ಲಿ ಪ್ರತಿಫಲದಲ್ಲಿ ಹೆಚ್ಚಳವಾಗುವುದಿಲ್ಲ. ಆರಂಭದಲ್ಲಿ ಪ್ರತಿಫಲದ ಪ್ರಮಾಣ ಏರಿಕೆಯಾಗಿ, ನಂತರ ಸ್ಥಿರವಾಗಿ ಅನಂತರ ಇಳಿಯುತ್ತದೆ.

ಉತ್ಪಾದನೆಯಲ್ಲಿ ತೊಡಗಿಸಿದ ಉತ್ಪಾದನಾಂಗಗಳನ್ನು ಒಂದೇ ಪ್ರಮಾಣದಲ್ಲಿ ಹೆಚ್ಚಿಸಿದಾಗ ಅದರಿಂದ ಸಿಗುವ ಪ್ರತಿಫಲದ ಸರಾಸರಿ ಪ್ರಮಾಣ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿದ್ದರೆ ಅದನ್ನು 'ಏರಿಕೆಯ ಪ್ರತಿಫಲದ ಪ್ರಮಾಣ' ಎಂದು ಕರೆಯುವರು.

ಉತ್ಪಾದನಾಂಗಗಳ ಹೆಚ್ಚಳದ ಪ್ರಮಾಣ ಮತ್ತು ಅದರಿಂದ ಸಿಗುವ ಪ್ರತಿಫಲದ ಸರಾಸರಿ ಪ್ರಮಾಣ ಸರಿಸಮಾನವಾಗಿದ್ದರೆ ಅದನ್ನು 'ಸ್ಥಿರ ಪ್ರತಿಫಲದ ಪ್ರಮಾಣ' ಎಂದು ಕರೆಯಲಾಗುವುದು.

ಉತ್ಪಾದನಾಂಗಗಳ ಹೆಚ್ಚಳದ ಪ್ರಮಾಣಕ್ಕಿಂತ ಅದರಿಂದ ಸಿಗುವ ಪ್ರತಿಫಲದ ಸರಾಸರಿ ಪ್ರಮಾಣ ಕಡಿಮೆಯಾಗುತ್ತಾ ಹೋದರೆ ಅದನ್ನು 'ಇಳಿಕೆಯ ಪ್ರತಿಫಲದ ಪ್ರಮಾಣ' ಎಂದು ಕರೆಯುವರು.

ಪ್ರತಿಫಲ ಪ್ರಮಾಣದ ನಿಯಮವನ್ನು ಕೆಳಗಿನ ಅನುಸೂಚಿಯ ಸಹಾಯದಿಂದ ವಿವರಿಸಬಹುದು.

ಕೋಷ್ಟಕ ೩.೧

ಏರಿಕೆಯ ಪ್ರತಿಫಲ ಪ್ರಮಾಣ ಹಂತ I

| ಉತ್ಪಾದನಾಂಗಗಳು ಎ : ಬಿ | ಒಟ್ಟು ಉತ್ಪಾದನೆ (ಯುನಿಟ್‌ಗಳಲ್ಲಿ) | ಸರಾಸರಿ ಉತ್ಪಾದನೆ |
|---|---|---|
| ೨ : ೧ | ೫ | ೫ |
| ೪ : ೨ | ೧೨ | ೬ |
| ೬ : ೩ | ೨೧ | ೭ |

ಕೋಷ್ಟಕ ೩.೨

ಸ್ಥಿರ ಪ್ರತಿಫಲ ಪ್ರಮಾಣ ಹಂತ II

| ಉತ್ಪಾದನಾಂಗಗಳು ಎ : ಬಿ | ಒಟ್ಟು ಉತ್ಪಾದನೆ (ಯುನಿಟ್‌ಗಳಲ್ಲಿ) | ಸರಾಸರಿ ಉತ್ಪಾದನೆ |
|---|---|---|
| ೮ : ೪ | ೩೨ | ೮ |
| ೧೦ : ೫ | ೪೦ | ೮ |

ಕೋಷ್ಟಕ ೩.೩

ಇಳಿಕೆಯ ಪ್ರತಿಫಲ ಪರಿಣಾಮ ಹಂತ III

| ಉತ್ಪಾದನಾಂಗಗಳು ಎ : ಬಿ | ಒಟ್ಟು ಉತ್ಪಾದನೆ (ಯುನಿಟ್‌ಗಳಲ್ಲಿ) | ಸರಾಸರಿ ಉತ್ಪಾದನೆ (ಬಿ ದರ ಪ್ರತಿ ಯುನಿಟ್‌ಗೆ) |
|---|---|---|
| ೧೨ : ೬ | ೪೮ | ೮ |
| ೧೪ : ೭ | ೪೯ | ೭ |

ಮೇಲಿನ ಉದಾಹರಣೆಗಳಲ್ಲಿ 'ಎ' ಮತ್ತು 'ಬಿ' ಎಂಬ ಎರಡು ಉತ್ಪಾದನಾಂಗಗಳು ೨:೧ರ ಪ್ರಮಾಣದಲ್ಲಿ ಉಪಯೋಗಿಸಲಾಗಿದೆ. ಉತ್ಪಾದನೆಯನ್ನು ಹೆಚ್ಚಿಸುವಾಗ ೨:೧ರ ಪ್ರಮಾಣದಲ್ಲಿಯೇ ಹೆಚ್ಚಿಸಲಾಗಿದೆ. ಆದರೆ ಯಾವುದೇ ಬದಲಾವಣೆ ಮಾಡಲಾಗಿಲ್ಲ.

ಉದಾ. ೧ರಲ್ಲಿ ಪ್ರತಿಫಲದ ಸರಾಸರಿ ಪ್ರಮಾಣ ಉತ್ಪಾದನೆಯಲ್ಲಿ ಉಪಯೋಗಿಸಿದ ಉತ್ಪಾದನಾಂಗಗಳ ಪ್ರಮಾಣಕ್ಕಿಂತ ಹೆಚ್ಚು ಇರುವುದು ಸ್ಪಷ್ಟವಾಗಿದೆ. ಆದ್ದರಿಂದ ಇದು ಏರಿಕೆಯ ಪ್ರತಿಫಲ ಪ್ರಮಾಣದ ಹಂತ.

ಉದಾ. ೨ರಲ್ಲಿ ಒಟ್ಟು ಉತ್ಪಾದನೆಯಲ್ಲಿ ಹೆಚ್ಚಳವಾದರೂ ಸರಾಸರಿ ಉತ್ಪಾದನೆಯ ಪ್ರಮಾಣ ಸ್ಥಿರವಾಗಿದೆ. ಆದ್ದರಿಂದ ಇದು ಸ್ಥಿರ ಪ್ರತಿಫಲ ಪ್ರಮಾಣದ ಹಂತ.

ಉದಾ. ೩ರಲ್ಲಿ ಒಟ್ಟು ಉತ್ಪಾದನೆಯಲ್ಲಿ ಹೆಚ್ಚಳ ಕಂಡು ಬಂದರೂ ಸರಾಸರಿ ಉತ್ಪಾದನೆಯ ಪ್ರಮಾಣದಲ್ಲಿ ಇಳಿಕೆಯಾಗಿದೆ. ಆದ್ದರಿಂದ ಇದು ಇಳಿಕೆಯ ಪ್ರತಿಫಲ ಪ್ರಮಾಣದ ಹಂತ.

## ೩.೩. ಭೂಮಿ

### ಅರ್ಥ

ಸಾಮಾನ್ಯವಾಗಿ ನಮ್ಮ ಸುತ್ತಲೂ ಕಣ್ಣಿಗೆ ಕಾಣುವ ಭೂ ಪ್ರದೇಶಕ್ಕೆ 'ಭೂಮಿ' ಯೆನ್ನುತ್ತೇವೆ. ಆದರೆ ಅರ್ಥಶಾಸ್ತ್ರದಲ್ಲಿ 'ಭೂಮಿ'ಗೆ ವಿಶಾಲವಾದ ಅರ್ಥವಿದೆ. ನಿಸರ್ಗ ದಿಂದ ಮಾನವನಿಗೆ ದತ್ತವಾದ ಎಲ್ಲ ಸಂಪನ್ಮೂಲಗಳನ್ನು ಅರ್ಥಶಾಸ್ತ್ರದಲ್ಲಿ 'ಭೂಮಿ' ಎಂದು ಕರೆಯಲಾಗುತ್ತದೆ. ಆದುದರಿಂದ ನಿಸರ್ಗದತ್ತವಾದ ಮಣ್ಣಿನ ಮೇಲ್ಮೈ, ಅರಣ್ಯ ಸಂಪತ್ತು, ಖನಿಜ ಸಂಪತ್ತು, ಜಲಸಂಪತ್ತು, ಪರ್ವತಗಳು, ಹವಾಮಾನ, ಗಾಳಿ, ಬೆಳಕು ಇವೆಲ್ಲವುಗಳೂ ಭೂಮಿಯಲ್ಲಿ ಸಮಾವೇಶಗೊಳ್ಳುತ್ತವೆ. ಎಂದರೆ ಭೂಮಿಯ ಮೇಲೆ, ಭೂಮಿಯೊಳಗೆ ನೀರಿನಲ್ಲಿ ಮತ್ತು ಹವೆಯಲ್ಲಿ ಸಿಗುವ ಎಲ್ಲ ನೈಸರ್ಗಿಕ ಸಂಪತ್ಸಾಧನಗಳು ಭೂಮಿಯಲ್ಲಿ ಬರುತ್ತವೆ. ನಿಸರ್ಗವು ಈ ಎಲ್ಲ ವಸ್ತುಗಳನ್ನು ನಮಗೆ ಉಚಿತವಾಗಿ ಕೊಟ್ಟಿದೆ. ಅವುಗಳನ್ನು ಮಾನವ ನಿರ್ಮಿಸಿಲ್ಲ.

ಭೂಮಿಯನ್ನು ಉಪಯೋಗಿಸಿ ಮಾನವನು ತನಗೆ ಬೇಕಾದ ಆರ್ಥಿಕ ವಸ್ತುಗಳನ್ನು ಉತ್ಪಾದಿಸುತ್ತಾನೆ. ಎಲ್ಲ ಬಗೆಯ ಉತ್ಪಾದನೆಗೆ ಭೂಮಿಯೇ ಮೂಲ. ಅದು ಆರ್ಥಿಕ ಜೀವನದ ತಳಹದಿ. ಒಂದು ರಾಷ್ಟ್ರದ ಆರ್ಥಿಕಾಭಿವೃದ್ಧಿಯಲ್ಲಿ ಅದು ಮಹತ್ವದ ಸ್ಥಾನ ಪಡೆದಿದೆ.

### ಭೂಮಿಯ ಲಕ್ಷಣಗಳು

ಉತ್ಪಾದನಾಂಗವಾದ ಭೂಮಿ ತನ್ನದೇ ಆದ ಕೆಲವು ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದು ಅವು ಕೆಳಗಿನಂತಿವೆ.

೧. **ಭೂಮಿ ನಿಸರ್ಗದ ಕೊಡುಗೆಯಾಗಿದೆ :** ಭೂಮಿ ಮಾನವ ನಿರ್ಮಿತವಾದುದಲ್ಲ. ಅದು ಮಾನವನಿಗೆ ಪ್ರಕೃತಿಯಿಂದ ದತ್ತವಾದ ವಸ್ತುವಾಗಿದೆ. ಭೂಮಿಯ ಮೇಲೆ ಮಾನವನು ಯಾವುದೇ ರೀತಿಯಲ್ಲಿ ತನ್ನ ಪ್ರಭಾವವನ್ನು ಬೀರಲು ಸಾಧ್ಯವಿಲ್ಲ.

೨. **ಭೂಮಿಗೆ ಚಲನೆಯಿಲ್ಲ :** ಭೂಮಿಯನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಥವಾ ಒಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರಕ್ಕೆ ಸ್ಥಳಾಂತರಿಸಲು ಬರುವುದಿಲ್ಲ. ಅವು ಎಲ್ಲಿ ಲಭ್ಯವಿರುತ್ತವೆಯೋ ಅಲ್ಲಿಯೇ ಹೋಗಿ ಉತ್ಪಾದನೆ ಮಾಡಬೇಕಾಗುತ್ತದೆ. ಉದಾ. ಉತ್ತರದಲ್ಲಿರುವ ಹಿಮಾಲಯ ಪರ್ವತವನ್ನು ದಕ್ಷಿಣಕ್ಕೂ, ಉತ್ತರ ಪ್ರದೇಶದ ಫಲವತ್ತಾದ ಭೂಮಿಯನ್ನು ರಾಜಸ್ಥಾನಕ್ಕೂ ಸ್ಥಳಾಂತರಿಸಲು ಬರುವುದಿಲ್ಲ.

೩. **ಭೂಮಿಯ ಗಾತ್ರ ಮಿತವಾದದ್ದು :** ಭೂಮಿಯ ಗಾತ್ರ ಮಿತವಾಗಿದೆ. ಅಂದರೆ ಭೂಮಿಯ ಭೂಭಾಗ ಸ್ಥಿರವಾದುದು. ಅದರ ವಿಸ್ತೀರ್ಣವನ್ನು ದೊಡ್ಡದನ್ನಾಗಲೀ, ಚಿಕ್ಕದನ್ನಾಗಲೀ ಮಾಡಲು ಬರುವುದಿಲ್ಲ. ಅದಕ್ಕೆ ಬೇಡಿಕೆ ಹೆಚ್ಚಾದಾಗ ಅದರ ಗೇಣಿ ಅಧಿಕವಾಗಬಹುದೇ ವಿನಹ ಅದರ ಪೂರೈಕೆ ಅಧಿಕವಾಗಲಾರದು.

**೪. ಭೂಮಿ ಶಾಶ್ವತವಾದುದು :** ಭೂಮಿ ಶಾಶ್ವತವಾಗಿದೆ. ಅಂದರೆ ಅದರ ಭೂಭಾಗ ಶಾಶ್ವತವಾದುದು. ಅದನ್ನು ಮಾನವನಿಗೆ ನಾಶಮಾಡಲು ಸಾಧ್ಯವಿಲ್ಲ. ಆದರೆ ಅದರ ಫಲವತ್ತತೆ ನಶಿಸಬಹುದು. ಆದಾಗ್ಯೂ ಅಲ್ಪಾವದಿಯಲ್ಲಿಯಲ್ಲೇ ಮತ್ತೆ ಫಲವತ್ತತೆಯನ್ನು ಮರಳಿ ಪಡೆಯಬಹುದು.

**೫. ಭೂಮಿಯ ಗುಣಮಟ್ಟ ಸಮನಾಗಿರುವುದಿಲ್ಲ :** ಭೂಮಿಯು ಎಲ್ಲ ಕಡೆಯಲ್ಲಿಯೂ ಒಂದೇ ರೀತಿಯ ಗುಣವನ್ನು ಅಥವಾ ಫಲವತ್ತತೆಯನ್ನು ಹೊಂದಿರುವುದಿಲ್ಲ. ಗಂಗಾ ನದಿಯ ಬಯಲು ಪ್ರದೇಶ ಹೆಚ್ಚು ಫಲವತ್ತತೆಯನ್ನು ಹೊಂದಿದ್ದರೆ, ರಾಜಸ್ಥಾನದ ಮರುಭೂಮಿ ಪ್ರದೇಶ ಫಲಶಕ್ತಿರಹಿತವಾಗಿದೆ.

**೬. ಭೂಮಿಯು ಸ್ಥಳದ ಮಹತ್ವ ಸಮನಾಗಿರುವುದಿಲ್ಲ :** ಭೂಮಿಯ ಮಹತ್ವ ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿರುತ್ತದೆ. ದೊಡ್ಡ ನಗರಗಳಲ್ಲಿ ಹಾಗೂ ಜನವಸತಿ ಅಧಿಕ ವಾಗಿರುವ ಪ್ರದೇಶಗಳಲ್ಲಿ ಭೂಮಿಗೆ ಹೆಚ್ಚು ಮಹತ್ವವಿರುತ್ತದೆ. ಸಹಜವಾಗಿ ಅಂತಹ ಪ್ರದೇಶಗಳಲ್ಲಿ ಭೂಮಿಗೆ ಅಧಿಕ ಬೇಡಿಕೆ ಇರುವುದರಿಂದ ಬೆಲೆ ಹೆಚ್ಚಿರುತ್ತದೆ. ನಗರ ಪ್ರದೇಶಗಳಿಂದ ದೂರವಿರುವ ಪ್ರದೇಶಗಳಲ್ಲಿ ಭೂಮಿಗೆ ಕಡಿಮೆ ಬೇಡಿಕೆ ಮತ್ತು ಕಡಿಮೆ ಬೆಲೆ ಇರುತ್ತದೆ.

**೭. ಭೂಮಿ ಪ್ರಾಥಮಿಕ ಉತ್ಪಾದನಾಂಗವಾಗಿದೆ :** ಭೂಮಿಯ ಭೂಭಾಗ ಪ್ರಾಥಮಿಕ ಉತ್ಪಾದನಾಂಗವಾಗಿದೆ. ಎಲ್ಲ ಬಗೆಯ ಉತ್ಪಾದನಾ ಚಟುವಟಿಕೆಗಳನ್ನು ಭೂಭಾಗದ ಮೇಲೆಯೇ ಪ್ರಾರಂಭಿಸಬೇಕಾಗಿದೆ. ಉದಾ. ಕಟ್ಟಡ ಕಟ್ಟಲು, ಉದ್ದಿಮೆಗಳನ್ನು ಪ್ರಾರಂಭಿಸಲು, ಬೆಳೆಗಳನ್ನು ಬೆಳೆಯಲು ನಾವು ಭೂಭಾಗವನ್ನು ಉಪಯೋಗಿಸಲೇ ಬೇಕಾಗುತ್ತದೆ.

**೮. ಭೂಮಿ ಇಳಿಮುಖ ಪ್ರತಿಫಲ ತತ್ವಕ್ಕಕ್ಕೆ ಒಳಗಾಗುವ ಉತ್ಪಾದನಾಂಗವಾಗಿದೆ :** ಉತ್ಪಾದನೆಯನ್ನು ಹೆಚ್ಚಿಸುವ ಉದ್ದೇಶದಿಂದ ಹೆಚ್ಚು ಹೆಚ್ಚು ಬಂಡವಾಳವನ್ನು ಹಾಗೂ ಶ್ರಮವನ್ನು ಒಂದು ನಿರ್ದಿಷ್ಟ ಗಾತ್ರದ ಭೂಮಿಯ ಮೇಲೆ ಅಂದರೆ ಭೂಭಾಗದ ಮೇಲೆ ತೊಡಗಿಸುತ್ತಾ ಹೋದಂತೆ ಅದರಿಂದ ದೊರೆಯುವ ಪ್ರತಿಫಲ ಸ್ವಲ್ಪ ಕಾಲದ ನಂತರ ಇಳಿಮುಖವಾಗತೊಡಗುತ್ತದೆ. ಈ ನಿಯಮ ವಿಶೇಷವಾಗಿ ಭೂಮಿಗೆ ಅನ್ವಯಿಸುತ್ತದೆ.

ಈ ಪ್ರಕಾರ ಭೂಮಿ ವಿಶಿಷ್ಟ ಗುಣಧರ್ಮಗಳನ್ನು ಹೊಂದಿದೆ. ಈ ಗುಣಧರ್ಮಗಳು ಉತ್ಪಾದನೆಯ ಇತರ ಉತ್ಪಾದನಾಂಗಗಳಿಂದ ಭೂಮಿಯನ್ನು ಪ್ರತ್ಯೇಕವಾಗಿಸಿವೆ.

### ಇಳಿಮುಖ ಪ್ರತಿಫಲದ ನಿಯಮ

ಅರ್ಥಶಾಸ್ತ್ರದಲ್ಲಿ ಇಳಿಮುಖದ ಪ್ರತಿಫಲದ ನಿಯಮವವು ಮೂಲಭೂತ ನಿಯಮ ವಾಗಿದೆ. ಈ ನಿಯಮ ಸಾಮಾನ್ಯವಾಗಿ ಎಲ್ಲ ಬಗೆಯ ಉತ್ಪಾದನೆಗೆ ಅನ್ವಯಿಸುತ್ತದೆ. ಆದರೆ ವಿಶೇಷತಃ ಭೂಮಿಯನ್ನು ಬಹುಪ್ರಮಾಣದಲ್ಲಿ ಅವಲಂಬಿಸುವ ಕೃಷಿ ಉತ್ಪಾದನೆಗೆ

ಹೆಚ್ಚು ಅನ್ವಯವಾಗುತ್ತದೆ. ಆದುದರಿಂದ ಈ ನಿಯಮವನ್ನು ಭೂಮಿಗೆ ಅನ್ವಯಿಸಿ ನಿರೂಪಿಸುವ ಮತ್ತು ವಿವರಿಸುವ ರೂಢಿ ಇದೆ. ಈ ನಿಯಮವನ್ನು ಮೊಟ್ಟಮೊದಲು ಡೇವಿಡ್ ರಿಕಾರ್ಡೋರವರು ವಿವರಿಸಿ ಚರ್ಚಿಸಿದ್ದರೂ ಸಹ ವ್ಯವಸ್ಥಿತ ರೀತಿಯಲ್ಲಿ ಇದನ್ನು ಆಲ್‌ಫ್ರೆಡ್ ಮಾರ್ಷಲ್‌ರವರು ಜನಪ್ರಿಯಗೊಳಿಸಿದರು. ಮಾರ್ಷಲ್‌ರವರ ನಿರೂಪಣೆಯ ಸಾರಾಂಶ ಕೆಳಗಿನಂತಿದೆ.

"ಬೇಸಾಯದ ವಿಧಾನಗಳಲ್ಲಿ ಸುಧಾರಣೆಗಳಾಗದಿದ್ದಲ್ಲಿ, ಒಂದು ನಿರ್ದಿಷ್ಟಪಡಿಸಿದ ಭೂಮಿಯ ಸಾಗುವಳಿಯಲ್ಲಿ ಶ್ರಮ ಮತ್ತು ಬಂಡವಾಳದ ಬಳಕೆಯನ್ನು ಹೆಚ್ಚಿಸಿದಾಗ್ಯೂ ದೊರೆಯುವ ಪ್ರತಿಫಲವು ಹೆಚ್ಚಿಸಿದ ಶ್ರಮ ಮತ್ತು ಬಂಡವಾಳದ ಪ್ರಮಾಣಕ್ಕಿಂತಲೂ ಕಡಿಮೆಯಿರುತ್ತದೆ. ಆದ್ದರಿಂದಲೇ ಈ ನಿಯಮವನ್ನು ಇಳಿಮುಖ ಪ್ರತಿಫಲದ ನಿಯಮ" ಎಂದು ಕರೆಯುತ್ತೇವೆ.

ಒಂದು ನಿರ್ದಿಷ್ಟಪಡಿಸಿದ ಭೂಮಿಯ ಸಾಗುವಳಿಯಲ್ಲಿ ಶ್ರಮ ಮತ್ತು ಬಂಡವಾಳವನ್ನು ಹೆಚ್ಚಾಗಿ ಬಳಸುತ್ತ ಹೋದರೂ ದೊರೆಯುವ ಪ್ರತಿಫಲ ಆ ಪ್ರಮಾಣದಲ್ಲಿ ಹೆಚ್ಚಾಗುವುದಿಲ್ಲ ಎಂಬುದು ಪ್ರತಿಯೊಬ್ಬ ಬೇಸಾಯಗಾರನ ಅನುಭವವಾಗಿದೆ. ಭೂಮಿಯ ಫಲವತ್ತತೆಗೆ ಒಂದು ಮಿತಿ ಇದೆ ಎಂಬುದನ್ನು ಇದು ಸೂಚಿಸುತ್ತದೆ. ಉದಾ. ನಿರ್ದಿಷ್ಟ ಪಡಿಸಿದ ಭೂಮಿಯ ಸಾಗುವಳಿಯಲ್ಲಿ ಶ್ರಮ ಮತ್ತು ಬಂಡವಾಳದ ಬಳಕೆಯ ಪ್ರಮಾಣವನ್ನು ದ್ವಿಗುಣಗೊಳಿಸುವದರಿಂದ ಉತ್ಪಾದನೆ ದ್ವಿಗುಣಗೊಳ್ಳುವುದಿಲ್ಲ. ಆದ್ದರಿಂದ ಬೆಳೆಯುತ್ತಿರುವ ಜನಸಂಖ್ಯೆಗೆ ಆಹಾರೋತ್ಪಾದನೆಯನ್ನು ಹೆಚ್ಚಿಸಬೇಕೆಂಬ ಪ್ರಯತ್ನಗಳು ವಿಫಲಗೊಳ್ಳುತ್ತವೆ. ಭೂಮಿಯ ಫಲವತ್ತತೆಗೆ ಮಿತಿ ಇರುವುದರಿಂದ ಒಂದು ನಿರ್ದಿಷ್ಟ ಹಂತದ ನಂತರ ಉತ್ಪಾದನೆಯನ್ನು ಹೆಚ್ಚಿಸಲು ಮೊದಲಿಗಿಂತ ಹೆಚ್ಚಿನ ಪ್ರಯತ್ನಗಳನ್ನು ಮಾಡಬೇಕಾಗುತ್ತದೆ. ಪ್ರಯತ್ನಗಳು ಮುಂದುವರಿದಂತೆ ಅದು ನಿರರ್ಥಕವಾಗಿ ಉತ್ಪಾದನೆ ಕುಸಿಯತೊಡಗುತ್ತದೆ ಎಂಬುದು ಈ ನಿಯಮದ ಸಾರಾಂಶ. ಆದ್ದರಿಂದ ಆಹಾರಧಾನ್ಯಗಳ ಬೇಡಿಕೆ ಹೆಚ್ಚಿದಂತೆಲ್ಲ ಹೊಸ ಹೊಸ ಭೂಮಿಯನ್ನು ಸಾಗುವಳಿಗೆ ಒಳಪಡಿಸುತ್ತಾ ಹೋಗಬೇಕಾಗುತ್ತದೆ.

ಈ ನಿಯಮವನ್ನು ಒಂದು ಉದಾಹರಣೆಯ ಮೂಲಕ ವಿವರಿಸಬಹುದಾಗಿದೆ. ಒಬ್ಬ ರೈತನಲ್ಲಿ ೨ ಎಕರೆ ಬತ್ತ ಬೇಸಾಯ ಮಾಡುವ ಭೂಮಿ ಇದೆ ಎಂದು ತಿಳಿಯೋಣ. ಅದರಲ್ಲಿ ಉತ್ಪಾದನೆಯನ್ನು ಹೆಚ್ಚಿಸಲು ಆಸಕ್ತನಾಗಿದ್ದು ಹೆಚ್ಚು ಹೆಚ್ಚು ಶ್ರಮ ಮತ್ತು ಬಂಡವಾಳವನ್ನು ಬಳಸುತ್ತಾ ಹೋಗುತ್ತಾನೆಂದು ಭಾವಿಸೋಣ. ಆಗ ಬತ್ತದ ಉತ್ಪಾದನೆ ಯಾವ ಪ್ರಮಾಣದಲ್ಲಿ ಹೆಚ್ಚಾಗುತ್ತಾದೆಂಬುದನ್ನು ಕೆಳಗಿನ ಪಟ್ಟಿಯ ಸಹಾಯದಿಂದ ತಿಳಿದುಕೊಳ್ಳಬಹುದು.

ಕೋಷ್ಟಕ ೩.೪

## ಇಳಿಕೆಯ ಪ್ರತಿಫಲ ನಿಯಮ

| ಬಂಡವಾಳ ಮತ್ತು ಶ್ರಮ (ಘಟಕಗಳಲ್ಲಿ) | ಒಟ್ಟು ಉತ್ಪನ್ನ (ಕ್ವಿಂಟಲ್‌ಗಳಲ್ಲಿ) | ಸೀಮಾಂತ ಉತ್ಪನ್ನ (ಕ್ವಿಂಟಲ್‌ಗಳಲ್ಲಿ) | ಸರಾಸರಿ ಉತ್ಪನ್ನ (ಕ್ವಿಂಟಲ್‌ಗಳಲ್ಲಿ) |
|---|---|---|---|
| ೧ | ೨೦ | ೨೦ | ೨೦.೦ |
| ೨ | ೩೫ | ೧೫ | ೧೭.೫ |
| ೩ | ೪೫ | ೧೦ | ೧೫.೦ |
| ೪ | ೫೦ | ೦೫ | ೧೨.೫ |
| ೫ | ೫೦ | ೦೦ | ೧೦.೦ |
| ೬ | ೪೫ | -೦೫ | ೦೭.೫ |

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಒಟ್ಟು ಉತ್ಪನ್ನ ೪ನೆಯ ಘಟಕದವರೆಗೆ ಹೆಚ್ಚುತ್ತಾ ಹೋಗಿದೆಯಾದರೂ ೨ನೆಯ ಘಟಕದ ನಂತರ ಇಳಿಮುಖದರದಲ್ಲಿ ಹೆಚ್ಚಿದೆ. ೫ನೆಯ ಘಟಕದಲ್ಲಿ ಅದು ಸ್ಥಿರವಾಗಿದ್ದು ೬ನೆಯ ಘಟಕದಲ್ಲಿ ಕುಸಿದಿದೆ.

ಚಿತ್ರ ೩.೨.

## ಇಳಿಕೆಯ ಪ್ರತಿಫಲ ನಿಯಮ



ಸೀಮಾಂತ ಉತ್ಪನ್ನವನ್ನು ಗಮನಿಸಿದಾಗ ಹೆಚ್ಚುವರಿ ಉತ್ಪನ್ನದ ಪ್ರಮಾಣ ಆರಂಭದಿಂದಲೇ ಇಳಿಮುಖವಾಗುತ್ತ ಬಂದು ೫ನೆಯ ಘಟಕದಲ್ಲಿ ಯಾವ ಹೆಚ್ಚಳವೂ ಆಗಿಲ್ಲ. ೬ನೆಯ ಘಟಕದಲ್ಲಿ ಅದು ಋಣಾತ್ಮಕವಾಗಿದೆ. ಸರಾಸರಿ ಉತ್ಪನ್ನ ಸಹ ಪ್ರಾರಂಭದಿಂದಲೇ ಇಳಿಮುಖವಾಗಿದೆ.

ಈ ನಿಯಮವನ್ನು ಮೇಲಿನ ಪಟ್ಟಿಯ ಆಧಾರದ ಮೇಲೆ ಇನ್ನೂ ಸ್ಪಷ್ಟವಾಗಿ ಕೆಳಗಿನ ರೇಖಾಚಿತ್ರದ ಸಹಾಯದಿಂದ ವ್ಯಕ್ತಪಡಿಸಬಹುದು.

ಮೇಲಿನ ರೇಖಾಚಿತ್ರದಲ್ಲಿ ಒಟ್ಟು ಉತ್ಪಾದನೆಯು ಇಳಿಕೆಯ ಪ್ರಮಾಣದಲ್ಲಿ ಹೆಚ್ಚುತ್ತಾ ಹೋಗಿ ಒಂದು ಹಂತವನ್ನು ಮುಟ್ಟಿದ ನಂತರ ಇಳಿಯುತ್ತಾ ಹೋಗುವುದನ್ನು ಕಾಣಬಹುದು. ಇದನ್ನು TR ರೇಖೆ ಸ್ಪಷ್ಟಪಡಿಸುತ್ತದೆ. ಸೀಮಾಂತ ಉತ್ಪನ್ನ ಆರಂಭ ದಿಂದಲೂ ಇಳಿಮುಖವಾಗಿರುವುದನ್ನು MR ರೇಖೆ ಸ್ಪಷ್ಟಪಡಿಸುತ್ತದೆ.

ಇಳಿಮುಖ ಪ್ರತಿಫಲದ ನಿಯಮವನ್ನು ಏರಿಕೆಯ ವೆಚ್ಚದ ನಿಯಮ ಎಂದೂ ಕರೆಯುವರು. ಏಕೆಂದರೆ ಶ್ರಮ ಮತ್ತು ಬಂಡವಾಳವನ್ನು ಹೆಚ್ಚಾಗಿ ಬಳಸಿದಾಗಲೂ ಪ್ರತಿಫಲ ಇಳಿಮುಖವಾಗುವುದರಿಂದ ಸರಾಸರಿ ವೆಚ್ಚ ಅಧಿಕವಾಗುತ್ತದೆ.

ಅರ್ಥಶಾಸ್ತ್ರದಲ್ಲಿ ಇಳಿಮುಖ ಪ್ರತಿಫಲದ ನಿಯಮಕ್ಕೆ ವಿಶಿಷ್ಟ ಸ್ಥಾನವಿದೆ. ಆಂಗ್ಲ ಅರ್ಥಶಾಸ್ತ್ರಜ್ಞರು ಈ ನಿಯಮದ ಆಧಾರದ ಮೇಲೆ ಹಲವು ಆರ್ಥಿಕ ಸಿದ್ಧಾಂತಗಳನ್ನು ರಚಿಸಿದ್ದಾರೆ. ರಿಕಾರ್ಡೋರವರ ಗೇಣೀಯ ನಿಯಮ ಈ ನಿಯಮವನ್ನು ಆಧರಿಸಿದೆ.

### ಗೇಣಿಯ ಅರ್ಥ

ಸಾಮಾನ್ಯ ಭಾಷೆಯಲ್ಲಿ ಗೇಣಿಗೆ ನಾವು ಬಾಡಿಗೆ ಎಂದು ಕರೆಯುತ್ತೇವೆ. ಆದರೆ ಅರ್ಥಶಾಸ್ತ್ರದಲ್ಲಿ ಗೇಣಿಗೆ ವಿಶೇಷ ಅರ್ಥವಿರುವುದರಿಂದ ಬಾಡಿಗೆಯು ಗೇಣಿಯಾಗಲಾರದು. "ಭೂಮಿಯ ಉಪಯೋಗಕ್ಕಾಗಿ ಭೂ ಮಾಲಿಕನಿಗೆ ಕೊಡುವ ಪ್ರತಿಫಲ ಅರ್ಥಶಾಸ್ತ್ರದಲ್ಲಿ 'ಗೇಣಿ'ಯೆಂದು ಪರಿಗಣಿಸಲ್ಪಡುತ್ತದೆ". ಅಂದರೆ ಭೂಮಿಯನ್ನು ಉಪಯೋಗಿಸಿಕೊಂಡದ್ದ ಕ್ಕಾಗಿ ಗೇಣಿದಾರನು ಭೂಮಾಲಿಕನಿಗೆ ಕೊಡುವ ಪ್ರತಿಫಲ ಗೇಣಿಯಾಗುತ್ತದೆ. ಇದನ್ನು ಅರ್ಥಶಾಸ್ತ್ರದಲ್ಲಿ 'ಆರ್ಥಿಕ ಗೇಣಿ' ಎಂದು ಕರೆಯಲಾಗುತ್ತದೆ.

'ಗೇಣಿ' ಎಂಬ ಪದಕ್ಕೆ ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯೆ ಕೊಟ್ಟಿದ್ದಾರೆ. ಅವು ಕೆಳಗಿನಂತಿವೆ.

ಡೇವಿಡ್ ರಿಕಾರ್ಡೋರವರ ಅಭಿಪ್ರಾಯದಲ್ಲಿ, "ಮಣ್ಣಿನಲ್ಲಿರುವ ಮೂಲ ಮತ್ತು ನಾಶಗೊಳಿಸಲು ಸಾಧ್ಯವಿಲ್ಲದ ಶಕ್ತಿಗಳನ್ನು ಉಪಯೋಗಿಸಿಕೊಂಡು ಅದರ ಉತ್ಪನ್ನದಲ್ಲಿ ಭೂಮಾಲಿಕನಿಗೆ ಕೊಡುವ ಒಂದು ಭಾಗ ಗೇಣಿ".

ಮಾರ್ಷಲ್‌ರ ಪ್ರಕಾರ, "ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲಗಳಿಂದ ಪಡೆದ ಆದಾಯ ಗೇಣಿಯಾಗಿದೆ".

ಥಾಮಸ್‌ರ ಪ್ರಕಾರ, "ಭೂ ಮಾಲಿಕರಿಗೆ ಭೂಮಿ ಹಾಗೂ ನೈಸರ್ಗಿಕ ಸಂಪನ್ಮೂಲ ಗಳಿಂದ ಬರುವ ಆದಾಯ ಗೇಣಿಯಾಗಿದೆ".

ಈ ಪ್ರಕಾರ 'ಗೇಣಿ' ಎಂಬ ಪದವು ಕೇವಲ ಭೂಮಿಯ ಉಪಯೋಗಕ್ಕೆ ಮಾತ್ರ ಸೀಮಿತವಾಗಿದೆ.

'ಗೇಣಿ'ಯು ಭೂಮಿಯ ಫಲವತ್ತತೆಯಲ್ಲಿನ ವ್ಯತ್ಯಾಸದ ಮೂಲಕ ಉದ್ಭವಿಸುತ್ತದೆ. ಹೆಚ್ಚು ಫಲವತ್ತಾದ ಭೂಮಿಯು ಹೆಚ್ಚಿನ ಗೇಣಿಯನ್ನು ಸಂಪಾದಿಸಿದರೆ ಕಡಿಮೆ ಫಲವತ್ತತೆಯ ಭೂಮಿ ಕಡಿಮೆ ಗೇಣಿಯನ್ನು ಸಂಪಾದಿಸುತ್ತದೆ. ಸಾಗುವಳಿ ಮಾಡುವದಕ್ಕಾಗಿ ತಗಲಿದ ವೆಚ್ಚ ಮತ್ತು ಆ ಸಾಗುವಳಿಯಿಂದ ಬಂದ ಬೆಳೆಯನ್ನು ಮಾರಾಟ ಮಾಡುವುದ ರಿಂದ ಬಂದ ಆದಾಯದ ನಡುವೆ ಸಮಾನತೆ ಇದ್ದುದಾದರೆ ಆ ಭೂಮಿಯು ಗೇಣಿಯನ್ನು ಸಂಪಾದಿಸಲಾರದು. ಅಂದರೆ ಉತ್ಪಾದನಾ ವೆಚ್ಚ ಮತ್ತು ಬೆಲೆ ಸಮನಾಗಿರುವದರಿಂದ ಸಾಗುವಳಿ ಮಾಡುವ ರೈತನಿಗೆ ಹೆಚ್ಚುವರಿ ಪ್ರತಿಫಲ ಲಭ್ಯವಾಗದಿರುವುದರಿಂದ ಆ ರೈತ ಭೂಮಾಲಿಕನಿಗೆ ಗೇಣಿ ಕೊಡಬೇಕಾಗಿಲ್ಲ. ಈ ಭೂಮಿ ರಿಕಾರ್ಡೋರವರ ಪ್ರಕಾರ ಅಂಚಿನ ಭೂಮಿಯಾಗಿದೆ. ಅರ್ಥಶಾಸ್ತ್ರದಲ್ಲಿ ಗೇಣಿ ಎಂದರೆ ಆರ್ಥಿಕ ಗೇಣಿ ಅಥವಾ ಪರಿಶುದ್ಧ ಗೇಣಿ.

### ಅರೆ ಗೇಣಿಯ ಅರ್ಥ

ಅರೆಗೇಣಿ ಎಂಬ ಪದವನ್ನು ಮೊದಲು ಪ್ರೊ. ಮಾರ್ಷಲ್ ಅರ್ಥಶಾಸ್ತ್ರ ಪ್ರಪಂಚಕ್ಕೆ ಪರಿಚಯಿಸಿದರು. ಭೂಮಿಯನ್ನು ಹೊರತುಪಡಿಸಿ ಇತರ ಉತ್ಪಾದನಾ ಘಟಕಗಳು ಅಲ್ಪಾವಧಿಯಲ್ಲಿ ಗಳಿಸುವ ಹೆಚ್ಚುವರಿ ಆದಾಯ ಅರೆಗೇಣಿ.

ಭೂಮಿಯ ಪೂರೈಕೆ ಸದಾ ಕಾಲ ಸ್ಥಿರವಾಗಿದ್ದರೆ ಇತರ ಉತ್ಪಾದನಾ ಘಟಕಗಳು ಪೂರೈಕೆ ಅಲ್ಪಾವಧಿಯಲ್ಲಿ ಮಾತ್ರ ಸ್ಥಿರವಾಗಿರುತ್ತವೆ. ಧೀರ್ಘಾವಧಿಯಲ್ಲಿ ಅವುಗಳ ಪೂರೈಕೆಯನ್ನು ಹೆಚ್ಚಿಸಬಹುದು.

ಮಾನವ ನಿರ್ಮಿತ ವಸ್ತುಗಳಿಗೆ ಒಮ್ಮಿಂದೊಮ್ಮೆಲೆ ಮಾರುಕಟ್ಟೆಯಲ್ಲಿ ಬೇಡಿಕೆ ಹೆಚ್ಚಿದರೆ ತಕ್ಷಣವೇ ಅವುಗಳ ಪೂರೈಕೆಯನ್ನು ಹೆಚ್ಚಿಸಲು ಸಾಧ್ಯವಿಲ್ಲ. ಇದರಿಂದ ಅವುಗಳ ಬೆಲೆ ಮೂಲ ಬೆಲೆಗಿಂತಲೂ ಅಧಿಕವಾಗುತ್ತದೆ. ಈ ಅಧಿಕ ಬೆಲೆಯೆ ಅರೆಗೇಣಿ.

ಅರೆಗೇಣಿಯನ್ನು ಮಾನವ ನಿರ್ಮಿತ ವಸ್ತುಗಳಿಗೆ ಮಾತ್ರ ಅನ್ವಯಿಸದೇ ಶ್ರಮ ಮತ್ತು ಸಂಘಟನೆಗೂ ಅನ್ವಯಿಸಬಹುದು.

ದೀರ್ಘಾವಧಿಯಲ್ಲಿ ಭೂಮಿ ಹೊರತುಪಡಿಸಿ ಉಳಿದ ಎಲ್ಲ ಉತ್ಪಾದನಾ ಘಟಕಗಳ ಪೂರೈಕೆಯನ್ನು ಹೆಚ್ಚಿಸಲು ಸಾಧ್ಯವಾಗುವುದರಿಂದ ಆ ಹೆಚ್ಚಿನ ಆದಾಯ ಮಾಯವಾಗುತ್ತದೆ. ಆದ್ದರಿಂದ ಅರೆಗೇಣಿ ಎಂಬುದು ಅಲ್ಪಾವಧಿಯದ್ದಾಗಿದೆ.

ಕೋಷ್ಟಕ ೩.೫

ಆರ್ಥಿಕ ಗೇಣಿ ಮತ್ತು ಅರೆಗೇಣಿಯ ನಡುವಿನ ವ್ಯತ್ಯಾಸಗಳು

| ಆರ್ಥಿಕ ಗೇಣಿ | ಅರೆಗೇಣಿ |
|---|---|
| ೧. ಭೂಮಿಗೆ ಮಾತ್ರ ಅನ್ವಯಿಸುತ್ತದೆ. | ೧. ಮಾನವ ನಿರ್ಮಿತ ವಸ್ತುಗಳಿಗೆ ಮತ್ತು ಕುಶಲಕರ್ಮಿಗಳಿಗೆ ಅನ್ವಯಿಸುತ್ತದೆ. |
| ೨. ಭೂಮಿಯ ಪೂರೈಕೆ ಅಲ್ಪಾವಧಿ ಮತ್ತು ದೀರ್ಘಾವಧಿಯಲ್ಲಿ ಸ್ಥಿರವಾಗಿರುತ್ತದೆ. | ೨. ಮಾನವ ನಿರ್ಮಿತ ವಸ್ತುಗಳ ಮತ್ತು ಕುಶಲಕರ್ಮಿಗಳ ಪೂರೈಕೆ ಅಲ್ಪಾವಧಿಯಲ್ಲಿ ಮಾತ್ರ ಸ್ಥಿರವಾಗಿರುತ್ತದೆ. |
| ೩. ಭೂಮಿಯ ಫಲವತ್ತತೆಯ ವ್ಯತ್ಯಾಸದ ಮೂಲಕ ಇದು ಉದ್ಭವಿಸುತ್ತದೆ. | ೩. ಉತ್ಪಾದನಾ ಘಟಕಗಳ ಮತ್ತು ಕರ್ಮಿಗಳ ಕೊರತೆಯಿಂದ ಇದು ಕುಶಲ ಉದ್ಭವಿಸುತ್ತದೆ. |
| ೪. ಅಲ್ಪಾವಧಿ ಮತ್ತು ದೀರ್ಘಾವಧಿಯಲ್ಲೂ ಕಂಡುಬರುತ್ತದೆ. | ಅಲ್ಪಾವಧಿಯಲ್ಲಿ ಮಾತ್ರ ಕಂಡು ಬರುತ್ತದೆ. ದೀರ್ಘಾವಧಿಯಲ್ಲಿ ಅದು ಮಾಯವಾಗುತ್ತದೆ. |
| ೫. ಸರಕಾರದ ಹಸ್ತಕ್ಷೇಪದಿಂದ ಭಾದಿತವಾಗಲಾರದು. | ೫. ಸರಕಾರದ ಹಸ್ತಕ್ಷೇಪದಿಂದ ಭಾಧಿತವಾಗುತ್ತದೆ. |
| ೬. ಭೂಮಿಯ ಪೂರೈಕೆಯ ಸ್ಥಿತಿಸ್ಥಾಪಕತೆಗೆನುಗುಣವಾಗಿ ನಿರ್ಧರಿಸಲ್ಪಡುತ್ತದೆ. | ೬. ಬೇಡಿಕೆಯಿಂದ ನಿರ್ಧರಿಸಲ್ಪಡುತ್ತದೆ. |
| ೭. ಭೂಮಿಯ ಪೂರೈಕೆಯನ್ನು ಹೆಚ್ಚಿಸಲು ಮತ್ತು ತಗ್ಗಿಸಲು ಬರುವುದಿಲ್ಲ. | ೭. ಮಾನವ ನಿರ್ಮಿತ ವಸ್ತುಗಳ ಪೂರೈಕೆಯನ್ನು ಹೆಚ್ಚಿಸಲು ಮತ್ತು ತಗ್ಗಿಸಲು ಬರುತ್ತದೆ. |

## ೩.೪. ಶ್ರಮ

### ಶ್ರಮದ ಅರ್ಥ

ಸಾಮಾನ್ಯ ಭಾಷೆಯಲ್ಲಿ ಶ್ರಮ ಎಂಬ ಪದಕ್ಕೆ ಕೂಲಿಕಾರರು ಮಾಡುವ ಕೆಲಸ ಎಂದು ಅರ್ಥ. ಆದರೆ ಅರ್ಥಶಾಸ್ತ್ರದಲ್ಲಿ ಶ್ರಮ ಎಂಬ ಪದಕ್ಕೆ ವಿಶಿಷ್ಟವಾದ ಅರ್ಥವಿದೆ. ಅರ್ಥಶಾಸ್ತ್ರದಲ್ಲಿ ಹಣಕ್ಕಾಗಿ ಕೈಕೊಂಡ ಎಲ್ಲ ಬಗೆಯ ಕಾರ್ಯಗಳು ಶ್ರಮ. ಇದು ಮಾನಸಿಕವಾಗಿರಬಹುದು ಅಥವಾ ದೈಹಿಕವಾಗಿರಬಹುದು.

ಸಂತೋಷಕ್ಕಾಗಿ ಕೈಗೊಂಡ ಕಾರ್ಯಗಳು ಶ್ರಮವಾಗುವುದಿಲ್ಲ. ಪ್ರೀತಿಗಾಗಿ ದೇಶ ಪ್ರೇಮದಿಂದಾಗಿ ಹಾಗೂ ಮತ್ತಿತರ ಕಾರಣಗಳಿಂದ ನಾವು ಹಲವು ಕಾರ್ಯಗಳನ್ನು ಮಾಡುತ್ತೇವೆ. ಇದನ್ನು ನಾವು ಹಣಗಳಿಸುವ ಸಲುವಾಗಿ ಮಾಡುವುದಿಲ್ಲವಾದ್ದರಿಂದ ಇದಕ್ಕೆ ಶ್ರಮ ಎಂದು ಕರೆಯುವುದಿಲ್ಲ.

ಶ್ರಮವನ್ನು ಉತ್ಪಾದಕ ಶ್ರಮ ಮತ್ತು ಅನುತ್ಪಾದಕ ಶ್ರಮ ಎಂದು ಹಿಂದಿನ ಕಾಲದಲ್ಲಿ ವಿಭಜನೆ ಮಾಡಲಾಗುತ್ತಿತ್ತು. ಕೃಷಿ ಶ್ರಮ ಮಾತ್ರ ಉತ್ಪಾದಕ ಶ್ರಮವೆಂದೂ ಇತರ ಎಲ್ಲ ಬಗೆಯ ಶ್ರಮವೂ ಅನುತ್ಪಾದಕ ಶ್ರಮವೆಂದು ತಿಳಿಯಲಾಗುತ್ತಿತ್ತು. ಆ್ಯಡಂಸ್ಮಿತ್‌ರ ಪ್ರಕಾರ ಕಣ್ಣಿಗೆ ಕಾಣುವಂತೆ ವಸ್ತುಗಳನ್ನು ಉತ್ಪಾದನೆ ಮಾಡುವುದು ಶ್ರಮವಾಗುತ್ತದೆ. ಶಿಕ್ಷಕರು, ವೈದ್ಯರು, ವಕೀಲರು, ನ್ಯಾಯಾಧೀಶರು ಮುಂತಾದವರ ಶ್ರಮವು ಅನುತ್ಪಾದಕವೆಂದು ಬಗೆಯಲಾಗುತ್ತಿತ್ತು. ಆದರೆ, ಯಾವುದಾದರೊಂದು ಬಗೆಯ ಉತ್ಪನ್ನಕ್ಕಾಗಿ ಎಲ್ಲ ಬಗೆಯ ಕೆಲಸಕ್ಕೂ ನಾವು ಈಗ ಶ್ರಮವೆಂದು ಕರೆಯುತ್ತೇವೆ.

ಒಟ್ಟಿನಲ್ಲಿ, ಹಣಕ್ಕಾಗಿ ಮಾರಿದ ದೈಹಿಕ ಹಾಗೂ ಮಾನಸಿಕ ಶ್ರಮವನ್ನು ಅರ್ಥಶಾಸ್ತ್ರದಲ್ಲಿ ಶ್ರಮ ಎನ್ನಲಾಗಿದೆ. ಈ ಅರ್ಥದಲ್ಲಿ ಶ್ರಮ ಎಂಬ ಪದವನ್ನು ಅರ್ಥಶಾಸ್ತ್ರದಲ್ಲಿ ಉಪಯೋಗಿಸಲಾಗುವುದು.

### ಶ್ರಮದ ಲಕ್ಷಣಗಳು

ಶ್ರಮವು ಕೆಳಗಿನ ಲಕ್ಷಣಗಳನ್ನು ಹೊಂದಿದೆ.

೧. **ಶ್ರಮವನ್ನು ಶ್ರಮಜೀವಿಯಿಂದ ಬೇರ್ಪಡಿಸಲು ಬರುವುದಿಲ್ಲ :** ಶ್ರಮಜೀವಿಯು ಸ್ವತಃ ಹಾಜರಿದ್ದು ತನ್ನ ಕೆಲಸವನ್ನು ಮಾಡಬೇಕಾಗುತ್ತದೆ. ಶ್ರಮಜೀವಿಯ ಗೈರು ಹಾಜರಿಯಲ್ಲಿ ಶ್ರಮ ಸಾಧ್ಯವಿಲ್ಲ. ಶ್ರಮಜೀವಿಯ ಪ್ರಯತ್ನ ಅಭೌತಿಕ ವಸ್ತುವಾದುದರಿಂದ ಅದರಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಉದಾ. ಪ್ರಾಧ್ಯಾಪಕನು ತನ್ನ ಮನೆಯಲ್ಲಿಯೇ ಕುಳಿತುಕೊಂಡು ಕಾಲೇಜಿಗೆ ತನ್ನ ಶ್ರಮವನ್ನು ಕಳಿಸಲು ಬರುವುದಿಲ್ಲ. ಅದರಂತೆಯೇ. ಕಾರ್ಮಿಕನು ಸ್ವತಃ ಕಾರ್ಖಾನೆಗೆ ಹೋಗಿ ತನ್ನ ಶ್ರಮವನ್ನು ಉಪಯೋಗಿಸಬೇಕಾಗುತ್ತದೆ.

೨. **ಶ್ರಮಜೀವಿಯು ಶ್ರಮವನ್ನು ಮಾತ್ರ ಮಾರುತ್ತಾನೆ, ತನ್ನನ್ನಲ್ಲ :** ಶ್ರಮ

ಜೀವಿಯು ತನ್ನ ಶ್ರಮವನ್ನು ಮಾರುತ್ತಾನೆಯೇ ಹೊರತು ತನ್ನನ್ನು ಮಾರಿಕೊಳ್ಳುವುದಿಲ್ಲ. ತನ್ನ ಶ್ರಮಕ್ಕೆ ಪ್ರತಿಯಾಗಿ ಹಣವನ್ನು ಪಡೆಯುತ್ತಾನೆ.

೩. **ಶ್ರಮವು ಬೇಗನೆ ನಶಿಸಿಹೋಗುತ್ತದೆ :** ಒಂದು ದಿನ ಒಬ್ಬ ಶ್ರಮಜೀವಿ ಕೆಲಸ ಮಾಡದೇ ಹೋದರೆ ಅವನು ಮಾಡಬಹುದಾಗಿದ್ದ ಆ ದಿನದ ಕೆಲಸ ವ್ಯರ್ಥವಾಗಿ ಹೋಗುತ್ತದೆ. ನಾಶ ಹೊಂದುತ್ತದೆ. ಶ್ರಮವನ್ನು ಸಂಗ್ರಹಿಸಿ ಇಡಲಾಗುವುದಿಲ್ಲ. ಆದುದರಿಂದ ಶ್ರಮಜೀವಿಯು ತನ್ನ ಶ್ರಮವನ್ನು ಯಾವುದೇ ಬೆಲೆಗಾದರೂ ತಕ್ಷಣ ಮಾರಿಕೊಳ್ಳಬೇಕಾಗುತ್ತದೆ. ಸಾಕಷ್ಟು ಕೂಲಿ ಬರುವವರೆಗೂ ಕೆಲಸ ಮಾಡುವುದಿಲ್ಲ ಎಂದು ಅವನು ಸುಮ್ಮನಿರಲು ಬರುವುದಿಲ್ಲ.

೪. **ಶ್ರಮಜೀವಿಗಳ ದಕ್ಷತೆ ಒಂದೇ ತೆರನಾಗಿರುವುದಿಲ್ಲ :** ಶ್ರಮಜೀವಿಗಳು ದಕ್ಷತೆಯಲ್ಲಿ ಒಬ್ಬರಂತೆ ಇನ್ನೊಬ್ಬರಿರುವುದಿಲ್ಲ. ಮಾನಸಿಕ ಮತ್ತು ಶಾರೀರಿಕ ಶಕ್ತಿ ಕೆಲವರಲ್ಲಿ ಇತರರಿಗಿಂತ ಹೆಚ್ಚಿಗಿರುತ್ತದೆ. ಹೀಗಾಗಿ ಹುದ್ದೆಗಳಲ್ಲೂ ತಾರತಮ್ಯಗಳುಂಟಾದವು.

೫. **ಶ್ರಮವು ಮಾನವೀಯವಾದುದು :** ಶ್ರಮವು ಉತ್ಪಾದನೆಯಲ್ಲಿ ಉಪಯೋಗಿಸುವ ಮಾನವೀಯ ಅಂಶ. ಆದುದರಿಂದ ನಾವು ಶ್ರಮಜೀವಿಯನ್ನು ಪ್ರೀತಿಯಿಂದ ಕಾಣುವದು ಅವಶ್ಯ. ಅವನಿಗೆ ಕೆಲವು ವಿಶೇಷ ಸವಲತ್ತುಗಳನ್ನು ಕೊಡಬೇಕಾಗುವುದು. ಭೂಮಿ ಮತ್ತು ಬಂಡವಾಳದಂತೆ ಬೇಕಾಬ ರೀತಿಯಲ್ಲಿ ಶ್ರಮಜೀವಿಯನ್ನು ಉಪಯೋಗಿಸಿಕೊಳ್ಳಲು ಬರುವುದಿಲ್ಲ.

೬. **ಶ್ರಮಕ್ಕೆ ಚಲನಶಕ್ತಿ ಕಡಿಮೆಯಿದೆ :** ಬಂಡವಾಳಕ್ಕೆ ಹೋಲಿಸಿದರೆ ಶ್ರಮವು ಕಡಿಮೆ ಪ್ರಮಾಣದಲ್ಲಿ ಚಲಿಸುವ ಉತ್ಪಾದನಾಂಗವಾಗಿದೆ. ಶ್ರಮಜೀವಿಯು ಅಷ್ಟು ಸರಳವಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಥವಾ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗಲಾರನು. ಇದಕ್ಕೆ ಭಾಷೆ, ಹವಾಗುಣ, ಪರಿಸರ, ಹೊಂದಾಣಿಕೆ, ಭಾವಾತಿರೇಕ ಮುಂತಾದ ಕಾರಣಗಳಿರಬಹುದು.

೭. **ಶ್ರಮದ ಪೂರೈಕೆ ಅಸ್ಥಿತಿಸ್ಥಾಪಕತ್ವವಾಗಿದೆ :** ಶ್ರಮದ ಬೇಡಿಕೆಗೂ ಪೂರೈಕೆಗೂ ಯಾವ ಸಂಬಂಧವೂ ಇರುವುದಿಲ್ಲ. ಶ್ರಮದ ಬೇಡಿಕೆ ಬದಲಾದಾಗ ಅದಕ್ಕನುಗುಣವಾಗಿ ಶ್ರಮದ ಪೂರೈಕೆಯನ್ನು ಹೆಚ್ಚಿಸಲೂ ಕಡಿಮೆ ಮಾಡಲೂ ಸಾಧ್ಯವಿಲ್ಲ. ಏಕೆಂದರೆ ಅದರ ಪೂರೈಕೆ ಸದಾಕಾಲವೂ ಜನಸಂಖ್ಯೆಯ ಗಾತ್ರದ ಮೇಲೆ ಅವಲಂಬಿತವಾಗಿರುತ್ತದೆ.

೮. **ಶ್ರಮಕ್ಕೆ ಕಡಿಮೆ ಚೌಕಶಿ ಶಕ್ತಿ ಇರುತ್ತದೆ :** ಶ್ರಮ ಬೇಗನೆ ನಶಿಸಿ ಹೋಗುವ ಗುಣವನ್ನು ಹೊಂದಿರುವುದೇ ಶ್ರಮಕ್ಕೆ ಕಡಿಮೆ ಚೌಕಶಿ ಶಕ್ತಿ ಇರಲು ಕಾರಣ. ಶ್ರಮ ಜೀವಿಗಳು ಉತ್ತಮ ಕೆಲಸದ ಸ್ಥಿತಿಗಳಿಗಾಗಿ ಮತ್ತು ಹೆಚ್ಚಿನ ಕೂಲಿಗಾಗಿ ಮಾಲಿಕರೊಡನೆ ಚೌಕಶಿ ಮಾಡುವ ಶಕ್ತಿ ಪಡೆದಿರುವುದಿಲ್ಲ. ಮಾಲಿಕರ ಅಸಂತೃಪ್ತಿಗೆ ಗುರಿಯಾದರೆ ದುಡಿಮೆಯನ್ನು ಕಳೆದುಕೊಳ್ಳಬೇಕಾದ ಅಪಾಯವಿದೆ. ಆದರೂ, ಇಲ್ಲೇ ಚಾನ ದಿನ ಗಳಲ್ಲಿ ಕಾರ್ಮಿಕ ಸಂಘಗಳ ಮೂಲಕ ಚೌಕಸಿ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಿರುವರು.

೯. ಶ್ರಮವು ಉತ್ಪಾದನೆಯ ಆರಂಭ ಮತ್ತು ಕೊನೆಯ ಹಂತವಾಗಿದೆ : ಉತ್ಪಾದನೆ ಶ್ರಮದಿಂದ ಆರಂಭವಾಗಿ ಶ್ರಮದಿಂದಲೇ ಮುಕ್ತಾಯವಾಗುತ್ತದೆ. ಭೂಮಿ ಹಾಗೂ ಬಂಡವಾಳ ಸ್ವಯಂ ಪ್ರೇರಿತ ಉತ್ಪಾದನಾ ಘಟಕಗಳಾಗಿರುವುದರಿಂದ ಉತ್ಪಾದಿತ ವಸ್ತುಗಳನ್ನು ಉತ್ಪಾದನಾ ಸ್ಥಳದಿಂದ ಗ್ರಾಹಕರಿಗೆ ತಲುಪಿಸುವವರೆಗೆ ಶ್ರಮಜೀವಿಗಳೇ ಕಾರ್ಯನಿರ್ವಹಿಸಬೇಕಾಗುತ್ತದೆ.

**ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತ**

ಸಂಪ್ರದಾಯ ಪಂಥದ ಪ್ರಮುಖ ಆರ್ಥಿಕ ಚಿಂತಕರಲ್ಲಿ ಒಬ್ಬರಾದ ಥಾಮಸ್ ರಾಬರ್ಟ್ ಮಾಲ್ಥಸ್ ೧೭೯೮ ರಲ್ಲಿ ಪ್ರಕಟಿಸಿದ 'ಜನಸಂಖ್ಯೆಯ ತತ್ವಗಳ ಮೇಲೆ ಒಂದು ಪ್ರಬಂಧ' ಎಂಬ ಕೃತಿಯು ಜನಸಂಖ್ಯಾ ಬೆಳೆವಣಿಗೆ ಮತ್ತು ಸಮಸ್ಯೆಗೆ ಸಂಬಂಧಿಸಿದಂತೆ ಐತಿಹಾಸಿಕ ಒಳನೋಟವನ್ನು ಒದಗಿಸುತ್ತದೆ.

ಹದಿನೆಂಟನೆಯ ಶತಮಾನದ ಕೊನೆಯ ಭಾಗದಲ್ಲಿ ಇಂಗ್ಲೆಂಡಿನಲ್ಲಿ ಸಂಭವಿಸಿದ ಭೀಕರ ಕ್ಷಾಮ, ಕೈಗಾರಿಕಾ ಕ್ರಾಂತಿಯ ದುಷ್ಪಾರಿಣಾಮ ಮುಂತಾದವುಗಳು ಜನರ ಮೇಲೆ ಭೀಕರ ಪರಿಣಾಮ ಬೀರಿ, ಕೊನೆಗೆ ಜನರನ್ನು ದರಿದ್ರಾವಸ್ಥೆಗೆ ಕೊಂಡೊಯ್ದವು. ಇದು ಕ್ರೈಸ್ತ ಮಂದಿರ ಒಂದರಲ್ಲಿ ಧರ್ಮಗುರುಗಳಾಗಿದ್ದ ಮಾಲ್ಥಸ್‌ರನ್ನು ತಮ್ಮ ಚರಿತ್ರಾರ್ಹ ಕೃತಿಯನ್ನು ಬರೆಯಲು ಪ್ರೇರೇಪಿಸಿತು. ಮಾಲ್ಥಸ್ ಮಂಡಿಸಿದ ವಿಚಾರಧಾರೆಗಳು ಅಂದಿನಿಂದ 'ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತ' ಎಂದೇ ಪ್ರಚಲಿತವಾದವು.

ಸಿದ್ಧಾಂತದ ಊಹೆಗಳು : ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತ ಕೆಳಗಿನ ಊಹೆಗಳನ್ನು ಆಧರಿಸಿದೆ.

೧. ಮಾನವನಿಗೆ ಸಂತಾನಶಕ್ತಿಯು ಸಹಜ ಪ್ರವೃತ್ತಿಯಾಗಿದೆ.
೨. ಮಾನವನ ಅಸ್ತಿತ್ವಕ್ಕೆ ಆಹಾರ ಅವಶ್ಯಕವಾಗಿದೆ.
೩. ಮಾನವನ ಸಂತಾನಶಕ್ತಿಯು ಭೂಮಿಯ ಆಹಾರ ಉತ್ಪಾದಾನ ಶಕ್ತಿಗಿಂತಲೂ ಪ್ರಬಲವಾಗಿದೆ.

ಮಾಲ್ಥಸ್‌ರ ಪ್ರಕಾರ, "ಸುಖವಾಗಿರುವ ಮತ್ತು ಆಚಾರಶೀಲವಾಗಿರುವ ಸಮಾಜದಲ್ಲಿ ಜನಸಂಖ್ಯೆ ಪ್ರತಿ ೨೫ ವರ್ಷಗಳಿಗೊಮ್ಮೆ ದ್ವಿಗುಣಗೊಳ್ಳುತ್ತದೆ. ಆದರೆ ಆಹಾರ ಮಾತ್ರ ಈ ಪ್ರಕಾರದಲ್ಲಿ ಹೆಚ್ಚಾಗುವುದಿಲ್ಲ. ಜನಸಂಖ್ಯೆಯ ಹೆಚ್ಚಳವು ಗುಣೋತ್ತರ ವೇಗವನ್ನು ತೋರಿಸುತ್ತದೆ. ಆದರೆ ಆಹಾರದ ಉತ್ಪಾದನೆಯು ಸಮಾಂತರ ವೇಗದಲ್ಲಿ ಹೆಚ್ಚುವದು." ಇದು ನಿಸರ್ಗ ನಿಯಮ ಎಂಬುದು ಅವರ ಅಭಿಪ್ರಾಯ.

ಈ ಹೇಳಿಕೆಯ ಅರ್ಥ ಇಷ್ಟೆ, ೧. ಯಾವುದೇ ರಾಷ್ಟ್ರದ ಜನಸಂಖ್ಯೆ 'ಗುಣೋತ್ತರ' ವೇಗದಿಂದ ಬೆಳೆಯುತ್ತದೆ. ಅಂದರೆ ೧, ೨, ೪, ೮, ೧೬, ೩೨..... ಈ ವೇಗದಲ್ಲಿ ಹೆಚ್ಚುತ್ತಾ ಹೋಗುವುದು. ೨. ಇದಕ್ಕೆ ವ್ಯತಿರಿಕ್ತವಾಗಿ ಆಹಾರದ ಉತ್ಪಾದನೆಯು ಸಮಾಂತರ ವೇಗದಲ್ಲಿ ಬೆಳೆಯುತ್ತದೆ. ಅಂದರೆ ೧, ೨, ೩, ೪, ೫, ೬ .... ಈ ವೇಗದಲ್ಲಿ

ಹೆಚ್ಚುತ್ತಾ ಹೋಗುವದು. ಭೂಮಿಯ ಉತ್ಪಾದನಾ ಶಕ್ತಿಯು ಕೆಲ ಸಮಯದ ನಂತರ ಇಳಿಕೆ ಪ್ರತಿಫಲ ನಿಯಮಕ್ಕೆ ಒಳಪಟ್ಟು ಆಹಾರದ ಉತ್ಪಾದನೆಯು 'ಸಮಾಂತರ' ವೇಗದಲ್ಲಿಯೂ ಕೂಡ ಹೆಚ್ಚದೇ ಇರಬಹುದು. ಹೀಗಾಗಿ ರಾಷ್ಟ್ರವು ಆಹಾರ ಉತ್ಪಾದನೆಗೆ ಸಂಬಂಧಿಸಿದಂತೆ ಹೆಚ್ಚು ಜನಸಂಖ್ಯೆಯುಳ್ಳದ್ದಾಗುವುದು.

ಜನಸಂಖ್ಯೆಯ ವಿಪರೀತ ಹೆಚ್ಚಳದ ಪರಿಣಾಮವಾಗಿ ಜನರು ಹೊಟ್ಟೆಗೆ ಆಹಾರವಿಲ್ಲದೇ ಸಾಯುವ ಪರಿಸ್ಥಿತಿಯುಂಟಾಗುತ್ತದೆ. ಈ ತೆರನಾದ ದುಃಸ್ಥಿತಿಯನ್ನು ತಡೆಗಟ್ಟಲು ಮಾಲ್ಥಸ್‌ನು ಕೆಲವು ನಿವಾರಕ ಪ್ರತಿಬಂಧಕಗಳನ್ನು ಸೂಚಿಸಿದ್ದಾರೆ. ಅವು ಕೆಳಗಿನಂತಿವೆ.

೧. ಮದುವೆಯನ್ನು ಮುಂದೂಡುವುದು.

೨. ನೈತಿಕ ಸಂಯಮನವನ್ನು ಆಚರಿಸುವುದು.

೩. ಬ್ರಹ್ಮಚರ್ಯವನ್ನು ಪಾಲಿಸುವುದು.

ಈ ಪ್ರತಿಬಂಧಕಗಳನ್ನು ಅನುಸರಿಸಿ ಜನಸಂಖ್ಯೆಯನ್ನು ನಿಯಂತ್ರಿಸಿ ಕೆಳಮಟ್ಟಕ್ಕೆ ತರಬಹುದು ಎಂದು ಅವರು ಹೇಳಿದ್ದಾರೆ. ಒಂದು ವೇಳೆ ಮಾನವನು ಜನಸಂಖ್ಯೆ ಬೆಳವಣಿಗೆಯನ್ನು ತಡೆಯಲು ಅಸಮರ್ಥನಾದರೆ ಪ್ರಕೃತಿಯೇ ತನ್ನ ಕ್ರೂರ ಕ್ರಮಗಳಿಂದ ಜನಸಂಖ್ಯೆಯನ್ನು ನಿಯಂತ್ರಿಸುವುದು ಎಂಬುದು ಅವರ ವಾದವಾಗಿತ್ತು.

ಪ್ರಕೃತಿ ಅಥವಾ ನೈಸರ್ಗಿಕ ಪ್ರತಿಬಂಧಕಗಳು ಯಾವುವೆಂದರೆ ಬರಗಾಲ, ಅತಿವೃಷ್ಟಿ ಮತ್ತು ಪ್ರವಾಹ, ಚಂಡಮಾರುತ, ಭೂಕಂಪ, ಸಾಂಕ್ರಾಮಿಕ ರೋಗಗಳು, ಆಹಾರದ ಕೊರೆತ ಇತ್ಯಾದಿ.

ನಿವಾರಕ ಪ್ರತಿಬಂಧಕಗಳ ಮೂಲಕ ಮಾನವನು ಜನಸಂಖ್ಯಾ ಏರಿಕೆಯನ್ನು ತಡೆಯದಿದ್ದರೆ ಮಿತಿಮೀರಿ ಬೆಳೆದ ಜನಸಂಖ್ಯೆಯು ಪ್ರಕೃತಿಯ ದವಡೆಗೆ ಸಿಕ್ಕಿ ನಾಶ ಹೊಂದುತ್ತದೆ ಎಂದು ಎಚ್ಚರಿಸಿದ್ದಾರೆ. ಆದ್ದರಿಂದ ಬುದ್ಧಿವಂತನಾದ ಮಾನವನು ಪ್ರಕೃತಿಯೇ ತನ್ನ ಕ್ರೂರ ಕ್ರಮಗಳಿಂದ ಜನಸಂಖ್ಯೆಯನ್ನು ನಿಯಂತ್ರಿಸುವ ಪೂರ್ವದಲ್ಲಿಯೇ ತಮ್ಮ ಸೌಮ್ಯವಾದ ನಿವಾರಕ ಪ್ರತಿಬಂಧಕಗಳಿಂದ ಜನಸಂಖ್ಯೆಯನ್ನು ನಿಯಂತ್ರಿಸುವದು ಅನಿವಾರ್ಯ ಮತ್ತು ಅಪೇಕ್ಷಣೀಯ ಎಂದು ಮಾಲ್ಥಸ್ ಅಭಿಪ್ರಾಯ ಪಟ್ಟಿದ್ದರು. ಇದೇ ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತ.

**ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತದ ಟೀಕೆಗಳು :** ಮಾಲ್ಥಸ್‌ರ ಈ ಸಿದ್ಧಾಂತ ಯುರೋಪದಲ್ಲಿ ಕೆಲಕಾಲದವರೆಗೆ ವಾದವಿವಾದಗಳ ಬಿರುಗಾಳಿಯನ್ನು ಎಬ್ಬಿಸಿತೆಂದು ಹೇಳಬಹುದು. ಅದರ ಸತ್ಯಾಸತ್ಯತೆಯ ಬಗ್ಗೆ ಅನೇಕ ಕಟು ಟೀಕೆಗಳು ಕೇಳಿ ಬಂದವು. ಅವುಗಳಾವುವೆಂದರೆ,

ಜನಸಂಖ್ಯೆಯು ಪ್ರತಿ ೨೫ ವರ್ಷಗಳಿಗೊಮ್ಮ ಗುಣೋತ್ತರ ವೇಗದಲ್ಲಿ ಹೆಚ್ಚಳವಾಗುತ್ತದೆ ಎಂಬುದಕ್ಕೆ ಯಾವ ಇತಿಹಾಸದ ಪುರಾವೆಗಳಿಲ್ಲ. ತ್ವರಿತವಾಗಿ ಜನಸಂಖ್ಯೆ ಬೆಳೆಯುತ್ತಿರುವ ಭಾರತದಲ್ಲಿಯೂ ಸಹ ಇದು ಕಂಡುಬರುತ್ತಿಲ್ಲ. ಮಾಲ್ತಸ್‌ರ ಈ

ಅಭಿಪ್ರಾಯ ಸಮರ್ಥನೀಯವಾದುದಲ್ಲ.

೨. ಆಹಾರೋತ್ಪಾದನೆಯು ಸಮಾಂತರ ವೇಗದಲ್ಲಿ ಹೆಚ್ಚುತ್ತದೆ ಎಂಬ ಮಾಲ್ತಸ್‌ರ ವಾದ ದೋಷಪೂರಿತವಾಗಿದೆ. ಇಳಿಮುಖ ಪ್ರತಿಫಲ ನಿಯಮದ ಆದಾರದ ಮೇಲೆ ಮಾಲ್ಥಸ್ ಸಿದ್ಧಾಂತವನ್ನು ಬೆಳೆಸಿದ್ದಾರೆ. ಹೊಸ ಜಮೀನಿನ ಸಾಗುವಳಿ ಮತ್ತು ಸುಧಾರಿಸಿದ ಕೃಷಿ ವಿಧಾನಗಳ ಮೂಲಕ ಆಹಾರೋತ್ಪಾದನೆಯನ್ನು ಹೆಚ್ಚಿಸಲು ಸಾಧ್ಯವಿದೆ ಎಂಬುದನ್ನು ಅರಿತುಕೊಳ್ಳಲು ಮಾಲ್ಥಸ್ ವಿಫಲರಾಗಿದ್ದಾರೆ.

೩. ಮಾಲ್ಥಸ್‌ರ ಅಭಿಪ್ರಾಯದಲ್ಲಿ ಆಹಾರ ವಸ್ತುಗಳೆಂದರೆ ಕೇವಲ ಕೃಷಿ ಉತ್ಪನ್ನಗಳು. ಆದರೆ ಮಾಂಸ, ಮೀನು, ಮೊಟ್ಟೆ, ಹಾಲು ಇತ್ಯಾದಿ ವಸ್ತುಗಳನ್ನು ಆಹಾರವಾಗಿ ಸೇವಿಸಲಾಗುವುದು. ಇದನ್ನು ಮಾಲ್ಥಸ್ ಕಡೆಗಮಿಸಿದ್ದಾರೆ.

೪. ಮಾಲ್ಥಸ್‌ರು ಸೂಚಿಸಿರುವ ಜನಸಂಖ್ಯಾ ಬೆಳವಣಿಗೆ ಮತ್ತು ಆಹಾರೋತ್ಪಾದನೆಗಳಲ್ಲಿ ಹೆಚ್ಚಳವಾಗುವ ಶ್ರೇಣಿ ಅವೈಜ್ಞಾನಿಕವಾಗಿದೆ. ಇದಕ್ಕೆ ಯಾವ ಅರ್ಥವೂ ಇಲ್ಲ.

೫. ಜನಸಂಖ್ಯಾ ಏರಿಕೆ ಎಲ್ಲ ಸಮಯದಲ್ಲಿಯೂ ಸಮಸ್ಯೆಗೆ ಕಾರಣವಾಗಲಾದು. ಒಂದು ಮಟ್ಟದವರೆಗೆ ಜನಸಂಖ್ಯಾ ಏರಿಕೆಯನ್ನು ನಾವು ಸ್ವಾಗತಿಸಲೇಬೇಕಾಗುತ್ತದೆ. ಇದರಿಂದ ರಾಷ್ಟ್ರದ ಅಭ್ಯುದಯವಾಗುವುದು.

೬. ಮಾಲ್ಥಸ್‌ರು ಸೂಚಿಸಿದ ನಿವಾರಕ ಪ್ರತಿಬಂಧಕಗಳನ್ನು ಕಾರ್ಯರೂಪಕ್ಕೆ ತರಲು ಕಷ್ಟ. ಇವುಗಳಿಗೆ ಜನಮನ್ನಣೆ ದೊರೆಯುವುದಿಲ್ಲ.

೭. ಪ್ರಕೃತಿ ವಿಕೋಪಗಳು ಕೇವಲ ಜನಸಂಖ್ಯಾ ಭರಿತ ರಾಷ್ಟ್ರಗಳಿಗೆ ಮಾತ್ರ ಸೀಮಿತವಾಗಿಲ್ಲ. ಈ ವಿಕೋಪಗಳ ಜನ ವಿರಳ ರಾಷ್ಟ್ರಗಳಲ್ಲಿಯೂ ಸಂಬವಿಸಬಹುದಾಗಿದೆ.

೮. ಮಾಲ್ಥಸ್‌ರ ಸಿದ್ಧಾಂತ ಜೀವನಮಟ್ಟದ ಪ್ರಭಾವಕೊಳಪಟ್ಟಿಲ್ಲ. ಏಕೆಂದರೆ ಜೀವನ ಮಟ್ಟ ಹೆಚ್ಚಿದಂತೆಲ್ಲ ಜನರ ರೂಪರೇಖೆಗಳಲ್ಲಿ ಬದಲಾವಣೆಯಾಗಿ ಜನನ ದರದ ಪ್ರಮಾಣ ಕ್ರಮೇಣ ಕಡಿಮೆಯಾಗುತ್ತದೆ.

೯. ಮಾಲ್ಥಸ್‌ರ ಜನಸಂಖ್ಯಾ ಸಿದ್ಧಾಂತ ಯುರೋಪ ರಾಷ್ಟ್ರಗಳಿಗೆ ಅನ್ವಯಿಸುವುದಿಲ್ಲ.

೧೦. ಮಾಲ್ಥಸ್‌ರ ಜನಸಂಖ್ಯಾ ಸಿದ್ಧಾಂತ ನಿರಾಶಾವಾದವನ್ನು ಸಾರುತ್ತದೆ.

ಮಾಲ್ಥಸ್‌ರ ಜನಸಂಖ್ಯಾ ಸಿದ್ಧಾಂತ ಅಸಂಬಂಧವಾದುದು ಎಂಬ ಅಂಶ ಮೇಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. ಮುಂದುವರಿದ ರಾಷ್ಟಗಳಲ್ಲಿಯಂತೂ ಈ ಸಿದ್ಧಾಂತ ಸತ್ಯಕ್ಕೆ ದೂರವಾಗಿದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿಯೂ ಸಹ ಮಾಲ್ಥಸ್‌ರ ವಾದಗಳು ವ್ಯಾಪಕವಾಗಿ ರುಜುವಾತಾಗಿಲ್ಲ. ಆದಾಗ್ಯೂ ಸಹ ಅವರ ಸಿದ್ಧಾಂತ ಇಂದಿಗೂ ಪ್ರಾಮುಖ್ಯತೆ ಪಡೆದುಕೊಂಡು ಜನರನ್ನು ಪ್ರಭಾವಿಸುತ್ತದೆ.

### ಜನಸಂಖ್ಯಾ ಪರಿವರ್ತನ ಸಿದ್ಧಾಂತ

ಆರ್ಥಿಕಾಭಿವೃದ್ಧಿಯ ವಿವಿಧ ಹಂತಗಳಲ್ಲಿ ಜನಸಂಖ್ಯೆಯ ಬಗ್ಗೆ ನಿರ್ದಿಷ್ಟ ಲಕ್ಷಣಗಳನ್ನು ಗುರುತಿಸಿ ಬ್ಲಾಕರ್, ಥಾಂಸನ್, ಕಾಣ್ವೆಲ್ ಮುಂತಾದ ಜನಸಂಖ್ಯಾ ತಜ್ಞರು

ಜನಸಂಖ್ಯಾ ಪ್ರವೃತ್ತಿಗಳ ಕೆಲವು ಹಂತಗಳನ್ನು ಮಂಡಿಸಿದ್ದಾರೆ. ಇದರ ಪರಿಣಾಮವಾಗಿ ರಚಿತವಾದುದೇ ಜನಸಂಖ್ಯಾ ಪರಿವರ್ತನ ಅಥವಾ ವಿಕಾಸದ ಸಿದ್ಧಾಂತ. ಜನಸಂಖ್ಯಾ ಪ್ರವೃತ್ತಿಗಳ ಮೇಲೆ ಆರ್ಥಿಕಾಭಿವೃದ್ಧಿಯ ಪರಿಣಾಮಗಳ ಕುರಿತ ಈ ಸಿದ್ಧಾಂತ ಬಹು ಜನಪ್ರಿಯವಾಗಿದೆ.

ಜನಸಂಖ್ಯಾ ಪರಿವರ್ತನಾ ಸಿದ್ಧಾಂತದ ಪ್ರಕಾರ ರಾಷ್ಟ್ರದ ಅಭಿವೃದ್ಧಿಯಾದಂತೆಲ್ಲ ಜನಸಂಖ್ಯೆ ಪ್ರಮುಖವಾಗಿ ೩ ಹಂತಗಳಲ್ಲಿ ಪರಿವರ್ತನೆಯನ್ನು ಹೊಂದುತ್ತದೆ. ಅವು ಕೆಳಗಿನಂತಿವೆ.

ಹಂತ ೧ - ಜನನ ದರ ಮತ್ತು ಮರಣ ದರಗಳೆರಡೂ ಅಧಿಕವಾಗಿರುತ್ತವೆ.

ಹಂತ ೨ - ಜನನ ದರ ಅಧಿಕವಾಗಿರುತ್ತದೆ. ಆದರೆ ಮರಣ ದರ ಕಡಿಮೆಯಾಗಿರುತ್ತದೆ.

ಹಂತ ೩ - ಜನನ ದರ ಮತ್ತು ಮರಣದರಗಳೆರಡೂ ಕಡಿಮೆಯಿರುತ್ತವೆ.

ಜನಸಂಖ್ಯೆಯಲ್ಲಾಗುವ ಪರಿವರ್ತನೆಯು ಆರ್ಥಿಕಾಭಿವೃದ್ಧಿಯನ್ನು ಅವಲಂಬಿಸಿರುತ್ತದೆಂದು ಈ ಸಿದ್ಧಾಂತ ತಿಳಿಸುತ್ತದೆ.

**ಹಂತ ೧ :** ಆರ್ಥಿಕಾಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ಕೃಷಿಯೇ ಮೂಲ ಉದ್ಯೋಗವಾಗಿದೆ. ಕೈಗಾರಿಕೆಗಳಿದ್ದರೂ ಅವು ಅಭಿವೃದ್ಧಿಯಾಗಿರುವುದಿಲ್ಲ. ಶ್ರಮ ವಿಭಜನೆಯ ಉಪಯೋಗ ಕಡಿಮೆಯಿರುತ್ತದೆ. ಸಾರಿಗೆ ಸಂಪರ್ಕ ಸಾಧನಗಳು ಹೆಚ್ಚಿರುವುದಿಲ್ಲ. ಇವುಗಳಿಂದಾಗಿ ಉತ್ಪಾದನೆ ಕಡಿಮೆಯಿರುತ್ತದೆ. ಜನರ ಜೀವನ ಮಟ್ಟವೂ ಕಡಿಮೆಯಿರುತ್ತದೆ. ಇಂಥ ರಾಷ್ಟ್ರಗಳಲ್ಲಿ ಬಡತನವೇ ಹೆಚ್ಚಿಗೆ ಇರುತ್ತದೆ. ಜನಸಂಖ್ಯೆ ಹೇರಳವಾಗಿದ್ದು ಅದು ತ್ವರಿತವಾಗಿ ಬೆಳೆಯುತ್ತಿರುತ್ತದೆ. ಜನನ ದರ ಮತ್ತು ಮರಣದರಗಳೆರಡೂ ಅಧಿಕವಾಗಿರುತ್ತದೆ.

ಜನನ ದರ ಅಧಿಕವಾಗಿರಲು ಹಲವು ಕಾರಣಗಳಿರುತ್ತದೆ. ಬಾಲ್ಯ ವಿವಾಹ ಇಂಥ ರಾಷ್ಟ್ರಗಳಲ್ಲಿ ರೂಢಿಯಲ್ಲಿರುತ್ತದೆ. ಬಡತನ ಹೆಚ್ಚಿಗೆ ಇರುವುದರಿಂದ ದೊಡ್ಡ ಕುಟುಂಬವನ್ನು ಹೊಂದಿರಲು ದಂಪತಿಗಳು ಇಚ್ಛಿಸುತ್ತಾರೆ. ಏಕೆಂದರೆ, ಕುಟುಂಬದಲ್ಲಿ ಎಲ್ಲರೂ ಕೆಲಸ ಮಾಡಿ ಕುಟುಂಬದ ಆದಾಯ ಹೆಚ್ಚು ಮಾಡುತ್ತಾರೆ. ವಯಸ್ಸಾದಾಗ ತಂದೆ ತಾಯಿಯರನ್ನು ನೋಡಿಕೊಳ್ಳಲು ಹೆಚ್ಚು ಮಕ್ಕಳನ್ನು ಪಡೆಯಲು ಯತ್ನಿಸುತ್ತಾರೆ. ಮರಣದ ಸಂಖ್ಯೆಯೂ ಹೆಚ್ಚಿಗೆ ಇರುವುದರಿಂದ ಸಾಯುವ ಮಕ್ಕಳ ಸಂಖ್ಯೆಯನ್ನು ತುಂಬಲು ಹೆಚ್ಚು ಮಕ್ಕಳನ್ನು ಪಡೆಯಲು ಅವರು ಬಯಸುತ್ತಾರೆ. ಹೀಗಾಗಿ ಜನನ ದರ ಅಧಿಕವಾಗಿರುತ್ತದೆ.

ಮರಣ ದರ ಅಧಿಕವಾಗಿರಲು ಕಾರಣಗಳೆಂದರೆ ಸಾಂಕ್ರಾಮಿಕ ರೋಗಗಳ ಹಾವಳಿ, ಅಪೌಷ್ಟಿಕ ಆಹಾರ, ವೈದ್ಯಕೀಯ ಸೌಲಭ್ಯಗಳ ಅಭಾವ ಇತ್ಯಾದಿ.

ಹೀಗೆ, ಆರ್ಥಿಕಾಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ಜನನ ಪ್ರಮಾಣ ಮತ್ತು ಮರಣ ಪ್ರಮಾಣಗಳೆರೆಡೂ ಅಧಿಕವಾಗಿರುತ್ತವೆ. ಜನಸಂಖ್ಯೆಯನ್ನು ನಿಯಂತ್ರಿಸುವ ಬಗ್ಗೆ ಇಲ್ಲಿ

ಹೆಚ್ಚು ವಿಚಾರ ಮಾಡುವುದಿಲ್ಲ. ವಿದ್ಯಾವಂತರ ಸಂಖ್ಯೆ ಕಡಿಮೆಯಿರುವುದಂದ ಜನನ ಪ್ರಮಾಣವನ್ನು ಕಡಿಮೆ ಮಾಡುವದು ಸಾಧ್ಯವೂ ಆಗುವುದಿಲ್ಲ.

**ಹಂತ ೨ :** ರಾಷ್ಟ್ರವು ಆರ್ಥಿಕಾಭಿವೃದ್ಧಿ ಹೊಂದಿದಂತೆ ತಲಾ ಆದಾಯದ ಹೆಚ್ಚಳ ವಾಗುತ್ತದೆ. ಇದರಿಂದಾಗಿ ಜನಜೀವನದ ಸ್ಥಿತಿಯಲ್ಲಿ ಕೆಲವು ಮುಖ್ಯ ಪರಿವರ್ತನೆಗಳು ಕಾಣಿಸಿಕೊಳ್ಳುತ್ತವೆ. ಈ ಪರಿವರ್ತನೆಯ ಪರಿಣಾಮವಾಗಿ ಜನನ ಮತ್ತು ಮರಣ ಗಳೆರಡಲ್ಲಿಯೂ ಮಾರ್ಪಾಡು ಉಂಟಾಗುತ್ತದೆ. ಜನನ ಪ್ರಮಾಣದಲ್ಲಿ ಇಳಿಕೆ ಕಂಡು ಬಂದರೂ ಅದು ಅಧಿಕ ಪ್ರಮಾಣದಲ್ಲಿಯೇ ಉಳಿದು ಕೊಳ್ಳುತ್ತದೆ. ಮರಣ ದರ ಮಾತ್ರ ಕಡಿಮೆಯಾಗುತ್ತದೆ. ಅಂದರೆ, ಈ ಹಂತದಲ್ಲಿ ಮರಣ ದರ ಮಾತ್ರ ಇಳಿಕೆಯ ಪ್ರವೃತ್ತಿ ತೋರಿಸುತ್ತದೆ. ಇದಕ್ಕೆ ಹಲವಾರು ಕಾರಣಗಳಿವೆ. ಅಭಿವೃದ್ಧಿಯಿಂದಾಗಿ ವೈದ್ಯಕೀಯ ಸೌಲಭ್ಯಗಳು ಹೆಚ್ಚಿ ಜನರ ಆರೋಗ್ಯ ಮಟ್ಟ ಸುಧಾರಿಸುತ್ತದೆ. ಆಹಾರ ಪದಾರ್ಥಗಳ ಉತ್ಪಾದನೆ ಹಾಗೂ ಅವುಗಳ ವಿತರಣೆ ವ್ಯವಸ್ಥೆಯೂ ಉತ್ತಮಗೊಳ್ಳುತ್ತದೆ. ನಗರ ನೈರ್ಮಲ್ಯ ಕಾರ್ಯಗಳು, ನೀರಿನ ಪೂರೈಕೆ, ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟುವ ಏರ್ಪಾಡುಗಳು ಇತ್ಯಾದಿಗಳು ಆರ್ಥಿಕಾಭಿವೃದ್ಧಿಯೊಡನೆ ವ್ಯವಸ್ಥಿತಗೊಳ್ಳುತ್ತವೆ. ಈ ಎಲ್ಲ ಸೌಲಭ್ಯಗಳಿಂದಾಗಿ, ಜನಜೀವನದ ಪರಿಸ್ಥಿತಿ ಉತ್ತಮಗೊಳ್ಳುವುದರಿಂದ ಮರಣ ಪ್ರಮಾಣ ಕಡಿಮೆಯಾಗುತ್ತದೆ.

ಜನನ ದರ ಅಧಿಕವಾಗಿಯೇ ಇರಲು ಹಲವು ಕಾರಣಗಳಿವೆ. ತಲೆ ತಲಾಂತರಗಳಿಂದಲೂ ಮುಂದುವರಿಸಿಕೊಂಡ ಬಂದ ನಂಬಿಕೆಗಳು, ಸಾಮಾಜಿಕ ಕಟ್ಟಳೆಗಳು ಇತ್ಯಾದಿಗಳು ಸುಲಭವಾಗಿ ಜನಸಂಖ್ಯಾ ದರ ಇಳಿಸಲು ಬಿಡುವುದಿಲ್ಲ. ಇದರಿಂದಾಗಿ ಮರಣ ದರವನ್ನು ಕಡಿಮೆ ಮಾಡುವ ಕಾರ್ಯಕ್ರಮಗಳ ಬಗ್ಗೆ ಉತ್ಸಾಹ ತೋರಿಸುವ ಜನ ಜನನ ದರವನ್ನು ಇಳಿಸುವ ಕಾರ್ಯಕ್ರಮಗಳ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸುವುದಿಲ್ಲ. ಇದರಿಂದಾಗಿ, ಹಿಂದೆ ಜನನ-ಮರಣಗಳಲ್ಲಿ ಇದ್ದ ಸಮತೋಲನ ಸ್ಥಿತಿ ತಪ್ಪಿದಂತಾಗುತ್ತದೆ.

ಈ ಹಂತವನ್ನು ಈಗ ನಾವು ಭಾರತದಲ್ಲಿ ಕಾಣುತ್ತೇವೆ. ಭಾರತದಲ್ಲಿ ಮರಣ ದರ ಸಾಕಷ್ಟು ಕಡಿಮೆಯಾಗಿವೆ. ಆದರೆ ಜನನ ದರ ಅಧಿಕವಾಗಿಯೇ ಉಳಿದುಕೊಂಡಿದೆ. ಇದರಿಂದಾಗಿ ಭಾರತದಲ್ಲಿ ಜನಸಂಖ್ಯೆ ತೀವ್ರವಾಗಿ ಹೆಚ್ಚುತ್ತಿರುವದನ್ನು ಕಾಣಬಹುದು.

**ಹಂತ ೩ :** ಆರ್ಥಿಕಾಭಿವೃದ್ಧಿ ಮತ್ತಷ್ಟು ಮುಂದೆ ಸಾಗಿದಾಗ ತಪ್ಪಿದ ಸಮತೋಲನ ಸ್ಥಿತಿ ಹೊಸ ಸ್ವರೂಪದಲ್ಲಿ ಸ್ಥಾಪನೆಯಾಗುತ್ತದೆ. ಆರ್ಥಿಕಾಭಿವೃದ್ಧಿ ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಮುಂದುವರಿದಂತೆ ಜನನ ದರ ಇಳಿಯಲಾರಂಭಿಸುತ್ತದೆ. ಕೆಲಕಾಲದವರೆಗೆ ಮರಣ ದರದ ಇಳಿಕೆಯ ದರ ಜನನ ದರದ ಇಳಿಕೆಯ ದರಕ್ಕಿಂತಲೂ ಹೆಚ್ಚಾಗಿರುವುದಾದರೂ ಮುಂದೆ ಒಂದು ಹಂತದಲ್ಲಿ ಮರಣ ದರ ಇನ್ನೂ ಕೆಳಗೆ ಇಳಿಯಲಾಗದ ಹಂತವನ್ನು ಮುಟ್ಟುತ್ತದೆ.

ಇತಿಹಾಸ ಪುಟಗಳನ್ನು ತಿರುವಿದಾಗ ಯಾವದೇ ರಾಷ್ಟ್ರದಲ್ಲಿ ಆರ್ಥಿಕಾಭಿವೃದ್ಧಿ

ಸಾಗಿದಂತೆ ಜನನ ದರ ಇಳಿಯುತ್ತಿರುವ ಪ್ರವೃತ್ತಿ ಕಂಡುಬರುತ್ತದೆ. ಯಂತ್ರ ಹಾಗೂ ಶಕ್ತಿ ಇವುಗಳ ಆಧಾರದ ಮೇಲೆ ರಚಿತವಾದ ಆರ್ಥಿಕಾಭಿವೃದ್ಧಿಯು ಮುಂದುರಿದ ಹಂತಗಳಲ್ಲಿ ಜನನ ದರ ಏಕೆ ಇಳಿಯುವುದು ಎಂಬ ಪ್ರಶ್ನೆ ಕುತೂಹಲಕಾರಿಯಾಗಿದೆ. ಈ ಕುತೂಹಲ ವನ್ನು ಜನಸಂಖ್ಯಾ ಪರಿವರ್ತನಾ ಸಿದ್ಧಾಂತ ತಣಿಸಿದೆ.

ಆರ್ಥಿಕಾಭಿವೃದ್ಧಿಯಾದಂತೆ ಜನರ ಮನೋಭಾವಗಳಲ್ಲಿ ಹೊಸ ತಿರುವು ಮೂಡುತ್ತವೆ. ಜನರಲ್ಲಿ ಉಂಟಾಗುವ ಮನೋಭಾವಗಳು, ವಿದ್ಯಾಭ್ಯಾಸದ ವಿಸ್ತರಣೆ, ತಲಾ ಆದಾಯದ ಹೆಚ್ಚಳ ಇವೆಲ್ಲವೂ ಜನಜೀವನದ ಧ್ಯೇಯಗಳಲ್ಲಿ ಅಂದೋಲನವನ್ನು ಎಬ್ಬಿಸುತ್ತವೆ. ಈ ಅಂದೋಲನದ ಪರಿಣಾಮವಾಗಿ ಜನರಲ್ಲಿ ತಮ್ಮ ಆರ್ಥಿಕ ಅಭ್ಯುದಯವನ್ನು ಸಾಧಿಸಿ ಕೊಳ್ಳುವ ಬಯಕೆ ಹೆಚ್ಚುತ್ತದೆ. ಇದಕ್ಕೆ ಪೂರಕವಾಗಿ ಅವರು ಮಿತ ಕುಟುಂಬವನ್ನು ಅನುಸರಿಸಲಾರಂಭಿಸುತ್ತಾರೆ. ತತ್ಪರಿಣಾಮವಾಗಿ ಜನನ ದರ ಕಡಿಮೆಯಾಗುತ್ತದೆ. ಉತ್ತಮ ಆಹಾರ, ವಸತಿ, ವೈದ್ಯಕೀಯ ಸೌಲಭ್ಯ ಮುಂತಾದವುಗಳು ದೊರಕುವುದರಿಂದ ಮರಣ ದರವೂ ಕಡಿಮೆಯಾಗಿರುತ್ತದೆ. ಈ ಪ್ರಕಾರ, ಈ ಹಂತದಲ್ಲಿ ಜನಸಂಖ್ಯೆ ನಿಯಂತ್ರಣಕ್ಕೊಳಪಡುವುದನ್ನು ಕಾಣಬಹುದು. ಅಭಿವೃದ್ಧಿ ಹೊಂದಿದ ರಾಷ್ಟ್ರಗಳನ್ನು ಅಭ್ಯಸಿಸಿದಾಗ ಈ ಅಂಶ ನಮಗೆ ಸ್ಪಷ್ಟವಾಗುತ್ತದೆ.

ಈ ಪ್ರಕಾರ ಮೂರು ಹಂತಗಳಲ್ಲಿ ಜನಸಂಖ್ಯೆ ಪರಿವರ್ತನೆಗೊಳ್ಳುತ್ತದೆ ಎಂಬುದನ್ನು ಜನಸಂಖ್ಯಾ ಪರಿವರ್ತನ ಸಿದ್ಧಾಂತ ತಿಳಿಸುತ್ತದೆ. ಒಂದು ರಾಷ್ಟ್ರ ಆರ್ಥಿಕ ಅಭಿವೃದ್ಧಿ ಹೊಂದುತ್ತಾ ಹೋದ ಹಾಗೆ ಜನನ ದರ ಮತ್ತು ಮರಣ ದರಗಳಲ್ಲಿ ಯಾವ ವಿಧದಲ್ಲಿ ಬದಲಾವಣೆಯಾಗುತ್ತದೆ ಎಂಬುದನ್ನು ಈ ಸಿದ್ಧಾಂತದಿಂದ ನಾವು ತಿಳಿಯಬಹುದು.

### ಕೂಲಿ

ಕೂಲಿ ಎಂದರೆ ಸಾಮಾನ್ಯವಾಗಿ ದೈಹಿಕ ಶ್ರಮ ಮಾಡುವ ಮತ್ತು ಉದ್ಯೋಗಪತಿಗಳ ಕೈಕೆಳಗೆ ದುಡಿಯುವ ಕಾರ್ಮಿಕರಿಗೆ ಕೊಡುವ ಹಣ ಎಂದು ತಿಳಿಯಲಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಕೂಲಿ ಎಂಬ ಪದಕ್ಕೆ ವ್ಯಾಪಕ ಅರ್ಥವಿದೆ. ಅದು ಕೇವಲ ದೈಹಿಕ ಶ್ರಮ ಮಾಡುವ ಮತ್ತು ಉದ್ಯೋಗಪತಿಗಳ ಕೈಕೆಳಗೆ ದುಡಿಯುವ ಕಾರ್ಮಿಕರಿಗೆ ಸೀಮಿತವಾಗಿಲ್ಲ. ಅರ್ಥಶಾಸ್ತ್ರದ ಪ್ರಕಾರ, ಉತ್ಪಾದನೆಯಲ್ಲಿ ದೈಹಿಕ ಮತ್ತು ಮಾನಸಿಕ ಕೆಲಸಕ್ಕೆ ದೊರೆಯುವ ಸಂಭಾವನೆಯೇ ಕೂಲಿ.

ದೈಹಿಕವಾಗಿ ಕೆಲಸ ಮಾಡುವ ವ್ಯಕ್ತಿಯು ಯಾರ ಕೈಕೆಳಗೂ ಕೆಲಸ ಮಾಡದೆ ಸ್ವತಂತ್ರ ರೀತಿಯಿಂದ ಕೆಲಸ ಮಾಡಬಹುದು. ಇದರಿಂದ ದೊರೆಯುವ ಪ್ರತಿಫಲ ಅಥವಾ ಉತ್ಪನ್ನವೂ ಅವನ ಕೂಲಿಯಾಗುತ್ತದೆ. ಮಾನಸಿಕ ಶ್ರಮ ಮಾಡುವವರು ಸರಕಾರ ಇತರೆ ಸಂಸ್ಥೆಗಳ ಅಥವಾ ಉದ್ಯೋಗಪತಿಗಳ ನೌಕರರಾಗಿ ಕೆಲಸ ಮಾಡುತ್ತಾರೆ. ಇವರಿಗೆ ದೊರೆಯುವ ಪ್ರತಿಫಲ ಅಥವಾ ಉತ್ಪನ್ನ ಕೂಲಿಯಾಗಿರುತ್ತದೆ. ವೈದ್ಯ, ವಕೀಲ, ಗಾಯಕ

ಇವರೇ ಮೊದಲಾದ ಮಾನಸಿಕ ಶ್ರಮದ ಕೆಲಸ ಮಾಡುವವರು ಸ್ವತಂತ್ರ ರೀತಿಯಿಂದ ವ್ಯವಹಾರ ಮಾಡುತ್ತಾರೆ. ಇವರಿಗೆ ತಮ್ಮ ತಮ್ಮ ವ್ಯವಹಾರಗಳಲ್ಲಿ ದೊರೆಯುವ ಉತ್ಪನ್ನವನ್ನು ಕೂಡ ಕೂಲಿ ಎಂದು ಸಂಬೋಧಿಸಲಾಗುತ್ತದೆ.

ಇದರ ಸಾರಂಶವೇನೆಂದರೆ ಕೂಲಿಯು ಮಾನವನ ಶ್ರಮಕ್ಕೆ ದೊರೆಯುವ ಪ್ರತಿಫಲ. ಶ್ರಮದಿಂದ ಹುಟ್ಟುವ ಉತ್ಪನ್ನ ಅಥವಾ ಆದಾಯವೇ ಶ್ರಮದ ಬೆಲೆ ಅಥವಾ ಶ್ರಮದ ಪ್ರತಿಫಲ. ಕೂಲಿ ಎಂಬ ಶಬ್ದವನ್ನು ಸಂಬಳ, ವೇತನ, ಪಗಾರ, ದಲಾಲಿ, ಮಜೂರಿ, ಭತ್ತೆ ಮೊದಲಾದ ಶಬ್ದಗಳ ಮೂಲಕ ಕರೆಯಲಾಗುತ್ತದೆ.

**ನಾಮಮಾತ್ರ ಕೂಲಿ ಮತ್ತು ವಾಸ್ತವಿಕ ಕೂಲಿಗಳ ನಡುವಿನ ವ್ಯತ್ಯಾಸ**

ಹಣದ ರೂಪದಲ್ಲಿ ಕೊಡುವ ಅಥವಾ ಪಡೆಯುವ ಕೂಲಿ ನಾಮ ಮಾತ್ರ ಕೂಲಿ. ಇದನ್ನು ನಗದು ಕೂಲಿ ಎಂದೂ ಕರೆಯುವರು.

ಹಣ ರೂಪದ ಕೂಲಿಯಿಂದ ಪಡೆಯಬಹುದಾದ ವಸ್ತುಗಳ ಮತ್ತು ಸೇವೆಗಳ ಪ್ರಮಾಣ ವಾಸ್ತವಿಕ ಕೂಲಿಯಾಗಿದೆ. ಉದಾ. ಒಬ್ಬ ಕೂಲಿಕಾರನಿಗೆ ತಿಂಗಳಿಗೆ ರೂ.೧೦೦೦ ಕೂಲಿ ಸಿಕ್ಕರೆ ಅದು ನಾಮಮಾತ್ರ ಕೂಲಿಯಾಗುತ್ತದೆ. ಈ ನಗದು ಕೂಲಿಯಿಂದ ಅವನು ಎಷ್ಟು ವಸ್ತುಗಳನ್ನು ಮತ್ತು ಸೇವೆಗಳನ್ನು ಪಡೆಯುತ್ತಾನೆಂಬುದನ್ನು ವಾಸ್ತವಿಕ ಕೂಲಿಯು ಸೂಚಿಸುತ್ತದೆ.

ನಾಮ ಮಾತ್ರ ಕೂಲಿ ಮತ್ತು ವಾಸ್ತವಾಕ ಕೂಲಿಗಳನ್ನು ಅವಲೋಕಿಸಿದಾಗ ವಾಸ್ತವಿಕ ಕೂಲಿ ಮಹತ್ವದ್ದಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅವುಗಳ ನಡುವಿನ ವ್ಯತ್ಯಾಸನ್ನು ಕೆಳಗಿನಂತೆ ಗುರುತಿಸಬಹುದು.

೧. ನಾಮ ಮಾತ್ರ ಕೂಲಿಯನ್ನು ಹಣದ ರೂಪದಲ್ಲಿ ವ್ಯಕ್ತಪಡಿಸಲಾಗುತ್ತದೆ. ಆದರೆ ವಾಸ್ತವಿಕ ಕೂಲಿಯನ್ನು ಹಣರೂಪಿ ಕೂಲಿಯ ಕೊಳ್ಳುವ ಶಕ್ತಿಯಿಂದ ಅಳೆದು ವ್ಯಕ್ತಪಡಿಸಲಾಗುತ್ತದೆ.

೨. ನಾಮಮಾತ್ರ ಕೂಲಿ ಕಾರ್ಮಿಕರ ಜೀವನ ಮಟ್ಟದ ಮೇಲೆ ಬೆಳಕು ಬೀರುವುದಿಲ್ಲ. ಆದರೆ ವಾಸ್ತವಿಕ ಕೂಲಿ ಕಾರ್ಮಿಕರ ಜೀವನ ಮಟ್ಟದ ಮೇಲೆ ಬೆಳಕು ಬೀರುತ್ತದೆ.

೪. ಬೆಲೆ ಏರಿಕೆ ನಾಮಮಾತ್ರ ಕೂಲಿಯ ಮೇಲೆ ಪ್ರಭಾವ ಬೀರುವುದಿಲ್ಲ. ಆದರೆ ಅದು ವಾಸ್ತವಿಕ ಕೂಲಿಯ ಮೇಲೆ ಪ್ರಭಾವ ಬೀರುತ್ತದೆ.

೫. ನಾಮಮಾತ್ರ ಕೂಲಿಯನ್ನು ಹಣ ಮಾತ್ರ ನಿರ್ಧರಿಸುತ್ತದೆ. ಆದರೆ ವಾಸ್ತವಿಕ ಕೂಲಿಯನ್ನು ಹಣರೂಪಿ ಕೂಲಿ ಮಾತ್ರವಲ್ಲದೆ ಸಾಮಾನ್ಯ ಬೆಲೆಯ ಮಟ್ಟ, ಕೆಲಸದ ಸ್ಥಿತಿಗತಿ, ಕೆಲಸದ ಸ್ವರೂಪ, ಹೆಚ್ಚುವರಿ ಆದಾಯ ಮುಂತಾದ ಅಂಶಗಳು ನಿರ್ಧರಿಸುತ್ತವೆ.

## ೩.೫. ಬಂಡವಾಳ

### ಬಂಡವಾಳದ ಅರ್ಥ

ಸಾಮಾನ್ಯವಾಗಿ ಬಂಡವಾಳ ಎಂಬ ಪದವನ್ನು ಒಂದು ಕೈಗಾರಿಕೆ ಅಥವಾ ವ್ಯಾಪಾರದಲ್ಲಿ ಉಪಯೋಗಿಸುವ ಹಣ ಎಂಬ ಅರ್ಥದಲ್ಲಿ ತಿಳಿಯುತ್ತೇವೆ. ಆದರೆ ಅರ್ಥಶಾಸ್ತ್ರದಲ್ಲಿ ಬಂಡವಾಳ ಎಂಬ ಪದಕ್ಕೆ ವಿಶಾಲವಾದ ಅರ್ಥವಿದೆ. ಹಣದ ಜೊತೆಗೆ ಉತ್ಪಾದನಾ ಚಟುವಟಿಕೆಗಳಿಗೆ ಸಹಾಯಕವಾಗುವ ಎಲ್ಲ ಮಾನವ ನಿರ್ಮಿತ ವಸ್ತುಗಳು ಬಂಡವಾಳವಾಗಿವೆ. ಇವು ಯಾಂತ್ರಿಕ ಸಲಕರಣೆಗಳನ್ನು, ಕಾರ್ಖಾನೆಗಳನ್ನು, ಕಚ್ಚಾವಸ್ತುಗಳನ್ನು, ರೇಲ್ವೆ, ಬಸ್ಸು ಇತ್ಯಾದಿಗಳನ್ನು ಒಳಗೊಂಡಿರುತ್ತದೆ.

ಉತ್ಪಾದನೆಯಲ್ಲಿ ಉಪಯೋಗಿಸುವ ವಸ್ತುಗಳಿಗೆ ಮಾತ್ರ ನಾವು ಬಂಡವಾಳ ಎಂದು ಕರೆಯುತ್ತೇವೆ. ಅನುಭೋಗಕ್ಕಾಗಿ ಬಳಸಲಾಗುವ ಮತ್ತು ಸಂಗ್ರಹಿಸಿಡುವ ವಸ್ತುಗಳು ಬಂಡವಾಳವಾಗಿರುವುದಿಲ್ಲ. ಉದಾ. ಒಂದು ಕಟ್ಟಡವನ್ನು ಉತ್ಪಾದನೆಯ ಉದ್ದೇಶಕ್ಕೆ ಬಳಸಿದರೆ ಅದು ಬಂಡವಾಳ ಎಂದು ಪರಿಗಣಿಸಲ್ಪಡುವುದಿಲ್ಲ. ಅದೇ ರೀತಿಯಲ್ಲಿ ಸಂಗ್ರಹಿಸಿಟ್ಟ ಯಂತ್ರಗಳು, ಕಚ್ಚಾವಸ್ತುಗಳು, ನೇಗಿಲು ಮುಂತಾದವುಗಳೂ ಸಹ ಬಂಡವಾಳವಾಗುವುದಿಲ್ಲ. ಹಣವು ಬಂಡವಾಳ ವಸ್ತುಗಳನ್ನು ಕೊಳ್ಳಲು ಸಹಾಯ ಮಾಡುತ್ತದೆ. ಒಬ್ಬ ಮನುಷ್ಯನಲ್ಲಿ ಸಾಕಷ್ಟು ಹಣವಿದ್ದ ಕೂಡಲೇ ಅದು ಬಂಡವಾಳ ವಾಗಲಾರದು. ಆ ಹಣದಿಂದ ಬಂಡವಾಳ ವಸ್ತುಗಳನ್ನು ಕೊಂಡಾಗಲೇ ಅದು ಬಂಡವಾಳವಾಗುತ್ತದೆ.

ಆದುದರಿಂದ ಬಂಡವಾಳ ಮೂಲ ಉತ್ಪಾದನಾಂಗವಲ್ಲ. ಅದು ಭೂಮಿ ಮತ್ತು ಶ್ರಮದಿಂದ ಹುಟ್ಟಿದ ಉತ್ಪನ್ನ. ಆದುದರಿಂದ ಅದು ಮಾನವನಿಂದ ನಿರ್ಮಿತವಾದ ಅಂಶ. ಉತ್ಪಾದನೆಯಾದ ಅಂಶಗಳನ್ನು ಪುನಃ ಉತ್ಪಾದನೆಯಲ್ಲಿ ತೊಡಗಿಸುವುದರಿಂದ ಬಂಡವಾಳ ಉತ್ಪನ್ನವಾಗುತ್ತದೆ. ಯಂತ್ರಗಳು, ಕಾರ್ಖಾನೆಗಳು, ಕಟ್ಟಡಗಳು, ರೈಲು, ಬಸ್ಸು, ಬಿತ್ತನೆಯ ಬೀಜ, ನೇಗಿಲು, ಕಚ್ಚಾವಸ್ತುಗಳು ಮುಂತಾದವುಗಳೆಲ್ಲವೂ ಮಾನವ ನಿಂದ ನಿರ್ಮಿತವಾದ ಬಂಡವಾಳವಾಗಿರುತ್ತವೆ. ಹೀಗೆ ಬಂಡವಾಳವೆಂದರೆ ಪುನರುತ್ಪಾದನೆ ಯಲ್ಲಿ ತೊಡಗಿಸಬಲ್ಲ, ಆದಾಯವನ್ನು ನೀಡುವ ಮಾನವ ನಿರ್ಮಿತ ವಸ್ತುಗಳಾಗಿವೆ.

### ಬಂಡವಾಳದ ಪ್ರಕಾರಗಳು

ಬಂಡವಾಳವನ್ನು ವಿವಿಧ ಬಗೆಗಳಲ್ಲಿ ವಿಂಗಡಿಸಬಹುದಾಗಿದ್ದರೂ ಸಹ ಅಭ್ಯಾಸದ ಅನುಕೂಲಕ್ಕಾಗಿ ಕೆಳಗಿನಂತೆ ಎರಡು ಗುಂಪುಗಳಲ್ಲಿ ವಿಂಗಡಿಸಲಾಗುವುದು.

೧. **ಸ್ಥಿರ ಮತ್ತು ಚರ ಬಂಡವಾಳ :** ಸ್ಥಿರ ಬಂಡವಾಳ ಎಂದರೆ ಬಹುಕಾಲ ಉತ್ಪಾದನೆ ಯಲ್ಲಿ ಉಪಯೋಗಿಸುವ ಸರಕುಗಳು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇದು

ಬಹಳ ಕಾಲದವರೆಗೆ ನಶಿಸದೇ ಸ್ಥಿರವಾಗಿರುವ ಮತ್ತು ಉತ್ಪಾದನೆಯಲ್ಲಿ ನಿರಂತರವಾಗಿ ಉಪಯೋಗಿಸುವ ಬಂಡವಾಳವಾಗಿದೆ. ಯಂತ್ರಗಳು, ಸಾಧನ ಸಲಕರಣೆಗಳು, ಪಿಠೋಪಕರಣಗಳು, ಕಟ್ಟಡಗಳು ಮುಂತಾದವು ಸ್ಥಿರ ಬಂಡವಾಳಗಳಾಗಿವೆ.

ಉತ್ಪಾದನೆಯಲ್ಲಿ ಒಂದು ಸಾರಿ ಉಪಯೋಗಿಸಲ್ಪಡುವ ವಸ್ತುಗಳು ಚರಬಂಡವಾಳ. ಅವುಗಳನ್ನು ಮತ್ತೆ ಮತ್ತೆ ಉಪಯೋಗಿಸಲು ಬರುವುದಿಲ್ಲ. ಇದನ್ನು ನಾವು ಏಕೋಪ ಯೋಗಿ ಬಂಡವಾಳ ಎಂದೂ ಕರೆಯಬಹುದು. ಉದಾ. ಹತ್ತಿಯನ್ನು ಒಮ್ಮೆ ಮಾತ್ರ ಉಪಯೋಗಿಸಬಹುದು. ಹತ್ತಿಯನ್ನು ಒಮ್ಮೆ ಉಪಯೋಗಿಸಿದರೆ ಅದು ತನ್ನ ರೂಪವನ್ನು ಕಳೆದುಕೊಂಡು ಬೇರೆ ವಸ್ತುವಾಗಿ ಪರಿವರ್ತಿತವಾಗುತ್ತದೆ. ಅಂದರೆ ಹತ್ತಿಯ ರೂಪದಲ್ಲಿ ಒಮ್ಮೆ ಮಾತ್ರ ಅದು ಉಪಯೋಗಿಸಲ್ಪಡುತ್ತದೆ. ಅದನ್ನು ಹತ್ತಿಯ ರೂಪ ದಲ್ಲಿಯೇ ಪುನಃ ಪುನಃ ಉಪಯೋಗಿಸಲು ಬರುವುದಿಲ್ಲ. ಆದ್ದರಿಂದ ಎಲ್ಲ ವಿಧದ ಕಚ್ಚಾ ವಸ್ತುಗಳು, ಇಂಧನ, ಗೊಬ್ಬರ ಇತ್ಯಾದಿಗಳೆಲ್ಲವೂ ಚರ ಬಂಡವಾಳಗಳಾಗಿವೆ.

**೨. ಭೌತಿಕ ಮತ್ತು ಹಣಕಾಸಿನ ಬಂಡವಾಳ :** ಮಾನವನಿಂದ ನಿರ್ಮಿತವಾಗಿ ಉತ್ಪಾದನೆಯಲ್ಲಿ ಬಳಸಲ್ಪಡುವ ಗೋಚರ ಹಾಗೂ ಅಗೋಚರ ವಸ್ತುಗಳನ್ನು ಭೌತಿಕ ಬಂಡವಾಳ ಎಂದು ಕರೆಯಲಾಗುತ್ತದೆ. ಈ ಬಂಡವಾಳವನ್ನು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ವರ್ಗಾಯಿಸಬಹುದು. ಯಂತ್ರಗಳು, ಯಂತ್ರೋಪಕರಣಗಳು, ಸಲಕರಣೆಗಳು, ವಾಹನಗಳು, ಕಚ್ಚಾವಸ್ತುಗಳು, ಕಾರ್ಖಾನೆಗಳು ಮತ್ತು ಕಟ್ಟಡಗಳು ಮುಂತಾದವುಗಳು ಭೌತಿಕ ಬಂಡವಾಳಗಳಾಗಿವೆ.

ಉತ್ಪಾದನೆಯಲ್ಲಿ ತೊಡಗಿಸಲಾಗುವ ನಗದು ಹಣ ಮತ್ತು ಕೂಡಲೇ ನಗದು ಹಣಕ್ಕೆ ಪರಿವರ್ತಿಸಲ್ಪಡುವ ದ್ರವತ್ವದ ಆಸ್ತಿಗಳೇ ಹಣಕಾಸಿನ ಬಂಡವಾಳ. ಉದಾ. ನಗದು ಹಣ, ಠೇವಣಿ, ಹುಂಡಿ, ಚೆಕ್ಕುಗಳು, ಶೇರುಗಳು, ಸಾಲಪತ್ರಗಳು, ಬಾಂಡ್ಸ ಮುಂತಾದವುಗಳು ಹಣಕಾಸಿನ ಬಂಡವಾಳಗಳಾಗಿವೆ.

**ಬಂಡವಾಳ ಸಂಚಯನ**

ಬಂಡವಾಳ ಸಂಚಯನವೆಂದರೆ ಬಂಡವಾಳ ವಸ್ತುಗಳ ನಿರ್ಮಾಣ. ಆದ್ದರಿಂದ, ಬಂಡವಾಳ ಸಂಚಯನವೆಂದರೆ ಉತ್ಪಾದನಾ ವಸ್ತುಗಳಾದ ಯಂತ್ರೋಪಕರಣ, ಕಾರ್ಖಾನೆ ಗಳು, ಸಂಚಾರ-ಸಾಗಾಟ ಸಾಧನಗಳು, ಕಚ್ಚಾವಸ್ತುಗಳು, ಇಂಧನ ಶಕ್ತಿ ಮೊದಲಾದವುಗಳ ಉತ್ಪಾದನೆಯನ್ನು ಹೆಚ್ಚಿಸುವುದು ಎಂದು ಅರ್ಥ. ಆರ್ಥಿಕ ಬೆಳವಣಿಗೆಯ ಹಾದಿಯಲ್ಲಿ ಬಂಡವಾಳ ಸಂಚಯನ ಮಹತ್ವದ ಪಾತ್ರವಹಿಸುವದು. ಬಂಡವಾಳ ಸಂಚಯನ ದರವನ್ನು ರಾಷ್ಟ್ರದ ಅಭಿವೃದ್ಧಿಯನ್ನು ಅಳೆಯಲು ಮಾಪನವಾಗಿ ಬಳಸಲಾಗುವುದು.

ಬಂಡವಾಳ ಮಾನವನ ಪ್ರಯತ್ನದ ಫಲ. ರಾಷ್ಟ್ರದ ಜನರ ಉಳಿತಾಯವೆ ಬಂಡವಾಳದ ಮೂಲ. ಜನರ ಆದಾಯದಲ್ಲಿ ವೆಚ್ಚವನ್ನು ಕಳೆದರೆ ಉಳಿಯುವ ಹಣವೆ

ಉಳಿತಾಯ. ಉತ್ಪಾದನೆಯಲ್ಲಿ ಉಪಯೋಗಿಸುವ ಉಳಿತಾಯದಿಂದ ಬಂಡವಾಳ ರೂಪುಗೊಳ್ಳುತ್ತದೆ. ಬಂಡವಾಳ ಸಂಚಯನ ಅಂದರೆ ಬಂಡವಾಳ ವಸ್ತುಗಳ ನಿರ್ಮಾಣ. ಇದು ರಾಷ್ಟ್ರದ ಉಳಿತಾಯ ಮತ್ತು ಹೂಟೆಯನ್ನು ಅವಲಂಬಿಸಿರುತ್ತದೆ.

ಬಂಡವಾಳ ಸಂಚಯನದ ಬಗ್ಗೆ ಅರ್ಥಶಾಸ್ತ್ರಜ್ಞರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯೆ ನೀಡಿದ್ದಾರೆ.

ರಾಗ್ನರ್‌ನರ್ಕ್ಸ್‌ರ ಅಭಿಪ್ರಾಯದಲ್ಲಿ, "ಸಮಾಜವೊಂದು ತನ್ನಲ್ಲಿ ಪ್ರಸ್ತುತ ಲಭ್ಯವಿರುವ ಎಲ್ಲ ಉತ್ಪಾದನಾ ಚಟುವಟಿಕೆಗಳನ್ನು ಜಾಗರೂಕವಾಗಿರುವ ಅನುಭೋಗದ ಅಗತ್ಯಗಳಿಗೆ ಉಪಯೋಗಿಸದೆ, ಒಂದು ಭಾಗವನ್ನು ಬಂಡವಾಳ ವಸ್ತುಗಳ ಹಾಗೂ ಯಂತ್ರೋಪಕರಣಗಳನ್ನು ತಯಾರಿಕೆ, ಸಾರಿಗೆ ಸೌಕರ್ಯಗಳ ಮತ್ತು ಕಾರ್ಖಾನೆಗಳ ನಿರ್ಮಾಣ ಇವುಗಳಿಗೆ ಮೀಸಲಾಗಿಡುವುದು ಬಂಡವಾಳ ಸಂಚನಯ".

ಬೆನ್‌ಹ್ಯಾಮ್‌ರ ಪ್ರಕಾರ, "ನಿರ್ದಿಷ್ಟ ಅವದಿಯಲ್ಲಿ ಹೂಟೆ ಅಥವಾ ಬಂಡವಾಳ ವಸ್ತುವಿನ ಮೊತ್ತವನ್ನು ಸೇರಿಸುವುದೇ ಬಂಡವಾಳ ಸಂಚಯನ".

### ಬಂಡವಾಳ ಸಂಚಯನ ಮೂಲಗಳು

ಬಂಡವಾಳ ಸಂಚಯನದ ಮೂಲಗಳನ್ನು ಸ್ವದೇಶಿ ಮೂಲಗಳು ಮತ್ತು ವಿದೇಶಿ ಮೂಲಗಳೆಂದು ವಿಂಗಡಿಸಲಾಗಿದೆ.

### ಅ. ಸ್ವದೇಶಿ ಮೂಲಗಳು

**೧. ರಾಷ್ಟ್ರೀಯ ಆದಾಯ** : ರಾಷ್ಟ್ರೀಯ ಆದಾಯದ ಹೆಚ್ಚಳ ಬಂಡವಾಳ ಸಂಚಯನಕ್ಕೆ ಅತ್ಯುತ್ತಮ ಮಾರ್ಗವಾಗಿದೆ. ರಾಷ್ಟ್ರೀಯ ಆದಾಯ ಅಧಿಕವಾದರೆ ಜನರ ಆದಾಯ ಅಧಿಕವಾಗುತ್ತದೆ. ಇದು ಜನರ ಉಳಿತಾಯ ಮಾಡುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.

**೨. ಉಳಿತಾಯ :** ಅಧಿಕ ಉಳಿತಾಯ ಅಧಿಕ ಆದಾಯ ಮತ್ತು ಉಳಿತಾಯ ಮಾಡುವ ಪ್ರವೃತ್ತಿಯಿಂದ ಇದು ಸಾಧ್ಯವಿದೆ. ಜನರಲ್ಲಿ ಉಳಿತಾಯ ಮಾಡುವ ಪ್ರವೃತ್ತಿಯನ್ನು ಜಾಹಿರಾತು ಮತ್ತು ಪ್ರಚಾರ ಮಾಧ್ಯಮಗಳಿಂದ ಅಧಿಕಗೊಳಿಸಬೇಕು. ಇದು ಬಂಡವಾಳ ಸಂಚಯನದಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

**೩. ಹಣಕಾಸಿನ ಸಂಸ್ಥೆಗಳ ಸ್ಥಾಪನೆ** : ಬ್ಯಾಂಕುಗಳು ಹಾಗೂ ಇತರ ಹಣಕಾಸಿನ ಸಂಸ್ಥೆಗಳು ರಾಷ್ಟ್ರಾದ್ಯಂತ ಪ್ರಾರಂಭವಾದಾಗ ಬಂಡವಾಳ ಸಂಚಯನದ ಕಾರ್ಯ ಸುಗಮಗೊಳ್ಳುತ್ತದೆ. ಜನರು ಉಳಿತಾಯವನ್ನು ಪೂರ್ಣ ವಿಶ್ವಾಸ ಮತ್ತು ಭದ್ರತೆಯ ನಂಬಿಕೆಯಿಂದ ಠೇವಣಿಗಳ ರೂಪದಲ್ಲಿಡಲು ಹಣಕಾಸಿನ ಸಂಸ್ಥೆಗಳು ಅವಕಾಶ ಕಲ್ಪಿಸುತ್ತವೆ.

೪. **ವೇತನ ಕಡಿತ :** ವೇತನವನ್ನು ಕಡಿತಗೊಳಿಸುವುದರಿಂದ ಉಳಿಯುವ ಹಣವನ್ನು ಉದ್ಯಮದಲ್ಲಿ ಉತ್ಪಾದನಾ ವಿಸ್ತರಣೆಗೆ ಬಂಡವಾಳವನ್ನಾಗಿ ಉಪಯೋಗಿಸಿಕೊಳ್ಳಬಹುದು. ಆದರೆ ವೇತನ ಕಡಿತ ಕಾರ್ಮಿಕರ ಮೇಲೆ ದುಷ್ಪರಿಣಾಮ ಬೀರುವಂತಿರಬಾರದು.

೫. **ಉದ್ಯೋಗಗಳ ಹೆಚ್ಚಳ :** ಉದ್ಯೋಗಗಳ ಹೆಚ್ಚಳವು ಬಂಡವಾಳ ಸಂಚಯನದ ಅತ್ಯುತ್ತಮ ಮೂಲವಾಗಿದೆ ಹೊಸ ಉದ್ಯೋಗವಕಾಶಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸೃಷ್ಟಿಸುವುದರಿಂದ ನಿರುದ್ಯೋಗಿಗಳಿಗೆ ಪರಾವಲಂಬನೆ ತಪ್ಪುತ್ತದೆ ಮತ್ತು ಉದ್ಯೋಗಿಗಳಿಗೆ ವರಮಾನದ ಮೂಲ ದೊರೆತಂತಾಗುತ್ತಾದೆ.

೬. **ತೆರಿಗೆಗಳು :** ಸರಕಾರವು ತನ್ನ ರಾಜ್ಯಕೋಶ ನೀತಿಯ ಅನುಷ್ಠಾನದ ಮೂಲಕ ಉಳಿತಾಯವನ್ನು ಹೆಚ್ಚುಸುತ್ತದೆ. ಅನವಶ್ಯಕ ವಸ್ತುಗಳ ಅನುಭೋಗದ ಮೇಲೆ ತೆರಿಗೆ ಯನ್ನು ಹಾಕುವುದರಿಂದ ಉಳಿತಾಯದ ಹಣ ಸಾರ್ವಜನಿಕರಿಂದ ಸರಕಾರಕ್ಕೆ ವರ್ಗಾಯಿಸ ಲ್ಪಟ್ಟು ಬಂಡವಾಳ ಸಂಚಯನವಾಗುತ್ತದೆ.

೭. **ಬಡ್ಡಿಯ ದರ :** ಜನರ ಉಳಿತಾಯವನ್ನು ಪ್ರೇರೇಪಿಸುವುದು ಬಡ್ಡಿಯ ದರ. ಬಡ್ಡಿಯ ದರ ಹೆಚ್ಚಾಗಿದ್ದರೆ ಉಳಿತಾಯ ಹೆಚ್ಚಿ ಬಂಡವಾಳ ಹೂಡುವಿಕೆಗೆ ಹಣ ದೊರೆಯುತ್ತದೆ.

೮. **ಲಾಭದ ಹೆಚ್ಚಳ :** ಉದ್ಯಮಗಳು ಹೆಚ್ಚು ಲಾಭಗಳಿಸದರೆ ಆ ಲಾಭವವನ್ನು ಪುನರುತ್ಪಾದನೆಯಲ್ಲಿ ತೊಡಗಿಸುತ್ತಾರೆ. ಇದರಿಂದ ಹೂಡಿಕೆಯ ಪ್ರಮಾಣ ಮತ್ತಷ್ಟು ಹೆಚ್ಚುವುದರಿಂದ ಬಂಡವಾಳ ಸಂಚಯನ ಅಧಿಕವಾಗುತ್ತದೆ. ಆದುದರಿಂದ ಲಾಭದ ಹೆಚ್ಚಳ ಬಂಡವಾಳ ಸಂಚಯನದ ಒಂದು ಮೂಲವಾಗಿದೆ.

೯. **ಅನುಭೋಗ ಇಳಿಕೆ :** ಜನರು ತಾವು ಕೂಡಿಟ್ಟ ಹಣವನ್ನು ಕೆಲವು ಸಂದರ್ಭಗಳಲ್ಲಿ ಅನಾವಶ್ಯಕವಾಗಿ ವೆಚ್ಚ ಮಾಡುತ್ತಾರೆ. ಇದರಿಂದ ಉಳಿತಾಯದ ಪ್ರಮಾಣ ತಗ್ಗುತ್ತದೆ. ಆದುದರಿಂದ ಸರಕಾರ ವಿಶಿಷ್ಟ ಕಾರ್ಯಕ್ರಮಗಳ ಮೂಲಕ ಜನರ ಅನವಶ್ಯಕ ಅನುಭೋಗವನ್ನು ಕಡಿತಗೊಳಿಸಬೇಕು. ಇದು ಉಳಿತಾಯವನ್ನು ಹೆಚ್ಚಿಸುತ್ತದೆ. ಹೀಗೆ ಹೆಚ್ಚಿದ ಉಳಿತಾಯವನ್ನು ಆರ್ಥಿಕ ಚಟುವಟಿಕೆಗಳಲ್ಲಿ ವಿನಿಯೋಗಿಸದರೆ ಆದಾಯ ಹೆಚ್ಚುವದು. ಇದರಿಂದ ಬಂಡವಾಳ ಸಂಚಯನ ಸಾಧ್ಯವಾಗುವುದು.

೧೦. **ಹಣದುಬ್ಬರ :** ನಿಯಂತ್ರಿತ ದರದ ಹಣದುಬ್ಬರವು ಬಂಡವಾಳ ಸಂಚಯನದ ಪ್ರಮುಖ ಮೂಲಗಳಲ್ಲಿ ಒಂದಾಗಿದೆ. ಹಣದುಬ್ಬರದಿಂದ ಉದ್ಯಮಗಳ ಲಾಭ ಬೆಳೆಯುವುದರಿಂದ ಮರುಹೂಡುವಿಕೆಗೆ ಸಂಪನ್ಮೂಲಗಳು ಲಭ್ಯವಾಗುತ್ತವೆ.

೧೧. **ಸಂಪನ್ಮೂಲಗಳ ಸದ್ಬಳಕೆ :** ರಾಷ್ಟ್ರದಲ್ಲಿ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲ ಗಳನ್ನು ತಂತ್ರಜ್ಞಾನದ ಮೂಲಕ ಸಮರ್ಪಕವಾಗಿ ಬಳಸಿಕೊಂಡರೆ ರಾಷ್ಟ್ರದ ಉತ್ಪಾದನೆ

ಹೆಚ್ಚುತ್ತದೆ. ಅಧಿಕ ಉತ್ಪಾದನೆಯಿಂದಾಗಿ ತಲಾ ವರಮಾನ ಅಧಿಕಗೊಂಡು ಉಳಿತಾಯದ ಸಾಮರ್ಥ್ಯ ವೃದ್ಧಿಸುತ್ತದೆ.

೧೨. ರಾಜಕೀಯ ಪರಿಸ್ಥಿತಿ : ಬಂಡವಾಳ ಸಂಚಯನ ರಾಜಕೀಯ ಸ್ಥಿತಿಗತಿಗಳನ್ನು ಅವಲಂಬಿಸಿರುತ್ತದೆ. ರಾಜಕೀಯ ಸ್ಥಿರತೆಯಿದ್ದರೆ ಮಾತ್ರ ಜನರು ಹೆಚ್ಚು ಉಳಿತಾಯ ಮಾಡಲು ಹಾಗೂ ಉದ್ಯಮ ಸಾಹಸಿಗಳು ಉಳಿತಾಯವನ್ನು ಹೂಟೆಯನ್ನಾಗಿ ಪರಿವರ್ತಿಸಲು ಮುಂದೆ ಬರುತ್ತಾರೆ. ಇದು ಬಂಡವಾಳ ಸಂಚಯನವನ್ನು ಸುಲಲಿತಗೊಳಿಸುತ್ತದೆ.

### ಆ. ವಿದೇಶಿ ಮೂಲಗಳು

೧. ವಿದೇಶಿ ಸಹಾಯ : ಅಬಿವೃದ್ಧಿ ಕಾರ್ಯಸಾಧನೆಗೆ ವಿದೇಶಿ ಸಹಾಯ ಪಡೆಯುವ ಮೂಲಕ ಬಂಡವಾಳ ಸಂಚಯನ ಮಾಡಬಹುದು. ವಿದೇಶಿ ಸಾಲಗಳು, ವಿದೇಶಿ ಸಹಭಾಗಿತ್ವ, ವಿದೇಶಿ ಹೂಟೆ, ವಿದೇಶಿ ತಂತ್ರಜ್ಞಾನ ಮತ್ತು ಬಂಡವಾಳ ವಸ್ತುಗಳ ಆಮದು ರೂಪದಲ್ಲಿ ವಿದೇಶಿ ಸಹಾಯ ದೊರೆಯುತ್ತದೆ. ಈ ರೀತಿಯ ವಿದೇಶಿ ಸಹಾಯ ಉತ್ಪಾದನೆಯ ಹೆಚ್ಚಳಕ್ಕೆ ಸಹಾಯಕವಾಗುವುದರಿಂದ ಅದು ಬಂಡವಾಳ ಸಂಚಯನದ ಒಂದು ಉತ್ತಮ ಮಾರ್ಗವಾಗಿದೆ.

೨. ರಫ್ತು ವ್ಯಾಪಾರ : ರಫ್ತು ವ್ಯಾಪಾರದ ಹೆಚ್ಚಳ ಬಂಡವಾಳ ಸಂಚಯನಕ್ಕೆ ಒಂದು ಪ್ರಭಾವಶಾಲಿ ಅಂಶವಾಗಿದೆ. ಗಾತ್ರ ಮತ್ತು ಮೌಲ್ಯದಲ್ಲಿ ರಫ್ತುಗಳು ಹೆಚ್ಚಾದಾಗ ವಿದೇಶಿ ವಿನಿಮಯ ಗಳಿಕೆ ಹೆಚ್ಚಾಗುವುದರಿಂದ ಬಂಡವಾಳವು ರಾಷ್ಟ್ರದೊಳಗೆ ಹರಿದು ಬರುತ್ತದೆ. ಆದ್ದರಿಂದ ರಫ್ತು ಕೈಗಾರಿಕೆಗಳಿಗೆ ಆದ್ಯತೆ ನೀಡುವುದು ಅವಶ್ಯಕವಾಗಿದೆ.

೩. ಆಮದುಗಳ ಕಡತ : ಆಮದುಗಳನ್ನು ತಗ್ಗಿಸುವ ಮೂಲಕ ಅನುಭೋಗದಲ್ಲಿ ಕಡಿತ ಸಾಧಿಸುವುದು ಬಂಡವಾಳ ಸಂಚಯನದ ಇನ್ನೊಂದು ಮಾರ್ಗವಾಗಿದೆ. ಅಧಿಕ ಬೆಲೆಯ ಎಲ್ಲ ರೀತಿಯ ಭೋಗ ವಸ್ತುಗಳ ಆಮದನ್ನು ನಿರ್ಬಂಧಿಸುವುದರಿಂದ ಅನುಭೋಗವನ್ನು ತಗ್ಗಿಸಿ ಉಳಿತಾಯವನ್ನು ಹೆಚ್ಚಿಸಬಹುದು.

೪. ವಿದೇಶಿ ಸಾಲ : ಸ್ವದೇಶಿ ಮೂಲಗಳಿಂದ ಸಾಕಷ್ಟು ಪ್ರಮಾಣದಲ್ಲಿ ಉಳಿತಾಯವಾಗದಿದ್ದರೆ ವಿದೇಶಿ ಸಾಲದ ಮೂಲಕ ಆ ಕೊರತೆಯನ್ನು ಹೋಗಲಾಡಿಸಬಹುದು. ವಿದೇಶಿ ಸಾಲವನ್ನು ಸರಿಯಾದ ರೀತಿಯಲ್ಲಿ ಉತ್ಪಾದಕ ಚಟುವಟಿಕೆಗಳಿಗೆ ಬಳಸಿದರೆ ದೇಶೀಯ ಉತ್ಪನ್ನ ವೃದ್ಧಿಯಾಗುತ್ತದೆ. ಇದರಿಂದ ಬಂಡವಾಳ ಸಂಚಯನ ಸಾಧ್ಯವಾಗುತ್ತದೆ.

## ಬಡ್ಡಿ

ಸಾಮಾನ್ಯ ಭಾಷೆಯಲ್ಲಿ ಬಡ್ಡಿಯೆಂದರೆ ಸಾಲಗಾರ ಬಂಡವಾಳದ ಒಡೆಯನಿಗೆ ಕೊಡುವ ಒಟ್ಟು ಪ್ರತಿಫಲವಾಗಿದೆ. ಆದರೆ ಅರ್ಥಶಾಸ್ತ್ರದಲ್ಲಿ ಬಡ್ಡಿ ಎಂಬ ಪರಿಭಾವನೆಗೆ ವಿಶಿಷ್ಟ ಅರ್ಥವಿದೆ. ಉತ್ಪಾದನೆಯಲ್ಲಿ ಬಳಸಿಕೊಂಡ ಬಂಡವಾಳಕ್ಕೆ ಪ್ರತಿಫಲವಾಗಿ ಅದರ

ಒಡೆಯನಿಗೆ ದೊರೆಯುವ ಪ್ರತಿಫಲವೇ ಬಡ್ಡಿಯಾಗಿದೆ.

ಯಾವುದೇ ವಸ್ತುವಿನ ಉತ್ಪಾದನೆಯಲ್ಲಿ ಬಂಡವಾಳ ಅತಿ ಮುಖ್ಯವಾಗಿದೆ. ಬಂಡವಾಳಗಾರರು ಪ್ರತಿಫಲಾಪೇಕ್ಷೆಯಿಂದ ಸಾಲ ಕೊಡುತ್ತಾರೆ. ತಾವು ಸಾಲ ಕೊಟ್ಟ ಬಂಡವಾಳದ ಉಪಯೋಗದ ಪ್ರತಿಫಲವೆಂದು ಸಾಲಗಾರರಿಂದ ಬಡ್ಡಿ ಪಡೆಯುತ್ತಾರೆ. ಸಾಲಗಾರರು, ತಾವು ಸಾಲ ತಂದ ಬಂಡವಾಳದ ಉಪಯೋಗಕ್ಕಾಗಿ ಬಡ್ಡಿ ಕೊಡುತ್ತಾರೆ.

ಬಡ್ಡಿ ಎಂದರೇನು ಎಂಬುದರ ಬಗ್ಗೆ ಅರ್ಥಶಾಸ್ತ್ರಜ್ಞರಲ್ಲಿ ಭಿನ್ನಾಭಿಪ್ರಾಯವಿದೆ. ಅವುಗಳಲ್ಲಿ ಕೆಲವು ಪ್ರಮುಖ ವ್ಯಾಖ್ಯೆಗಳನ್ನು ಕೆಳಗೆ ಕೊಡಲಾಗಿದೆ.

ಸಲಿಗ್‌ಮನ್‌ರ ಪ್ರಕಾರ, "ಬಂಡವಾಳದ ಉಪಯೋಗದಿಂದ ದೊರೆಯುವ ಪ್ರತಿಫಲವೇ ಬಡ್ಡಿ".

ಹೆಸರಾಂತ ಅರ್ಥಶಾಸ್ತ್ರಜ್ಞ ಜೆ.ಎಂ. ಕೇನ್ಸ್‌ರ ಪ್ರಕಾರ, "ಒಂದು ನಿರ್ದಿಷ್ಟ ಅವಧಿಗೆ ದ್ರವ್ಯದೊಲವನ್ನು ತ್ಯಾಗ ಮಾಡಿದ್ದಕ್ಕಾಗಿ ಕೊಡಬೇಕಾಗಿರುವ ಬೆಲೆ ಬಡ್ಡಿ".

ಮೇಯನ್ಸರ ಅಭಿಪ್ರಾಯದಲ್ಲಿ "ಸಾಲದ ರೂಪದಲ್ಲಿ ಕೊಟ್ಟ ಹಣದಿಂದ ದೊರಕಿಸಿದ ಬಂಡವಾಳದ ಬೆಲೆಯೇ ಬಡ್ಡಿ".

ಬೆನ್‌ಹ್ಯಾಮರ್ ಪ್ರಕಾರ, "ಬಡ್ಡಿಯು ಸಾಲಕ್ಕೆ ನೀಡುವ ಬೆಲೆ".

ಒಟ್ಟಾರೆ, ಬಂಡವಾಳವನ್ನು ಉಪಯೋಗಿಸಿದ್ದಾಕ್ಕಾಗಿ ಪ್ರತಿಫಲ ರೂಪದಲ್ಲಿ ಬರುವಂತಹುದೇ ಬಡ್ಡಿ ಎಂಬುದು ಮೇಲಿನ ವ್ಯಾಖ್ಯೆಗಳ ಸಾರಾಂಶ.

### ಒಟ್ಟು ಬಡ್ಡಿ ಮತ್ತು ನಿವ್ವಳ ಬಡ್ಡಿಗಳ ನಡುವಿನ ವ್ಯತ್ಯಾಸ

೧. ಒಟ್ಟು ಬಡ್ಡಿಯು ಸಾಲಿಗರು ಬಂಡವಾಳಗಾರನಿಗೆ ಕೊಡುವ ಒಟ್ಟು ಪ್ರತಿಫಲ. ಆದರೆ ನಿವ್ವಳ ಬಡ್ಡಿ ಕೇವಲ ಬಂಡವಾಳದ ಉಪಯೋಗಕ್ಕಾಗಿ ನೀಡುವ ಪ್ರತಿಫಲ.

೨. ಒಟ್ಟು ಬಡ್ಡಿಯಲ್ಲಿ ನಿವ್ವಳ ಬಡ್ಡಿಯ ಜೊತೆಗೆ ಗಂಡಾಂತರ ವಿಮೆ, ನಿರ್ವಹಣೆಯ ಪ್ರತಿಫಲ, ಆಡಳಿತ ವೆಚ್ಚ ಮುಂತಾದವುಗಳು ಒಳಗೊಂಡಿರುತ್ತವೆ. ಆದರೆ ನಿವ್ವಳ ಬಡ್ಡಿಯಲ್ಲಿ ಕೇವಲ ಬಂಡವಾಳದ ಉಪಯೋಗಕ್ಕಾಗಿ ನೀಡುವ ಪ್ರತಿಫಲ ಮಾತ್ರ ಇರುತ್ತದೆ.

೩. ಒಟ್ಟು ಬಡ್ಡಿ ಎಲ್ಲ ಸಂದರ್ಭದಲ್ಲಿ ಒಂದೇ ಆಗಿರುವುದಲ್ಲ. ಅದು ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ವ್ಯಾತ್ಯಾಸವಾಗುತ್ತಾ ಹೋಗುತ್ತದೆ. ಆದರೆ ನಿವ್ವಳ ಬಡ್ಡಿ ಎಲ್ಲ ಸಂದರ್ಭಗಳಲ್ಲಿ ಒಂದೇ ಆಗಿರುತ್ತದೆ.

ಸಾಮಾನ್ಯವಾಗಿ ನಾವು ಕೊಡುವ ಬಡ್ಡಿಯು ಒಟ್ಟು ಬಡ್ಡಿಯಾಗಿದೆ. ನಾವು ಉಪಯೋಗಿಸುವ ಪದ ಒಟ್ಟು ಬಡ್ಡಿಯೇ ಆಗಿದೆ. ಆದರೆ ನಿವ್ವಳ ಬಡ್ಡಿಯು ಒಟ್ಟು ಬಡ್ಡಿಯ ಒಂದು ಭಾಗ ಮಾತ್ರ.

ಒಟ್ಟಾರೆ, ಒಟ್ಟು ಬಡ್ಡಿ ಮತ್ತು ನಿವ್ವಳ ಬಡ್ಡಿದರಗಳನ್ನು ಅಂದಾಜು ಮಾಡುವ

ಸೂತ್ರಗಳನ್ನು ಕೆಳಗಿನಂತೆ ವ್ಯಕ್ತಪಡಿಸಬಹುದು.

ಒಟ್ಟು ಬಡ್ಡಿ = ನಿವ್ವಳ ಬಡ್ಡಿ+ಗಂಡಾತಂರ ವಿಮೆ+ಆಡಳಿತ ವೆಚ್ಚ+ನಿರ್ವಹಣೆಗೆ ಪ್ರತಿಫಲ.

ನಿವ್ವಳ ಬಡ್ಡಿ = ಒಟ್ಟು ಬಡ್ಡಿ - ಗಂಡಾಂತರ ವಿಮೆ - ಆಡಳಿತ ವೆಚ್ಚ - ನಿರ್ವಹಣೆಗೆ ಪ್ರತಿಫಲ.

## ೩.೭. ಸಂಘಟನೆ

### ಸಂಘಟನೆಯ ಅರ್ಥ

ಭೂಮಿ, ಶ್ರಮ ಮತ್ತು ಬಂಡವಾಳಗಳನ್ನು ಒಟ್ಟಿಗೆ ಸೇರಿಸಿ ಉತ್ಪಾದನೆ ಮಾಡುವ ಕಾರ್ಯವೇ ಸಂಘಟನೆ. ಸಂಘಟನೆಯ ಹೊರತು ಈ ಮೂರು ಉತ್ಪಾದನಾ ಘಟಕಗಳನ್ನು ಉತ್ಪಾದನೆಯಲ್ಲಿ ತೊಡಗಿಸಲು ಬರುವುದಿಲ್ಲ. ಭೂಮಿ, ಶ್ರಮ ಮತ್ತು ಬಂಡವಾಳವನ್ನು ಒಟ್ಟಿಗೆ ಸೇರಿಸದಿದ್ದರೆ ಅವು ಏನನ್ನೂ ಉತ್ಪಾದಿಸಲಾರವು.

ಕೆಲವರ ಹತ್ತಿರ ಭೂಮಿ ಇರುವುದು. ಆದರೆ ಬಂಡವಾಳ ಮತ್ತು ಶ್ರಮ ಇರುವುದಿಲ್ಲ. ಕೆಲವರ ಹತ್ತಿರ ಶ್ರಮ ಇರಬಹುದು ಆದರೆ ಭೂಮಿ ಮತ್ತು ಬಂಡವಾಳ ಇರುವುದಿಲ್ಲ. ಈ ಘಟಕಗಳು ಒಂದು ಕಡೆ ಕೂಡಿ ಸಹಕರಿಸದ ಹೊರತು ಉತ್ಪಾದನೆ ಸಾಧ್ಯವಾಗುವುದಿಲ್ಲ. ಈ ಮೂರು ಘಟಕಗಳು ಒಂಟಿಯಾಗಿರುತ್ತವೆ. ಇವುಗಳನ್ನು ಒಂದೆಡೆ ಸೇರಿಸಿ, ಅವುಗಳನ್ನು ಸರಿಯಾದ ಪ್ರಮಾಣದಲ್ಲಿ ತೊಡಗಿಸಿ ಉತ್ತಮ ಫಲಗಳನ್ನು ಪಡೆಯುವ ಪ್ರಯತ್ನದಲ್ಲಿ ಅವುಗಳು ಸುಮಧುರವಾಗಿ ಕೆಲಸ ನಿರ್ವಹಿಸುವಂತೆ ಮಾಡುವ ಕಾರ್ಯವೇ ಸಂಘಟನೆಯಾಗಿದೆ.

ಸಂಘಟನೆ ಉತ್ಪಾದನಾ ಘಟಕಗಳಲ್ಲಿ ಮಹತ್ವದ ಸ್ಥಾನ ಪಡೆದಿದೆ. ಸಂಘಟನೆಯ ಹೊರತು ಭೂಮಿ ಹಾಗೂ ಶ್ರಮ ಮತ್ತು ಬಂಡವಾಳ ಜಡವಾಗಿ ಉಳಿಯಬೇಕಾಗುತ್ತದೆ.

ಸಂಘಟನೆಯ ಕಾರ್ಯವನ್ನು ನಿರ್ವಹಿಸುವವನನ್ನು ಸಂಘಟನಾಕಾರ, ಉದ್ಯಮ ಸಾಹಸಿ, ಉದ್ಯಮ ಸಂಚಾಲಕ ಮುಂತಾದ ಹೆಸರಿನಿಂದ ಕರೆಯಲಾಗುವುದು. ಉತ್ಪಾದನೆಯ ವಿಷಯದ ಎಲ್ಲ ನಿರ್ಣಯಗಳ ಹಾಗೂ ಕಾರ್ಯಗಳ ಸೂತ್ರಗಳು ಉದ್ಯಮ ಸಾಹಸಿಯ ಕೈಯಲ್ಲಿರಿತ್ತವೆಯೆಂದರೆ ಅತಿಶಯೋಕ್ತಿಯಾಗಲಾರದು.

### ಉದ್ಯಮ ಸಾಹಸಿಯ ಕಾರ್ಯಗಳು

ಉದ್ಯಮ ಸಾಹಸಿಯು ಉದ್ಯಮಧಲ್ಲಿ ಪ್ರಾರಂಭದಿಂದ ಕೊನೆಯವರೆಗೆ ಹಲವು ವಿಧದ ಕಾರ್ಯಗಳಲ್ಲಿ ತೊಡಗಿರುತ್ತಾನೆ. ಅಂತಹ ಕಾರ್ಯಗಳಲ್ಲಿ ಕೆಳಗಿನವುಗಳು ಪ್ರಮುಖವಾಗಿವೆ.

**೧. ಯೋಜನೆ :** ಉದ್ಯಮ ಸಾಹಸಿಯ ಮೊದಲ ಕಾರ್ಯವೆಂದರೆ ಉತ್ಪಾದನೆಯ ಬಗ್ಗೆ ಯೋಜಿಸುವುದು. ಅಂದರೆ ಉತ್ಪಾದನೆಗೆ ಸಂಬಂಧಿಸಿದ ಎಲ್ಲ ವಿಷಯಗಳ ಬಗೆಗೆ ಅವನು ಮೊದಲೆ ನಿರ್ಧರಿಸಬೇಕಾಗುತ್ತದೆ. ಯಾವ ವಸ್ತುವನ್ನು ಉತ್ಪಾದಿಸಬೇಕು, ಯಾವ ಸ್ಥಳದಲ್ಲಿ ಯಾವ ಸಮಯದಲ್ಲಿ ಉತ್ಪಾದಿಸಬೇಕು ಮತ್ತು ಉತ್ಪಾದನಾ ತಂತ್ರ ಯಾವುದಿರಬೇಕು ಎಂಬುವೇ ಮುಂತಾದ ವಿಷಯಗಳ ಬಗ್ಗೆ ಉದ್ಯಮಸಾಹಸಿಯು ಸಂಪೂರ್ಣ ಮಾಹಿತಿ ಕಂಡು ಹಿಡಿದು ಅದನ್ನು ಕಾರ್ಯರೂಪಕ್ಕೆ ತರುತ್ತಾನೆ.

**೨. ಉತ್ಪಾದನಾ ಘಟಕಗಳ ಸಂಯೋಜನೆ :** ತಾನು ಕೈಕೊಳ್ಳಬೇಕಾದ ಉದ್ಯಮದ ರೂಪರೇಷೆಯನ್ನು ನಿರ್ಧರಿಸಿದೊಡನೆ ಆತನು ಅದಕ್ಕೆ ಬೇಕಾದ ಬಂಡವಾಳವನ್ನು ಎತ್ತುವುದು, ಯಂತ್ರಗಳನ್ನು ಮತ್ತು ಕಚ್ಚಾವಸ್ತುಗಳನ್ನು ಖರೀದಿಸುವುದು, ಕಾರ್ಮಿಕರನ್ನು ನಿಯೋಜಿಸುವುದು ಮುಂತಾದ ಕಾರ್ಯಗಳನ್ನು ಅವನೇ ಮಾಡುತ್ತಾನೆ. ಹೀಗೆ ಇತರ ಉತ್ಪಾದನಾ ಘಟಕಗಳನ್ನು ಸಂಘಟಿಸಿ ವ್ಯವಸ್ಥಿತವಾಗಿ ಕಾರ್ಯಾರಂಭ ಮಾಡುತ್ತಾನೆ.

**೩. ವಸ್ತುವಿನ ಗಾತ್ರ ಮತ್ತು ಗುಣ ನಿರ್ಧರಿಸುವುದು :** ಉತ್ಪಾದನಾ ವಸ್ತುವಿನ ಗಾತ್ರ ಮತ್ತು ಗುಣವನ್ನು ಜಾಗರೂಕತೆಯಿಂದ ನಿರ್ಧರಿಸಸಿದ್ದರೆ ಸಂಸ್ಥೆಯು ಲಾಭದಾಯಕವಾಗಿ ಕೆಲಸ ಮಾಡಲಾರದು. ಆದ್ದರಿಂದ ಇವುಗಳ ಬಗೆಗೆ ಸೂಕ್ತ ನಿರ್ಧಾರ ಕೈಕೊಳ್ಳುವುದು ಉದ್ಯಮಸಾಹಸಿಗನ ಪ್ರಮುಖ ಕಾರ್ಯವಾಗಿದೆ.

**೪. ಮೇಲ್ವಿಚಾರಣೆ :** ಉದ್ಯಮವನ್ನು ಸ್ಥಾಪಿಸಿ ಕೆಲಸವನ್ನು ಪ್ರಾರಂಭಿಸುವ ಮೇಲೆ ಉದ್ಯಮ ಸಾಹಸಿಯು ಪ್ರತಿಯೊಂದು ಚಿಕ್ಕ ವಿಷಯದ ಬಗ್ಗೆ ಮೇಲ್ವಿಚಾರಣೆಯನ್ನು ತಪ್ಪದೇ ಮಾಡಬೇಕಾಗುತ್ತದೆ. ಮೇಲ್ವಿಚಾರಣೆ ಸಡಿಲಗೊಂಡರೆ ಲಾಭಾಂಶ ಕಡಿಮೆಯಾಗಿ ಹಾನಿಗೊಳಗಾಗುವ ಸಂಭವ ಹೆಚ್ಚು. ಆದ್ದರಿಂದ ದಕ್ಷ ಆಡಳಿತ, ದಕ್ಷ ಮೇಲ್ವಿಚಾರಣೆ ಮತ್ತು ದಕ್ಷ ನಿರ್ದೇಶನಗಳು ಉದ್ಯಮ ಸಾಹಸಿಯಲ್ಲಿರಬೇಕಾದ ಪ್ರಮುಖ ಗುಣಗಳಾಗಿವೆ.

**೫. ವಿತರಣೆ :** ಉದ್ಯಮ ಸಾಹಸಿಯು ನಿರ್ದಿಷ್ಟವಾದ ಕಾರ್ಯಗಳನ್ನು ಮಾಡಬೇಕಾಗುವುದು. ಈ ಸಂದರ್ಭದಲ್ಲಿ ಅವನು ಉತ್ಪಾದನೆಯಾದ ವಸ್ತುಗಳ ಮಾರಾಟದ ಬಗ್ಗೆ ಸೂಕ್ತ ವ್ಯವಸ್ತೆ ಮಾಡಬೇಕಾಗವುದು.

**೬. ಗಂಡಾಂತರದ ಹೊಣೆಗಾರಿಕೆ :** ಉದ್ಯಮದಲ್ಲಿ ಹಲವು ರೀತಿಯ ಗಂಡಾಂತರಗಳು ಎದುರಾಗುವವು. ಕಚ್ಚಾವಸ್ತುಗಳು ಮತ್ತು ಹಣಕಾಸು ಸರಿಯಾಗಿ ದೊರೆಯದಿರಬಹುದು. ವಸ್ತುಗಳಿಗೆ ಸರಿಯಾಗಿ ಮಾರುಕಟ್ಟೆ ಲಭಿಸದಿರಬಹುದು. ವಸ್ತುಗಳು ಮಾರಾಟವಾಗದಿರಬಹುದು. ಇತ್ಯಾದಿ ಗಂಡಾಂತರಗಳನ್ನು ಮತ್ತು ಅನಿಶ್ಚಿತತೆಯನ್ನು ಉದ್ಯಮಸಾಹಸಿಯು ಸಮರ್ಥವಾಗಿ ಎದುರಿಸಬೇಕಾಗುತ್ತದೆ.

**೭. ಬದಲಾವಣೆ ಮತ್ತು ಶೋಧನೆ :** ಬದಲಾಗುತ್ತಿರುವ ವ್ಯವಸ್ಥೆಯಲ್ಲಿ ಉದ್ಯಮ ಸಾಹಸಿಯು ಅನುಭೋಗಿಗಳ ಬೇಡಿಕೆಗಳನ್ನು ತೃಪ್ತಿಪಡಿಸಲು ಸಾಧ್ಯವಾಗುವಂತೆ ಹೊಸ ವಸ್ತುಗಳನ್ನು ಉತ್ಪಾದಿಸುವದರ ಜೊತೆಗೆ ಹೊಸ ಪದ್ಧತಿಗಳನ್ನು ಆಚರಣೆಗೆ ತರಬೇಕಾಗುತ್ತದೆ. ಇದಕ್ಕಾಗಿ ನವೀನ ತಂತ್ರಗಳನ್ನು ಮತ್ತು ಉತ್ಪಾದನಾ ವಿಧಾನದಲ್ಲಿ ಸುಧಾರಣೆಗಳನ್ನು ಕಾರ್ಯರೂಪಕ್ಕೆ ತರಬೇಕಾಗುತ್ತದೆ. ಕಚ್ಚಾ ವಸ್ತುಗಳ ಹೊಸ ಮೂಲಗಳು ಮತ್ತು ವಸ್ತುಗಳ ಮಾರಾಟದ ಆಕರ್ಷಕ ವಿಧಾನಗಳನ್ನು ಕಂಡುಹಿಡಿಯುವುದು ಉದ್ಯಮದ ಯಶಸ್ಸಿನ ದೃಷ್ಟಿಯಿಂದ ಅಗತ್ಯವಾಗಿರುತ್ತದೆ. ಇವು ಉದ್ಯಮ ಸಾಹಸಿಯು ಸ್ವಾಭಾವಿಕವಾಗಿಯೇ ಮಾಡಬೇಕಾದ ಪ್ರಗತಿಪರ ಕಾರ್ಯಗಳಾಗಿವೆ.

ಈ ರೀತಿಯಾಗಿ, ಉದ್ಯಮ ಸಾಹಸಿಯು ನಿರ್ವಹಿಸಬೇಕಾದ ಕಾರ್ಯಗಳು ಬಹುಮುಖ್ಯವಾಗಿದ್ದು ಅವನಲ್ಲಿರುವ ಧೈರ್ಯ, ಆಡಳಿತ ಸಾಮರ್ಥ, ಸಂಘಟನಾ ಶಕ್ತಿ ಮಹತ್ವಾಕಾಂಕ್ಷೆ ಇವುಗಳ ಮೇಲೆಯೇ ಆಧುನಿಕ ಬೃಹತ್‌ಪ್ರಮಾಣದ ಉತ್ಪಾದನೆಯ ಯಶಸ್ಸು ಅವಲಂಬಿಸಿರುತ್ತದೆ.

**ಲಾಭ**

ಲಾಭ ಇದು ಸಂಘಟನೆಗೆ ದೊರೆಯುವ ಪ್ರತಿಫಲ. ಉತ್ಪಾದನಾ ಕ್ರಿಯೆಯಲ್ಲಿ ಉದ್ಯಮ ಸಾಹಸಿಗೆ ಅಥವಾ ಸಂಘಟನಾಕಾರನಿಗೆ ದೊರೆಯುವ ಪ್ರತಿಫಲವೇ ಲಾಭ. ಉದ್ಯಮ ಸಾಹಸಿಗನು ಭೂಮಿ, ಶ್ರಮ ಮತ್ತು ಬಂಡವಾಳವನ್ನು ಸಂಘಟಿಸಿ ಉತ್ಪಾದನೆ ಮಾಡಿ ಆದಾಯ ಗಳಿಸುತ್ತಾನೆ. ಈ ಆದಾಯದಲ್ಲಿ ಭೂಮಿಗೆ ನೀಡಲಾಗುವ ಗೇಣಿ, ಶ್ರಮಕ್ಕೆ ಕೊಡಲಾಗುವ ಕೂಲಿ ಮತ್ತು ಬಂಡವಾಳಕ್ಕೆ ನೀಡಲಾಗುವ ಬಡ್ಡಿಯನ್ನು ಕಳೆದ ನಂತರ ಉಳಿಯುವ ಶೇಷವೇ ಲಾಭವಾಗಿರುತ್ತದೆ. ಆದ್ದರಿಂದ ಉತ್ಪಾದನೆಯ ಇತರ ವೆಚ್ಚಗಳನ್ನು ಭರಿಸಿದ ನಂತರ ಉಳಿಯುವ ಆದಾಯ ಲಾಭವಾಗುತ್ತದೆ. ಉತ್ಪಾದನಾ ಕ್ರಿಯೆಯಲ್ಲಿ ತಾನು ಸಲ್ಲಿಸಿದ ಸೇವೆಗೆ ಪ್ರತಿಫಲವಾಗಿ ಸಂಘಟಕನು ಲಾಭ ಪಡೆದು ಕೊಳ್ಳುತ್ತಾನೆ.

ಲಾಭ ಎಂಬ ಪರಿಭಾವನೆಗೆ ಅರ್ಥಶಾಸ್ತ್ರಜ್ಞರು ಹಲವು ವ್ಯಾಖ್ಯೆಗಳನ್ನು ನೀಡಿದ್ದು ಅವುಗಳಲ್ಲಿ ಕೆಲವು ಪ್ರಮುಖವಾದವುಗಳು ಕೆಳಗಿನಂತಿವೆ.

ಪ್ರೊ. ಎಫ್.ಎಚ್. ನೈಬರವರ ಅಭಿಪ್ರಾಯದಲ್ಲಿ "ಲಾಭ ಎಂಬುದು ಅನಿಶ್ಚಿತತೆಯನ್ನು ಎದುರಿಸಿದ್ದಕ್ಕೆ ಕೊಡುವ ಪ್ರತಿಫಲ".

ಜೆ. ವಿ. ಶುಂಪೀಟರನ ಅಬಿಪ್ರಾಯದಲ್ಲಿ "ಲಾಭವು ಉತ್ಪಾದಕರು ಆವಿಷ್ಕಾರವನ್ನು ಅಳವಡಿಸಿ ಪಡೆಯುವ ಪ್ರತಿಫಲವಾಗಿದೆ".

ಪ್ರೊ. ಎಫ್.ಬಿ. ಹಾಲ್ ಅವರ ಪ್ರಕಾರ, "ಲಾಭ ಎಂಬದು ಗಂಡಾಂತರವನ್ನು ಹೊರುವುದಕ್ಕೆ ಕೊಡುವ ಪ್ರತಿಫಲವಾಗಿದೆ".

ಈ ಎಲ್ಲ ವ್ಯಾಖ್ಯೆಗಳನ್ನು ಅವಲೋಕಿಸಿದಾಗ ಲಾಭ ಎಂಬುದು ಉತ್ಪಾದನಾ ಕ್ರಿಯೆಯಲ್ಲಿ ಉದ್ಯಮ ಸಾಹಸಿಯು ಸಲ್ಲಿಸಿದ ಸೇವೆಗಾಗಿ ಪಡೆಯುವ ಪ್ರತಿಫಲ ಎಂಬುದು ಸ್ಪಷ್ಟವಾಗುತ್ತದೆ.

**ಒಟ್ಟು ಲಾಭ ಮತ್ತು ನಿವ್ವಳ ಲಾಭಗಳ ನಡುವಿನ ವ್ಯತ್ಯಾಸ**

ಒಟ್ಟು ಲಾಭ ಮತ್ತು ನಿವ್ವಳ ಲಾಭಗಳ ನಡುವಿನ ವ್ಯತ್ಯಾಸ ಕೆಳಗಿನಂತಿದೆ.

೧. ಉತ್ಪಾದನೆಯ ಒಟ್ಟು ವರಮಾನದಿಂದ ಒಟ್ಟು ಉತ್ಪಾದನಾ ವೆಚ್ಚವನ್ನು ಕಳೆದರೆ ಉಳಿಯುವ ಆದಾಯ ಒಟ್ಟು ಲಾಭವಾಗಿರುತ್ತದೆ. ಆದರೆ ಒಟ್ಟು ಲಾಭದಲ್ಲಿ ವೆಚ್ಚಗಳನ್ನು ಕಳೆದರೆ ನಂತರ ದೊರೆಯುವ ಆದಾಯ ನಿವ್ವಳ ಲಾಭವಾಗುತ್ತದೆ.

೨. ಒಟ್ಟು ಲಾಭದಲ್ಲಿ ಭೂಮಿಯ ಮೇಲಿನ ಗೇಣಿ ಸೇರಿಕೊಂಡಿರುತ್ತದೆ. ಆದರೆ ನಿವ್ವಳ ಲಾಭದಲ್ಲಿ ಗೇಣಿಯನ್ನು ಕಳೆಯಲಾಗುತ್ತದೆ.

೩. ಒಟ್ಟು ಲಾಭದಲ್ಲಿ ನಿರ್ವಹಣಾ ವೆಚ್ಚ ಒಳಗೊಂಡಿರುತ್ತದೆ. ಆದರೆ ನಿವ್ವಳ ಲಾಭದಲ್ಲಿ ನಿರ್ವಹಣಾ ವೆಚ್ಚವನ್ನು ಕಳೆಯಲಾಗುತ್ತದೆ.

೪. ಒಟ್ಟು ಲಾಭದಲ್ಲಿ ಸವಕಳಿ ವೆಚ್ಚ, ವಿಮೆ ವೆಚ್ಚಗಳು ಸೇರಿಕೊಂಡಿರುತ್ತವೆ. ಆದರೆ ನಿವ್ವಳ ಲಾಭದಲ್ಲಿ ಇವು ಸೇರಿ ಕೊಂಡಿರುವುದಿಲ್ಲ.

೫. ಬಂಡವಾಳದ ಮೇಲಿನ ಬಡ್ಡಿಯು ಒಟ್ಟು ಲಾಭದಲ್ಲಿ ಸೇರಿರುತ್ತದೆ. ಆದರೆ ಈ ಬಡ್ಡಿಯನ್ನು ಒಟ್ಟು ಲಾಭದಲ್ಲಿ ಕಳೆದಾಗ ನಿವ್ವಳ ಲಾಭ ದೊರೆಯುತ್ತದೆ.

ಒಟ್ಟಿನಲ್ಲಿ ಒಟ್ಟು ಲಾಭವು ಒಟ್ಟು ಉತ್ಪಾದನೆಯಲ್ಲಿ ಉತ್ಪಾದನಾ ವೆಚ್ಚವನ್ನು ಕಳೆದ ನಂತರ ಉಳಿಯುವ ಆದಾಯ. ಆದರೆ, ಉತ್ಪಾದನಾ ಕ್ರಿಯೆಯಲ್ಲಿನ ಎಲ್ಲ ವ್ಯಕ್ತ ಮತ್ತು ಅವ್ಯಕ್ತ ವೆಚ್ಚಗಳನ್ನು ಭರಿಸಿಯಾದ ನಂತರ ಉಳಿಯುವ ಹೆಚ್ಚುವರಿ ಆದಾಯ ನಿವ್ವಳ ಲಾಭವಾಗಿದೆ.

## ೩.೭. ಸಾರಾಂಶ

**ಪೂರೈಕೆಯ ಅರ್ಥ :** ಒಂದು ನಿರ್ದಿಷ್ಟ ಬೆಲೆಗೆ ಮಾರುಕಟ್ಟೆಗೆ ಮಾರಾಟ ಮಾಡಲು ಒದಗಿಸಲ್ಪಟ್ಟ ವಸ್ತುಗಳ ಪ್ರಮಾಣ.

**ಸಂಗ್ರಹದ ಅರ್ಥ :** ಮಾರುಕಟ್ಟೆಗೆ ಪೂರೈಸಬಹುದಾದ ವಸ್ತುಗಳ ಪ್ರಮಾಣ.

**ಪೂರೈಕೆ ಬಿಂಬಕದ ಅರ್ಥ :** ಪೂರೈಕೆಯ ಪ್ರಮಾಣಕ್ಕೂ ಮತ್ತು ಬೆಲೆಗೂ ಇರುವ ಸಂಬಂಧವೇ ಪೂರೈಕೆಯ ಬಿಂಬಕ.

ಪೂರೈಕೆ ಬಿಂಬಕದ ಸೂತ್ರ

$S=f(D)$

**ಪೂರೈಕೆಯ ನಿಯಮ :** ಇತರೆ ಸಂಗತಿಗಳು ಸ್ಥಿರವಾಗಿದ್ದಾಗ ಬೆಲೆ ಹೆಚ್ಚಾದರೆ ಪೂರೈಕೆ ಹೆಚ್ಚುತ್ತದೆ ಹಾಗೂ ಬೆಲೆ ಕಡಿಮೆಯಾದರೆ ಪೂರೈಕೆ ಕಡಿಮೆಯಾಗುತ್ತದೆ.

**ಪೂರೈಕೆಯ ಅನುಸೂಚಿ :** ಯಾವ ಬೆಲೆಗೆ ಎಷ್ಟು ಪ್ರಮಾಣದಲ್ಲಿ ಒಂದು ವಸ್ತು ಪೂರೈಕೆಯಾಗುತ್ತದೆ ಎಂಬುದನ್ನು ಸೂಚಿಸುವ ಪಟ್ಟಿಯೇ ಪೂರೈಕೆಯ ಅನುಸೂಚಿ.

**ಉತ್ಪಾದನೆಯ ಅರ್ಥ :** ವಸ್ತುವಿನ ಪ್ರಯೋಜನವನ್ನು ಹೆಚ್ಚಿಸಿ ತನ್ಮೂಲಕ ಅದರ ವಿನಿಮಯ ಮೌಲ್ಯವನ್ನು ಹೆಚ್ಚಿಸುವದೇ ಉತ್ಪಾದನೆ.

**ಉತ್ಪಾದನಾ ಘಟಕಗಳ ಅರ್ಥ :** ಉತ್ಪಾದನಾ ಕ್ರಿಯೆಯಲ್ಲಿ ಭಾಗವಹಿಸುವ ಅಂಶಗಳೇ ಉತ್ಪಾದನಾ ಘಟಕಗಳು.

**ಉತ್ಪಾದನಾ ಘಟಕಗಳು :** ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆ.

**ಉತ್ಪಾದನಾ ಬಿಂಬಕದ ಅರ್ಥ :** ಉತ್ಪಾದನೆಗೂ ಮತ್ತು ಉತ್ಪಾದನಾ ಘಟಕಗಳಿಗೂ ಇರುವ ಸಂಬಂಧವನ್ನು ವ್ಯಕ್ತ ಪಡಿಸುವ ತಾಂತ್ರಿಕ ಪದವೇ ಉತ್ಪಾದನಾ ಬಿಂಬಕ.

ಉತ್ಪಾದನಾ ಬಿಂಬಕದ ಸೂತ್ರ

$Q=f(a,b,c,d...T)$

**ಏರಿಕೆಯ ಪ್ರತಿಫಲ ಪ್ರಮಾಣದ ಅರ್ಥ :** ಉತ್ಪಾದನಾ ಘಟಕಗಳ ಹೆಚ್ಚಳದ ಪ್ರಮಾಣಕ್ಕಿಂತ ಅದರಿಂದ ಸಿಗುವ ಸರಾಸರಿ ಪ್ರತಿಫಲದ ಪ್ರಮಾಣ ಅಧಿಕವಾದರೆ ಅದನ್ನು ಏರಿಕೆಯ ಪ್ರತಿಫಲದ ಪ್ರಮಾಣ ಎಂದು ಕರೆಯುವರು.

**ಸ್ಥಿರ ಪ್ರತಿಫಲ ನಿಯಮದ ಅರ್ಥ :** ಉತ್ಪಾದನಾಂಗಗಳ ಹೆಚ್ಚಳದ ಪ್ರಮಾಣ ಮತ್ತು ಅದರಿಂದ ಸಿಗುವ ಪ್ರತಿಫಲದ ಸರಾಸರಿ ಪ್ರಮಾಣ ಸರಿಸಮವಾಗಿದ್ದರೆ ಅದನ್ನು ಸ್ಥಿರ ಪ್ರತಿಫಲದ ಪ್ರಮಾಣ ಎಂದು ಕರೆಯುವರು.

**ಇಳಿಕೆಯ ಪ್ರತಿಫಲದ ಪ್ರಮಾಣ :** ಉತ್ಪಾದನಾಂಗಗಳ ಹೆಚ್ಚಳದ ಪ್ರಮಾಣಕ್ಕಿಂತ ಅದರಿಂದ ಸಿಗುವ ಪ್ರತಿಫಲದ ಸರಾಸರಿ ಪ್ರಮಾಣ ಕಡಿಮೆಯಾಗುತ್ತ ಹೋದರೆ ಅದನ್ನು

ಇಳಿಕೆಯ ಪ್ರತಿಫಲದ ಪ್ರಮಾಣ ಎಂದು ಕರೆಯುವರು.

**ಭೂಮಿಯ ಅರ್ಥ** : ನಿಸರ್ಗದಿಂದ ಮಾನವನಿಗೆ ಕೊಡಲ್ಪಟ್ಟಿರುವ ಎಲ್ಲ ಸಂಪನ್ಮೂಲಗಳನ್ನು ಅರ್ಥಶಾಸ್ತ್ರದಲ್ಲಿ ಭೂಮಿ ಎಂದು ಕರೆಯಲ್ಪಡುತ್ತದೆ.

**ಭೂಮಿಯ ಲಕ್ಷಣಗಳು :**

೧. ಭೂಮಿ ನಿಸರ್ಗದ ಕೊಡುಗೆಯಾಗಿದೆ.

೨. ಭೂಮಿಗೆ ಚಲನೆಯಿಲ್ಲ

೩. ಭೂಮಿಯ ಗಾತ್ರ ಮಿತವಾದದ್ದು

೪. ಭೂಮಿ ಶಾಶ್ವತವಾದುದು.

೫. ಭೂಮಿಯ ಗುಣಧರ್ಮ ಸಮನಾಗಿರುವುದಿಲ್ಲ

೬. ಭೂಮಿಯ ಸ್ಥಳಮಹತ್ವ ಸಮನಾಗಿರುವುದಿಲ್ಲ

೭. ಭೂಮಿ ಪ್ರಾಥಮಿಕ ಉತ್ಪಾದನಾಂಗವಾಗಿದೆ.

೮. ಭೂಮಿ ಇಳಿಮುಖ ಪ್ರತಿಫಲ ತತ್ವಕ್ಕನುಗುಣವಾಗಿದೆ.

**ಇಳಿಮುಖ ಪ್ರತಿಫಲ ನಿಯಮ** : ಒಂದು ನಿರ್ದಿಷ್ಟ ಭೂಮಿಯ ಸಾಗುವಳಿಯಲ್ಲಿ ಶ್ರಮ ಮತ್ತು ಬಂಡವಾಳದ ಬಳಕೆಯನ್ನು ಹೆಚ್ಚಿಸಿದಾಗ್ಯೂ ದೊರೆಯುವ ಪ್ರತಿಫಲ ಹೆಚ್ಚಿಸಿದ ಪ್ರಮಾಣಕ್ಕಿಂತಲೂ ಕಡಿಮೆಯಾಗುತ್ತಾ ಹೋಗುವುದರಿಂದ ಇದನ್ನು ಇಳಿಮುಖ ಪ್ರತಿಫಲ ನಿಯಮ ಎಂದು ಕರೆಯುವರು.

**ಗೇಣಿಯ ಅರ್ಥ** : ಭೂಮಿಯ ಉಪಯೋಗಕ್ಕಾಗಿ ಭೂಮಾಲಿಕನಿಗೆ ಕೊಡುವ ಪ್ರತಿಫಲವೇ ಗೇಣಿ. ಇದನ್ನು ಆರ್ಥಿಕಗೇಣಿ ಎಂದು ಕರೆಯುವರು.

**ಅರೆಗೇಣಿ** : ಭೂಮಿಯನ್ನು ಹೊರತುಪಡಿಸಿ ಇತರ ಉತ್ಪಾದನಾ ಘಟಕಗಳು ಅಲ್ಪಾವಧಿಯಲ್ಲಿ ಗಳಿಸುವ ಹೆಚ್ಚುವರಿ ಆದಾಯ ಅರೆಗೇಣಿ.

**ಶ್ರಮದ ಅರ್ಥ** : ಹಣಕ್ಕಾಗಿ ಕೈಕೊಂಡ ಎಲ್ಲ ಬಗೆಯ ಕಾರ್ಯಗಳು ಶ್ರಮ.

**ಶ್ರಮದ ಲಕ್ಷಣಗಳು :**

೧. ಶ್ರಮವನ್ನು ಶ್ರಮಜೀವಿಯಿಂದ ಬೇರ್ಪಡಿಸಲು ಬರುವುದಿಲ್ಲ.

೨. ಶ್ರಮ ಜೀವಿ ಶ್ರಮವನ್ನು ಮಾತ್ರ ಮಾರುತ್ತಾನೆ, ತನ್ನನ್ನಲ್ಲ.

೩. ಶ್ರಮ ಬೇಗನೆ ನಶಿಸಿ ಹೋಗುತ್ತದೆ.

೪. ಶ್ರಮಜೀವಿಗಳ ದಕ್ಷತೆ ಒಂದೇ ತೆರನಾಗಿರುವದಿಲ್ಲ.

೫. ಶ್ರಮವು ಮಾನವೀಯವಾದುದು.

೬. ಶ್ರಮಕ್ಕೆ ಚಲನೆಶಕ್ತಿ ಕಡಿಮೆಯಿದೆ.

೭. ಶ್ರಮದ ಪೂರೈಕೆ ಅಸ್ಥಿತಿಸ್ಥಾಪಕತ್ವವಾಗಿದೆ.

೮. ಶ್ರಮಕ್ಕೆ ಕಡಿಮೆ ಚೌಕಶಿ ಶಕ್ತಿ ಇದೆ.

**ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತ :** ಮಾಲ್ಥಸ್‌ನು ೧೭೯೮ರಲ್ಲಿ "ಜನಸಂಖ್ಯೆ ತತ್ವಗಳ ಮೇಲೆ ಒಂದು ಪ್ರಬಂಧ" ಎಂಬ ಕೃತಿಯನ್ನು ಬರೆದನು.

ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತದ ಪ್ರಕಾರ ಜನಸಂಖ್ಯೆ ಗುಣೋತ್ತರ ವೇಗದಲ್ಲಿ ಅಂದರೆ ೧, ೨, ೪, ೮.... ಹಾಗೂ ಆಹಾರದ ಉತ್ಪಾದನೆ ಸಮಾಂತರ ವೇಗದಲ್ಲಿ ಅಂದರೆ ೧, ೨, ೩,೪.... ಹೆಚ್ಚುತ್ತದೆ.

**ಜನಸಂಖ್ಯಾ ಪರಿವರ್ತನಾ ಸಿದ್ಧಾಂತ :** ಆರ್ಥಿಕಾಭಿವೃದ್ಧಿಯಾದಂತೆ ಜನಸಂಖ್ಯೆ ಯಾವ ರೀತಿಯಲ್ಲಿ ಪರಿವರ್ತನೆ ಹೊದುತ್ತದೆ ಎಂಬುದನ್ನು ತಿಳಿಸುವಂತಹದ್ದೆ ಜನಸಂಖ್ಯಾ ಪರಿವರ್ತನ ಸಿದ್ಧಾಂತ.

**ಕೂಲಿಯ ಅರ್ಥ :** ಉತ್ಪಾದನೆಯಲ್ಲಿ ದೈಹಿಕ ಮತ್ತು ಮಾನಸಿಕ ಕೆಲಸಕ್ಕೆ ಕೊಡುವ ಸಂಭಾವನೆಯೇ ಕೂಲಿ.

**ನಾಮ ಮಾತ್ರ ಕೂಲಿ :** ಹಣದ ರೂಪದಲ್ಲಿ ಕೊಡುವ ಕೂಲಿ.

**ವಾಸ್ತವಿಕ ಕೂಲಿ :** ಹಣ ರೂಪದ ಕೂಲಿಯಿಂದ ಪಡೆಯಬಹುದಾದ ವಸ್ತುಗಳ ಪ್ರಮಾಣವೇ ವಾಸ್ತಾವಿಕ ಕೂಲಿ.

**ಬಂಡವಾಳದ ಅರ್ಥ :** ಹಣದ ಜೊತೆಗೆ ಉತ್ಪಾದನಾ ಚಟುವಟಿಕೆಗಳಿಗೆ ಸಹಾಯಕವಾಗುವ ಎಲ್ಲ ಮಾನವ ನಿರ್ಮಿತ ವಸ್ತುಗಳೇ ಬಂಡವಾಳ.

**ಸ್ಥಿರ ಬಂಡವಾಳ :** ಬಹುಕಾಲ ಉತ್ಪಾದನೆಯಲ್ಲಿ ಬಳಸಬಹುದಾದ ಬಂಡವಾಳ ಸ್ಥಿರ ಬಂಡವಾಳವಾಗಿದೆ.

**ಚರ ಬಂಡವಾಳ :** ಉತ್ಪಾದನೆಯಲ್ಲಿ ಒಂದು ಸಲ ಉಪಯೋಗಿಸಲ್ಪಡುವ ವಸ್ತುಗಳು ಚರ ಬಂಡವಾಳ.

**ಭೌತಿಕ ಬಂಡವಾಳ :** ಉತ್ಪಾದನೆಯಲ್ಲಿ ಬಳಸಲ್ಪಡುವ ಗೋಚರ ವಸ್ತುಗಳನ್ನು ಭೌತಿಕ ಬಂಡವಾಳ ಎಂದು ಕರೆಯಲಾಗುವುದು.

**ಹಣಕಾಸಿನ ಬಂಡವಾಳ :** ಉತ್ಪದನೆಯಲ್ಲಿ ತೊಡಗಿಸಲಾಗುವ ನಗದು ಹಣ ಮತ್ತು ಕೂಡಲೇ ನಗದು ಹಣಕ್ಕೆ ಪರಿವರ್ತಿಸಲ್ಪಡಬಹುದಾದ ದ್ರವತ್ವದ ಆಸ್ತಿಗಳೇ ಹಣಕಾಸಿನ ಬಂಡವಾಳ.

**ಬಂಡವಾಳ ಸಂಚಯನದ ಅರ್ಥ :** ಉತ್ಪಾದನಾ ವಸ್ತುಗಳಾದ ಯಂತ್ರೋಪಕರಣ, ಸಂಚಾರ ಸಾಗಾಟ ಸಾಧನಗಳು, ಕಚ್ಚವಸ್ತುಗಳು, ಇಂಧನಶಕ್ತಿ ಮೊದಲಾದವುಗಳ ಉತ್ಪಾದನೆಯನ್ನು ಹೆಚ್ಚಿಸುವುದೇ ಬಂಡವಾಳ ಸಂಚಯನ.

**ಬಂಡವಾಳ ಸಂಚಯನದ ಮೂಲಗಳು**

**ಅ. ಸ್ವದೇಶಿ ಮೂಲಗಳು**

೧. ಉಳಿತಾಯ

೨. ಹಣಕಾಸಿನ ಸಂಸ್ಥೆಗಳ ಸ್ಥಾಪನೆ

೩. ವೇತನ ಕಡಿತ

೪. ಉದ್ಯೋಗಗಳ ಹೆಚ್ಚಳ

೫. ರಾಷ್ಟ್ರೀಯ ಆದಾಯದ ಹೆಚ್ಚಳ

೬. ತೆರಿಗೆಗಳು

೭. ಬಡ್ಡಿದರ

೮. ಲಾಭದ ಹೆಚ್ಚಳ

೯. ಅನುಭೋಗ ಇಳಿಕೆ

೧೦. ಹಣದುಬ್ಬರ

**ಆ. ವಿದೇಶಿ ಮೂಲಗಳು**

೧. ರಫ್ತು ವ್ಯಾಪಾರದ ಹೆಚ್ಚಳ

೨. ಆಮದುಗಳ ಕಡಿತ

೩. ವಿದೇಶಿ ಸಹಾಯ

೪. ವಿದೇಶಿ ಸಾಲ

**ಬಡ್ಡಿಯ ಅರ್ಥ :** ಉತ್ಪಾದನೆಯಲ್ಲಿ ಬಳಸಿಕೊಂಡ ಬಂಡವಾಳಕ್ಕೆ ಪ್ರತಿಫಲವಾಗಿ ಅದರ ಒಡೆಯನಿಗೆ ಕೊಡುವ ಪ್ರತಿಫಲವೇ ಬಡ್ಡಿ.

**ಒಟ್ಟು ಬಡ್ಡಿಯ ಅರ್ಥ :** ಸಾಲಗಾರ ಬಂಡವಾಳಗಾರನಿಗೆ ಕೊಡುವ ಒಟ್ಟು ಪ್ರತಿಫಲವೇ ಒಟ್ಟು ಬಡ್ಡಿ

**ನಿವ್ವಳ ಬಡ್ಡಿಯ ಅರ್ಥ :** ಸಾಲಗಾರನು ಕೇವಲ ಬಂಡವಾಳದ ಉಪಯೋಗಕ್ಕಾಗಿ ನೀಡುವ ಪ್ರತಿಫಲ

**ಸಂಘಟನೆಯ ಅರ್ಥ :** ಭೂಮಿ, ಶ್ರಮ ಮತ್ತು ಬಂಡವಾಳಗಳನ್ನು ಒಟ್ಟಿಗೆ ಸೇರಿಸಿ ಉತ್ಪಾದನೆ ಮಾಡುವ ಕಾರ್ಯ ಸಂಘಟನೆಯಾಗಿದೆ.

**ಉದ್ಯಮ ಸಾಹಸಿ :** ಸಂಘಟನೆಯ ಕಾರ್ಯಗಳನ್ನು ನಿರ್ವಹಿಸುವ ವ್ಯಕ್ತಿಯೇ ಉದ್ಯಮ ಸಾಹಸಿ.

**ಉದ್ಯಮ ಸಾಹಸಿಯ ಕಾರ್ಯಗಳು :**

೧. ಯೋಜನೆ

೨. ಉತ್ಪಾದನಾ ಘಟಕಗಳ ಸಂಯೋಜನೆ

೩. ವಸ್ತುವಿನ ಗಾತ್ರ ಮತ್ತು ಗುಣ ನಿರ್ಧರಿಸುವುದು

೪. ಮೇಲ್ವಿಚಾರಣೆ

೫. ವಿತರಣೆ

೬. ಗಂಡಾಂತರದ ಹೊಣೆಗಾರಿಕೆ

೭. ಬದಲಾವಣೆ ಮತ್ತು ಶೋಧನೆ

ಲಾಭದ ಅರ್ಥ : ಉತ್ಪಾದನಾ ಕ್ರಿಯೆಯಲ್ಲಿ ಉದ್ಯಮಸಾಹಸಿಗೆ ದೊರೆಯುವ ಪ್ರತಿಫಲವೇ ಲಾಭ.

ಒಟ್ಟು ಲಾಭದ ಅರ್ಥ : ಒಟ್ಟು ಆದಾಯದಲ್ಲಿ ಉತ್ಪಾದನಾ ವೆಚ್ಚವನ್ನು ಕಳೆದ ನಂತರ ಉಳಿಯುವ ಆದಾಯವೇ ಒಟ್ಟು ಲಾಭ

ನಿವ್ವಳ ಲಾಭದ ಅರ್ಥ : ಉತ್ಪಾದನಾ ಕ್ರಿಯೆಯಲ್ಲಿನ ಎಲ್ಲ ವ್ಯಕ್ತ ಮತ್ತು ಅವ್ಯಕ್ತ ವೆಚ್ಚಗಳನ್ನು ಭರಿಸಿಯಾದ ನಂತರ ಉಳಿಯುವ ಹೆಚ್ಚುವರಿ ಆದಾಯವೇ ನಿವ್ವಲ ಲಾಭ.

## ೩.೮. ಪಾರಿಭಾಷಿಕ ಕೋಶ

ಪೂರೈಕೆ - Supply = ಮಾರಾಟ ಮಾಡಲು ಲಭ್ಯವಿರು ವಸ್ತುಗಳ ಪ್ರಮಾಣ.

ಸಂಗ್ರಹ - Stock = ಮಾರುಕಟ್ಟೆಗೆ ಪೂರೈಸಬಹುದಾದ ವಸ್ತುಗಳ ಪ್ರಮಾಣ.

ಪೂರೈಕೆಯ ಅನುಸೂಚಿ - Supply Schedule = ಪೂರೈಕೆಯಾಗುವ ವಸ್ತುವಿನ ಪ್ರಮಾಣ ಸೂಚಿಸುವ ಪಟ್ಟಿ.

ಉತ್ಪಾದನೆ - Production = ವಸ್ತುವಿನ ಪ್ರಯೋಜನ ಹೆಚ್ಚಿಸಿ ವಿನಿಮಯ ಮೌಲ್ಯ ಹೆಚ್ಚಿಸುವದು.

ಉತ್ಪಾದನಾ ಘಟಕಗಳು - Factors of Production = ಉತ್ಪಾದನಾ ಕ್ರಿಯೆಯಲ್ಲಿ ಭಾಗವಹಿಸುವ ಅಂಶಗಳು.

ಉತ್ಪಾದನಾ ಬಿಂಬಕ - Prodction Function = ಉತ್ಪಾದನಾಂಗಗಳ ಮತ್ತು ಉತ್ಪನ್ನ ಇವುಗಳ ನಡುವಿನ ಸಂಬಂಧ.

ಭೂಮಿ - Land = ನೈಸರ್ಗಿಕ ಸಂಪನ್ಮೂಲ

ಗೇಣಿ - Rent = ಭೂಮಿಯ ಉಪಯೋಗಕ್ಕೆ ಕೊಡುವ ಪ್ರತಿಫಲ

ಅರೆಗೇಣಿ - Quasi Rent = ಅಲ್ಪಾವಧಿಯಲ್ಲಿ ಗಳಿಸುವ ಹೆಚ್ಚುವರಿ ಆದಾಯ

ಆರ್ಥಿಕ ಗೇಣಿ - Economic Rent = ಗೇಣಿದಾರ ಭೂಮಾಲಿಕನಿಗೆ ಕೊಡುವ ಪ್ರತಿಫಲ

ಶ್ರಮ - Labour = ಹಣಕ್ಕಾಗಿ ಕೈಕೊಂಡ ಎಲ್ಲ ಬಗೆಯ ಕಾರ್ಯ.

ಕೂಲಿ - Wage = ಶ್ರಮಕ್ಕೆ ಕೊಡುವ ಪ್ರತಿಫಲ

ನಾಮಮಾತ್ರ ಕೂಲಿ - Nominal Wage = ಹಣದ ರೂಪದಲ್ಲಿ ಕೊಡುವ ಕೂಲಿ.

ನೈಜ ಕೂಲಿ - Real Wage = ಹಣ ರೂಪಿ ಕೂಲಿಯ ಕೊಳ್ಳುವ ಸಾಮರ್ಥ್ಯ.

ಬಂಡವಾಳ - Capital = ಉತ್ಪಾದನಾ ಚಟುವಟಿಕೆಗಳಲ್ಲಿ ಸಹಾಯಕವಾಗುವ ಮಾನವ ನಿರ್ಮಿತ ವಸ್ತುಗಳು

ಬಡ್ಡಿ - Interest = ಬಂಡವಾಳವನ್ನು ಬಳಸಿಕೊಂಡದ್ದಕ್ಕಾಗಿ ಸಿಗುವ ಪ್ರತಿಫಲ

ಒಟ್ಟು ಬಡ್ಡಿ - Gross Interest = ಸಾಲಗಾರ ಬಂಡವಾಳದ ಒಡೆಯನಿಗೆ ಕೊಡುವ ಒಟ್ಟು ಪ್ರತಿಫಲ

ನಿವ್ವಳ ಬಡ್ಡಿ - Net Interest = ಬಂಡವಾಳದ ಬಳಕೆಗೆ ಕೊಡುವ ಪ್ರತಿಫಲ

ಸಂಘಟನೆ - Organisation = ಭೂಮಿ, ಶ್ರಮ ಮತ್ತು ಬಂಡವಾಳವನ್ನು ಒಟ್ಟಿಗೆ ಸೇರಿಸಿ ಉತ್ಪಾದನೆ ಮಾಡುವ ಕ್ರಿಯೆ.

ಉದ್ಯಮಸಾಹಸಿ - Entrepreneur =ಸಂಘಟನೆಯ ಕಾರ್ಯ ನಿರ್ವಹಿಸುವವ

ಲಾಭ - Profit = ಉದ್ಯಮಸಾಹಸಿಗೆ ದೊರೆಯುವ ಪ್ರತಿಫಲ

ಒಟ್ಟು ಲಾಭ - Gross Profit = ಒಟ್ಟು ಆದಾಯ - ಒಟ್ಟು ವ್ಯಕ್ತ ವೆಚ್ಚ

ನಿವ್ವಳ ಲಾಭ - Net Profit = ಒಟ್ಟು ಲಾಭ - ಒಟ್ಟು ಅವ್ಯಕ್ತ ವೆಚ್ಚ

ವ್ಯಕ್ತ ವೆಚ್ಚ - Explicit Cost = ನಗದು ರೂಪ ತಾಳುವ ವೆಚ್ಚ

ಅವ್ಯಕ್ತ ವೆಚ್ಚ - Implicil Cost = ನಗದು ರೂಪ ತಾಳದ ವೆಚ್ಚ

## ೩.೧೦. ಪ್ರಶ್ನೆಗಳು

**I.** ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ. (೧ ಅಂಕಗಳು)

೧. ಪೂರೈಕೆ ಎಂದರೇನು?
೨. ಪೂರೈಕೆಯ ನಿಯಮ ತಿಳಿಸಿ.
೩. ಸಂಗ್ರಹ ಎಂದರೇನು?
೪. ಪೂರೈಕೆಯ ಬಿಂಬಕ ಎಂದರೇನು?
೫. ವೈಯಕ್ತಿಕ ಪೂರೈಕೆಯ ಅನುಸೂಚಿ ಎಂದರೇನು?
೬. ಮಾರುಕಟ್ಟೆ ಪೂರೈಕೆಯ ಅನುಸೂಚಿ ಎಂದರೇನು?
೭. ಉತ್ಪಾದನೆ ಎಂದರೇನು?
೮. ಉತ್ಪಾದನಾ ಘಟಕಗಳು ಎಂದರೇನು?
೯. ಉತ್ಪಾದನಾ ಘಟಕಗಳನ್ನು ಹೆಸರಿಸಿ.
೧೦. ಉತ್ಪಾದನಾ ಬಿಂಬಕ ಎಂದರೇನು?
೧೧. ಭೂಮಿ ಎಂದರೇನು?
೧೨. ಭೂಮಿಯ ಯಾವುದಾದರೊಂದು ಲಕ್ಷಣ ತಿಳಿಸಿ.
೧೩. ಇಳಿಮುಖ ಪ್ರತಿಫಲ ನಿಯಮವನ್ನು ಮೊಟ್ಟಮೊದಲು ವಿವರಿಸಿದ ಅರ್ಥಶಾಸ್ತ್ರಜ್ಞ ಯಾರು?
೧೪. ಇಳಿಮುಖ ಪ್ರತಿಫಲ ನಿಯಮವನ್ನು ವ್ಯವಸ್ಥಿತ ರೀತಿಯಲ್ಲಿ ಅಭಿವೃದ್ಧಿಪಡಿಸಿದ ಅರ್ಥಶಾಸ್ತ್ರಜ್ಞ ಯಾರು?
೧೫. ಸೀಮಾಂತ ಉತ್ಪನ್ನ ಎಂದರೇನು?
೧೬. ಗೇಣಿಯ ಅರ್ಥ ತಿಳಿಸಿ.
೧೭. ಒಪ್ಪಂದದ ಬಾಡಿಗೆ ಎಂದರೇನು?
೧೮. ಒಪ್ಪಂದದ ಬಾಡಿಗೆಯ ಒಂದು ಉದಾಹರಣೆ ಕೊಡಿ.
೧೯. ಆರ್ಥಿಕ ಗೇಣಿ ಎಂದರೇನು?
೨೦. ಅರೆಗೇಣಿಯ ಅರ್ಥ ತಿಳಿಸಿ.
೨೧. ಶ್ರಮ ಎಂದರೆನು?
೨೨. ಶ್ರಮದ ಒಂದು ಲಕ್ಷಣ ತಿಳಿಸಿ.
೨೩. ಶ್ರಮ ಯಾಕೆ ಬೇಗನೆ ನಶಿಸಿ ಹೋಗುತ್ತದೆ?
೨೪. ಜನಸಂಖ್ಯಾ ಸಿದ್ಧಾಂತ ಕುರಿತಂತೆ ಮಾಲ್ಥಸ್ ಬರೆದ ಕೃತಿ ಯಾವುದು?
೨೫. ಜನಸಂಖ್ಯಾ ಪರಿವರ್ತನೆ ಎಂದರೇನು?
೨೬. ಜನಸಂಖ್ಯಾ ಪರಿವರ್ತನ ಸಿದ್ಧಾಂತದ ಪ್ರಕಾರ ಜನಸಂಖ್ಯೆಯ ಬೆಳವಣಿಗೆಯು

ಎಷ್ಟು ಹಂತಗಳಲ್ಲಿ ಪರಿವರ್ತನೆ ಹೊಂದುತ್ತದೆ?

೨೭. ಕೂಲಿಯ ಅರ್ಥ ಕೊಡಿ.

೨೮. ನೈಜ ಕೂಲಿ ಎಂದರೇನು?

೨೯. ನಾಮಮಾತ್ರ ಕೂಲಿ ಎಂದರೆನು?

೩೦. ಬಂಡವಾಳದ ಅರ್ಥವನ್ನು ಹೇಳಿ.

೩೧. ಭೂಮಿ ಮತ್ತು ಶ್ರಮದಿಂದ ಹುಟ್ಟಿದ ಉತ್ಪಾದನಾಂಗ ಯಾವುದು?

೩೨. ಸ್ಥಿರ ಬಂಡವಾಳ ಎಂದರೇನು?

೩೩. ಸ್ಥಿರ ಬಂಡವಾಳದ ಒಂದು ಉದಾಹರಣೆ ಕೊಡಿ.

೩೪. ಚರ ಬಂಡವಾಳ ಎಂದರೇನು?

೩೫. ಮತ್ತೆ ಮತ್ತೆ ಉಪಯೋಗಿಸಲು ಬಾರದಿರುವ ಬಂಡವಾಳ ಯಾವುದು?

೩೬. ಚರ ಬಂಡವಾಳದ ಒಂದು ಉದಾಹರಣೆ ಕೊಡಿ.

೩೭. ಭೌತಿಕ ಬಂಡವಾಳ ಎಂದರೇನು?

೩೮. ಹಣಕಾಸಿನ ಬಂಡವಾಳದ ಅರ್ಥ ಕೊಡಿ.

೩೯. ಬಂಡವಾಳ ಸಂಚಯನ ಎಂದರೇನು?

೪೦. ಬಂಡವಾಳ ಸಂಚಯನದ ಒಂದು ಮೂಲವವನ್ನು ತಿಳಿಸಿ.

೪೧. ಬಡ್ಡಿಯ ಅರ್ಥ ಕೊಡಿ.

೪೨. ಒಟ್ಟು ಬಡ್ಡಿ ಎಂದರೇನು?

೪೩. ನಿವ್ವಳ ಬಡ್ಡಿಯ ಅರ್ಥ ಹೇಳಿ.

೪೪. ರಾಷ್ಟ್ರೀಯ ಆದಾಯ ಎಂದರೇನು?

೪೫. ಸಂಘಟನೆಯ ಅರ್ಥ ಹೇಳಿ.

೪೬. ಉದ್ಯಮ ಸಾಹಸಿ ಯಾರು?

೪೭. ಉದ್ಯಮ ಸಾಹಸಿಯ ಯಾವುದಾದರೊಂದು ಕಾರ್ಯ ತಿಳಿಸಿ.

೪೮. ಲಾಭ ಎಂದರೇನು?

೪೯. ಒಟ್ಟು ಲಾಭದ ಅರ್ಥ ತಿಳಿಸಿ.

೫೦. ನಿವ್ವಳ ಲಾಭ ಎಂದರೇನು?

**II.** ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ. (೨ ಅಂಕಗಳು)

೫೧. ಪೂರೈಕೆ ಎಂದರೇನು? ಅದರ ನಿಯಮ ತಿಳಿಸಿ.

೫೨. ಪೂರೈಕೆ ಮತ್ತು ಸಂಗ್ರಹಗಳ ನಡುವಿನ ವ್ಯತ್ಯಾಸ ತಿಳಿಸಿ.

೫೩. ಪೂರೈಕೆಯ ಅನುಸೂಚಿ ಎಂದರೇನು? ಅದರ ಪ್ರಕಾರಗಳು ಯಾವುವು?

೫೪. ಒಂದು ಕಾಲ್ಪನಿಕ ಮಾರುಕಟ್ಟೆ, ಪೂರೈಕೆಯ ಅನುಸೂಚಿಯನ್ನು ಸಿದ್ಧಪಡಿಸಿರಿ.

೫೫. ಉತ್ಪಾದನಾ ಘಟಕಗಳು ಎಂದರೇನು? ಅವುಗಳನ್ನು ಹೆಸರಿಸಿ.

೫೬. ಪೂರೈಕೆ ಬಿಂಬಕದ ಸಮೀಕರಣ ತಿಳಿಸಿ.
೫೭. ಉತ್ಪಾದನಾ ಬಿಂಬಕದ ಸಮೀಕರಣ ತಿಳಿಸಿ.
೫೮. ಪ್ರತಿಫಲದ ಪ್ರಮಾಣದ ಅರ್ಥ ಕೊಡಿ.
೫೯. ಭೂಮಿಯ ಯಾವುದಾದರೂ ನಾಲ್ಕು ಗುಣಧರ್ಮಗಳನ್ನು ತಿಳಿಸಿ.
೬೦. ಇಳಿಮುಖ ಪ್ರತಿಫಲ ನಿಯಮದ ಸಾರಾಂಶ ತಿಳಿಸಿ.
೬೧. ಇಳಿಮುಖ ಪ್ರತಿಫಲ ನಿಯಮದ ಒಂದು ಕಾಲ್ಪನಿಕ ಅನುಸೂಚಿ ಸಿದ್ಧಪಡಿಸಿ.
೬೨. ಗೇಣಿ ಪದದ ಅರ್ಥ ವಿವರಿಸಿ.
೬೩. ಒಪ್ಪಂದದ ಬಾಡಿಗೆ ಮತ್ತು ಆರ್ಥಿಕ ಗೇಣಿಗೂ ಇರುವ ವ್ಯಾತ್ಯಾಸ ತಿಳಿಸಿ.
೬೪. ಆರ್ಥಿಕ ಗೇಣಿ ಮತ್ತು ಅರೆಗೇಣಿಯ ಮಧ್ಯೆ ಇರುವ ಎರಡು ವ್ಯತ್ಯಾಸ ತಿಳಿಸಿ.
೬೫. ಶ್ರಮದ ಅರ್ಥ ವಿವರಿಸಿ.
೬೬. ಶ್ರಮದ ನಾಲ್ಕು ಲಕ್ಷಣಗಳನ್ನು ತಿಳಿಸಿ.
೬೭. ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತದ ಆಹಾರ ಮತ್ತು ಜನಸಂಖ್ಯಾ ಹೆಚ್ಚಳದ ಸ್ವರೂಪ ವಿವರಿಸಿ.
೬೮. ಜನಸಂಖ್ಯಾ ಹೆಚ್ಚಳವನ್ನು ನಿಂಯತ್ರಿಸಲು ಮಾಲ್ಥಸ್ ಸೂಚಿಸಿದ ನಿವಾರಣ ಪ್ರತಿಬಂಧಕಗಳು ಯಾವುವು?
೬೯. ಮಾಲ್ಥಸ್‌ನ ಜನಸಂಖ್ಯಾ ಸಿದ್ದಾಂತದ ಊಹೆಗಳು ಯಾವುವು?
೭೦. ಜನಸಂಖ್ಯಾ ಪರಿವರ್ತನ ಸಿದ್ದಾಂತದ ವಿವಿಧ ಹಂತಗಳು ಯಾವುವು?
೭೧. ನೈಜ ಕೂಲಿ ಮತ್ತು ನಾಮಮಾತ್ರ ಕೂಲಿಗಳಲ್ಲಿಯ ವ್ಯತ್ಯಾಸ ತಿಳಿಸಿ.
೭೨. ಸ್ಥಿರ ಮತ್ತು ಚರ ಬಂಡಾಳಗಳ ವ್ಯತ್ಯಾಸ ತಿಳಿಸಿ.
೭೩. ಬಂಡವಾಳದ ನಾಲ್ಕು ಲಕ್ಷಣಗಳನ್ನು ಹೆಸರಿಸಿ.
೭೪. ಬಂಡವಾಳ ಸಂಚಯನದ ನಾಲ್ಕು ಮೂಲಗಳನ್ನು ತಿಳಿಸಿ.
೭೫. ಬಂಡವಾಳ ಸಂಚಯನದ ನಾಲ್ಕು ಆಂತರಿಕ ಮೂಲಗಳನ್ನು ತಿಳಿಸಿ.
೭೬. ಭೌತಿಕ ಮತ್ತು ಹಣಕಾಸಿನ ಬಂಡವಾಳದ ವ್ಯತ್ಯಾಸ ತಿಳಿಸಿ.
೭೭. ಒಟ್ಟು ಬಡ್ಡಿ ಮತ್ತು ನಿವ್ವಳ ಬಡ್ಡಿಯ ವ್ಯತ್ಯಾಸ ತಿಳಿಸಿ.
೭೮. ಉದ್ಯಮಸಾಹಸಿಯ ನಾಲ್ಕು ಕಾರ್ಯಗಳನ್ನು ತಿಳಿಸಿ.
೭೯. ಸಂಘಟನೆ ಪದದ ಅರ್ಥ ಬರೆಯಿರಿ.
೮೦. ಒಟ್ಟುಲಾಭ ಮತ್ತು ನಿವ್ವಳ ಲಾಭದ ವ್ಯತ್ಯಾಸ ತಿಳಿಸಿ.

**III.** ಕೆಳಗಿನ ಪ್ರಶ್ನೆಗಳಿಗೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ. (೫ ಅಂಕಗಳು)

೮೧. ಪೂರೈಕೆಯ ನಿಯಮವನ್ನು ಅನುಸೂಚಿ ಮತ್ತು ರೇಖಾಚಿತ್ರದ ಸಹಾಯದಿಂದ ವಿವರಿಸಿ.
೮೨. ಪೂರೈಕೆಯ ಬಿಂಬಕವನ್ನು ವಿವರಿಸಿ.

೮೩. ಉತ್ಪಾದನಾ ಬಿಂಬಕವನ್ನು ವಿವರಿಸಿ.

೮೪. ಭೂಮಿ ಎಂದರೇನು? ಅದರ ಗುಣಧರ್ಮಗಳನ್ನು ವಿವರಿಸಿ.

೮೫. ಇಳಿಮುಖ ಪ್ರತಿಫಲ ನಿಯಮವನ್ನು ಭೂಮಿಗೆ ಅನ್ವಯಿಸಿ ಬರೆಯಿರಿ.

೮೬. ಶ್ರಮ ಎಂದರೇನು? ಅದರ ಲಕ್ಷಣಗಳನ್ನು ವಿವರಿಸಿ.

೮೭. ಜನಸಂಖ್ಯಾ ಪರಿವರ್ತನ ಸಿದ್ಧಾಂತವನ್ನು ವಿವರಿಸಿ.

೮೮. ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತ ಕುರಿತು ಟಿಪ್ಪಣಿ ಬರೆಯಿರಿ.

೮೯. ಬಂಡವಾಳ ಎಂದರೇನು? ಅದರ ರಚನೆ ಕುರಿತು ಬರೆಯಿರಿ.

೯೦. ಬಂಡವಾಳ ರಚನೆಯ ಮೂಲಗಳನ್ನು ವಿವರಿಸಿ.

೯೧. ಬಂಡವಾಳದ ಪ್ರಕಾರಗಳನ್ನು ಚರ್ಚಿಸಿ.

೯೨. ಪ್ರತಿಫಲದ ಪ್ರಮಾಣಗಳ ನಿಯಮವನ್ನು ವಿವರಿಸಿ.

೯೩. ಉದ್ಯಮ ಸಾಹಸಿಯ ಕಾರ್ಯಗಳನ್ನು ವಿವರಿಸಿ.

೯೪. ಲಾಭ ಎಂದರೇನು? ಒಟ್ಟು ಲಾಭ ಮತ್ತು ನಿವ್ವಳ ಲಾಭಗಳ ವ್ಯತ್ಯಾಸ ತಿಳಿಸಿ.

**IV. ಕೆಳಗಿನ ಪ್ರಶ್ನೆಗಳಿಗೆ ೪೦ ವಾಕ್ಯಗಳಲ್ಲಿ ಉತ್ತರಿಸಿ. (೧೦ ಅಂಕಗಳು)**

೯೫. ಪೂರೈಕೆ ಎಂದರೇನು? ಪೂರೈಕೆಯ ನಿಯಮವನ್ನು ಅನುಸೂಚಿ ಮತ್ತು ರೇಖಾಚಿತ್ರದ ಸಹಾಯದಿಂದ ವರ್ಣಿಸಿ.

೯೬. ಇಳಿಮುಖ ಪ್ರತಿಫಲ ನಿಯಮವನ್ನು ಅನುಸೂಚಿ ಮತ್ತು ರೇಖಾಚಿತ್ರದ ಸಹಾಯದಿಂದ ವಿವರಿಸಿ.

೯೭. ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತವನ್ನು ವಿವರಿಸಿ, ಚರ್ಚಿಸಿ.

೯೮. ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತವನ್ನು ವಿಮರ್ಶಾತ್ಮಕವಾಗಿ ವಿವರಿಸಿ.

೯೯. ಜನಸಂಖ್ಯಾ ಪರಿವರ್ತನಾ ಸಿದ್ಧಾಂತವನ್ನು ವಿವರಿಸಿ.

೧೦೦. ಬಂಡವಾಳ ರಚನೆ ಎಂದರೇನು? ಬಂಡವಾಳ ರಚನೆಯ ಆಂತರಿಕ ಮತ್ತು ವಿದೇಶಿ ಮೂಲಗಳನ್ನು ವಿವರಿಸಿ.

೧೦೧. ಉದ್ಯಮ ಸಾಹಸಿಯ ಕಾರ್ಯಗಳನ್ನು ವಿವರಿಸಿ.

## ಅಧ್ಯಾಯ ೪

# ಉತ್ಪಾದನಾ ವೆಚ್ಚ

ಉದ್ಯಮ ಸಂಸ್ಥೆಗಳು ಲಾಭ ಗಳಿಸುವ ಉದ್ದೇಶದಿಂದ ಉತ್ಪಾದನೆ ಕೈಗೊಳ್ಳುತ್ತವೆ. ಲಾಭವು ಆ ಸಂಸ್ಥೆಯ ಉತ್ಪಾದನಾ ವೆಚ್ಚ ಮತ್ತು ಆದಾಯವನ್ನು ಅವಲಂಬಿಸಿರುತ್ತದೆ. ಮಾರುಕಟ್ಟೆಯಲ್ಲಿ ವಸ್ತುಗಳ ಬೆಲೆಯನ್ನು ಅದರ ಉತ್ಪಾದನಾ ವೆಚ್ಚ ಆಧರಿಸಿ ನಿರ್ಧರಿಸಲಾಗುತ್ತದೆ. ವಸ್ತುಗಳ ಬೆಲೆ ಅದರ ನೀಡಿಕೆಯನ್ನು ನಿರ್ಧರಿಸುತ್ತದೆ.

ಆದ್ದರಿಂದ ಉತ್ಪಾದನಾ ವೆಚ್ಚ ಮತ್ತು ಆದಾಯಗಳು ಆರ್ಥಿಕ ಕ್ರಿಯೆಗಳನ್ನು ನಿರ್ದೇಶಿಸುವ ಪ್ರಮುಖ ಅಂಶಗಳಾಗಿವೆ. ಉತ್ಪಾದನಾ ವೆಚ್ಚವನ್ನು ಕಡಿಮೆ ಮಾಡಿ ಲಾಭ ಹೆಚ್ಚಿಸಿಕೊಳ್ಳಲು ಅಥವಾ ಹೆಚ್ಚಿನ ಪೈಪೋಟಿ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಉದ್ಯಮ ಸಂಸ್ಥೆಗಳು ಶ್ರಮಿಸುತ್ತವೆ.

ಆದ್ದರಿಂದ ವೆಚ್ಚ ಮತ್ತು ಆದಾಯದ ಅರಿವು ಹಾಗೂ ಅದರ ಬಳಕೆ ಬಹಳ ಪ್ರಮುಖವಾದುದು.

**ಉತ್ಪಾದನಾ ವೆಚ್ಚ :** ನಿರ್ದಿಷ್ಟ ವಸ್ತುವಿನ ಉತ್ಪಾದನೆಗೆ ತಗಲುವ ಹಣದ ವೆಚ್ಚವು ಉತ್ಪಾದನಾ ವೆಚ್ಚ. ವಸ್ತುವನ್ನು ಉತ್ಪಾದಿಸಿ ಅಂತಿಮ ಅನುಭೋಗಿಗಳಿಗೆ ತಲುಪಿಸುವವರೆಗಿನ ಎಲ್ಲಾ ವೆಚ್ಚಗಳನ್ನು ಒಟ್ಟಾಗಿ ಉತ್ಪಾಧನಾ ವೆಚ್ಚ ಎನ್ನಬಹುದು. ಉತ್ಪಾದನಾಂಗಗಳನ್ನು ಬಳಸಲು ಅವುಗಳಿಗೆ ನೀಡುವ ಪ್ರತಿಫಲ, ಕಾರ್ಮಿಕರಿಗೆ ನೀಡಿದ ಕೂಲಿ, ಕಚ್ಚಾವಸ್ತುಗಳನ್ನು ಪಡೆಯಲು ಮಾಡಿದ ವೆಚ್ಚ, ಬಂಡವಾಳದ ಮೇಲಿನ ಬಡ್ಡಿ, ಉತ್ಪಾದಕ ವಸ್ತುಗಳು ಹಾಗೂ ವ್ಯವಸ್ಥೆಗಳ ಸವಕಳಿ ವೆಚ್ಚ, ವಿದ್ಯುತ್, ಇಂಧನಗಳು, ಜಾಹಿರಾತುಗಳು ಮುಂತಾದ ವೆಚ್ಚಗಳನ್ನು ಇದು ಒಳಗೊಂಡಿರುತ್ತದೆ. ಉದ್ದಿಮೆಗಳ ಮೂಲ ಉದ್ದೇಶ ಲಾಭ ಗಳಿಕೆ. ಇದು ಉತ್ಪಾದನಾ ವೆಚ್ಚವನ್ನು ಅವಲಂಬಿಸಿರುತ್ತದೆ. ಉತ್ಪಾದನೆಯ ವೆಚ್ಚವು ಉತ್ಪಾದನೆಯ ಪ್ರಮಾಣ, ಲಾಭದ ಪ್ರಮಾಣ, ಉತ್ಪಾದನಾ ವಿಧಾನ ಹಾಗೂ ತಂತ್ರಜ್ಞಾನದ ಬಳಕೆ ಮುಂತಾದ ಅಂಶಗಳನ್ನು ಅವಲಂಬಿಸಿದೆ.

## ೪.೧. ವೆಚ್ಚದ ಪರಿಕಲ್ಪನೆಗಳು

**೧. ಹಣದ ವೆಚ್ಚ**

ಒಂದು ವಸ್ತುವಿನ ಉತ್ಪಾದನೆಗೆ ಖರ್ಚು ಮಾಡಿದ ಹಣದ ಒಟ್ಟು ಮೊತ್ತ ಹಣದ ವೆಚ್ಚ. ಇದು ವಸ್ತುವಿನ ಉತ್ಪಾದನೆಯಲ್ಲಿ ಸೇರಿರುವ ಎಲ್ಲಾ ವಿವಿಧ ಅಂಶಗಳ ಮೇಲೆ ಉದ್ಯಮವು ಮಾಡಿರುವ ಒಟ್ಟು ಹಣದ ವೆಚ್ಚ. ಉತ್ಪಾದನೆಯಲ್ಲಿ ತೊಡಗಿರುವ ಕಚ್ಚಾ ಸಾಮಗ್ರಿಗಳಿಗೆ ನೀಡಿದ ಬೆಲೆ, ಕಾರ್ಮಿಕರ ಮತ್ತು ನಿರ್ವಹಣಾ ಸಿಬ್ಬಂದಿಯ ವೇತನ, ಕಟ್ಟಡದ ಬಾಡಿಗೆ, ಯಂತ್ರೋಪಕರಣಗಳು ಮತ್ತು ಸ್ಥಾವರಕ್ಕೆ ಪಡೆದಿರುವ ಬಂಡವಾಳದ ಮೇಲಿನ ಬಡ್ಡಿ, ವಿದ್ಯುತ್ ಮತ್ತು ಇಂಧನದ ಮೇಲಿನ ವೆಚ್ಚ, ವಿಮೆ, ಸಾರಿಗೆ, ಪ್ರಚಾರ ಮುಂತಾದ ವೆಚ್ಚಗಳು ಹಣದ ವೆಚ್ಚದಲ್ಲಿ ಸೇರಿರುತ್ತವೆ.

ಹಣದ ವೆಚ್ಚದಲ್ಲಿ ವ್ಯಕ್ತ ವೆಚ್ಚಗಳು ಮತ್ತ ಅವ್ಯಕ್ತ ವೆಚ್ಚಗಳು ಸೇರಿರುತ್ತವೆ.

ವ್ಯಕ್ತ ವೆಚ್ಚಗಳು + ಅವ್ಯಕ್ತ ವೆಚ್ಚಗಳು = ಹಣದ ವೆಚ್ಚ

**ಅ. ವ್ಯಕ್ತ ವೆಚ್ಚಗಳು (ಪಾವತಿ ಮಾಡಿದ ವೆಚ್ಚಗಳು) :** ಒಂದು ಉದ್ಯಮವು ಕೊಂಡಿರುವ ಅಥವಾ ಬಾಡಿಗೆ ಆಧಾರದ ಮೇಲೆ ಪಡೆದಿರುವ ಉತ್ಪಾದನಾ ಸಂಪನ್ಮೂಲಗಳಿಗೆ ಮಾಡಿರುವ ಪಾವತಿಗಳು ಹಣದ ರೂಪದಲ್ಲಿದ್ದು ಸ್ಪಷ್ಟವಾಗಿ ಲೆಕ್ಕದಲ್ಲಿ ನಮೂದಿಸಲಾಗಿರುತ್ತದೆ. ಇವು ವ್ಯಕ್ತ ವೆಚ್ಚಗಳು. ಕೆಲಸಗಾರರಿಗೆ ನೀಡಿದ ವೇತನ ಮತ್ತು ಕೂಲಿ, ಕಚ್ಚಾ ವಸ್ತುಗಳು ಮತ್ತು ಅರೆ ಉತ್ಪಾದಿತ ವಸ್ತುಗಳಿಗೆ ನೀಡಿದ ಬೆಲೆ, ಬಂಡವಾಳದ ಮೇಲಿನ ಬಡ್ಡಿ, ಸವಕಳಿ ವೆಚ್ಚಗಳು, ಮಾರಾಟ ವೆಚ್ಚಗಳು, ಉದ್ಯಮಿಯು ವ್ಯಾಪಾರದಲ್ಲಿ ಮುಂದುವರೆಯಲು ಅಗತ್ಯವಾದ ಸಾಮಾನ್ಯ ಮಟ್ಟದ ಲಾಭ ಇವು ವ್ಯಕ್ತ ವೆಚ್ಚದಲ್ಲಿ ಸೇರಿರುತ್ತವೆ.

**ಆ. ಅವ್ಯಕ್ತ ವೆಚ್ಚಗಳು :** ಉತ್ಪಾದನೆಯಲ್ಲಿ ಬಳಸಲಾಗಿರುವ ಉತ್ಪಾದಕನ ಸ್ವಂತ ಸಂಪನ್ಮೂಲಗಳು, ಶ್ರಮ ಹಾಗೂ ನಿರ್ವಹಣಾ ಜವಾಬ್ದಾರಿಗಳಿಗೆ ತಗಲುವ ವೆಚ್ಚವನ್ನು ಪ್ರತ್ಯೇಕವಾಗಿ ಗಣನೆಗೆ ತೆಗೆದುಕೊಂಡಿರುವುದಿಲ್ಲ ಹಾಗೂ ಲೆಕ್ಕದಲ್ಲಿ ನಮೂದಿಸಿರುವುದಿಲ್ಲ. ಇವು ಅವ್ಯಕ್ತ ವೆಚ್ಚ ಎನಿಸುತ್ತವೆ. ಉತ್ಪಾದಕನ ಸ್ವಂತ ಭೂಮಿ ಹಾಗೂ ಕಟ್ಟಡದ ಬಾಡಿಗೆ ಆತನ ಸ್ವಂತ ಬಂಡವಾಳದ ಮೇಲಿನ ಬಡ್ಡಿ ಅವನು ಮತ್ತು ಅವನ ಕುಟುಂಬದ ಸದಸ್ಯರು ಉದ್ಯಮ ನಿರ್ವಹಣೆಗೆ ತೊಡಗಿಸಿರುವ ಶ್ರಮಕ್ಕೆ ವೇತನ ಮುಂತಾದ ವೆಚ್ಚಗಳು ಅವ್ಯಕ್ತ ವೆಚ್ಚಗಳಲ್ಲಿ ಸೇರಿರುತ್ತವೆ. ಸಾಮಾನ್ಯವಾಗಿ ಈ ಎಲ್ಲಾ ವೆಚ್ಚಗಳನ್ನು ಉದ್ಯಮಿಯ ಲಾಭದಲ್ಲಿ ಸೇರಿಸಿ ಪಡೆಯಲಾಗುತ್ತದೆ. ಆದರೆ ಈ ವೆಚ್ಚ ಗಳನ್ನು ಸ್ವತಂತ್ರವಾಗಿ ವ್ಯಕ್ತಪಡಿಸಿರುವುದಿಲ್ಲ ಹಾಗೂ ಲೆಕ್ಕಕ್ಕೆ ತೆಗೆದುಕೊಂಡಿರುವುದಿಲ್ಲ.

**೨. ನೈಜ ವೆಚ್ಚ**

ಒಂದು ವಸ್ತುವಿನ ಉತ್ಪಾದನೆಯಲ್ಲಿ ತೊಡಗಿರುವ ಉತ್ಪಾದನಾಂಗಗಳಿಗೆ -

ಸಂಪನ್ಮೂಲಗಳಿಗೆ ಒಟ್ಟು ಉತ್ಪಾದನೆಯಲ್ಲಿ ಅವುಗಳ ಪಾಲನ್ನು ಪರಿಗಣಿಸಿ ಹಣದ ರೂಪದ ಪ್ರತಿಫಲ ನೀಡಿ ಹಣದ ವೆಚ್ಚವನ್ನು ಪರಿಗಣಿಸಲಾಗುತ್ತದೆ. ಆದರೆ ಇಂತಹ ಉತ್ಪಾದನೆಯ ಹಿಂದಿರುವ ಹಲವರ ತ್ಯಾಗ, ಪರಿಶ್ರಮ, ನೋವು-ನಲಿವುಗಳ ಸಂಪೂರ್ಣ ಪರಿಗಣನೆ ಮಾಡಿರುವುದಿಲ್ಲ. ಆದ್ದರಿಂದ ಒಂದು ವಸ್ತುವಿನ ಉತ್ಪಾದನೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಬಳಸಲಾದ ಕಾರ್ಮಿಕ, ಬಂಡವಾಳಗಾರ / ಉದ್ಯಮಿಯ ಸಂಪೂರ್ಣ ಪರಿಶ್ರಮ, ತ್ಯಾಗ ಆ ವಸ್ತುವಿನ ನೈಜವೆಚ್ಚವಾಗಿರುತ್ತದೆ. ಡಾ. ಮಾರ್ಷಲ್ ಅವರ ಪ್ರಕಾರ ಒಂದು ವಸ್ತುವಿನ ನೈಜ ಉತ್ಪಾದನಾ ವೆಚ್ಚವನ್ನು ವ್ಯಕ್ತಪಡಿಸುವುದು ಅದರಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ತೊಡಗಿಸಿರುವ ಕಾರ್ಮಿಕರ ಪರಿಶ್ರಮ, ಅದಕ್ಕೆ ತೊಡಗಿಸಿರುವ ಬಂಡವಾಳವನ್ನು ರೂಪಿಸಲು ಮಾಡಿರುವ ತ್ಯಾಗ ಮತ್ತು ಬಲಿದಾನದ ರೂಪದಲ್ಲಿಯೆ ವಿನಾ ಹಣದಲ್ಲಿ ಅಲ್ಲ.

ಉತ್ಪಾದನಾಂಗಗಳಿಗೆ ಹಣದ ರೂಪದ ಪ್ರತಿಫಲ ನೀಡಲಾಗುತ್ತದೆಯಾದರೂ ಅದು ಅವುಗಳ ನೈಜ ಪರಿಶ್ರಮ, ತ್ಯಾಗಗಳಿಗೆ ಸಮನಾಗಿರುವ ಖಾತ್ರಿ ಇಲ್ಲ. ಉತ್ಪಾದನಾಂಗಗಳ ತ್ಯಾಗ ಮತ್ತು ಪರಿಶ್ರಮಗಳನ್ನು ನಿಖರವಾಗಿ ಅಳೆಯಲು ಹಾಗೂ ಹಣದ ರೂಪದಲ್ಲಿ ವ್ಯಕ್ತಪಡಿಸುವುದು ಕಷ್ಟ. ಆದ್ದರಿಂದ ನೈಜ ವೆಚ್ಚದ ಪರಿಕಲ್ಪನೆ ಹೆಚ್ಚು ಆಚರಣಾ ಯೋಗ್ಯವಾಗಿಲ್ಲ.

**೩. ಸದಾವಕಾಶ ವೆಚ್ಚ ಮತ್ತು ವರ್ಗಾವಣೆ ವೆಚ್ಚ**

ಸಂಪನ್ಮೂಲಗಳು ಮಿತವಾಗಿದ್ದು ಕೊರತೆ ಇರುವುದರಿಂದ ಬೇಕಾದ ಎಲ್ಲಾ ವಸ್ತುಗಳನ್ನು ಉತ್ಪಾದಿಸಲು ಸಾಧ್ಯವಿಲ್ಲ. ಅಂದರೆ ಈ ಸಂಪನ್ಮೂಲಗಳನ್ನು ಕೆಲವು ವಸ್ತುಗಳ ಉತ್ಪಾದನೆಗೆ ಬಳಸಿದರೆ ಇತರೆ ವಸ್ತುಗಳ ಉತ್ಪಾದನೆಗೆ ಅವು ದೊರಕುವುದಿಲ್ಲ ಅಥವಾ ಒಂದು ವಸ್ತುವಿನ ಉತ್ಪಾದನೆಗೆ ಕೆಲವು ಸಂಪನ್ಮೂಲಗಳನ್ನು ಬಳಸಬೇಕಾದರೆ, ಇತರೆ ವಸ್ತುಗಳ ಉತ್ಪಾದನೆಯಿಂದ ಅವುಗಳನ್ನು ಹಿಂತೆಗೆದುಕೊಳ್ಳಬೇಕಾಗುತ್ತದೆ.

"ಒಂದು ವಸ್ತುವನ್ನು ಉತ್ಪಾದಿಸುವ ಸಲುವಾಗಿ ಕೈಬಿಡಲಾದ ಅಥವಾ ಅವಕಾಶ ತಪ್ಪಿಹೋದ ಇತರೆ ಅತ್ಯುತ್ತಮ ಪರ್ಯಾಯ ವಸ್ತುವೇ ಸದರಿ ವಸ್ತುವಿನ ಸದಾವಕಾಶ ವೆಚ್ಚ."

ಉದಾಹರಣೆಗೆ : ಒಬ್ಬ ವ್ಯಕ್ತಿಯು ಒಂದು ಪುಸ್ತಕವನ್ನು ಕೊಳ್ಳುವ ಅಥವಾ ಒಂದು ಜೊತೆ ಪಾದರಕ್ಷೆ ಕೊಳ್ಳುವುದರ ನಡುವೆ ಆಯ್ಕೆ ಮಾಡಿ, ಪುಸ್ತಕವನ್ನು ಕೊಳ್ಳುವುದಾದರೆ ಅದರ ಸದವಕಾಶ ವೆಚ್ಚ ಒಂದು ಜೊತೆ ಪಾದರಕ್ಷೆ.

ಉದಾಹರಣೆಗೆ : ಒಂದು ತುಂಡು ಭೂಮಿಯಲ್ಲಿ ಗೋಧಿ ಬೆಳೆದಿದ್ದು ಅದರ ಸದವಕಾಶ ವೆಚ್ಚ ಅದೇ ಭೂಮಿಯಲ್ಲಿ ಬೆಳೆಸಬಹುದಾಗಿದ್ದ ಇತರ ಬೆಳೆಗಳು. ಉದಾ. ಭತ್ತ.

ಪ್ರೊ. ಬೆನ್ ಹ್ಯಾಂ ಅವರ ಪ್ರಕಾರ "ಯಾವುದೇ ವಸ್ತುವಿನ ಸದವಕಾಶ ವೆಚ್ಚವೆಂದರೆ ಅಷ್ಟೆ ಹಣದ ವೆಚ್ಚದಿಂದ ಅದೇ ಉತ್ಪಾದನಾಂಗಗಳು ಅಥವಾ ಅಷ್ಟೇ ಪ್ರಮಾಣದ ಉತ್ಪಾದನಾಂಗಗಳ ಗುಂಪಿನ ಸಹಾಯದಿಂದ ಉತ್ಪಾದಿಸಲು ಸಾಧ್ಯವಿರುವ ನಂತರದ ಅತಿ ಉತ್ತಮ ಪರ್ಯಾಯ."

ಒಂದು ಉದ್ದಿಮೆಯು ಉತ್ಪಾದನಾಂಗಗಳ ಸೇವೆಯನ್ನು ನಿರ್ದಿಷ್ಟ ವಸ್ತುವಿನ ಉತ್ಪಾದನೆಯಲ್ಲಿ ಉಳಿಸಿಕೊಳ್ಳಬೇಕಾದರೆ ಆ ಉತ್ಪಾದನಾಂಗಗಳು ಇತರೆ ಬದಲಿ ಉಪಯೋಗಗಳಲ್ಲಿ ಗಳಿಸಬಹುದಾದ ಗರಿಷ್ಠ ಮೊತ್ತ - ಸದವಕಾಶ ವೆಚ್ಚ ಅಥವಾ ಬದಲಿ ವೆಚ್ಚ ನೀಡಬೇಕಾಗುತ್ತದೆ.

**ಒಟ್ಟು ವೆಚ್ಚ, ಸರಾಸರಿ ವೆಚ್ಚ ಮತ್ತು ಸೀಮಾಂತ ವೆಚ್ಚ**

ವೆಚ್ಚ ಹಾಗೂ ಬೆಲೆಗಳ ಲೆಕ್ಕಾಚಾರದಲ್ಲಿ ಮೂರು ರೀತಿಯ ವೆಚ್ಚಗಳು ಹಾಗೂ ವೆಚ್ಚದ ರೇಖೆಗಳನ್ನೂ ಪ್ರಮುಖವಾಗಿ ಪರಿಗಣಿಸಲಾಗುತ್ತದೆ. ಅವು ಒಟ್ಟು ವೆಚ್ಚ, ಸರಾಸರಿ ವೆಚ್ಚ ಮತ್ತು ಸೀಮಾಂತ ವೆಚ್ಚ.

**ಒಟ್ಟು ವೆಚ್ಚ :** ಇದು ಒಂದು ವಸ್ತುವಿನ ನಿರ್ದಿಷ್ಟ ಪ್ರಮಾಣದ ಉತ್ಪಾದನೆಯಲ್ಲಿ ಉಂಟಾಗಿರುವ ಎಲ್ಲಾ ರೀತಿಯ ವೆಚ್ಚಗಳ ಒಟ್ಟು ಮೊತ್ತ. ಇದು ಉತ್ಪಾದನೆಯಲ್ಲಿ ತೊಡಗಿಸಲಾದ ಉತ್ಪಾದನಾಂಗಗಳಿಗೆ ನೀಡಿದ ಪ್ರತಿಫಲ, ಉತ್ಪಾದನಾ ವ್ಯವಸ್ಥೆಗೆ ಮಾಡಲಾದ ವೆಚ್ಚ, ಸವಕಳಿ ವೆಚ್ಚ ಮುಂತಾದ ಎಲ್ಲಾ ವೆಚ್ಚಗಳನ್ನು ಒಳಗೊಂಡಿರುತ್ತದೆ. ಉತ್ಪಾದನೆಯ ಪ್ರಮಾಣ ಹೆಚ್ಚಾದಂತೆ ಕೆಲವು ವೆಚ್ಚಗಳು ಹೆಚ್ಚಾಗುತ್ತವೆ. ಇನ್ನೂ ಕೆಲವು ವೆಚ್ಚಗಳು ನಿರ್ದಿಷ್ಟ ಮಿತಿಯವರೆಗೆ ಸ್ಥಿರವಾಗಿರುತ್ತವೆ. ಆದ್ದರಿಂದ ಒಟ್ಟು ವೆಚ್ಚದಲ್ಲಿ ಸ್ಥಿರ ವೆಚ್ಚ ಮತ್ತು ಬದಲಾಗುವ ವೆಚ್ಚಗಳು ಸೇರಿರುತ್ತವೆ.

ಒಟ್ಟು ವೆಚ್ಚ = ಒಟ್ಟು ಸ್ಥಿರ ವೆಚ್ಚ + ಒಟ್ಟು ಬದಲಾಗುವ ವೆಚ್ಚ

$TC = TFC + TVC$

**ಸ್ಥಿರ ವೆಚ್ಚ :** ಅಲ್ಪಾವಧಿಯಲ್ಲಿ ಉತ್ಪಾದನೆಯ ಪ್ರಮಾಣ ಹೆಚ್ಚಾದರೂ, ಕಡಿಮೆಯಾದರೂ ಅಥವಾ ಸ್ಥಗಿತವಾದರೂ, ಕೆಲವು ವೆಚ್ಚಗಳು ಬದಲಾಗದೆ ಸ್ಥಿರವಾಗಿ ಉಳಿಯುತ್ತವೆ. ಇವು ಸ್ಥಿರ ವೆಚ್ಚಗಳು. ಬಾಡಿಗೆ, ಸ್ಥಿರ ಬಂಡವಾಳದ ಮೇಲಿನ ಬಡ್ಡಿಯ ಪಾವತಿ, ಖಾಯಂ ಸಿಬ್ಬಂದಿಯ ವೇತನ, ಸವಕಳಿ ವೆಚ್ಚ ಮುಂತಾದವು ಸ್ಥಿರ ವೆಚ್ಚದಲ್ಲಿ ಸೇರಿರುತ್ತವೆ. ಇದು ಉತ್ಪಾದನೆಗೆ ಮೂಲಭೂತ ಸೌಲಭ್ಯ ಕಲ್ಪಿಸಲು ಕೈಗೊಳ್ಳಲಾದ ಖಾಯಂ ವೆಚ್ಚವಾಗಿರುತ್ತದೆ.

**ಬದಲಾಗುವ ವೆಚ್ಚ :** ಉದ್ದಿಮೆಯ ಉತ್ಪಾದನಾ ಪ್ರಮಾಣದೊಡನೆ ನೇರವಾಗಿ ಬದಲಾಗುವ ವೆಚ್ಚದ ಬಾಬ್ತುಗಳು ಬದಲಾಗುವ ವೆಚ್ಚಗಳು. ಉತ್ಪಾದನಾ ಪ್ರಮಾಣ ಹೆಚ್ಚಾದರೆ ಈ ವೆಚ್ಚಗಳು ಹೆಚ್ಚಾಗುತ್ತವೆ. ಉತ್ಪಾದನಾ ಪ್ರಮಾಣ ಕಡಿಮೆಯಾದರೆ ಈ ವೆಚ್ಚಗಳು ಕಡಿಮೆಯಾಗುತ್ತವೆ. ಉತ್ಪಾದನೆ ಸ್ಥಗಿತವಾದರೆ ಬದಲಾಗುವ ವೆಚ್ಚಗಳು

ಇರುವುದಿಲ್ಲ ಅಥವಾ ಸೊನ್ನೆ ಆಗಿರುತ್ತದೆ. ಕಚ್ಚಾವಸ್ತುಗಳ ಮೇಲಿನ ವೆಚ್ಚ, ತಾತ್ಕಾಲಿಕ ಅಥವಾ ದಿನಗೂಲಿ ನೌಕರರ ವೇತನ, ಇಂಧನ ಮತ್ತು ವಿದ್ಯುತ್ ಮೇಲಿನ ವೆಚ್ಚ ಮುಂತಾದವು ಬದಲಾಗುವ ವೆಚ್ಚಗಳು.

ಕೆಳಗಿನ ಪಟ್ಟಿ ಹಾಗೂ ರೇಖಾಚಿತ್ರಗಳಲ್ಲಿ ಸ್ಥಿರ, ಬದಲಾಗಬಲ್ಲ ಮತ್ತು ಒಟ್ಟು ವೆಚ್ಚಗಳನ್ನು (ರೂ.ಗಳಲ್ಲಿ) ಗುರುತಿಸಲಾಗಿದೆ.

ಕೋಷ್ಟಕ ೪.೧

ಉತ್ಪಾದನಾ ವೆಚ್ಚ

| ಉತ್ಪಾದನೆಯ ಪ್ರಮಾಣ | ಸ್ಥಿರ ವೆಚ್ಚ | ಬದಲಾಗಬಲ್ಲ ವೆಚ್ಚ | ಒಟ್ಟು ವೆಚ್ಚ |
|---|---|---|---|
| ೦ | ೩೦ | ೦೦ | ೩೦ |
| ೧ | ೩೦ | ೧೦ | ೪೦ |
| ೨ | ೩೦ | ೧೮ | ೪೮ |
| ೩ | ೩೦ | ೨೪ | ೫೪ |
| ೪ | ೩೦ | ೩೨ | ೬೨ |
| ೫ | ೩೦ | ೫೦ | ೮೦ |
| ೬ | ೩೦ | ೭೨ | ೧೦೨ |

ಚಿತ್ರ ೪.೧.

ಒಟ್ಟು ವೆಚ್ಚದ ರೇಖೆ



**ಸರಾಸರಿ ವೆಚ್ಚ** : ನಿರ್ದಿಷ್ಟ ವಸ್ತುವಿನ ಉತ್ಪಾದನೆ ಹೆಚ್ಚಿಸುತ್ತ ಹೋದಂತೆ, ಪ್ರತಿ ಹೆಚ್ಚುವರಿ ಘಟಕದ ಉತ್ಪಾದನೆಗೆ ತಗಲುವ ವೆಚ್ಚ ಬದಲಾಗುತ್ತಾ ಹೋಗುತ್ತದೆ. ಆದರೆ ನಿಗದಿತ ಅವಧಿಯಲ್ಲಿ ನಿರ್ದಿಷ್ಠ ವಸ್ತುವಿನ ಎಲ್ಲಾ ಘಟಕಗಳಿಗೂ ಸಮಾನ ಬೆಲೆ ನಿಗದಿ ಮಾಡಬೇಕಾಗುತ್ತದೆ. ಆದ್ದರಿಂದ ಸರಾಸರಿ ವೆಚ್ಚ ಲೆಕ್ಕ ಹಾಕುವುದು ಅವಶ್ಯಕ.

ಒಂದು ವಸ್ತುವಿನ ಒಟ್ಟು ಉತ್ಪಾದನೆಯಲ್ಲಿ ಪ್ರತಿ ಘಟಕಕ್ಕೆ ತಗಲುವ ವೆಚ್ಚ ಸರಾಸರಿ ವೆಚ್ಚ. ಒಟ್ಟು ಉತ್ಪಾದನಾ ವೆಚ್ಚವನ್ನು ಉತ್ಪಾದಿತ ಘಟಕಗಳ ಪ್ರಮಾಣದಿಂದ ಭಾಗಿಸಿದರೆ ಸರಾಸರಿ ವೆಚ್ಚ ದೊರೆಕುತ್ತದೆ.

$$\text{ಸರಾಸರಿ ವೆಚ್ಚ} = \frac{\text{ಒಟ್ಟು ಉತ್ಪಾದನಾ ವೆಚ್ಚ}}{\text{ಉತ್ಪಾದಿತ ಘಟಕಗಳ ಸಂಖ್ಯೆ}} \qquad AC = \frac{TC}{Q}$$

ಉದಾ. ೧೦ ಮೋಟಾರು ಸೈಕಲ್‌ಗಳನ್ನು ಉತ್ಪಾದಿಸಲು ಒಟ್ಟು ರೂ. ೩.೫ ಲಕ್ಷ ವೆಚ್ಚ ಮಾಡಲಾಗಿದೆ.

ಅಂದರೆ ಪ್ರತಿ ಮೋಟಾರು

$$\text{ಸೈಕಲ್ ಸರಾಸರಿ ವೆಚ್ಚ} = \frac{\text{ರೂ. ೩.೫ ಲಕ್ಷ}}{\text{೧೦ ಮೋ.ಸೈ.}} = \text{ರೂ. ೩೫೦೦೦}$$

ಸರಾಸರಿ ವೆಚ್ಚದಲ್ಲಿ ಸರಾಸರಿ ಸ್ಥಿರ ವೆಚ್ಚ ಮತ್ತು ಸರಾಸರಿ ಬದಲಾಗುವ ವೆಚ್ಚ ಸೇರಿರುತ್ತದೆ.

ಸರಾಸರಿ ವೆಚ್ಚ = ಸರಾಸರಿ ಸ್ಥಿರ ವೆಚ್ಚ + ಸರಾಸರಿ ಬದಲಾಗುವ ವೆಚ್ಚ

**ಕೆಳಕಂಡ ಪಟ್ಟಿಯ ಹಾಗೂ ರೇಖಾಚಿತ್ರದ ಮೂಲದ ಸರಾಸರಿ ವೆಚ್ಚವನ್ನು ವಿವರಿಸಬಹುದು. (ರೂ.ಗಳಲ್ಲಿ)**

**ಕೋಷ್ಟಕ ೪.೨.**

| ಉತ್ಪಾದನೆಯ ಪ್ರಮಾಣ | ಸ್ಥಿರ ವೆಚ್ಚ | ಬದಲಾಗುವ ವೆಚ್ಚ | ಒಟ್ಟು ವೆಚ್ಚ | ಸರಾಸರಿ ಸ್ಥಿರ ವೆಚ್ಚ | ಸರಾಸರಿ ಬದಲಾಗುವ ವೆಚ್ಚ | ಸರಾಸರಿ ವೆಚ್ಚ | ಸೀಮಾಂತ ವೆಚ್ಚ |
|---|---|---|---|---|---|---|---|
| ೦ | ೩೦ | ೦೦ | ೩೦ | ೦೦ | ೦೦ | ೦೦ | ೦೦ |
| ೧ | ೩೦ | ೧೦ | ೪೦ | ೩೦ | ೧೦ | ೪೦ | ೧೦ |
| ೨ | ೩೦ | ೧೮ | ೪೮ | ೧೫ | ೦೯ | ೨೪ | ೦೮ |
| ೩ | ೩೦ | ೨೪ | ೫೪ | ೧೦ | ೦೮ | ೧೮ | ೦೬ |
| ೪ | ೩೦ | ೩೨ | ೬೨ | ೭.೫ | ೮ | ೧೫.೫ | ೦೮ |
| ೫ | ೩೦ | ೫೦ | ೮೦ | ೬ | ೧೦ | ೧೬ | ೧೮ |
| ೬ | ೩೦ | ೭೨ | ೧೦೨ | ೫ | ೧೨ | ೧೭ | ೨೨ |

ಅಲ್ಪಾವಧಿಯಲ್ಲಿ ಒಟ್ಟು ಸ್ಥಿರ ವೆಚ್ಚ ನಿಗದಿತವಾಗಿರುತ್ತದೆ. ಪ್ರಾರಂಭದಲ್ಲಿ ಉತ್ಪಾದನೆ ಹೆಚ್ಚಾದಂತೆ ಸರಾಸರಿ ವೆಚ್ಚ ಕಡಿಮೆಯಾಗುತ್ತಿದೆ. ಉತ್ಪಾದನೆ ಹೆಚ್ಚುತ್ತಾ ಹೋದಂತೆಲ್ಲಾ ಬದಲಾಗುವ ವೆಚ್ಚ ಪ್ರಾರಂಭದಲ್ಲಿ ನಿಧಾನಗತಿಯಲ್ಲಿ ನಂತರ ತೀವ್ರವಾಗಿ ಹೆಚ್ಚಲಾರಂಭಿಸುತ್ತದೆ. ಅದರ ಪರಿಣಾಮವಾಗಿ ಸರಾಸರಿ ಬದಲಾಗುವ ವೆಚ್ಚ ನಿರ್ದಿಷ್ಟ ಮಟ್ಟದ ಉತ್ಪಾದನೆಯವರೆಗೆ ಇಳಿಮುಖವಾಗಿದ್ದು ನಂತರ ಹೆಚ್ಚಲಾರಂಭಿಸುತ್ತದೆ. ಆದ್ದರಿಂದ ಸರಾಸರಿ ವೆಚ್ಚ ಉತ್ಪಾದನೆಯ ೪ನೆಯ ಘಟಕದವರೆಗೆ ಇಳಿಮುಖವಾಗಿದ್ದು, ನಂತರ ಹೆಚ್ಚಲಾರಂಭಿಸಿದೆ. ಸರಾಸರಿ ವೆಚ್ಚದ ರೇಖೆಯನ್ನು ಕೆಳಗಿನ ರೇಖಾಚಿತ್ರದಲ್ಲಿ ತೋರಿಸಿದೆ.

ಚಿತ್ರ ೪.೨.

ಸರಾಸರಿ ವೆಚ್ಚದ ರೇಖೆಗಳು




**ಸೀಮಾಂತ ವೆಚ್ಚ :** ಉತ್ಪಾದನೆಯ ಪ್ರಮಾಣ ಹೆಚ್ಚುತ್ತಾ ಹೋದಂತೆ ಒಟ್ಟು ವೆಚ್ಚ ಹೆಚ್ಚುತ್ತದೆ. ಒಟ್ಟು ವೆಚ್ಚದ ಹೆಚ್ಚಳದ ಪ್ರಮಾಣವು ಬದಲಾಗುತ್ತದೆ. ಇದು ಉದ್ದಿಮೆದಾರರ ಲಾಭ ಹಾಗೂ ವಸ್ತುವಿನ ಬೆಲೆ ನಿಗದಿಯ ಮೇಲೆ ಪ್ರಭಾವ ಬೀರುತ್ತದೆ.

ಒಂದು ವಸ್ತುವಿನ ಒಂದು ಹೆಚ್ಚುವರಿ ಘಟಕವನ್ನು ಉತ್ಪಾದಿಸಿದಾಗ ಒಟ್ಟು ವೆಚ್ಚದಲ್ಲಿ ಉಂಟಾಗುವ ಹೆಚ್ಚಳವನ್ನು ಸೀಮಾಂತ ವೆಚ್ಚ / ಸೇರ್ಪಡೆಯಾದ ವೆಚ್ಚ ಎನ್ನಬಹುದು. ಇದು ಹೆಚ್ಚುವರಿ ಘಟಕದ ಉತ್ಪಾದನೆಯ ಪರಿಣಾಮವಾಗಿ ಒಟ್ಟು ವೆಚ್ಚದಲ್ಲಿ ಉಂಟಾದ ಹೆಚ್ಚಳವೆ ಸೀಮಾಂತ ವೆಚ್ಚ.

$$MC = \frac{\Delta TC}{\nabla Q}$$ ಸೀಮಾಂತ ವೆಚ್ಚ = $\frac{\Delta \text{ ಒಟ್ಟು ವೆಚ್ಚ}}{\Delta \text{ ಉತ್ಪಾದನೆಯ ಪ್ರಮಾಣ}}$

Δಒಟ್ಟು ವೆಚ್ಚ = ಒಟ್ಟು ವೆಚ್ಚದಲ್ಲಿ ಉಂಟಾದ ಬದಲಾವಣೆ / ಹೆಚ್ಚಳದ ಪ್ರಮಾಣ

Δಉತ್ಪಾದನೆಯ ಪ್ರಮಾಣ = ಉತ್ಪಾದನೆಯ ಪ್ರಮಾಣದಲ್ಲಿ ಉಂಟಾದ ಬದಲಾವಣೆ / ಹೆಚ್ಚಳ.

ಸೀಮಾಂತ ವೆಚ್ಚ = ಉತ್ಪಾದನೆಯ ಹೆಚ್ಚಳದ ನಂತರದ ಒಟ್ಟು ವೆಚ್ಚ - ಉತ್ಪಾದನೆಯ ಹೆಚ್ಚಳಕ್ಕೆ ಪೂರ್ವದ ಒಟ್ಟು ವೆಚ್ಚ.

$MC = TC_{N+1} - TC_n$

$TC_{N+1}$ = ಉತ್ಪಾದನೆಯ ಹೆಚ್ಚಳದ ನಂತರದ ಒಟ್ಟು ವೆಚ್ಚ

$TC_n$ = ಉತ್ಪಾದೆಯ ಹೆಚ್ಚಳದ ಪೂರ್ವದ ಒಟ್ಟು ವೆಚ್ಚ

**ಕೋಷ್ಟಕ ೪.೩**

| ಉತ್ಪಾದನೆಯ ಪ್ರಮಾಣ | ಒಟ್ಟು ವೆಚ್ಚ | ಸೀಮಾಂತ ವೆಚ್ಚ |
|---|---|---|
| ೦ | ೪೦ | ೦೦ |
| ೧ | ೪೦ | ೧೦ |
| ೨ | ೪೮ | ೮ |
| ೩ | ೫೪ | ೬ |
| ೪ | ೬೨ | ೮ |
| ೫ | ೮೦ | ೧೮ |
| ೬ | ೧೦೨ | ೨೨ |

ಚಿತ್ರ ೪.೩.



## ೪.೨. ಆದಾಯ

ಉದ್ಯಮ ಸಂಸ್ಥೆಯ ಲಾಭವು ಅದರ ಉತ್ಪಾದನಾ ವೆಚ್ಚ ಮತ್ತು ಆದಾಯವನ್ನು ಅವಲಂಬಿಸಿದೆ. ವೆಚ್ಚಕ್ಕಿಂತ ಹೆಚ್ಚಿನ ಆದಾಯ ಗಳಿಸುವಲ್ಲಿ ಬಳಸಬೇಕಾದ ನೀತಿಗಳು-ತಂತ್ರಗಳು ಬಹಳ ಪ್ರಮುಖವಾಗಿದೆ.

ಒಂದು ಉದ್ಯಮವು ನಿರ್ದಿಷ್ಟ ವಸ್ತುವನ್ನು ಬೇರೆ ಬೇರೆ ಬೆಲೆಗಳಲ್ಲಿ ವಿಭಿನ್ನ ಪ್ರಮಾಣಗಳಲ್ಲಿ ಮಾರುವುದರಿಂದ ದೊರೆತ ಗಳಿಕೆ ಆದಾಯ. ವಸ್ತುಗಳ ಮಾರಾಟದಿಂದ ದೊರೆತ ಹಣದ ಗಳಿಕೆ ಆದಾಯ.

ಒಟ್ಟು ಆದಾಯ = ಒಂದು ಘಟಕದ ಬೆಲೆ × ಮಾರಿದ ಘಟಕಗಳ ಸಂಖ್ಯೆ

ಒಂದು ವಸ್ತುವಿನ ಒಂದು ಘಟಕದ ಬೆಲೆ ರೂ. ೫.೦೦ ಆಗಿದ್ದು ಅಂತಹ ೧೦೦ ಘಟಕಗಳನ್ನು ಮಾರಿದ್ದರೆ

ಒಟ್ಟು ಆದಾಯ = ೫ × ೧೦೦ = ರೂ. ೫೦೦.೦೦ ಆಗುತ್ತದೆ.

ವಸ್ತುವಿನ ಬೆಲೆ ಬದಲಾದರೂ ಮಾರಿದ ಪ್ರಮಾಣ ಬದಲಾದರೂ ಒಟ್ಟು ಆದಾಯ ಬದಲಾಗುತ್ತದೆ. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಬೆಲೆಗಳು ಸ್ಥಿರವಾಗಿರುವುದರಿಂದ ಉತ್ಪಾದನೆ ಹೆಚ್ಚಾದಂತೆ ಒಟ್ಟು ಆದಾಯ ಸಮನಾಗಿ ಹೆಚ್ಚುತ್ತದೆ.

ಏಕಸ್ವಾಮ್ಯ ಮಾರುಕಟ್ಟೆಯಲ್ಲಿ ಬೆಲೆಗಳ ಪ್ರಮಾಣ ಹಾಗೂ ಅವುಗಳಲ್ಲಿನ ಹೆಚ್ಚಳದಲ್ಲಿ ವ್ಯತ್ಯಯ ಉಂಟಾಗಬಹುದಾಗಿದ್ದು ಆದಾಯದ ಹೆಚ್ಚಳದಲ್ಲಿಯೂ ಅಸಮಾನತೆ ಕಾಣಬಹುದು.

**ಸರಾಸರಿ ಆದಾಯ**

ಒಂದು ವಸ್ತುವಿನ ನಿರ್ದಿಷ್ಟ ಪ್ರಮಾಣದ ಮಾರಾಟದಿಂದ ಒಟ್ಟು ಆದಾಯ ದೊರಕುತ್ತದೆ. ಅದರ ಪ್ರತಿಯೊಂದು ಘಟಕಕ್ಕೆ ದೊರಕಿರುವ ಆದಾಯ ಸರಾಸರಿ ಆದಾಯ. ಇದು ಮಾರಿದ ಪ್ರತಿ ಘಟಕದಿಂದ ದೊರಕುವ ಆದಾಯದ ಲೆಕ್ಕಾಚಾರ. ವಸ್ತುವಿನ ಮಾರಾಟದಿಂದ ದೊರೆತ ಒಟ್ಟು ಆದಾಯವನ್ನು ಮಾರಾಟ ಮಾಡಿದ ಪ್ರಮಾಣದಿಂದ ಭಾಗಿಸಿದರೆ ಸರಾಸರಿ ಆದಾಯ ದೊರಕುತ್ತದೆ.

$$AR = \frac{TR}{Q} \quad \frac{\text{ಒಟ್ಟು ಆದಾಯ}}{\text{ಮಾರಾಟ ಮಾಡಿದ ಪ್ರಮಾಣ}} = \text{ಸರಾಸರಿ ಆದಾಯ}$$

∴ ಬೆಲೆಯು ಆ ವಸ್ತುವಿನ ಸರಾಸರಿ ಆದಾಯ ಆಗಿರುತ್ತದೆ. ಸರಾಸರಿ ಆದಾಯ ಬೆಲೆ

ಉದಾಹರಣೆ : ಒಂದು ಉದ್ಯಮ ೧೦ ಬಣ್ಣದ ಟಿ.ವಿ.ಗಳನ್ನು ಮಾರಿದ್ದರಿಂದ ಒಟ್ಟು ರೂ. ೧,೨೫,೦೦೦ ಪಡೆಯುತ್ತದೆ. ಇದು ಒಟ್ಟು ಆದಾಯ. ಆದರೆ ಪ್ರತಿ ಟಿ.ವಿ.ಯ ಮಾರಾಟದಿಂದ ದೊರೆತ ಆದಾಯ

$$\frac{೧,೨೫,೦೦೦}{೧೦} = ೧೨,೫೦೦ \text{ ರೂ.}$$

ಉತ್ಪಾದನೆ ಹೆಚ್ಚಾದಂತೆ ಒಟ್ಟು ಆದಾಯ ಒಂದೇ ಪ್ರಮಾಣದಲ್ಲಿ ಹೆಚ್ಚುತ್ತಿದ್ದರೆ ಸರಾಸರಿ ಆದಾಯ ಸ್ಥಿರವಾಗಿರುತ್ತದೆ.

ಒಟ್ಟು ಆದಾಯವು ಏರಿಕೆಯ ಪ್ರಮಾಣದಲ್ಲಿ ಹೆಚ್ಚುತ್ತಿದ್ದರೆ ಸರಾಸರಿ ಆದಾಯ ಹೆಚ್ಚುತ್ತಾ ಹೋಗುತ್ತದೆ.

**ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸರಾಸರಿ ಆದಾಯ :** ಇಲ್ಲಿ ಅಸಂಖ್ಯಾತ ಮಾರಾಟಗಾರರು ಏಕರೂಪದ ವಸ್ತುಗಳನ್ನು ಮಾರುತ್ತಾರೆ. ಮಾರುಕಟ್ಟೆಯ ಒಟ್ಟು ಬೇಡಿಕೆ ಮತ್ತು ನೀಡಿಕೆಗೆ ಅನುಗುಣವಾಗಿ ಮಾರುಕಟ್ಟೆಯಾದ್ಯಂತ ಒಂದೆ ಬೆಲೆ ಇರುತ್ತದೆ. ಇಂತಹ ಸನ್ನಿವೇಶದಲ್ಲಿ ಸರಾಸರಿ ಆದಾಯದ ಪಟ್ಟಿ ಮತ್ತು ರೇಖೆಗಳು ಕೆಳಕಂಡಂತೆ ಇರುತ್ತದೆ.

**ಕೋಷ್ಟಕ ೪.೪. ಸರಾಸರಿ ಆದಾಯ ಪಟ್ಟಿ (ರೂ.ಗಳಲ್ಲಿ)**

| ಮಾರಾಟದ ಪ್ರಮಾಣ | ಒಟ್ಟು | ಸರಾಸರಿ ಆದಾಯ |
|---|---|---|
| ೧ | ೨೦ | ೨೦ |
| ೨ | ೪೦ | ೨೦ |
| ೩ | ೬೦ | ೨೦ |
| ೪ | ೮೦ | ೨೦ |
| ೫ | ೧೦೦ | ೨೦ |
| ೬ | ೧೨೦ | ೨೦ |

**ಚಿತ್ರ ೪.೪. ಪರಿಪೂರ್ಣ ಪೈಪೋಟಿಯಲ್ಲಿ ಸರಾಸರಿ ಆದಾಯ**



ಅಪರಿಪೂರ್ಣ ಮಾರುಕಟ್ಟೆಯಲ್ಲಿ ಸರಾಸರಿ ಆದಾಯ : ಇಲ್ಲಿ ವಸ್ತುವಿನ ಬೆಲೆ ಕಡಿಮೆ ಮಾಡಿ ಹೆಚ್ಚು ಮಾರಾಟ ಮಾಡಲು ಪ್ರಯತ್ನಿಸಲಾಗುತ್ತದೆ. ಆದ್ದರಿಂದ ಮಾರಾಟ ಹೆಚ್ಚಾದಂತೆ ಸರಾಸರಿ ಆದಾಯ ಕಡಿಮೆಯಾಗುತ್ತದೆ.

ಕೋಷ್ಟಕ ೪.೫

| ಮಾರಾಟದ ಪ್ರಮಾಣ | ಒಟ್ಟು ಆದಾಯ | ಸರಾಸರಿ ಆದಾಯ |
|---|---|---|
| ೧ | ೨೦ | ೨೦ |
| ೨ | ೩೬ | ೧೮ |
| ೩ | ೪೮ | ೧೬ |
| ೪ | ೫೬ | ೧೪ |
| ೫ | ೬೦ | ೧೨ |
| ೬ | ೬೦ | ೧೦ |
| ೭ | ೫೬ | ೮ |

ಚಿತ್ರ ೪.೫.

ಅಪರಿಪೂರ್ಣ ಪೈಪೋಟಿಯಲ್ಲಿ ಸರಾಸರಿ ಆದಾಯ




ಮಾರಾಟ ಮಾಡಿದ ಘಟಕಗಳು

### ಸೀಮಾಂತ ಆದಾಯ

ಒಂದು ಉದ್ದಿಮೆಯು ವಸ್ತುವಿನ ಮಾರಾಟದ ಪ್ರಮಾಣ ಹೆಚ್ಚಿಸಿದ್ದರ ಪರಿಣಾಮವಾಗಿ ಅದರ ಆದಾಯದಲ್ಲಿ ಉಂಟಾದ ಹೆಚ್ಚಳ ಸೀಮಾಂತ ಆದಾಯ. ಇದು ಹೆಚ್ಚುವರಿ ಆದಾಯ. ಅಂಚಿನ ಆದಾಯವೆಂದರೆ ಮಾರಾಟದ ಕೊನೆಯ ಘಟಕದಿಂದ ದೊರೆತ ಆದಾಯ.

$$\text{ಸೀಮಾಂತ ಆದಾಯ} = \frac{\Delta TR \quad \text{ಒಟ್ಟು ಆದಾಯದಲ್ಲಿನ ಬದಲಾವಣೆ}}{\Delta Q \quad \text{ಮಾರಾಟ ಪ್ರಮಾಣದಲ್ಲಿನ ಬದಲಾವಣೆ}}$$

ಸೀಮಾಂತ ಆದಾಯ = ಮಾರಾಟದ ಹೆಚ್ಚಳದ ನಂತರದ ಆದಾಯ - ಹೆಚ್ಚಳಕ್ಕೆ ಮೊದಲಿನ ಆದಾಯ

$MR = TR_{N+1} - TR_n$

ಉದಾ. ಒಂದು ವಸ್ತುವಿನ ೪ ಘಟಕಗಳ ಮಾರಾಟದಿಂದ ದೊರೆತಿರುವ ಒಟ್ಟು ಆದಾಯ ರೂ. ೮೦.೦೦. ಇದು ಮಾರಾಟದ ಹೆಚ್ಚಳಕ್ಕೆ ಮೊದಲಿನ ಆದಾಯ. ಆ ವಸ್ತುವಿನ ೫ನೇ ಘಟಕ ಮಾರಾಟ ಮಾಡಿದ ಮೇಲೆ ಒಟ್ಟು ಆದಾಯ ರೂ. ೧೦೦.೦೦ ಆಯಿತು.

ಆದ್ದರಿಂದ ಸೀಮಾಂತ ಆದಾಯ ರೂ. ೨೦

$TR_n = 80, TR_{N+1} = 100 \quad \therefore MR = 100 - 80 = 20$

ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಒಂದು ವಸ್ತುವಿನ ಬೆಲೆ ಸ್ಥಿರವಾಗಿಯೂ ಒಂದೇ ಸಮನಾಗಿಯೂ ಇರುತ್ತದೆ. ಆದ್ದರಿಂದ ಸೀಮಾಂತ ಪ್ರತಿಫಲ ಸಮಾನವಾಗಿ ಮುಂದುವರೆಯುತ್ತದೆ. ಆದ್ದರಿಂದ ಸೀಮಾಂತ ಆದಾಯ ರೇಖೆಯು X ಅಕ್ಷಕ್ಕೆ ಸಮಾನಾಂತರವಾಗಿರುತ್ತದೆ.

**ಕೋಷ್ಟಕ ೪.೬**

| ಮಾರಾಟ ಮಾಡಿದ ಪ್ರಮಾಣ | ಒಟ್ಟು ಆದಾಯ | ಸೀಮಾಂತ ಆದಾಯ |
|---|---|---|
| ೧ | ೨೦ | ೦೦ |
| ೨ | ೪೦ | ೨೦ |
| ೩ | ೬೦ | ೨೦ |
| ೪ | ೮೦ | ೨೦ |
| ೫ | ೧೦೦ | ೨೦ |
| ೬ | ೧೨೦ | ೨೦ |

ಚಿತ್ರ ೪.೬.

ಪರಿಪೂರ್ಣ ಪೈಪೋಟಿಯಲ್ಲಿ ಸೀಮಾಂತ ಆದಾಯ




ಅಪರಿಪೂರ್ಣ ಮಾರುಕಟ್ಟೆಯಲ್ಲಿ ಬೆಲೆ ಕಡಿಮೆ ಮಾಡುವುದರ ಮೂಲಕ ಹೆಚ್ಚು ವಸ್ತುಗಳನ್ನು ಮಾರಲು ಪ್ರಯತ್ನಿಸಿದರೆ, ಮಾರಾಟ ಹೆಚ್ಚಾದಂತೆ ಸೀಮಾಂತ ಆದಾಯ ಇಳಿಮುಖವಾಗಿರುತ್ತದೆ.

| ಮಾರಾಟ ಮಾಡಿದ ಪ್ರಮಾಣ | ಒಟ್ಟು ಆದಾಯ ರೂ.ಗಳಲ್ಲಿ | ಸೀಮಾಂತ ಆದಾಯ ರೂ.ಗಳಲ್ಲಿ |
|---|---|---|
| ೧ | ೨೦ | ೦೦ |
| ೨ | ೩೬ | ೧೬ |
| ೩ | ೪೮ | ೧೨ |
| ೪ | ೫೬ | ೮ |
| ೫ | ೬೦ | ೪ |
| ೬ | ೬೦ | ೦ |
| ೭ | ೫೬ | ೪ |

ಚಿತ್ರ ೪.೭.

ಅಪರಿಪೂರ್ಣ ಪೈಪೋಟಿಯಲ್ಲಿ ಸೀಮಾಂತ ಆದಾಯ




## ೪.೩. ಮಾರುಕಟ್ಟೆ ಸಂರಚನೆ

ಎಲ್ಲ ವ್ಯಕ್ತಿಗಳು ತಮಗೆ ಅಗತ್ಯವಾದ ಎಲ್ಲ ವಸ್ತು ಸೇವೆಗಳನ್ನು ತಾವೆ ಉತ್ಪಾದಿಸಲಾರರು, ಒದಗಿಸಿಕೊಳ್ಳಲಾರರು. ನೈಸರ್ಗಿಕ ಸಂಪನ್ಮೂಲಗಳ ಹಂಚಿಕೆ ಹಾಗೂ ಶ್ರಮ ವಿಭಜನೆ ಆಧಾರದ ಮೇಲೆ ಬೇರೆ ಬೇರೆ ವ್ಯಕ್ತಿ - ಸಂಸ್ಥೆಗಳು ಬೇರೆ ಬೇರೆ ವಸ್ತುಗಳನ್ನು ಅಧಿಕ ಪ್ರಮಾಣದಲ್ಲಿ ಹಾಗೂ ಲಾಭದಾಯಕ ಬೆಲೆಗಳಲ್ಲಿ (ವೆಚ್ಚದಲ್ಲಿ) ಉತ್ಪಾದಿಸುತ್ತವೆ. ಅವುಗಳನ್ನು ಅಸಂಖ್ಯಾತ ಗ್ರಾಹಕರಿಗೆ ಹಣದ ಮೂಲಕ ಮಾರುವ ಅಗತ್ಯವಿದ್ದು ಮಾರುಕಟ್ಟೆಗಳು ಆರ್ಥಿಕ ಜೀವನದಲ್ಲಿ ಅತ್ಯಾವಶ್ಯಕವಾಗಿವೆ. ಉತ್ಪಾದನಾಂಗಗಳ ಹಂಚಿಕೆ, ಬಳಕೆ, ಚಲನೆ ಮತ್ತು ಅವುಗಳ ಪ್ರತಿಫಲವೂ ಮಾರುಕಟ್ಟೆಯನ್ನು ಅವಲಂಬಿಸಿದೆ.

ಪ್ರಾರಂಭದಲ್ಲಿ ಮಾರುಕಟ್ಟೆ ಎಂದರೆ ವಸ್ತುಗಳನ್ನು ಮಾರಾಟಕ್ಕೆ ಸಜ್ಜುಗೊಳಿಸಿದ ಒಂದು ನಿರ್ದಿಷ್ಟ ಸ್ಥಳ ಎಂದು ಅರ್ಥೈಸಲಾಗುತ್ತಿತ್ತು. ಮಾರುಕಟ್ಟೆಯು ಕೊಳ್ಳುವವರು ಮತ್ತು ಮಾರುವವರು ಸಂಧಿಸುವ ಹಾಗೂ ವಸ್ತುಗಳನ್ನು ಕೊಳ್ಳುವ ಒಂದು ನಿರ್ದಿಷ್ಟ ಪ್ರದೇಶವೆನಿಸಿತ್ತು. ನಂತರ ಮಾರುಕಟ್ಟೆಯ ಸ್ವರೂಪ ಹಾಗೂ ವಿಸ್ತಾರಗಳು ಬದಲಾದವು. ಕೊಳ್ಳುವವರು ಮತ್ತು ಮಾರುವವರು ಪ್ರತ್ಯಕ್ಷವಾಗಿ ಸಂದಿಸದೆ ಮಾರಾಟದ ವಸ್ತುಗಳ ರಾಶಿ ಇಲ್ಲದೆ, ದೂರವಾಣಿ, ಫ್ಯಾಕ್ಸ್, ಇಂಟರ್‌ನೆಟ್, ಕೇಬಲ್ ಮತ್ತು ಟಿ.ವಿ.ಗಳ ಮೂಲಕ ವ್ಯಾಪಾರ ನಡೆಯಲಾರಂಭಿಸಿದೆ.

ಕಾರ್ನಾಟ್ ಅವರ ಪ್ರಕಾರ ಮಾರುಕಟ್ಟೆ ಎಂದರೆ ವಸ್ತುಗಳನ್ನು ಕೊಳ್ಳುವ ಹಾಗೂ

ಮಾರುವ ಯಾವುದೇ ನಿರ್ದಿಷ್ಟ ಸ್ಥಳವಲ್ಲ. ಆದರೆ ವಸ್ತುವಿನ ಬೆಲೆ ಸುಲಭವಾಗಿ ಹಾಗೂ ಶೀಘ್ರವಾಗಿ ಸಮಾನತೆ ಸಾಧಿಸುವಂತೆ ಕೊಳ್ಳುವವರು ಮತ್ತು ಮಾರುವವರು ಮುಕ್ತ ವ್ಯವಹಾರ ಹೊಂದಿರುವ ಯಾವುದೇ ಸಮಸ್ತ ಪ್ರದೇಶವನ್ನು ಮಾರುಕಟ್ಟೆ ಎನ್ನಬಹುದು.

ಬೆನ್‌ಹ್ಯಾಂ ಅವರ ಪ್ರಕಾರ ಒಂದ ಭಾಗದ ಬೆಲೆಯು ಇನ್ನೊಂದು ಭಾಗದ ಬೆಲೆಯ ಮೇಲೆ ಪರಿಣಾಮ ಬೀರುವಷ್ಟು ನೇರವಾಗಿ ಅಥವಾ ಪರೋಕ್ಷವಾಗಿ, ವ್ಯಾಪಾರಿಗಳು ಮತ್ತು ಗ್ರಾಹಕರು ನಿಕಟವಾಗಿರುವ ಒಂದು ಪ್ರದೇಶ ಮಾರುಕಟ್ಟೆ.

**ಮಾರುಕಟ್ಟೆಯ ಅವಶ್ಯಕ ಅಂಶಗಳು :** ಯಾವುದೇ ಮಾರುಕಟ್ಟೆಯಲ್ಲಿ ಅವಶ್ಯಕವಾಗಿ ಇರಬೇಕಾದ ಅಂಶಗಳು ಕೆಳಗಿನಂತಿವೆ

೧. ಕೊಳ್ಳುವವರು ಮತ್ತು ಮಾರುವವರು ಇದ್ದು, ಅವರ ನಡುವೆ ಪ್ರತ್ಯಕ್ಷ ಅಥವಾ ಪರೋಕ್ಷ ನಿಕಟ ಸಂಪರ್ಕವಿರುತ್ತದೆ. ಅದಕ್ಕಾಗಿ ಒಂದು ಪ್ರದೇಶ ಅಥವಾ ಸಂಪರ್ಕ ಮಾಧ್ಯಮ ಅವಶ್ಯಕವಾಗಿರುತ್ತದೆ.

೨. ನಿರ್ದಿಷ್ಟ ಗುಣಮಟ್ಟದ ವ್ಯಾಪಾರದ ವಸ್ತುಗಳು ಇರುತ್ತವೆ.

೩. ಕೊಳ್ಳುವವರ ಮತ್ತು ಮಾರುವವರ ನಡುವೆ ಒಂದು ವಸ್ತುವಿಗೆ ನಿರ್ದಿಷ್ಟ ಬೆಲೆ ಒಪ್ಪಿಗೆಯಾಗಬೇಕು.

**ಮಾರುಕಟ್ಟೆಯ ವಿಧಗಳು**

ಮಾರುಕಟ್ಟೆಯ ಸ್ವರೂಪ, ವ್ಯವಸ್ಥೆ ಹಾಗೂ ಪ್ರಮುಖ ಲಕ್ಷಣಗಳನ್ನು ಅನುಸರಿಸಿ ಮಾರುಕಟ್ಟೆಗಳಲ್ಲಿ ಮೂರು ವಿಧಗಳನ್ನು ಗುರುತಿಸಬಹುದು.

೧. ಪರಿಪೂರ್ಣ ಪೈಪೋಟಿ ಮಾರುಕಟ್ಟೆ

೨. ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ

  ಅ. ಸ್ವಾಮ್ಯಯುತ ಪೈಪೋಟಿ

  ಆ. ದ್ವಿಜನಸ್ವಾಮ್ಯ ಮಾರುಕಟ್ಟೆ

  ಇ. ಕೆಲಜನ ಸ್ವಾಮ್ಯ ಮಾರುಕಟ್ಟೆ

೩. ಏಕಸ್ವಾಮ್ಯ ಮಾರುಕಟ್ಟೆ

**೧. ಪರಿಪೂರ್ಣ ಪೈಪೋಟಿ ಮಾರುಕಟ್ಟೆ**

ಅಧಿಕ ಸಂಖ್ಯೆಯ ಮಾರಾಟಗಾರರು ಏಕರೂಪದ ವಸ್ತುಗಳನ್ನು ಉತ್ಪಾದಿಸಿ, ಅಧಿಕ ಸಂಖ್ಯೆಯ ಗ್ರಾಹಕರಿದ್ದು ಬೇಡಿಕೆ ಮತ್ತು ಪೂರೈಕೆ ಆಧಾರದ ಮೇಲೆ ಬೆಲೆಗಳು ನಿರ್ಧರಿಸಲ್ಪಡುತ್ತಿದ್ದರೆ ಅದನ್ನು ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎನ್ನಬಹುದು.

ಫ್ರಾಂಕ್ ನೈಟ್ ಅವರ ಪ್ರಕಾರ ಪರಿಪೂರ್ಣ ಪೈಪೋಟಿ ಮಾರುಕಟ್ಟೆಯು ಗ್ರಾಹಕರು ಮತ್ತು ಮಾರಾಟಗಾರರ ವಿವೇಚನಾಶೀಲತೆ, ಪೂರ್ಣಜ್ಞಾನ, ಘರ್ಷಣೆಯ ಅಭಾವ,

ಉತ್ಪಾದನಾಂಗಗಳ ಪರಿಪೂರ್ಣ ಚಲನೆ ಮತ್ತು ವಿಭಾಜ್ಯತೆ ಮತ್ತು ಸಂಪೂರ್ಣ ಸ್ಥಿರ ಸ್ಥಿತಿಗತಿಗಳನ್ನು ಒಳಗೊಂಡಿರುತ್ತದೆ.

**ಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಲಕ್ಷಣಗಳು**

೧. ಅಧಿಕ ಸಂಖ್ಯೆಯ ಉತ್ಪಾದಕರು - ಮಾರಾಟಗಾರರು ಇರುತ್ತಾರೆ. ಅದರಲ್ಲಿ ಅತಿದೊಡ್ಡ ಸಂಸ್ಥೆಯ ಪೂರೈಕೆಯೂ ಮಾರುಕಟ್ಟೆಯ ಒಟ್ಟು ಪೂರೈಕೆಯ ಅತಿಸಣ್ಣ ಭಾಗವಾಗಿರುತ್ತದೆ. ಆದ್ದರಿಂದ ಯಾವುದೇ ಒಬ್ಬ ಮಾರಾಟಗಾರ ಅಥವಾ ಸಂಸ್ಥೆಯು ತಾನು ಮಾರುವ ವಸ್ತುವಿನ ಬೆಲೆಯ ನಿರ್ಧಾರದ ಮೇಲೆ ಪ್ರಭಾವ / ಒತ್ತಡ ಬೀರಲಾರ.

೨. ಮಾರಾಟಗಾರರಿಗೆ ಮಾರುಕಟ್ಟೆಗೆ ಹೊಸದಾಗಿ ಪ್ರವೇಶಿಸಲು ಅಥವಾ ಬಿಟ್ಟು ಹೋಗಲು ಮುಕ್ತ ಅವಕಾಶವಿರುತ್ತದೆ. ಆದ್ದರಿಂದ ಮಾರುಕಟ್ಟೆಯಲ್ಲಿ ಬೇಡಿಕೆ ಮತ್ತು ನೀಡಿಕೆ ಮತ್ತು ಪ್ರಮಾಣಕ್ಕನುಗುಣವಾಗಿ ಉದ್ಯಮಗಳ ಆಗಮನ-ನಿರ್ಗಮನ ಉಂಟಾಗುತ್ತದೆ.

೩. ಮಾರುಕಟ್ಟೆಯಲ್ಲಿ ವಸ್ತುಗಳು ಏಕರೂಪದ್ದಾಗಿದ್ದು ಒಂದೇ ಗುಣಮಟ್ಟ ಹೊಂದಿರುತ್ತದೆ.

೪. ಮಾರುಕಟ್ಟೆಯಾದ್ಯಂತ ಒಂದು ವಸ್ತುವಿಗೆ ಒಂದೇ ಬೆಲೆ ಇರುತ್ತದೆ. ಮಾರುಕಟ್ಟೆ ಯಲ್ಲಿನ ಒಟ್ಟು ಬೇಡಿಕೆ ಮತ್ತು ನೀಡಿಕೆಯನ್ನು ಅನುಸರಿಸಿ ಬೆಲೆಗಳು ನಿಗದಿ ಯಾಗುತ್ತವೆ. ಸಾಮಾನ್ಯವಾಗಿ ಸರಾಸರಿ ವೆಚ್ಚಕ್ಕೆ ಸಮನಾದ ಬೆಲೆಗಳು ನಿಗದಿ ಯಾಗುತ್ತವೆ.

೫. ಗ್ರಾಹಕರಿಗೆ ಮಾರುಕಟ್ಟೆಯಲ್ಲಿನ ವಸ್ತುಗಳ ಬೆಲೆಗಳ ಸ್ಪಷ್ಟ ಅರಿವು ಇರುತ್ತದೆ. ಆದ್ದರಿಂದ ಒಬ್ಬ ಮಾರಾಟಗಾರ ಒಂದು ವಸ್ತುವಿನ ಬೆಲೆ ಹೆಚ್ಚಿಸಿದರೆ ಗ್ರಾಹಕರು ಆತನ ಬಳಿ ಕೊಳ್ಳುವುದನ್ನು ನಿಲ್ಲಿಸಿ ಕಡಿಮೆ ಬೆಲೆಯಲ್ಲಿ ಮಾರುವವರ ಬಳಿ ಕೊಳ್ಳುತ್ತಾರೆ. ಬೇಡಿಕೆ ಕಡಿಮೆಯಾಗುವುದರಿಂದ ಸದರಿ ಮಾರಾಟಗಾರ ಇತರರ ಮಟ್ಟಕ್ಕೆ ಬೆಲೆ ಇಳಿಸಬೇಕಾಗುತ್ತದೆ.

೬. ಗ್ರಾಹಕರು ನಿರ್ದಿಷ್ಟ ಮಾರಾಟಗಾರನ ಬಳಿಯೇ ಕೊಳ್ಳಬೇಕೆಂಬ ನಿರ್ಬಂಧ ಇರುವುದಿಲ್ಲ.

೭. ಉತ್ಪಾದನಾಂಗಗಳು ಹಾಗೂ ವಸ್ತುಗಳು ಪರಿಪೂರ್ಣ ಚಲನೆ ಹೊಂದಿರುತ್ತವೆ. ಅವು ಹೆಚ್ಚಿನ ಪ್ರತಿಫಲ ದೊರಕುವ ಕಡೆಗೆ ಚಲಿಸುತ್ತವೆ.

೮. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸಾರಿಗೆ ವೆಚ್ಚ ಇರುವುದಿಲ್ಲ.

**ಶುದ್ಧ ಪೈಪೋಟಿ ಮಾರುಕಟ್ಟೆ :** ಇದು ಅಮೆರಿಕನ್ ಅರ್ಥಶಾಸ್ತ್ರಜ್ಞರ ಕಲ್ಪನೆ. ಇದು ಯಾವುದೇ ರೀತಿಯ ಏಕಸ್ವಾಮ್ಯದ ಲಕ್ಷಣಗಳಿಲ್ಲದ ಮಾರುಕಟ್ಟೆ. ಇದರ ಪ್ರಮುಖ ಲಕ್ಷಣಗಳೆಂದರೆ

೧. ಅಧಿಕ ಸಂಖ್ಯೆಯ ಮಾರಾಟಗಾರರೂ-ಕೊಳ್ಳುವವರೂ ಇರುತ್ತಾರೆ.
೨. ಮಾರುಕಟ್ಟೆಯಲ್ಲಿ ಏಕರೂಪದ ವಸ್ತುಗಳಿರುತ್ತವೆ.
೩. ಮಾರುಕಟ್ಟೆ ಮುಕ್ತ ಪ್ರವೇಶ ಹಾಗೂ ನಿರ್ಗಮನ ಅವಕಾಶವಿರುತ್ತದೆ.
೪. ಗ್ರಾಹಕರಿಗೆ ನಿರ್ದಿಷ್ಟ ಮಾರಾಟಗಾರನ ಬಳಿಯೇ ಕೊಳ್ಳಬೇಕೆಂಬ ನಿರ್ಬಂಧ ವಿರುವುದಿಲ್ಲ.

**೨. ಏಕಸ್ವಾಮ್ಯ**

ಮಾನೋ (ಒಂದು) ಹಾಗೂ ಪಲಿ (ಮಾರುವುದು) ಎಂಬ ಗ್ರೀಕ್ ಪದಗಳಿಂದ ಮಾನೋಪಲಿ ಎಂಬ ಪದ ಪಡೆಯಲಾಗಿದೆ. ಇದು ಪರಿಪೂರ್ಣ ಪೈಪೋಟಿ ಮಾರುಕಟ್ಟೆಗೆ ವ್ಯತಿರಿಕ್ತವಾದ ಲಕ್ಷಣಗಳನ್ನು ಹೊಂದಿದೆ. ಒಬ್ಬನೇ ಮಾರಾಟಗಾರ ಅಥವಾ ಉತ್ಪಾದಕ ನಿದ್ದು ಅವನು ಮಾರುಕಟ್ಟೆಯಲ್ಲಿನ ಒಂದು ವಸ್ತುವಿನ ನೀಡಿಕೆ ಹಾಗೂ ಅದರ ಬೆಲೆ ಗಳನ್ನು ಲಾಭದ ದೃಷ್ಟಿಯಿಂದ ನಿಯಂತ್ರಿಸುವ ವ್ಯವಸ್ಥೆಯೆ ಏಕಸ್ವಾಮ್ಯ.

ಟ್ರಿಫಿನ್ ಅವರ ಪ್ರಕಾರ "ಒಂದು ಉದ್ಯಮವು ತಾನು ಮಾರಾಟ ಮಾಡುವ ವಸ್ತುವಿನ ಬೆಲೆಯನ್ನು ಬದಲಾಯಿಸುವ ಪೂರ್ಣ ಸ್ವಾತಂತ್ರ್ಯ ಪಡೆದಿದ್ದರೆ ಅದೇ ಏಕಸ್ವಾಮ್ಯ."

ಮ್ಯಾಕ್‌ನೆಲ್ ಅವರ ಪ್ರಕಾರ "ಸಮೀಪದ ಬದಲಿ ವಸ್ತುಗಳು ಇಲ್ಲದ ವಸ್ತುವಿನ ಉತ್ಪಾದನೆಯು ಒಂದು ಉದ್ಯಮದ ಹತೋಟಿಯಲ್ಲಿದ್ದಾಗ ಅದು ಶುದ್ಧ ಏಕಸ್ವಾಮ್ಯ."

ಇಲ್ಲಿ ಮಾರಾಟಗಾರ ವಸ್ತುವಿನ ನೀಡಿಕೆಯನ್ನು ಮತ್ತು ಬೆಲೆಗಳನ್ನು ನಿರ್ಧರಿಸುತ್ತಾನೆ. ಬೆಲೆಗಳನ್ನು ಹೆಚ್ಚಿಸುವ ಮೂಲಕ ಲಾಭ ಹೆಚ್ಚಿಸಿಕೊಳ್ಳುತ್ತಾನೆ. ಇಲ್ಲಿ ಮಾರಾಟಗಾರನೆ ಪ್ರಭುವಾಗಿರುತ್ತಾನೆ.

**ಏಕಸ್ವಾಮ್ಯ ಮಾರುಕಟ್ಟೆಯ ಲಕ್ಷಣಗಳು**

೧. ಮಾರುಕಟ್ಟೆಯಲ್ಲಿ ಒಬ್ಬನೇ ಮಾರಾಟಗಾರ / ಉತ್ಪಾದಕನಿರುತ್ತಾನೆ. ಇಲ್ಲಿ ಉದ್ದಿಮೆ ಮತ್ತು ಕೈಗಾರಿಕೆ ಒಂದೇ ಆಗಿರುತ್ತದೆ.
೨. ಹೊಸ ಉದ್ದಿಮೆಗಳು ಮಾರುಕಟ್ಟೆ ಪ್ರವೇಶಿಸುವುದಕ್ಕೆ ಏಕಸ್ವಾಮ್ಯ ಉದ್ಯಮಿ ಅಡ್ಡಿ ಉಂಟು ಮಾಡುತ್ತಾನೆ.
೩. ಏಕಸ್ವಾಮ್ಯ ಮಾರಾಟಗಾರ ಅಥವಾ ಉತ್ಪಾದಕ ನೀಡುವ ವಸ್ತುಗಳಿಗೆ ಸಮೀಪದ ಬದಲಿ ವಸ್ತುಗಳಿರುವುದಿಲ್ಲ. ಆದ್ದರಿಂದ ಗ್ರಾಹಕರಿಗೆ ಆಯ್ಕೆಯ ಅವಕಾಶ ಇರುವುದಿಲ್ಲ.
೪. ಆದ್ದರಿಂದ ಏಕಸ್ವಾಮ್ಯ ಉದ್ಯಮಿಯು ವಸ್ತುವಿನ ನೀಡಿಕೆಯನ್ನು ನಿಯಂತ್ರಿಸಿ ಅದು ಯಾವಾಗಲೂ ಬೇಡಿಕೆಗಿಂತ ಕಡಿಮೆ ಇರುವಂತೆ ವ್ಯವಸ್ಥೆಗೊಳಿಸುತ್ತಾನೆ.
೫. ಮಾರಾಟಗಾರನು ವಸ್ತುವಿನ ಬೆಲೆಯನ್ನು ನಿರ್ಧರಿಸುತ್ತಾನೆ - ನಿಗದಿಪಡಿಸುತ್ತಾನೆ.

ಬೆಲೆ ಹೆಚ್ಚಿಸುವುದರ ಮೂಲಕ ಗರಿಷ್ಠ ಲಾಭ ಪಡೆದುಕೊಳ್ಳುತ್ತಾನೆ. ಇಲ್ಲಿ ಮಾರಾಟಗಾರನ ಪ್ರಭುತ್ವ ಸ್ಥಾಪಿತವಾಗಿರುತ್ತದೆ.

೬. ಮಾರಾಟಗಾರನು ಬೆಲೆಗಳ ತಾರತಮ್ಯ ಉಂಟು ಮಾಡುತ್ತಾನೆ. ಒಂದೇ ವಸ್ತುವನ್ನು ಬೇರೆ ಬೇರೆ ಗ್ರಾಹಕರಿಗೆ ಬೇರೆ ಬೇರೆ ಸಮಯದಲ್ಲಿ ವಿಭಿನ್ನ ಬೆಲೆಗಳಲ್ಲಿ ಮಾರಾಟ ಮಾಡುತ್ತಾನೆ.

೭. ಬದಲಿ ವಸ್ತುಗಳು ಹಾಗೂ ಇತರೆ ಮಾರಾಟಗಾರರಿಂದ ಪೈಪೋಟಿ ಇಲ್ಲದೆ ಇರುವುದರಿಂದ, ವಸ್ತುವಿನ ಜಾಹೀರಾತು ಅವಶ್ಯಕವಲ್ಲ. ಆದ್ದರಿಂದ ಈ ಮಾರುಕಟ್ಟೆಯಲ್ಲಿ ಜಾಹೀರಾತು ವೆಚ್ಚ ಇರುವುದಿಲ್ಲ.

**೩. ಸ್ವಾಮ್ಯಯುತ ಪೈಪೋಟಿ**

ವಾಸ್ತವ ಜಗತ್ತಿನಲ್ಲಿ ಪರಿಪೂರ್ಣ ಪೈಪೋಟಿ ಮಾರುಕಟ್ಟೆಯೂ, ಸಂಪೂರ್ಣ ಏಕಸ್ವಾಮ್ಯವೂ ಅಪರೂಪ. ಈ ಎರಡೂ ಮಾರುಕಟ್ಟೆಗಳ ಕೆಲವು ಲಕ್ಷಣಗಳನ್ನು ಒಟ್ಟುಗೂಡಿಸಿಕೊಂಡಿರುವ ಸ್ವಾಮ್ಯಯುತ ಪೈಪೋಟಿ ವ್ಯವಸ್ಥೆ ಸಾಮಾನ್ಯವಾಗಿ ಕಂಡುಬರುತ್ತದೆ. ಪ್ರೊ. ಚೇಂಬರ್‌ಲಿನ್ ಅವರು ಸ್ವಾಮ್ಯಯುತ ಪೈಪೋಟಿ ಎಂಬ ಪರಿಭಾಷೆಯಲ್ಲಿ ಶ್ರೀಮತಿ ಜೋನ್ಸ್ ರಾಬಿನ್ಸ್‌ಸನ್ ಅವರು ಅಪರಿಪೂರ್ಣ ಪೈಪೋಟಿ ಎಂಬ ಪರಿಭಾಷೆಯಲ್ಲಿ ಇದನ್ನು ವಿವರಿಸಿದ್ದಾರೆ. ಅಪರಿಪೂರ್ಣ ಪೈಪೋಟಿಯೆಂಬುದು ಸ್ವಾಮ್ಯಯುತ ಪೈಪೋಟಿಯನ್ನು, ದ್ವಿಜನ ಸಾಮ್ಯ, ಕೆಲಜನ ಸ್ವಾಮ್ಯ ವ್ಯವಸ್ಥೆಗಳನ್ನು ಒಳಗೊಂಡಿದೆ.

ಸ್ಟೋನಿಯರ್ ಮತ್ತು ಹೇಗ್ ಅವರ ಪ್ರಕಾರ : "ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯಲ್ಲಿ ಹೆಚ್ಚಿನ ಸ್ವಾಮ್ಯತೆ ಹೊಂದಿರುವ ವಸ್ತುಗಳನ್ನು ಉತ್ಪಾದಿಸುವ ಹಲವು ಉದ್ಯಮಗಳ ನಡುವೆ ತೀವ್ರ ಪೈಪೋಟಿ ಇರುತ್ತದೆ. ಆದರೆ ಇದು ಪರಿಪೂರ್ಣ ಪೈಪೋಟಿಯಲ್ಲ."

**ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯ ಲಕ್ಷಣಗಳು**

೧. ಹೆಚ್ಚಿನ ಸಂಖ್ಯೆಯ ಮಾರಾಟಗಾರರಿರುತ್ತಾರೆ. ಈ ಮಾರುಕಟ್ಟೆಯಲ್ಲಿ ಮಾರಾಟಗಾರರ ಸಂಖ್ಯೆ ಮಿತವಾಗಿರುತ್ತದೆ. ಈ ಮಾರುಕಟ್ಟೆಯಲ್ಲಿ ಯಾರೂ ಒಟ್ಟು ಉತ್ಪನ್ನದ ದೊಡ್ಡ ಭಾಗವನ್ನು ನಿಯಂತ್ರಿಸಲಾರರು. ಪ್ರತಿ ಮಾರಾಟಗಾರನೂ ತನ್ನದೇ ಆದ ಬೆಲೆ ಉತ್ಪನ್ನ ನೀತಿಯನ್ನು ಅನುಸರಿಸುತ್ತಿದ್ದರೂ ಅದು ಇತರ ಮಾರಾಟಗಾರರ ನೀತಿಯ ಮೇಲೆ ಪ್ರಭಾವ ಬೀರಲಾರದು.

೨. ಮಾರುಕಟ್ಟೆಗೆ ಪ್ರವೇಶ - ನಿರ್ಗಮನ ಮುಕ್ತವಾಗಿರುತ್ತದೆ. ಹೊಸ ಉದ್ಯಮಿಗಳ ಮಾರುಕಟ್ಟೆ ಪ್ರವೇಶಕ್ಕೆ ಯಾರಿಂದಲೂ ನಿರ್ಬಂಧವಿಲ್ಲ. ಮಾರುಕಟ್ಟೆಯಲ್ಲಿನ ಲಾಭದ ಪ್ರಮಾಣ ಅನುಸರಿಸಿ ಉದ್ದಿಮೆಗಳ ಪ್ರವೇಶ ಹಾಗೂ ನಿರ್ಗಮನ ಉಂಟಾಗುತ್ತದೆ.

೩. ವಸ್ತು ವೈವಿಧ್ಯತೆ ಈ ಮಾರುಕಟ್ಟೆಯ ಪ್ರಮುಖ ಲಕ್ಷಣ.

ಒಬ್ಬ ಮಾರಾಟಗಾರ ಹಾಗೂ ಇನ್ನೊಬ್ಬ ಮಾರಾಟಗಾರ ನೀಡುವ ಒಂದೇ ರೀತಿಯ ವಸ್ತುಗಳಲ್ಲಿ ಕೆಲವು ಬದಲಾವಣೆ ಉಂಟು ಮಾಡಿ ಅದು ವಿಭಿನ್ನವಾಗಿ ಗೋಚರಿಸುವಂತೆ, ಇದು ಬೇರೆ ಬೇರೆ ಗ್ರಾಹಕರಿಗೆ ಪ್ರಿಯವಾಗುವಂತೆ ಮಾಡುವ ವ್ಯವಸ್ಥೆ ವಸ್ತು ವೈವಿಧ್ಯತೆ.

ಬೇರೆ ಬೇರೆ ಮಾರಾಟಗಾರರು ನೀಡುವ, ಒಂದೇ ಉದ್ದೇಶಕ್ಕಾಗಿ ಬಳಸುವ ವಸ್ತುಗಳು, ರೂಪ, ಆಕಾರ, ಬಣ್ಣ, ರುಚಿ, ಗುಣಮಟ್ಟ, ಪ್ಯಾಕಿಂಗ್, ಪ್ರಚಾರ ಮುಂತಾದ ಅಂಶಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಹೊಂದಿದ್ದು ಬೇರೆ ಬೇರೆ ಗ್ರಾಹಕರಿಗೆ ಪ್ರಿಯವೆನಿಸುತ್ತವೆ.

ಉದಾ. ವಿವಿಧ ಸಂಸ್ಥೆಗಳ ಬೇರೆ ಬೇರೆ ಸಾಬೂನುಗಳು, ದಂತ ಮಂಜನಗಳು, ಅಲಂಕಾರ ಸಾಧನಗಳು, ವಾಹನಗಳು ಇತ್ಯಾಗಿ ವಸ್ತು ವೈವಿಧ್ಯತೆ ಹೊಂದಿವೆ. ಇವು ನಿಕಟ ಬದಲಿ ವಸ್ತುಗಳು ಮಾತ್ರ. ಪರಿಪೂರ್ಣ ಬದಲಿ ವಸ್ತುಗಳಲ್ಲ.

ಪ್ರತಿ ಉತ್ಪಾದಕನೂ ನಿರ್ದಿಷ್ಟ ವರ್ಗದ ಗುಂಪಿನ ಗ್ರಾಹಕರನ್ನು ಹಿಡಿದಿಟ್ಟು ಕೊಳ್ಳುತ್ತಾನೆ. ಬ್ರಾಂಡ್‌ನ ಹೆಸರು, ಸಂಸ್ಥೆಯ ಖ್ಯಾತಿ, ಆಕರ್ಷಕ ವಿನ್ಯಾಸಗಳು ಹಾಗೂ ಜಾಹಿರಾತಿನ ಆಧಾರದ ಮೇಲೆ ಕೆಲ ಗ್ರಾಹಕರು ಕೆಲವು ಉತ್ಪನ್ನಗಳನ್ನು ಅವುಗಳ ಬೆಲೆ ಹೆಚ್ಚಾಗಿದ್ದರೂ ಆಯ್ಕೆ ಮಾಡುತ್ತಾರೆ. ಹಾಗೂ ಅದರ ಆಯ್ಕೆ ಮುಂದುವರೆಸುತ್ತಾರೆ. ಅಂತಹ ಗ್ರಾಹಕರನ್ನ ಉಳಿಸಿಕೊಳ್ಳಲು ಉದ್ಯಮಗಳು ಹಲವು ತಂತ್ರಗಳನ್ನು ಬಳಸುತ್ತವೆ.

ಮಾರುಕಟ್ಟೆಯಲ್ಲಿ ವಸ್ತುಗಳಿಗೆ ಒಂದೇ ಬೆಲೆ ಇರುವುದಿಲ್ಲ. ಸಾರಿಗೆ ವೆಚ್ಚ, ಜಾಹಿರಾತು ಮುಂತಾದ ಮಾರಾಟದ ವೆಚ್ಚಗಳಿಂದಾಗಿ, ಉತ್ಪಾದನಾಂಗಗಳ ಚಲನೆಯಲ್ಲಿನ ಕೊರತೆಯಿಂದಾಗಿ ವಸ್ತುಗಳ ಬೆಲೆಗಳು ವಿಭಿನ್ನವಾಗಿರುತ್ತವೆ.

ಮಾರುಕಟ್ಟೆಯಲ್ಲಿ ಅಸಂಖ್ಯಾತ ವೈವಿಧ್ಯಮಯ ವಸ್ತುಗಳಿದ್ದು ಗ್ರಾಹಕರಿಗೆ ಮಾರುಕಟ್ಟೆ ಬೆಲೆಗಳ ಪೂರ್ಣ ಅರಿವು ಇರುವುದಿಲ್ಲ.

### ದ್ವಿಜನ ಸ್ವಾಮ್ಯ

ಇದು ಅಪರಿಪೂರ್ಣ ಪೈಪೋಟಿಯ ಒಂದು ವಿಧ. ಈ ಮಾರುಕಟ್ಟೆಯಲ್ಲಿ ಇಬ್ಬರು ಮಾರಾಟಗಾರರು ಇರುವ ವ್ಯವಸ್ಥೆ ದ್ವಿಜನ ಸ್ವಾಮ್ಯ ಮಾರುಕಟ್ಟೆ. ಇಬ್ಬರೂ ಮಾರಾಟ ಗಾರರೂ ಸ್ವತಂತ್ರವಾಗಿ ನೀತಿಗಳನ್ನು ರೂಪಿಸಿದರೂ ಒಬ್ಬರು ಮಾಡುವ ಬೆಲೆ ಹಾಗೂ ಉತ್ಪನ್ನದ ಬದಲಾವಣೆ ಇನ್ನೊಬ್ಬರ ಮೇಲೆ ಪ್ರಭಾವ ಬೀರುತ್ತದೆ. ಆದ್ದರಿಂದ ಎರಡೂ ಉದ್ಯಮಗಳು ಪರಸ್ಪರ ಅವಲಂಬಿ ಹಾಗೂ ಪ್ರಭಾವಿಯಾಗಿರುತ್ತವೆ.

ಇಬ್ಬರೂ ಉದ್ಯಮಿಗಳು ಪರಸ್ಪರ ನೀತಿಗಳ ಬಗ್ಗೆ, ನಡವಳಿಕೆಗಳ ಬಗ್ಗೆ, ಉದ್ದೇಶ ಗಳ ಬಗ್ಗೆ ಊಹಿಸಿ ನಿರ್ಧಾರ ಕೈಗೊಳ್ಳುವಲ್ಲಿ ಅನಿಶ್ಚಿತತೆ ಉಂಟಾಗುತ್ತದೆ. ಈ ಮಾರುಕಟ್ಟೆಯಲ್ಲಿ ವಸ್ತುವೈವಿಧ್ಯತೆಗೆ ಅವಕಾಶವಿದೆ. ಮಾರುಕಟ್ಟೆಯಲ್ಲಿ ಒಂದು ವಸ್ತುವಿಗೆ ಒಂದೇ ಬೆಲೆ ಇರುತ್ತದೆ.

ಎರಡೂ ಉದ್ಯಮಗಳು ಪರಸ್ಪರ ಪೈಪೋಟಿ ನಡೆಸಬಹುದು ಅಥವಾ ಒಪ್ಪಂದದ ಮೂಲಕ ನಿರ್ಣಯ ಮಾಡಿ ಸಂಪೂರ್ಣ ಏಕಸ್ವಾಮ್ಯ ಸಾಧಿಸಬಹುದು.

**ಕೆಲಜನ ಸ್ವಾಮ್ಯ**

ಇದು ಅಪರಿಪೂರ್ಣ ಪೈಪೋಟಿಯ ವಿಧ. ಈ ಮಾರುಕಟ್ಟೆಯಲ್ಲಿ ಕೆಲವೇ ಮಾರಾಟಗಾರರಿದ್ದು ಒಟ್ಟು ನೀಡಿಕೆಯ ಪ್ರಮುಖ ಪಾಲನ್ನು ಪ್ರತಿಯೊಬ್ಬರೂ ಒದಗಿಸುತ್ತಾರೆ. ಆದ್ದರಿಂದ ಪ್ರತಿಯೊಬ್ಬ ಮಾರಾಟಗಾರನೂ ಇತರೆ ಮಾರಾಟಗಾರರ ಬೆಲೆ ಉತ್ಪನ್ನ ನೀತಿಯ ಮೇಲೆ ಪ್ರಭಾವ ಬೀರಬಲ್ಲರು. ಹೊಸ ಉದ್ಯಮಿಗಳ ಮಾರುಕಟ್ಟೆ ಪ್ರವೇಶಕ್ಕೆ ಇವರು ನಿರ್ಬಂಧ ಉಂಟು ಮಾಡುತ್ತಾರೆ. ಪರಸ್ಪರರ ಪೈಪೋಟಿಯಿಂದ ಮುಕ್ತವಾಗಲು ವಸ್ತು ವೈವಿಧ್ಯತೆಯನ್ನು ಬಳಸುತ್ತಾರೆ. ಹಾಗೂ ಏಕಸ್ವಾಮ್ಯ ಪರಿಸ್ಥಿತಿ ಸೃಷ್ಟಿಸಬಲ್ಲರು.

ಮಾರಾಟಗಾರರು ಪರಸ್ಪರ ನೀತಿಗಳಿಗೆ ಪ್ರಜ್ಞಾಪೂರ್ವಕವಾಗಿ ಸ್ಪಂದಿಸಿದರೂ, ತೀವ್ರತರ ಬೆಲೆ ಕಡಿತ ಮುಂತಾದ ಕ್ರಮಗಳನ್ನು ಕೈಗೊಳ್ಳುವುದಿಲ್ಲ. ಬೆಲೆ ಕಡಿತವಲ್ಲದೆ, ಇತರೆ ವಿಧಾನಗಳಿಂದ ಪೈಪೋಟಿ ಎದುರಿಸಲು ಪ್ರಯತ್ನಿಸುತ್ತಾರೆ. ಉದಾ. ಗುಣಮಟ್ಟದಲ್ಲಿನ ವ್ಯತ್ಯಾಸ, ಜಾಹಿರಾತುಗಳು ಮುಂತಾದವು.

**ಏಕ ಗ್ರಾಹಕ, ದ್ವಿ ಗ್ರಾಹಕ, ಕೆಲ ಗ್ರಾಹಕ ಮಾರುಕಟ್ಟೆಗಳು**

ಮಾರುಕಟ್ಟೆಯಲ್ಲಿ ಉತ್ಪಾದಕರು ಪ್ರಮುಖವೂ ನಿರ್ಣಾಯಕವೂ ಆಗಿರುವಂತೆ ವಿಶೇಷ ಸಂದರ್ಭಗಳಲ್ಲಿ ಗ್ರಾಹಕರೂ ನಿರ್ಣಾಯಕರಾಗಿರುತ್ತಾರೆ. ಅದರ ಆಧಾರದ ಮೇಲೆ ಏಕ ಗ್ರಾಹಕ, ದ್ವಿ ಗ್ರಾಹಕ ಮತ್ತು ಕೆಲ ಗ್ರಾಹಕ ಮಾರುಕಟ್ಟೆಗಳನ್ನು ಗುರುತಿಸಬಹುದು.

**ಏಕಗ್ರಾಹಕ ಮಾರುಕಟ್ಟೆ**

ಒಬ್ಬನೇ ಒಬ್ಬ ಕೊಳ್ಳುವವನು ಅಥವಾ ಕೊಳ್ಳುವವರೆಲ್ಲಾ ಒಟ್ಟಾಗಿರುವ ಒಂದೇ ಸಂಸ್ಥೆ ಒಂದು ವಸ್ತುವಿನ ಉತ್ಪನ್ನದ ಸಂಪೂರ್ಣ ಅಥವಾ ಸಂಪೂರ್ಣಕ್ಕೆ ಸಮೀಪದ ಪಾಲನ್ನು ಕೊಳ್ಳುವಂತಿದ್ದರೆ ಅದು ಏಕಗ್ರಾಹಕ ಮಾರುಕಟ್ಟೆ. ಉದಾ. ಭಾರತದಲ್ಲಿ ಎಲ್ಲಾ ರೀತಿಯ ರೈಲ್ವೇ ಸಂಬಂಧಿತ ವಸ್ತುಗಳನ್ನು ಕೊಳ್ಳುವ ಏಕೈಕ ಸಂಸ್ಥೆ ಭಾರತೀಯ ರೈಲ್ವೆ. ನಿರ್ದಿಷ್ಟ ಪ್ರದೇಶದಲ್ಲಿ ಅಸಂಖ್ಯಾತ ಕಬ್ಬಿನ ಬೆಳೆಗಾರರಿದ್ದರು, ಕಬ್ಬನ್ನು ಕೊಳ್ಳುವ ಒಂದು ಕಾರ್ಖಾನೆ ಇರುತ್ತದೆ. ಭಾರತದಲ್ಲಿ ಅಣುಶಕ್ತಿಗೆ ಸಂಬಂಧಿಸಿದ ಸಂಪನ್ಮೂಲಗಳನ್ನು ಕೊಳ್ಳುವ ಏಕೈಕ ಗ್ರಾಹಕ ಅಣುಶಕ್ತಿ ಇಲಾಖೆ. ಇದು ಕೊಳ್ಳುವವರ ಏಕಸ್ವಾಮ್ಯ ಮಾರುಕಟ್ಟೆಯಾಗಿದ್ದು, ಏಕಸ್ವಾಮ್ಯದ ಹೆಚ್ಚಿನ ಲಕ್ಷಣಗಳನ್ನು ಹೊಂದಿದೆ. ಒಬ್ಬ ಕೊಳ್ಳುವವನು, ಹಲವರು ಮಾರುವವರು ಇದ್ದು ವಸ್ತುವಿನ ಬೇಡಿಕೆ ಹಾಗೂ ಬೆಲೆಯನ್ನು ವ್ಯಾಪಾರದ ಷರತ್ತುಗಳನ್ನು ಕೊಳ್ಳುವವನು ನಿರ್ಧರಿಸುತ್ತಾನೆ. ನಿಯಂತ್ರಿತ

ಬೆಲೆಗಳಲ್ಲಿನ ಏರಿಳಿತವಿರುವುದಿಲ್ಲ. ಕೊಳ್ಳುವವನು ಸಾಮಾನ್ಯವಾಗಿ ಕಡಿಮೆ ಬೆಲೆಗೆ ಒಪ್ಪಿಗೆ ನೀಡಿ, ಲಾಭ ಹೆಚ್ಚಿಸಿ ಕೊಳ್ಳುತ್ತಾನೆ.

**ದ್ವಿಗ್ರಾಹಕ ಮಾರುಕಟ್ಟೆ**

ಇಬ್ಬರು ಕೊಳ್ಳುವವರು / ಗ್ರಾಹಕರಿದ್ದು ಒಂದು ವಸ್ತುವಿನ ಸಂಪೂರ್ಣ ಪ್ರಮಾಣ ಅಥವಾ ಅತಿ ಹೆಚ್ಚಿನ ಪ್ರಮಾಣ ಕೊಳ್ಳುವಂತಿದ್ದರೆ ಅದು ದ್ವಿಗ್ರಾಹಕ ಮಾರುಕಟ್ಟೆ ಎನಿಸುತ್ತದೆ. ಪೂರೈಕೆ ಅಧಿಕ ಪ್ರಮಾಣದಲ್ಲಿದ್ದರೆ ಕೊಳ್ಳುವವರು ಪರಸ್ಪರ ಪೈಪೋಟಿ ನಡೆಸುವ ಅಗತ್ಯವಿರುವುದಿಲ್ಲ. ಇಲ್ಲಿ ಕೊಳ್ಳುವವರ ಏಕಸ್ವಾಮ್ಯದ ಲಕ್ಷಣಗಳನ್ನು ಕಾಣಬಹುದು.

**ಕೆಲ ಗ್ರಾಹಕ ಮಾರುಕಟ್ಟೆ**

ಕೆಲವೇ ಗ್ರಾಹಕರು ಒಂದು ವಸ್ತುವಿನ ಮಾರುಕಟ್ಟೆಯ ಸಂಪೂರ್ಣ ನೀಡಿಕೆಯನ್ನು ಕೊಳ್ಳುವುದಾದರೆ ಅದು ಕೆಲ ಗ್ರಾಹಕ ಮಾರುಕಟ್ಟೆ ಎನ್ನಬಹುದು. ಅದರಲ್ಲಿ ಕೆಲವು ದೊಡ್ಡ ಪ್ರಮಾಣದ ಕೊಳ್ಳುವವರು ಮಾರುಕಟ್ಟೆಯಲ್ಲಿ ಬೆಲೆಗಳ ನಿಗದಿಯಲ್ಲಿ ಪ್ರಭಾವ ಬೀರಬಹುದು.

## ೪.೪. ಸಾರಾಂಶ

ಉತ್ಪಾದನಾ ವೆಚ್ಚ - ಸರಕುಗಳನ್ನು ಉತ್ಪಾದಿಸಲು ಉದ್ದಿಮೆಯೊಂದು ಭರಿಸುವ ಎಲ್ಲ ಖರ್ಚುಗಳ ಒಟ್ಟು ಮೊತ್ತವೇ ಉತ್ಪಾದನಾವೆಚ್ಚ ಅಥವಾ ಒಟ್ಟು ವೆಚ್ಚ. ಇದರಲ್ಲಿ ಉತ್ಪಾದನಾಂಗಗಳಿಗೆ ನೀಡುವ ಸಂಭಾವನೆ, ಕಾರ್ಮಿಕರ ಕೂಲಿ-ಸಂಬಳ, ಕಚ್ಚಾಸಾಮಗ್ರಿಗಳ ಖರ್ಚು, ಬಡ್ಡಿ, ಸವಕಳಿ ವೆಚ್ಚ, ವಿದ್ಯುತ್ ಖರ್ಚು, ಜಾಹೀರಾತು ಖರ್ಚು - ಹೀಗೆ ಎಲ್ಲವೂ ಸೇರಿರುತ್ತವೆ. ಇದನ್ನು ಹಣದ ವೆಚ್ಚವೆಂದೂ ಕರೆಯಬಹುದು. ಒಟ್ಟು ವೆಚ್ಚ - ಉತ್ಪಾದನಾ ವೆಚ್ಚ - ಹಣದ ವೆಚ್ಚ - ಇವು ಮೂರು ಸಮಾನಾರ್ಥಕ ಪದಗಳು.

ಉತ್ಪಾದನಾ ವೆಚ್ಚದಲ್ಲಿ ವ್ಯಕ್ತ ಮತ್ತು ಅವ್ಯಕ್ತ ವೆಚ್ಚದ ಬಾಬ್ತುಗಳಿರುತ್ತವೆ. ಉದ್ದಿಮೆಯು ನೇಮಿಸಿಕೊಂಡ ಮತ್ತು ಖಾತೆಯಿಂದ ಹಣ ಪಾವತಿ ಮಾಡುವ ಖರ್ಚುಗಳು ವ್ಯಕ್ತ ವೆಚ್ಚ. ಆದರೆ ಉದ್ದಿಮೆಯ ಮಾಲಿಕರು ತಾವು ಸ್ವಂತ ನಿಯೋಜಿಸಿದ ಬಂಡವಾಳ, ಶ್ರಮ, ನಿರ್ವಹಣೆ, ಕಟ್ಟಡ ಮುಂತಾದವುಗಳ ಬಾಬ್ತು ಖರ್ಚನ್ನು ಪಾವತಿ ಮಾಡಿರುವುದಿಲ್ಲ. ಇಂತಹ ಖರ್ಚುಗಳು ಅವ್ಯಕ್ತ ವೆಚ್ಚಗಳು. ಅರ್ಥಶಾಸ್ತ್ರದಲ್ಲಿ ಉತ್ಪಾದನಾ ವೆಚ್ಚವು ವ್ಯಕ್ತ ಹಾಗೂ ಅವ್ಯಕ್ತ ವೆಚ್ಚಗಳೆರಡನ್ನು ಒಳಗೊಂಡಿರುತ್ತದೆ. ಲೆಕ್ಕ ಪರಿಶೋಧನಾ ಶಾಸ್ತ್ರದಲ್ಲಿ ವ್ಯಕ್ತ ವೆಚ್ಚಗಳನ್ನು ಮಾತ್ರ ಪರಿಗಣಿಸಲಾಗುತ್ತದೆ.

ಉತ್ಪಾದನಾ ಪ್ರಕ್ರಿಯೆಯಲ್ಲಿ ಉದ್ದಿಮೆದಾರ, ಶ್ರಮಿಕರು, ನಿರ್ವಹಣಕಾರರು ಭರಿಸುವ ಮಾನಸಿಕ ಒತ್ತಡ, ಮಾಡುವ ತ್ಯಾಗ, ಪರಿಶ್ರಮಗಳನ್ನು ಹಣದ ರೂಪದಲ್ಲಿ ಮಾಪನ ಮಾಡುವುದು ಅಥವಾ ವ್ಯಕ್ತಪಡಿಸುವುದು ಅಸಾಧ್ಯ. ಇಂತಹ ಖರ್ಚುಗಳನ್ನು ನೈಜ ವೆಚ್ಚವೆಂದು ಹೇಳಲಾಗಿದೆ.

ಸಂಪನ್ಮೂಲಗಳ ಬಹುಮುಖ್ಯ ಲಕ್ಷಣವೆಂದರೆ ಅವುಗಳ ಬಹೂಪಯೋಗಿ ಗುಣ. ಅವುಗಳನ್ನು ಅನೇಕ ರೀತಿಯಲ್ಲಿ ಬಳಸಿಕೊಳ್ಳಬಹುದು. ಆದರೆ ಅವನ್ನು ಒಂದು ಉದ್ದೇಶಕ್ಕೆ ಬಳಸಿದರೆ ಅವು ಮತ್ತೊಂದು ಉಪಯೋಗಕ್ಕೆ ದೊರೆಯುವುದಿಲ್ಲ. ಆದ್ದರಿಂದ ಸಂಪನ್ಮೂಲಗಳನ್ನು ಯಾವ ಉದ್ದೇಶಕ್ಕೆ ಬಳಸಬೇಕು ಎಂಬ ಆಯ್ಕೆ ತುಂಬಾ ಜಟಿಲವಾದ ಸಂಗತಿಯಾಗಿದೆ.

ಒಂದು ವಸ್ತುವನ್ನು ತಯಾರಿಸಲು ಬಳಸಿರುವ ಸಂಪನ್ಮೂಲಗಳು ಇತರೆ ಉಪಯೋಗಕ್ಕೆ ಲಭ್ಯವಿರುವುದಿಲ್ಲ. ಒಂದು ಎಕರೆ ಭೂಮಿಯಲ್ಲಿ ಜೋಳವನ್ನು ಬೆಳೆಯಬಹುದು. ಜೋಳ ಬೆಳೆಯುವ ವೆಚ್ಚವೆಂದರೆ ಬಿಟ್ಟುಕೊಟ್ಟ ಗೋಧಿ ಬೆಳೆಯಾಗಿದೆ. ಇದನ್ನು ಸದಾವಕಾಶ ವೆಚ್ಚವೆಂದು ಕರೆಯಲಾಗಿದೆ.

ಒಟ್ಟು ವೆಚ್ಚವನ್ನು ಉತ್ಪಾದಿಸಿದ ಸರಕುಗಳ ಪ್ರಮಾಣದಿಂದ ಭಾಗಿಸಿದರೆ ಸರಾಸರಿ

ವೆಚ್ಚ ದೊರೆಯುತ್ತದೆ. ಸರಾಸರಿ ವೆಚ್ಚವೆಂದರೆ ಉತ್ಪಾದಿಸಿದ ಪ್ರತಿಯೊಂದು ಘಟಕಕ್ಕೆ ತಗುಲುವ ವೆಚ್ಚ.

ಒಂದು ಸಂದರ್ಭದಲ್ಲಿ ಉತ್ಪಾದಿಸಿದ ಸರಕುಗಳ ಒಟ್ಟು ವೆಚ್ಚ ಮತ್ತು ಒಂದು ಘಟಕವನ್ನು ಹೆಚ್ಚುವರಿಯಾಗಿ ಉತ್ಪಾದಿಸಿದಾಗ ಉಂಟಾಗುವ ಒಟ್ಟು ವೆಚ್ಚಗಳ ನಡುವಿನ ವ್ಯತ್ಯಾಸವನ್ನು ಸೀಮಾಂತ ವೆಚ್ಚವೆಂದು ಕರೆಯಬಹುದು. ಹೆಚ್ಚುವರಿ ಉತ್ಪಾದಿತ ಘಟಕದ ವೆಚ್ಚವೇ ಸೀಮಾಂತ ವೆಚ್ಚ.

ಒಂದು ಉದ್ದಿಮೆಯನ್ನು ಸ್ಥಾಪಿಸಲು ಸ್ಥಿರವಾದ ಉತ್ಪಾದನಾಂಗಗಳ ಮೇಲೆ ಹಣ ವ್ಯಯಿಸಬೇಕಾಗುತ್ತದೆ. ಉದಾಹರಣೆಗೆ ಕಟ್ಟಡ, ಯಂತ್ರಗಳು, ಖಾಯಂ ಉದ್ಯೋಗಿ ಮುಂತಾದವು. ಈ ಬಗೆಯ ವೆಚ್ಚಗಳು ಉದ್ದಿಮೆಯಲ್ಲಿನ ಉತ್ಪನ್ನದ ಪ್ರಮಾಣದೊಂದಿಗೆ ಬದಲಾಗುವುದಿಲ್ಲ. ಆದ್ದರಿಂದ ಇವುಗಳನ್ನು ಸ್ಥಿರ ವೆಚ್ಚ ಎನ್ನಲಾಗಿದೆ.

ಉದ್ದಿಮೆಯು ಉತ್ಪಾದನೆಯನ್ನು ಆರಂಭಿಸಿದ ನಂತರ ಕಚ್ಚಾ ಸಾಮಗ್ರಿಗಳ ಮೇಲೆ ವಿದ್ಯುತ್ ಮೇಲೆ ಹಣ ವ್ಯಯಿಸಬೇಕಾಗುತ್ತದೆ. ಇವು ಬದಲಾಗುವ ವೆಚ್ಚ. ಉತ್ಪನ್ನದ ಪ್ರಮಾಣ ಕಡಿಮೆಯಾದರೆ ಬದಲಾಗುವ ವೆಚ್ಚ ಕಡಿಮೆಯಿರುತ್ತದೆ. ಉತ್ಪನ್ನದ ಪ್ರಮಾಣ ಅಧಿಕವಿದ್ದಾಗ ಅದು ಅಧಿಕವಾಗುತ್ತದೆ. ಉತ್ಪನ್ನದ ಪ್ರಮಾಣ ಶೂನ್ಯವಿದ್ದಾಗ ಬದಲಾಗುವ ವೆಚ್ಚವು ಶೂನ್ಯವಾಗಿರುತ್ತದೆ.

ಸ್ಥಿರ ವೆಚ್ಚ ಹಾಗೂ ಬದಲಾಗುವ ವೆಚ್ಚಗಳು ಕೂಡಿದರೆ ಒಟ್ಟು ವೆಚ್ಚ ದೊರೆಯುತ್ತದೆ. ಈ ಬಗೆಯ ವರ್ಗೀಕರಣವು ಅಲ್ಪಾವದಿಯಲ್ಲಿ ಮಾತ್ರ ಅನ್ವಯವಾಗುತ್ತದೆ.

ಸರಾಸರಿ ವೆಚ್ಚ ರೇಖೆಯು ಇಂಗ್ಲಿಷ್ ಅಕ್ಷರಮಾಲೆಯು 'ಯು' ಅಕ್ಷರದ ರೂಪದಲ್ಲಿರುತ್ತದೆ.

ಉದ್ದಿಮೆಯು ನಾನು ಉತ್ಪಾದಿಸಿದ ಸರಕುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತದೆ. ಈ ಮಾರಾಟದಿಂದ ಬಂದ ದ್ರವ್ಯವೇ ಆದಾಯ. ಆದಾಯವು ಮಾರಾಟ ಮಾಡಿದ ಸರಕುಗಳ ಸಂಖ್ಯೆ ಮತ್ತು ಸರಕಿನ ಬೆಲೆಗಳನ್ನು ಅವಲಂಬಿಸಿರುತ್ತದೆ. ಮಾರಾಟ ಮಾಡಿದ ಸರಕುಗಳ ಸಂಖ್ಯೆ ೩೦ ಇದ್ದು ಸರಕಿನ ಬೆಲೆ ರೂ. ೫ ಇದ್ದಾಗ, ಒಟ್ಟು ಆದಾಯ ರೂ. ೧೦೦. ಇದು ಒಟ್ಟು ಆದಾಯ.

ಒಟ್ಟು ಆದಾಯವನ್ನು ಮಾರಾಟ ಮಾಡಿದ ಒಟ್ಟು ಸರಕುಗಳ ಸಂಖ್ಯೆಯಿಂದ ಭಾಗಿಸಿದರೆ ಸರಾಸರಿ ಆದಾಯ ದೊರೆಯುತ್ತದೆ. ಸರಾಸರಿ ಆದಾಯವು ಸರಕಿನ ಬೆಲೆಗೆ ಸಮನಾಗಿರುತ್ತದೆ. ಒಂದು ಹೆಚ್ಚುವರಿ ಸರಕಿನ ಮಾರಾಟದಿಂದ ಒಟ್ಟು ಆದಾಯದಲ್ಲಿ ಉಂಟಾಗುವ ಬದಲಾವಣೆಯನ್ನು ಸೀಮಾಂತ ಆದಾಯವೆಂದು ಕರೆಯಬಹುದು. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸರಾಸರಿ ಆದಾಯ ರೇಖೆಯು 'X' ಅಕ್ಷಕ್ಕೆ ಸಮಾನಾಂತರವಾಗಿರುತ್ತದೆ. ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸರಾಸರಿ ಆದಾಯ ರೇಖೆಯು ಮೇಲಿನಿಂದ ಕೆಳಗೆ ಇಳಿಮುಖವಾಗಿರುತ್ತದೆ.

ಕೊಳ್ಳುವವರು ಮತ್ತು ಮಾರಾಟ ಮಾಡುವವರ ನಡುವಿನ ಸಂಪರ್ಕದ ಮೂಲಕ ನಡೆಯುವ ಮಾರಾಟ ಖರೀದಿ ವ್ಯವಹಾರವನ್ನು ಮಾರುಕಟ್ಟೆಯೆಂದು ಕರೆಯಬಹುದು. ಮಾರುಕಟ್ಟೆಯು ನಿರ್ದಿಷ್ಟ ಸ್ಥಳದಲ್ಲಿ ನೆಲೆಗೊಂಡಿರಬೇಕಾಗಿಲ್ಲ. ಖರೀದಿದಾರರ ಮತ್ತು ಮಾರಾಟಗಾರರ ನಡುವಿನ ಸಂಪರ್ಕ ಮುಖ್ಯ.

ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ಉದ್ದಿಮೆಗಳ ಸಂಖ್ಯೆ ಹಾಗೂ ಖರೀದಿದಾರರ ಸಂಖ್ಯೆ ಅಪರಮಿತವಾಗಿದ್ದು, ಏಕರೂಪಿ ಸರಕಿನ ಬೆಲೆ ಒಂದೆ ತೆರವಾಗಿದ್ದು ಉದ್ದಿಮೆಗಳಿಗೆ ಪ್ರವೇಶ ಹಾಗೂ ನಿರ್ಗಮನ ಮುಕ್ತವಾಗಿದ್ದರೆ, ಅಂತಹ ಮಾರುಕಟ್ಟೆಯು ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎನಿಸಿಕೊಳ್ಳುತ್ತದೆ.

ಮಾರುಕಟ್ಟೆಯಲ್ಲಿ ಒಬ್ಬನೇ ಮಾರಾಟಗಾರನಿದ್ದರೆ ಅದು ಏಕಸ್ವಾಮ್ಯ. ಇಬ್ಬರು ಮಾರಾಟಗಾರರಿದ್ದರೆ ಅದು ದ್ವಿಸ್ವಾಮ್ಯ ಮಾರುಕಟ್ಟೆ. ಮಾರಾಟಗಾರರ ಸಂಖ್ಯೆ ಪರಿಮಿತ ವಾಗಿದ್ದರೆ ಅಥವಾ ಮಾರಾಟಗಾರರ ಸಂಖ್ಯೆ ಕೆಲವೇ ಜನರಿಗೆ ಸೀಮಿತವಾಗಿದ್ದರೆ ಅದು ಕೆಲ ಜನ ಸ್ವಾಮ್ಯ.

ಮಾರುಕಟ್ಟೆಯಲ್ಲಿ ಒಬ್ಬನೇ ಖರೀದಿದಾರನಿದ್ದರೆ ಅದು ಏಕಗ್ರಾಹಕ ಮಾರುಕಟ್ಟೆ. ಖರೀದಿದಾರರು ಇಬ್ಬರಿದ್ದರೆ, ಅದು ದ್ವಿಗ್ರಾಹಕ ಮಾರುಕಟ್ಟೆ. ಕೆಲವು ಖರೀದಿದಾರರಿದ್ದರೆ ಅದು ಕೆಲಜನ ಗ್ರಾಹಕ ಮಾರುಕಟ್ಟೆ.

## ೪.೫. ಪಾರಿಭಾಷಿಕ ಕೋಶ

ಒಟ್ಟು ವೆಚ್ಚ - Total Cost : ಒಂದು ವಸ್ತುವಿನ ನಿರ್ದಿಷ್ಟ ಪ್ರಮಾಣದ ಉತ್ಪಾದನೆಗೆ ಬಳಸಲಾಗಿರುವ ಹಣದ ಮೊತ್ತ.

ಹಣದ ವೆಚ್ಚ - Money Cost : ಒಂದು ವಸ್ತುವಿನ ನಿರ್ದಿಷ್ಟ ಪ್ರಮಾಣದ ಉತ್ಪಾದನೆಗೆ ವೆಚ್ಚ ಮಾಡಿರುವ ಹಣದ ಮೊತ್ತ.

ನೈಜ ವೆಚ್ಚ - Real Cost : ಒಂದು ವಸ್ತುವಿನ ಉತ್ಪಾದನೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಬಳಸಲಾದ ಕಾರ್ಮಿಕರ, ಬಂಡವಾಳಗಾರರ, ಉದ್ಯಮಿಯ ಸಂಪೂರ್ಣ ಪರಿಶ್ರಮ - ತ್ಯಾಗ ಆ ವಸ್ತುವಿನ ನೈಜ ವೆಚ್ಚ.

ಸದಾವಕಾಶ ವೆಚ್ಚ - Opportunity cost : ಒಂದು ವಸ್ತುವನ್ನು ಉತ್ಪಾದಿಸುವ ಸಲುವಾಗಿ, ಕೈ ಬಿಡಲಾದ ಅಥವಾ ಅವಕಾಶ ತಪ್ಪಿಹೋದ ಇತರೆ ಅತ್ಯುತ್ತಮ ಪರ್ಯಾಯ ವಸ್ತು.

ವ್ಯಕ್ತ ವೆಚ್ಚ - Explicit Cost : ವಸ್ತುವಿನ ಉತ್ಪಾದನೆಗಾಗಿ ಪಾವತಿ ಮಾಡಿರುವ ವೆಚ್ಚಗಳು. ಇವು ಹಣದ ರೂಪದ ವೆಚ್ಚಗಳಾಗಿದ್ದು ಲೆಕ್ಕದಲ್ಲಿ ಸ್ಪಷ್ಟವಾಗಿ ನಮೂದಿಸಲಾಗಿರುತ್ತದೆ.

ಅವ್ಯಕ್ತ ವೆಚ್ಚ - Implicit Cost : ಉತ್ಪಾದನೆಯಲ್ಲಿ ಬಳಸಲಾಗಿರುವ ಉತ್ಪಾದಕನ ಸ್ವಂತ ಸಂಪನ್ಮೂಲಗಳ, ಶ್ರಮ ಹಾಗೂ ಜವಾಬ್ದಾರಿಗಳಿಗೆ ತಗಲುವ ವೆಚ್ಚ. ಇದನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಇದು ಅವ್ಯಕ್ತ ವೆಚ್ಚ.

ಸ್ಥಿರ ವೆಚ್ಚ - Fixed Cost : ಉತ್ಪಾದನೆಯ ಪ್ರಮಾಣ ಹೆಚ್ಚು - ಕಡಿಮೆ ಅಥವಾ ಸೊನ್ನೆಯಾದರೂ ಕೆಲವು ವೆಚ್ಚಗಳು ಬದಲಾಗದೆ ಸ್ಥಿರವಾಗಿರುತ್ತದೆ. ಅವು ಸ್ಥಿರ ವೆಚ್ಚಗಳು.

ಬದಲಾಗುವ ವೆಚ್ಚ - Variable Cost : ಉತ್ಪಾದನೆಯ ಪ್ರಮಾಣದೊಡನೆ ನೇರವಾಗಿ ಬದಲಾಗುವ ವೆಚ್ಚದ ಬಾಬ್ತುಗಳು ಬದಲಾಗುವ ವೆಚ್ಚಗಳು.

ಸರಾಸರಿ ವೆಚ್ಚ - Average Cost : ಒಂದು ವಸ್ತುವಿನ ಒಟ್ಟು ಉತ್ಪಾದನೆಯಲ್ಲಿ ಪ್ರತಿ ಘಟಕಕ್ಕೆ ತಗಲುವ ವೆಚ್ಚದ ಲೆಕ್ಕಾಚಾರವೇ ಸರಾಸರಿ ವೆಚ್ಚ.

$$\text{ಸರಾಸರಿ ವೆಚ್ಚ} = \frac{\text{ಒಟ್ಟು ಉತ್ಪಾದನಾ ವೆಚ್ಚ}}{\text{ಉತ್ಪಾದಿತ ಘಟಕಗಳ ಸಂಖ್ಯೆ}}$$

ಸೀಮಾಂತ ವೆಚ್ಚ - Marginal Cost : ವಸ್ತುವಿನ ಹೆಚ್ಚುವರಿ ಘಟಕವನ್ನು ಉತ್ಪಾದಿಸಿದ್ದರ ಪರಿಣಾಮವಾಗಿ ಒಟ್ಟು ವೆಚ್ಚದಲ್ಲಿ ಉಂಟಾದ ಹೆಚ್ಚಳ.

$$\text{ಸೀಮಾಂತ ವೆಚ್ಚ} = \frac{\text{ಒಟ್ಟು ಉತ್ಪಾದನಾ ವೆಚ್ಚ}}{\text{ಉತ್ಪಾದನಾ ಪ್ರಮಾಣದಲ್ಲಿನ ಹೆಚ್ಚಳ}}$$

ಒಟ್ಟು ಆದಾಯ - Total Revenue : ಉದ್ಯಮವು ಒಂದು ವಸ್ತುವನ್ನು ವಿವಿಧ

ಪ್ರಮಾಣದಲ್ಲಿ ಮಾರುವುದರಿಂದ ದೊರೆತ ಒಟ್ಟು ಗಳಿಕೆ.

ಒಟ್ಟು ಘಟಕದ ಬೆಲೆ x ಮಾರಿದ ಘಟಕಗಳ ಸಂಖ್ಯೆ = ಒಟ್ಟು ಆದಾಯ

ಸರಾಸರಿ ಆದಾಯ - Average Revenue : ವಸ್ತುಗಳ ಮಾರಾಟದಿಂದ ದೊರೆತ ಆದಾಯದಲ್ಲಿ ಪ್ರತಿ ಘಟಕದ ಪಾಲಿನ ಲೆಕ್ಕಾಚಾರ.

$$\text{ಸರಾಸರಿ ಆದಾಯ} = \frac{\text{ಒಟ್ಟು ಆದಾಯ}}{\text{ಮಾರಾಟ ಮಾಡಿದ ಪ್ರಮಾಣ}}$$

ಸೀಮಾಂತ ಆದಾಯ - Marginal Revenue : ವಸ್ತುವಿನ ಹೆಚ್ಚುವರಿ ಪ್ರಮಾಣದ ಮಾರಾಟದ ಪರಿಣಾಮವಾಗಿ ಆದಾಯದಲ್ಲಿ ಉಂಟಾದ ಹೆಚ್ಚಳ.

$$\frac{\text{ವಸ್ತುವಿನ ಆದಾಯದಲ್ಲಿನ ಬದಲಾವಣೆ}}{\text{ವಸ್ತುವಿನ ಮಾರಾಟದಲ್ಲಿನ ಬದಲಾವಣೆ}} = \text{ಸೀಮಾಂತ ಆದಾಯ}$$

ಮಾರುಕಟ್ಟೆ - Market : ಒಂದು ವಸ್ತುವಿನ ಬೆಲೆ ಸುಲಭ ಹಾಗೂ ಶೀಘ್ರವಾಗಿ ಸಮಾನತೆ ಸಾಧಿಸುವಂತೆ ಕೊಳ್ಳುವವರು ಮತ್ತು ಮಾರುವವರು ಮುಕ್ತ ವ್ಯವಹಾರ ಹೊಂದಿರುವ ಸಮಸ್ತ ಪ್ರದೇಶ.

ಪರಿಪೂರ್ಣ ಪೈಪೋಟಿ ಮಾರುಕಟ್ಟೆ - Perfectly Competitive Market : ಅಧಿಕ ಸಂಖ್ಯೆಯ ಮಾರಾಟಗಾರರು, ಕೊಳ್ಳುವವರು, ಏಕರೂಪದ ವಸ್ತುಗಳಿದ್ದು ಮಾರುಕಟ್ಟೆಯಲ್ಲಿ ಬೇಡಿಕೆ ಮತ್ತು ನೀಡಿಕೆ ಆಧಾರದ ಮೇಲೆ ಬೆಲೆಗಳು ನಿಗದಿಯಾಗುವ ಮಾರುಕಟ್ಟೆ.

ಏಕಸ್ವಾಮ್ಯ - Monopoly : ಮಾರುಕಟ್ಟೆಯಲ್ಲಿ ಒಬ್ಬನೇ ಮಾರಾಟಗಾರನಿದ್ದು ವಸ್ತುವಿನ ನೀಡಿಕೆ ಹಾಗೂ ಬೆಲೆಯನ್ನು ಲಾಭದ ಉದ್ದೇಶದಿಂದ ನಿಯಂತ್ರಿಸುವ ಮಾರುಕಟ್ಟೆ ಏಕಸ್ವಾಮ್ಯ.

ವಸ್ತು ವೈವಿಧ್ಯತೆ - Differenciation : ಒಂದೇ ರೀತಿಯ ವಸ್ತುಗಳಲ್ಲಿ ಕೆಲವು ಸಣ್ಣಪುಟ್ಟ ಬದಲಾವಣೆ ಮಾಡಿ ಅದು ವಿಭಿನ್ನವಾಗಿರುವಂತೆ ಹಾಗೂ ಬೇರೆ ಬೇರೆ ಗ್ರಾಹಕರಿಗೆ ಪ್ರಿಯವಾಗುವಂತೆ ಮಾಡುವ ವ್ಯವಸ್ಥೆ.

ಸ್ವಾಮ್ಯಯುತ ಪೈಪೋಟಿ - Monopolistic Competition : ಹೆಚ್ಚಿನ ಸಾಮ್ಯತೆಯುಳ್ಳ ವಸ್ತುಗಳನ್ನು ಉತ್ಪಾದಿಸುವ ಹಲವು ಉದ್ಯಮಿಗಳ ನಡುವೆ ತೀವ್ರ ಪೈಪೋಟಿ ಇರುತ್ತದೆ. ಆದರೆ ಪರಿಪೂರ್ಣ ಪೈಪೋಟಿಯ ಎಲ್ಲಾ ಲಕ್ಷಣಗಳು ಇಲ್ಲದ ಮಾರುಕಟ್ಟೆ.

ದ್ವಿಜನ ಸ್ವಾಮ್ಯ ಮಾರುಕಟ್ಟೆ - Duopoly Market : ಇಬ್ಬರು ಮಾರಾಟಗಾರರಿದ್ದು, ಪರಸ್ಪರ ಪ್ರಭಾವ ಬೀರುವ ಸ್ವತಂತ್ರ ಮಾರಾಟ ನೀತಿ ಅನುಸರಿಸುವ ಏಕಸ್ವಾಮ್ಯದ ಲಕ್ಷಣ ಹೊಂದಿರುವ ಮಾರುಕಟ್ಟೆ.

ಕೆಲಜನ ಸ್ವಾಮ್ಯ ಮಾರುಕಟ್ಟೆ - Oligopoly Market : ಮಾರುಕಟ್ಟೆಯಲ್ಲಿ ಕೆಲವೇ ಮಾರಾಟಗಾರರಿದ್ದು, ವಸ್ತುವಿನ ನೀಡಿಕೆಯ ಪ್ರಮುಖ ಪಾಲನ್ನು ಒದಗಿಸುತ್ತಿದ್ದು ಪ್ರತಿ

ಯೊಬ್ಬರೂ ಇತರರ ಬೆಲೆ ಉತ್ಪನ್ನ ನೀತಿಯ ಮೇಲೆ ಪ್ರಭಾವ ಬೀರುವ ಮಾರುಕಟ್ಟೆ.

ಏಕಗ್ರಾಹಕ ಮಾರುಕಟ್ಟೆ - Monopsony : ಒಬ್ಬನೇ ಕೊಳ್ಳುವವನು ಅಥವಾ ಒಂದೇ ಒಂದು ಕೊಳ್ಳುವ ಸಂಸ್ಥೆಯಿದ್ದು ಬೆಲೆಗಳನ್ನು ನಿರ್ಧರಿಸುವ ಮಾರುಕಟ್ಟೆ.

ದ್ವಿಗ್ರಾಹಕ ಮಾರುಕಟ್ಟೆ - Duopsony : ಮಾರುಕಟ್ಟೆಯಲ್ಲಿನ ಒಂದು ವಸ್ತುವನ್ನು ಕೊಳ್ಳುವವರು ಕೇವಲ ಇಬ್ಬರಿರುವ ಮಾರುಕಟ್ಟೆ.

ಕೆಲಗ್ರಾಹಕ ಮಾರುಕಟ್ಟೆ - Oligopsony : ಕೆಲವೇ ಜನ ಮಾರುಕಟ್ಟೆಯಲ್ಲಿನ ಒಂದು ವಸ್ತುವಿನ ಸಂಪೂರ್ಣ ನೀಡಿಕೆ ಕೊಳ್ಳುವವರಿರುವ ವ್ಯವಸ್ಥೆ.

## ೪.೬. ಪ್ರಶ್ನೆಗಳು

**I. ಒಂದೇ ವಾಕ್ಯದಲ್ಲಿ ಉತ್ತರಿಸಿ.**

೧. ವೆಚ್ಚವೆಂದರೇನು?
೨. ಹಣದ ವೆಚ್ಚ ಇದರ ಅರ್ಥ ನೀಡಿ.
೩. ವ್ಯಕ್ತ ವೆಚ್ಚವೆಂದರೇನು?
೪. ಅವ್ಯಕ್ತ ವೆಚ್ಚವೆಂದರೇನು?
೫. ನೈಜ ವೆಚ್ಚವೆಂದರೇನು?
೬. ಸದಾವಕಾಶ ವೆಚ್ಚವೆಂದರೇನು?
೭. ಸ್ಥಿರ ವೆಚ್ಚವೆಂದರೇನು?
೮. ಚರವೆಚ್ಚವೆಂದರೇನು?
೯. ಒಟ್ಟು ವೆಚ್ಚವೆಂದರೇನು ವಿವರಿಸಿ.
೧೦. ಸರಾಸರಿ ವೆಚ್ಚವೆಂದರೇನು?
೧೧. ಸೀಮಾಂತ ವೆಚ್ಚವೆಂದರೇನು?
೧೨. ಆದಾಯ ಎಂದರೇನು?
೧೩. ಒಟ್ಟು ಆದಾಯವೆಂದರೇನು?
೧೪. ಸರಾಸರಿ ಆದಾಯವೆಂದರೇನು?
೧೫. ಸೀಮಾಂತ ಆದಾಯವೆಂದರೇನು?
೧೬. ಬೆಲೆ ಎಂದರೇನು?
೧೭. ಮಾರುಕಟ್ಟೆ ಎಂದರೇನು?
೧೮. ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂದರೇನು?
೧೯. ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂದರೇನು?
೨೦. ಏಕಸ್ವಾಮ್ಯ ಎಂದರೇನು?
೨೧. ವಸ್ತು ವೈವಿಧ್ಯತೆ ಎಂದರೇನು?
೨೨. ಮಾರಾಟ ವೆಚ್ಚ ಎಂದರೇನು?
೨೩. ದ್ವಿಜನ ಸ್ವಾಮ್ಯ ಎಂದರೇನು?
೨೪. ಕೆಲವರ ಸ್ವಾಮ್ಯ ಎಂದರೇನು?
೨೫. ಏಕಗ್ರಾಹಕ ಮಾರುಕಟ್ಟೆ ಎಂದರೇನು?
೨೬. ದ್ವಿಗ್ರಾಹಕ ಮಾರುಕಟ್ಟೆ ಎಂದರೇನು?

**II. ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೨೭. ಉತ್ಪಾದನಾ ವೆಚ್ಚದ ಅರ್ಥ ತಿಳಿಸಿ.?

೨೮. ವ್ಯಕ್ತ ಮತ್ತು ಅವ್ಯಕ್ತ ವೆಚ್ಚದ ನಡುವಣ ವ್ಯತ್ಯಾಸ ತಿಳಿಸಿ.
೨೯. ನೈಜ ವೆಚ್ಚದ ಅರ್ಥ ತಿಳಿಸಿ.
೩೦. ಸ್ಥಿರ ವೆಚ್ಚ ಮತ್ತು ಚರವೆಚ್ಚದ ನಡುವಣ ವ್ಯತ್ಯಾಸ ತಿಳಿಸಿ.
೩೧. ಸೀಮಾಂತ ವೆಚ್ಚದ ಅರ್ಥ ತಿಳಿಸಿ.
೩೨. ಒಟ್ಟು ಆದಾಯದ ಅರ್ಥ ತಿಳಿಸಿ.
೩೩. ಸೀಮಾಂತ ಆದಾಯದ ಅರ್ಥ ತಿಳಿಸಿ.
೩೪. ಮಾರುಕಟ್ಟೆಯ ನಿರ್ವಚನ ಬರೆಯಿರಿ.
೩೫. ಪರಿಪೂರ್ಣ ಪೈಪೋಟಿಯ ಅರ್ಥ ತಿಳಿಸಿ.
೩೬. ಏಕಸ್ವಾಮ್ಯವನ್ನು ವ್ಯಾಖ್ಯಾನಿಸಿ.
೩೭. ಸ್ವಾಮ್ಯಯುತ ಪೈಪೋಟಿಯ ಅರ್ಥ ತಿಳಿಸಿ.
೩೮. ಕೆಲಜನ ಸ್ವಾಮ್ಯ, ಕೆಲಗ್ರಾಹಕ ಮಾರುಕಟ್ಟೆ - ಇವರೆಡರ ವ್ಯತ್ಯಾಸವೇನು?
೩೯. ದ್ವಿಜನ ಸ್ವಾಮ್ಯ - ದ್ವಿಗಾಹಕ ಮಾರುಕಟ್ಟೆ ವ್ಯತ್ಯಾಸವೇನು?
೪೦. ಏಕಸ್ವಾಮ್ಯ - ಏಕಗ್ರಾಹಕ ಮಾರುಕಟ್ಟೆ ವ್ಯತ್ಯಾಸವೇನು?

**III. ಹದಿನೈದರಿಂದ ಇಪ್ಪತ್ತು ವಾಕ್ಯಗಳ ಉತ್ತರ ಬರೆಯಿರಿ.**

೪೧. ವೆಚ್ಚವೆಂದರೇನು? ನೈಜ ವೆಚ್ಚ, ಹಣ ವೆಚ್ಚ ಮತ್ತು ಸದವಕಾಶ ವೆಚ್ಚ ಪರಿಕಲ್ಪನೆಗಳನ್ನು ಪ್ರಸ್ತುತಪಡಿಸಿ.
೪೨. ಒಟ್ಟು ವೆಚ್ಚ, ಸರಾಸರಿ ವೆಚ್ಚ ಮತ್ತು ಸೀಮಾಂತ ವೆಚ್ಚ ಪರಿಕಲ್ಪನೆಗಳನ್ನು ಅನುಸೂಚಿ ಮತ್ತು ಚಿತ್ರಗಳ ಸಹಾಯದಿಂದ ವಿವರಿಸಿ.
೪೩. ಆದಾಯವೆಂದರೇನು? ಒಟ್ಟು ಸರಾಸರಿ ಮತ್ತು ಸೀಮಾಂತ ಆದಾಯ ಪರಿಕಲ್ಪನೆಗಳನ್ನು ವಿವರಿಸಿ.
೪೪. ಮಾರುಕಟ್ಟೆ ಎಂದರೇನು? ಪರಿಪೂರ್ಣ ಪೈಪೋಟಿ, ಏಕಸ್ವಾಮ್ಯ ಮತ್ತು ಸ್ವಾಮ್ಯಯುತ ಪೈಪೋಟಿಯ ಲಕ್ಷಣಗಳಾವುವು?

**IV. ನಲವತ್ತು ವಾಕ್ಯಗಳಲ್ಲಿ ಉತ್ತರಿಸಿ.**

೪೫. ಉತ್ಪಾದನಾ ವೆಚ್ಚದ ವಿವರಣೆ ನೀಡಿ. ನೈಜವೆಚ್ಚ, ಹಣವೆಚ್ಚ ಮತ್ತು ಸದವಕಾಶ ವೆಚ್ಚ ಪರಿಕಲ್ಪನೆಗಳನ್ನು ವಿವರಿಸಿ.
೫೬. ಮಾರುಕಟ್ಟೆಯ ಅರ್ಥ ತಿಳಿಸಿ. ಪರಿಪೂರ್ಣ ಪೈಪೋಟಿ, ಏಕಸ್ವಾಮ್ಯ ಮತ್ತು ಸ್ವಾಮ್ಯಯುತ ಪೈಪೋಟಿಯ ಲಕ್ಷಣಗಳನ್ನು ತಿಳಿಸಿ.
೪೭. ಒಟ್ಟು ವೆಚ್ಚ ರೂ. ೫೦ ಲಕ್ಷ ಒಟ್ಟು ಉತ್ಪಾದಿಸಿದ ಉತ್ಪನ್ನ ೧೦ ಲಕ್ಷ. ಇಲ್ಲಿ ಸರಾಸರಿ ವೆಚ್ಚವನ್ನು ಲೆಕ್ಕ ಹಾಕಿ.
೪೮. ಒಟ್ಟು ವೆಚ್ಚದಿಂದ ಸ್ಥಿರವೆಚ್ಚವನ್ನು ಕಳೆದರೆ ಉಳಿಯುವ ವೆಚ್ಚ ಯಾವುದು?

## ಅಧ್ಯಾಯ ೫

# ಯೋಗಕ್ಷೇಮ ಅರ್ಥಶಾಸ್ತ್ರದ ಮೂಲಾಂಶಗಳು

### ೫.೧. ಆರ್ಥಿಕ ಯೋಗಕ್ಷೇಮ ಪರಿಭಾವನೆ

ಸಮಾಜದ ಯೋಗಕ್ಷೇಮದ (ಕಲ್ಯಾಣದ) ದೃಷ್ಟಿಯಿಂದ ಪರ್ಯಾಯ ಆರ್ಥಿಕ ಸ್ಥಿತಿಗಳನ್ನು (ಸರಕಾರಗಳನ್ನು, ಸಂಕೀರ್ಣಗಳನ್ನು) ಪರಾಮರ್ಶಿಸುವ ವಸ್ತುವಿಷಯವೆ ಯೋಗಕ್ಷೇಮ ಅರ್ಥಶಾಸ್ತ್ರವಾಗಿದೆ. ಈ ವ್ಯಾಖ್ಯೆಯನ್ನು ಈ ಕೆಳಗಿನ ಉದಾಹರಣೆಯ ಮೂಲಕ ವಿವರಿಸಬಹುದು. ದೇಶವೊಂದರ ಒಟ್ಟು ಯೋಗಕ್ಷೇಮವು 'W' ಎಂದು ಊಹಿಸಿಕೊಳ್ಳಿರಿ. ಆದರೆ ಉತ್ಪಾದನಾಂಗಗಳ ಪೂರೈಕೆ ಮತ್ತು ತಂತ್ರಜ್ಞಾನವು ಸ್ಥಿರವಿರುವಾಗ, ಈ ಯೋಗಕ್ಷೇಮವು W* ನಷ್ಟು ಅಧಿಕವಿರಬಹುದೆಂದು ಊಹಿಸಿಕೊಳ್ಳಿರಿ. ಯೋಗಕ್ಷೇಮ ಅರ್ಥಶಾಸ್ತ್ರದ ಉದ್ದೇಶಗಳೆಂದರೆ (ಅ) ಪ್ರಸ್ತುತ ಸಂದರ್ಭದಲ್ಲಿ W<W*; ಮತ್ತು (ಆ) W ಅನ್ನು W* ಮಟ್ಟಕ್ಕೆ ಹೆಚ್ಚುವಂತೆ ಮಾಡುವ ವಿಧಾನಗಳನ್ನು ಪರಿಶೀಲಿಸುವುದು ಸೂಚಿಸುವುದೂ ಆಗಿದೆ.

ಪ್ರೊಫೆಸರ್ ಲೇಂಗ್ ಅನ್ನುವವರು "ಆರ್ಥಿಕ ಚಟುವಟಿಕೆಗಳ ಸಾಮಾಜಿಕ ವಿವೇಚನೆ ಯನ್ನು ತೃಪ್ತಪಡಿಸಲು ಅಗತ್ಯವಿರುವ ನಡತೆಗಳ ತತ್ವಗಳನ್ನು ಯೋಗಕ್ಷೇಮ ಅರ್ಥಶಾಸ್ತ್ರವು ರೂಪಿಸುವುದು" ಎನ್ನುವ ಅಭಿಪ್ರಾಯವನ್ನು ಹೊಂದಿರುತ್ತಾರೆ. ಇಲ್ಲಿ ಸಾಮಾಜಿಕ ವಿವೇಚನೆ ಎಂದರೆ ಗರಿಷ್ಟ ಸಾಮಾಜಿಕ ಯೋಗಕ್ಷೇಮವನ್ನು ಹೊಂದುವುದಕ್ಕಾಗಿ ಸಂಪನ್ಮೂಲಗಳ ಅತಿ ಹೆಚ್ಚಿನ ಬಳಕೆಯಾಗಿದೆ. ಪ್ರೊ. ಲೇಂಗ್‌ರವರ ಪ್ರಕಾರ ಯೋಗಕ್ಷೇಮ ಅರ್ಥಶಾಸ್ತ್ರದಲ್ಲಿ ಆರ್ಥಿಕ ಸಂಪನ್ಮೂಲಗಳನ್ನು ಯೋಗಕ್ಷೇಮವನ್ನು ಗರಿಷ್ಟಗೊಳಿಸಲು ಯಾವ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು ಎನ್ನುವುದರ ಕುರಿತು ಅಭ್ಯಸಿಸಲಾಗುವುದು.

ಯೋಗಕ್ಷೇಮ - ಕಲ್ಯಾಣ ಪರಿಭಾವನೆಯನ್ನು ಅನೇಕ ರೀತಿಗಳಲ್ಲಿ ವ್ಯಾಖ್ಯಾನಿಸಲು ಮತ್ತು ವಿಶ್ಲೇಷಿಸಲು ಯತ್ನಿಸಲಾಗಿದೆ. 'ಯೋಗಕ್ಷೇಮ' 'ಆರ್ಥಿಕ ಯೋಗಕ್ಷೇಮ' ಮತ್ತು 'ಸಾಮಾಜಿಕ ಯೋಗಕ್ಷೇಮ' ಎಂಬ ಪರಿಭಾವನೆಗಳು ಅಸ್ಪಷ್ಟವಾಗಿವೆ. ಹೀಗಾಗಿ ಅವುಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸುವುದು ಕಷ್ಟ. ಎ.ಸಿ.ಪಿಗುವಿನಂಥ ಮಹಾನ್

ಅರ್ಥಶಾಸ್ತ್ರಜ್ಞನಿಗೆ ಯೋಗಕ್ಷೇಮ ಪರಿಭಾವನೆಯನ್ನು ವ್ಯವಸ್ಥಿತವಾಗಿ ವಿವರಿಸಲು ಸಾಧ್ಯವಾಗಲಿಲ್ಲ. "ಯೋಗಕ್ಷೇಮವು ವಿಸ್ತೃತ ನೆಲೆಯುಳ್ಳದ್ದಾಗಿದೆ. ಅದರ ಸ್ವರೂಪ ಕುರಿತ ಸಾರ್ವಜನಿಕ ಚರ್ಚೆಗೆ ಇಳಿಯಬೇಕಾದ ಅಗತ್ಯ ಈಗ ಇಲ್ಲ. ತಾತ್ವಿಕವಾಗಿ ಎರಡು ಪ್ರಸ್ತಾವಗಳನ್ನು ನಿರೂಪಿಸಿದರೆ ಸಾಕು; ಮೊದಲನೆಯದಾಗಿ, ಕಲ್ಯಾಣದ ಅಂಶಗಳು ಪ್ರಜ್ಞೆಗೆ ಸಂಬಂಧಿಸಿದ ಸ್ಥಿತಿಗಳಾಗಿವೆ, ಪ್ರಾಯಶಃ ಅವುಗಳ ಸಂಬಂಧವಾಗಿವೆ; ಎರಡನೆಯದಾಗಿ ಕಲ್ಯಾಣವನ್ನು ಹೆಚ್ಚು ಅಥವಾ ಕಡಿಮೆ ಎಂಬ ವರ್ಗೀಕರಣದ ವ್ಯಾಪ್ತಿಯಲ್ಲಿ ತರಬಹುದಾಗಿದೆ" ಎಂದು ಎ.ಸಿ.ಪಿಗು ಬರೆದಿದ್ದಾರೆ.

ಯೋಗಕ್ಷೇಮವೆಂದರೆ ತೃಪ್ತಿಕರವಾದ ಸರಕಾರ, ಆರೋಗ್ಯ ಮತ್ತು ಉತ್ಕರ್ಷ, ಸುರಕ್ಷೆ, ಕಲ್ಯಾಣ, ವ್ಯಕ್ತಿಗೆ ಮತ್ತು ಸಮಾಜಕ್ಕೆ ಸಂಬಂಧಿಸಿದಂತೆ ಎಂದೂ ವ್ಯಾಖ್ಯಾನಿಸಲಾಗುತ್ತದೆ. ನಾವು ಅರ್ಥಶಾಸ್ತ್ರದಲ್ಲಿ ವ್ಯಕ್ತಿಯೋರ್ವನ ತುಷ್ಟಿಗುಣ ಅಥವಾ ತೃಪ್ತಿ ಬಗೆಗೆ ಅಭ್ಯಸಿಸುತ್ತೇವೆ. ಇದು ವ್ಯಕ್ತಿಯು ನಿರ್ದಿಷ್ಟ ಅವಧಿಯಲ್ಲಿ ಅನುಭೋಗಿಸುವ ಆರ್ಥಿಕ ಸರಕು ಮತ್ತು ಸೇವೆಗಳ ಪ್ರಮಾಣವನ್ನು ಮತ್ತು ಗುಣಮಟ್ಟವನ್ನು ಅವಲಂಬಿಸಿಕೊಂಡಿದೆ. ಅನುಬೋಗ ಕ್ರಿಯೆಯು ವ್ಯಕ್ತಿಯ ಯೋಗಕ್ಷೇಮದ ಮೇಲೆ ಪ್ರಭಾವ ಬೀರುವುದು.

ಅರ್ಥಶಾಸ್ತ್ರವು ಒಂದು ಸಮಾಜ ವಿಜ್ಞಾನವು ಹೌದು. ಇದರಲ್ಲಿ ನಾವು ಸಮಾಜದಲ್ಲಿನ ಜನರನ್ನು ಕುರಿತು ಅಭ್ಯಸಿಸುತ್ತೇವೆ. ಸಮಾಜದಲ್ಲಿ ಜನರ ಯೋಗಕ್ಷೇಮವು ಹೆಚ್ಚಾದಂತೆ ಸಾಮಾಜಿಕ ಕಲ್ಯಾಣವು ಹೆಚ್ಚುತ್ತದೆ. ಅಂದರೆ ಸಾಮಾಜಿಕ ಯೋಗಕ್ಷೇಮವು ಸಮಾಜದ ಎಲ್ಲ ಜನರ ಯೋಗಕ್ಷೇಮವಾಗಿರುತ್ತದೆ. ಈ ಅರ್ಥದಲ್ಲಿ ವ್ಯಕ್ತಿಗತ ಮತ್ತು ಸಾಮಾಜಿಕ ಯೋಗಕ್ಷೇಮ ಎರಡರ ಬಗೆಗೂ ಯೋಗಕ್ಷೇಮ ಅರ್ಥಶಾಸ್ತ್ರವು ವಿವರಿಸುತ್ತದೆ.

ವ್ಯಕ್ತಿಗಳ ನಡುವೆ ಸರಕು ಮತ್ತು ಸೇವೆಗಳು ವಿತರಣೆಯಾಗುವ ರೀತಿಯು ವ್ಯಕ್ತಿಗಳ ಹಾಗೂ ಒಟ್ಟು ಸಮಾಜದ ಯೋಗಕ್ಷೇಮ ಮಟ್ಟದ ಮೇಲೆ ಗಾಢ ಪ್ರಭಾವವನ್ನು ಬೀರುವುದು. ಸಮಾಜವೊಂದರ ಯೋಗಕ್ಷೇಮವು, ವಿಸ್ತೃತವಾದ ನೆಲೆಯಲ್ಲಿ ಹೇಳುವುದಾದರೆ, ಅದರ ಎಲ್ಲಾ ಬಳಕೆದಾರರ ತೃಪ್ತಿ ಮಟ್ಟಗಳನ್ನು ಆಧರಿಸುತ್ತದೆ ಎಂದು ಹೆಂಡರ್‌ಸನ್ ಮತ್ತು ಕ್ವಾರಿಟ್ ರವರು ಅಭಿಪ್ರಾಯ ಪಟ್ಟಿದ್ದಾರೆ.

### ೫.೧.೨. ಯೋಗಕ್ಷೇಮ ಅರ್ಥಶಾಸ್ತ್ರದ ಅರ್ಥ ವಿವರಣೆ ಮತ್ತು ವ್ಯಾಪ್ತಿ

"ಯೋಗಕ್ಷೇಮ ಅರ್ಥಶಾಸ್ತ್ರದ ಉದ್ದೇಶವೆಂದರೆ ಪರ್ಯಾಯ ಆರ್ಥಿಕ ಸ್ಥಿತಿಗಳ ಸಾಮಾಜಿಕ ಅಪೇಕ್ಷಣೀಯತೆಯನ್ನು ಪರಾಮರ್ಶಿಸುವುದೇ ಆಗಿದೆ" ಎಂದು ಹೆಂಡರ್‌ಸನ್ ಮತ್ತು ಕ್ವಾಂಟ್ ಯೋಗಕ್ಷೇಮ ಅರ್ಥಶಾಸ್ತ್ರವನ್ನು ವಿವರಿಸುತ್ತಾರೆ. ಆರ್ಥಿಕ ಸ್ಥಿತಿ ಎಂದರೆ ಆರ್ಥಿಕ ವ್ಯವಸ್ಥೆಯೊಂದರ ಸಂಪನ್ಮೂಲಗಳ ಮತ್ತು ಆರ್ಥಿಕ ಚಟುವಟಿಕೆಗಳ ನಿರ್ದಿಷ್ಟ ವ್ಯವಸ್ಥೆಯಾಗಿದೆ. ಪ್ರತಿಯೊಂದು ಆರ್ಥಿಕ ವ್ಯವಸ್ಥೆಯೂ ಸಂಪನ್ಮೂಲಗಳ ವಿಭಿನ್ನ ನಿಯತಗೊಳಿಸುವಿಕೆ ಮತ್ತು ಆರ್ಥಿಕ ಚಟುವಟಿಕೆಗೆ ವಿಭಿನ್ನವಾದ ಪ್ರತಿಫಲಗಳ

ವಿತರಣೆಯ ಲಕ್ಷಣವನ್ನು ಹೊಂದಿದೆ. ಒಂದು ರೀತಿಯ ಆರ್ಥಿಕ ಸ್ಥಿತಿಯು ಇನ್ನೊಂದು ರೀತಿಯ ಆರ್ಥಿಕ ಸ್ಥಿತಿಯಾಗಿ ಪರಿವರ್ತಿತವಾಗುವ ರೀತಿಯನ್ನು ನಿರ್ಧರಿಸುವುದು ಅರ್ಥಶಾಸ್ತ್ರಜ್ಞರಿಗೆ ಅಸಾಧ್ಯ. ಆದರೂ ಅಸ್ತಿತ್ವದಲ್ಲಿರುವ ಆರ್ಥಿಕ ಸ್ಥಿತಿಯನ್ನು ಬದಲಾಯಿಸಲು ಸಾದ್ಯವಾಗುವಂಥ ನೀತಿ-ಸಾಧನಗಳು ಅರ್ಥಶಾಸ್ತ್ರಜ್ಞರಿಗೆ ದೊರೆಯುತ್ತವೆ. ಯೋಗಕ್ಷೇಮವು ಹೆಚ್ಚಾಗಬೇಕಿದ್ದರೆ ಈ ಕೆಳಗಿನ ಅಂಶಗಳಿರಬೇಕು: ಅವುಗಳಾವುವೆಂದರೆ (ಅ) ಸರಕುಗಳ ಉತ್ಪಾದನೆಗೆ ಉತ್ಪಾದನಾಂಗಗಳ ಆದರ್ಶ ನಿಯತಗೊಳಿಸುವಿಕೆ (ಆ) ಕುಟುಂಬಗಳ ಅಥವಾ ಜನರ ನಡುವೆ ಸರಕುಗಳ ಆದರ್ಶನಿಯತಗೊಳಿಸುವಿಕೆ (ಅಥವಾ ಆದಾಯ ವಿತರಣೆ).

ಎ.ಕೆ.ಸೇನ್‌ರವರ ಪ್ರಕಾರ ಆರ್ಥಿಕ ನೀತಿಯೊಂದರ ಶಿಫಾರಸ್ಸು ಮೂರು ಅಂಶಗಳನ್ನು ಒಳಗೊಂಡಿರುತ್ತದೆ; ಅ) ಮೌಲ್ಯ ವಿವೇಚನೆ, ಆ) ವಾಸ್ತವಾಂಶಗಳನ್ನು ಆಧರಿಸಿದ ಪರಿಕಲ್ಪನೆಗಳು ಮತ್ತು ಇ) ತರ್ಕಬದ್ಧವಾದ ನಿರೂಪಣೆ. ವಸ್ತುನಿಷ್ಠ ಅರ್ಥಶಾಸ್ತ್ರವು ಮೌಲ್ಯ ವಿವೇಚನೆಗಳನ್ನು ಹೆಚ್ಚೆಚ್ಚು ಆರ್ಥಿಕ ವಿಶ್ಲೇಷಣೆಗೆ ಸೇರಿಸುತ್ತಿದೆ. ಅಲ್ಲದೆ ಪರಿಕಲ್ಪನೆಗಳನ್ನು ವಾಸ್ತವಾಂಶಗಳನ್ನು ಆಧರಿಸಿ ನಿರ್ಧರಿಸುವುದರಿಂದ ಆರ್ಥಿಕ ವಿಶ್ಲೇಷಣೆಯು ವಸ್ತುನಿಷ್ಠವಾಗಿತ್ತದೆಯೇ ಹೊರತು ಮೌಲ್ಯಾಧರಿತ ನೈತಿಕ ಅರ್ಥಶಾಸ್ತ್ರ ವಾಗಿವುದಿಲ್ಲ. ಹೀಗಾಗಿ ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಇತ್ತೀಚಿನ ವರ್ಷಗಳಲ್ಲಿ ಯೋಗಕ್ಷೇಮ ಅರ್ಥಶಾಸ್ತ್ರಜ್ಞರು ಯಾವುದಾದರೊಂದು ಬಗೆಯ ತರ್ಕಬದ್ಧವಾದ ಅರ್ಥಿಕ ನಿರೂಪಣೆಯಲ್ಲಿ ತೊಡಗಿದ್ದಾರೆ.

ಯೋಗಕ್ಷೇಮ ಅರ್ಥಶಾಸ್ತ್ರಜ್ಞರು ಈ ಕೆಳಕಂಡ ಅಂಶಗಳನ್ನು ಸಾಧಿಸಲೆತ್ನಿಸಿದ್ದಾರೆ:

೧. ಅಭಿವೃದ್ಧಿಯನ್ನು ಅಳತೆಮಾಡಿ ಅದರ ಮೂಲಕ ಯೋಗಕ್ಷೇಮವನ್ನು ಅಳತೆ ಮಾಡುವುದು.

೨. ಆರ್ಥಿಕ ನೀತಿಗಳು ಆರ್ಥಿಕವಾಗಿ ಅಗತ್ಯವೇ ಎಂಬುದನ್ನು ನಿರ್ಧರಿಸಲು ತೀರ್ಮಾನ ಗಳ ಮಾನದಂಡಗಳನ್ನು ರೂಪಿಸುವುದು. ಕೆಲವೊಮ್ಮೆ ಈ ಮಾನದಂಡಗಳನ್ನು ರಾಜಕೀಯ, ಜನಾಂಗಿಕ, ನೈತಿಕ ಮತ್ತು ರಾಷ್ಟ್ರೀಯತೆ ನೆಲೆಗಳಲ್ಲಿ ಅನಪೇಕ್ಷಣೀಯ ವೆಂದೂ ತೀರ್ಮಾನಿಸಬಹುದು.

೩. ನೈತಿಕ ತೀರ್ಮಾನಗಳಿಂದ ವೈಜ್ಞಾನಿಕವಾಗಿ ಮುಕ್ತವಾದ ಪ್ರಸ್ತಾವಗಳನ್ನು ನಿರೂಪಿಸ ಬಹುದು. ಈ ಮೂಲಕ ನಿರ್ದಿಷ್ಟ ವ್ಯಾಪ್ತಿಯೊಳಗೆ ಪರ್ಯಾಯ ಆರ್ಥಿಕ ನೀತಿಗಳ ಸಾಮಾಜಿಕ ಸಮಂಜಸತೆಯನ್ನು ತೀರ್ಮಾನಿಸುವುದು.

## ವಾಸ್ತವಿಕ ಅರ್ಥಶಾಸ್ತ್ರ, ಮೌಲ್ಯಾಧರಿತ ಅರ್ಥಶಾಸ್ತ್ರ ಮತ್ತು ಯೋಗಕ್ಷೇಮ ಅರ್ಥಶಾಸ್ತ್ರ

ವಾಸ್ತವಿಕ ಅರ್ಥಶಾಸ್ತ್ರವೆಂದರೆ ಅಸ್ತಿತ್ವದಲ್ಲಿರುವ ಅಂಶಗಳನ್ನು ಗಣನೆಗೆ ತೆಗೆದು ಕೊಂಡು ಅವುಗಳನ್ನು ಇರುವಂತೆಯೇ ವಿವರಿಸುವುದಾಗಿದೆ. ಮೌಲ್ಯಾಧರಿತ ಅರ್ಥಶಾಸ್ತ್ರವು

ವಿಷಯಗಳು ಹೀಗೆ ಇರಬೇಕು ಎಂದು ವಿವರಿಸುವುದು. ವಾಸ್ತವಿಕ ಅರ್ಥಶಾಸ್ತ್ರವನ್ನು ಜೆ.ಎನ್. ಕೇನ್ಸ್ ಎಂಬ ಅರ್ಥಶಾಸ್ತ್ರಜ್ಞನು ಹೀಗೆ ವಿವರಿಸುತ್ತಾನೆ. ಅಸ್ತಿತ್ವದಲ್ಲಿರುವ ವಿವರಗಳು ಏನು? ಮತ್ತು ಹೇಗಿದೆ? ಎಂಬ ವಿವರಗಳನ್ನು ನೀಡುವ ವ್ಯವಸ್ಥಿತ ಜ್ಞಾನ ಸಮುಚ್ಚಯವೇ ವಾಸ್ತವಿಕ ಅರ್ಥಶಾಸ್ತ್ರ ಹಾಗೂ ಅದೇ ಅರ್ಥಶಾಸ್ತ್ರಜ್ಞನು ಮೌಲ್ಯ ಆಧರಿತ ಅರ್ಥಶಾಸ್ತ್ರವನ್ನು ಅಸ್ತಿತ್ವದಲ್ಲಿರುವ ಆರ್ಥಿಕ ಸಂಬಂಧಗಳನ್ನು ಹೇಗೆ ರೂಪಿಸಬೇಕು ಎಂಬ ವಿವರಗಳನ್ನು ನೀಡುವ ವ್ಯವಸ್ಥೆಗಳ ಜ್ಞಾನ ಸಮುಚ್ಚಯ ಎಂಬುದಾಗಿ ವಿವರಿಸುತ್ತಾನೆ.

ಮೌಲ್ಯಾಧರಿತ ಅರ್ಥಶಾಸ್ತ್ರವು ಮೌಲ್ಯಾಧರಿತ ತೀರ್ಮಾನಗಳನ್ನು ಒಳಗೊಂಡಿದೆ. ಇಲ್ಲಿ ಯಾವುದು ಒಳಿತು, ಯಾವುದು ಕೆಡುಕು ಎನ್ನುವುದನ್ನು ತೀರ್ಮಾನಿಸುವುದು ಮೌಲ್ಯಾಧರಿತ ತೀರ್ಮಾನವಾಗಿದೆ. ಸಮಾಜದಲ್ಲಿ ಜನರ ಮೌಲ್ಯಗಳು, ನೈತಿಕತೆ, ರಾಜಕೀಯ, ತಾತ್ವಿಕತೆ, ಧಾರ್ಮಿಕ ನಂಬಿಕೆ ಇತ್ಯಾದಿಗಳನ್ನು ಒಳಗೊಂಡಿದೆಯೆ ಹೊರತು ವೈಜ್ಞಾನಿಕ ನೀತಿ-ನಿಯಮಗಳನ್ನಲ್ಲ. ಜನರು ಹೊಂದಿರುವ ಮೌಲ್ಯಗಳು ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸ ಹೊಂದುತ್ತದೆ.

ವಾಸ್ತವಿಕ ಹಾಗೂ ಮೌಲ್ಯಾಧರಿತ ಅರ್ಥಶಾಸ್ತ್ರಗಳ ನಡುವೆ ವ್ಯತ್ಯಾಸವಿದ್ದರೂ ಸಮಾಜದಲ್ಲಿ ಜನರ ಆರ್ಥಿಕ ಯೋಗಕ್ಷೇಮಕ್ಕೆ ಸಂಬಂಧಪಟ್ಟ ಹೆಚ್ಚಿನ ಅಂಶಗಳು ಮೌಲ್ಯಧರಿತ ತೀರ್ಮಾನಗಳನ್ನು ಒಳಗೊಂಡಿವೆ. ಆರ್ಥಿಕ ನಿಯಮಗಳನ್ನು ರಚಿಸಿ ಅವುಗಳನ್ನು ಅನ್ವಯಿಸುವಾಗ ಸಮಾಜದ ಯೋಗಕ್ಷೇಮದ ದೃಷ್ಟಿಯಿಂದ ಅವುಗಳ ಒಳಿತು ಮತ್ತು ಕೆಡುಕುಗಳನ್ನು ಅಭ್ಯಸಿಸುವುದು ಅಗತ್ಯವಾಗಿದೆ. ಮೌಲ್ಯಾಧರಿತ ಅರ್ಥಶಾಸ್ತ್ರವು ಯೋಗಕ್ಷೇಮ ಪರಿಭಾವನೆಯನ್ನು ಒಳಗೊಂಡಿದೆ. ಇತ್ತೀಚಿನ ವರ್ಷಗಳಲ್ಲಿ ಮೌಲ್ಯಗಳನ್ನು ಒಳಗೊಂಡಂತಹ ಯೋಗಕ್ಷೇಮ ಅರ್ಥಶಾಸ್ತ್ರ ಎನ್ನುವ ಒಂದು ಹೊಸ ಶಾಖೆಯು ಅರ್ಥಶಾಸ್ತ್ರದಲ್ಲಿ ಅಭಿವೃದ್ಧಿಗೊಂಡಿದೆ.

ವಾಸ್ತಾವಿಕ ಅರ್ಥಶಾಸ್ತ್ರವು ಅಸ್ತಿತ್ವದಲ್ಲಿರುವುದನ್ನು ಇದ್ದಂತೆಯೇ ವಿವರಿಸಿದರೆ, ಮೌಲ್ಯಾಧರಿತ ಅರ್ಥಶಾಸ್ತ್ರವು ಆದರ್ಶ ಮತ್ತು ವಾಸ್ತವಿಕದ ನಡುವಣ ವ್ಯತ್ಯಾಸವನ್ನು ಗುರುತಿಸಿ ಆದರ್ಶವಾದುದನ್ನು ಸಾಧಿಸಲು ಅಗತ್ಯವಾದ ಪ್ರೇರಣೆ ಮತ್ತು ಮಾರ್ಗದರ್ಶನ ವನ್ನು ನೀಡುತ್ತದೆ. ಎಲ್ಲ ಆಧುನಿಕ ಸರಕಾರಗಳ ನೀತಿಗಳು ಮೌಲ್ಯಾಧರಿತ ಅರ್ಥಶಾಸ್ತ್ರದ ವ್ಯಾಪ್ತಿಗೆ ಬರುತ್ತವೆ. ಈ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡಾಗ ಯೋಗಕ್ಷೇಮ ಅರ್ಥಶಾಸ್ತ್ರವು ಮೌಲ್ಯಾಧರಿತ ಅರ್ಥಶಾಸ್ತ್ರದ ಒಂದು ಭಾಗವಾಗಿದೆ ಎನ್ನುವುದು ಸ್ಪಷ್ಟವಾಗುತ್ತದೆ.

**ವೈಯಕ್ತಿಕ ಯೋಗಕ್ಷೇಮ ಮತ್ತು ಸಾಮಾಜಿಕ ಯೋಗಕ್ಷೇಮ**

ಯೋಗಕ್ಷೇಮ ಅರ್ಥಶಾಸ್ತ್ರದಲ್ಲಿ ನಾವು ವೈಯಕ್ತಿಕ ಯೋಗಕ್ಷೇಮವನ್ನು ಅಭ್ಯಸಿಸುವು ದಿಲ್ಲ, ಏಕೆಂದರೆ ಅರ್ಥಶಾಸ್ತ್ರವು ಸ್ವಾಭಾವಿಕವಾಗಿ ಹಾಗೂ ಯಾವಾಗಲೂ ವೈಯಕ್ತಿಕ

ಯೋಗಕ್ಷೇಮದ ಅಧ್ಯಯನವಾಗಿದೆ. ಯೋಗಕ್ಷೇಮ ಅರ್ಥಶಾಸ್ತ್ರದಲ್ಲಿ ನಾವು ಸಾಮಾಜಿಕ ಯೋಗಕ್ಷೇಮ ಅರ್ಥಶಾಸ್ತ್ರದ ಕುರಿತು ಅಭ್ಯಸಿಸುತ್ತೇವೆ. ವ್ಯಕ್ತಿಯೋರ್ವನು ಪಡೆಯುವ ಯೋಗಕ್ಷೇಮವನ್ನು ಅವನು ಆ ಅವಧಿಯಲ್ಲಿ ಹೊಂದುವ ತೃಪ್ತಿಯಿಂದ ಅಳತೆ ಮಾಡಲಾಗುವುದು. ವ್ಯಕ್ತಿಯು ತನ್ನ ಬಯಕೆಯ ತೃಪ್ತಿಗೆ ಉಪಯೋಗಿಸುವ ಸರಕು ಮತ್ತು ಸೇವೆಯ ಆಯ್ಕೆಯು ಅವನ ಯೋಗಕ್ಷೇಮವನ್ನು ವಿವರಿಸುವುದು. ಉದಾಹರಣೆಗೆ: ಕಾಫಿ ಮತ್ತು ಚಹಾಗಳ ನಡುವೆ ಆಯ್ಕೆಯನ್ನು ಮಾಡುವಾಗ ವ್ಯಕ್ತಿಯೋರ್ವನು ಕಾಫಿಯನ್ನು ಆಯ್ಕೆ ಮಾಡಿದರೆ ಕಾಫಿಯಿಂದ ಅವನಿಗೆ ದೊರಕುವ ಯೋಗಕ್ಷೇಮವು ಚಹಾದಿಂದ ದೊರಕುವ ಯೋಗಕ್ಷೇಮಕ್ಕಿಂತ ಅಧಿಕವಾಗಿದೆ ಎಂದು ಅರ್ಥ. ಈ ಆಯ್ಕೆಯು ವೈಯಕ್ತಿಕ ಯೋಗಕ್ಷೇಮವನ್ನು ವಿವರಿಸುವುದು.

ಸಾಮಾಜಿಕ ಯೋಗಕ್ಷೇಮವು ಸಮಾಜದಲ್ಲಿ ಜನರ ಯೋಗಕ್ಷೇಮವನ್ನು ಅವಲಂಬಿಸಿಕೊಂಡಿದೆ. ಸಮಾಜದಲ್ಲಿ ವಾಸಿಸುವ ಬಹುತೇಕ ಜನರ ಬಯಕೆಗಳು ತೃಪ್ತಿಗೊಂಡಾಗ ಸಾಮಾಜಿಕ ಯೋಗಕ್ಷೇಮವು ಹೆಚ್ಚಳವಾಗುತ್ತದೆ. ಜನರ ಹೆಚ್ಚಿನ ಬಯಕೆಗಳು ಸಾಮಾಜಿಕ ಬಯಕೆಗಳಾಗಿದ್ದು ಈ ಬಯಕೆಗಳು ತೃಪ್ತಿಗೊಂಡಂತೆ ಸಾಮಾಜಿಕ ಯೋಗಕ್ಷೇಮವು ಹೆಚ್ಚುತ್ತಾಹೋಗುತ್ತದೆ. ಸಾಮಾಜಿಕ ಯೋಗಕ್ಷೇಮವನ್ನು ಸುಲಭದಲ್ಲಿ ಲೆಕ್ಕ ಹಾಕಲು ಸಾಧ್ಯವಿಲ್ಲ. ಆದುದರಿಂದ ಪ್ರೊ. ಗ್ರಾಫ್ ಸಾಮಾಜಿಕ ಯೋಗಕ್ಷೇಮಕ್ಕೆ ಸಂಬಂಧಿಸಿದಂತೆ ಮೂರು ಪರಿಭಾವನೆಗಳನ್ನು ಕೊಟ್ಟಿರುತ್ತಾರೆ.

ಮೊದಲನೆಯದಾಗಿ ನಿರಂಕುಶ ಪ್ರಭುತ್ವ ಸರಕಾರವಿರುವಲ್ಲಿ ಸರಕಾರವು ನಿಗದಿಪಡಿಸಿರುವುದೆ ಸಾಮಾಜಿಕ ಯೋಗಕ್ಷೇಮವಾಗಿರುತ್ತದೆ. ಸರಕಾರವು ಯೋಗಕ್ಷೇಮ ಹೆಚ್ಚಾಗಿದೆ ಎಂದು ತಿಳಿದಾಗ ಸಾಮಾಜಿಕ ಯೋಗಕ್ಷೇಮ ಹೆಚ್ಚಾಗಿರುತ್ತದೆ, ಕಡಿಮೆಯಾಗಿದೆ ಎಂದು ತಿಳಿದಾಗ ಜನರ ಯೋಗಕ್ಷೇಮವು ಕಡಿಮೆಯಾಗಿದೆ ಎಂದು ಪರಿಕಲ್ಪಿಸಿಕೊಳ್ಳಲಾಗಿದೆ.

ಎರಡನೆಯ ಪರಿಭಾವನೆಯನ್ನು ವಿ. ಪೆರೆಟೊ ಮತ್ತು ಅವನ ಅನುಯಾಯಿಗಳು ಕೊಟ್ಟಿರುತ್ತಾರೆ. ಪೆರೆಟೊರವರ ಪ್ರಕಾರ ಸಾಮಾಜಿಕ ಯೋಗಕ್ಷೇಮವು ಸಮಾಜದ ವಿವಿಧ ಜನರ ಯೋಗಕ್ಷೇಮವಾಗಿದೆ. ಇವರ ಪ್ರಕಾರ ಸಮಾಜದ ಕೆಲವು ಜನರ ಯೋಗಕ್ಷೇಮವು ಹೆಚ್ಚಳಗೊಂಡು ಉಳಿದವರ ಯೋಗಕ್ಷೇಮವು ಕಡಿಮೆಯಾಗದಿದ್ದರೆ ಅಲ್ಲಿ - ಆಗ ಸಾಮಾಜಿಕ ಯೋಗಕ್ಷೇಮವು ಹೆಚ್ಚಳವಾಗಿದೆ ಎಂದು ಅರ್ಥ.

ಮೂರನೆಯ ಪರಿಭಾವನೆಯನ್ನು ಬರ್ಗ್‌ಸನ್ ಮತ್ತು ಸ್ಯಾಮ್ಯುಯಲ್‌ಸನ್‌ರವರು ಕೊಟ್ಟಿರುತ್ತಾರೆ. ಇವರ ಪ್ರಕಾರ ಸಾಮಾಜಿಕ ಯೋಗಕ್ಷೇಮವನ್ನು ವಿವಿಧ ಜನರು ಹೊಂದಿರುವ ತುಷ್ಟಿಗುಣದ ಹೋಲಿಕೆಯ ಮೂಲಕ ಮಾತ್ರ ಅಂದಾಜು ಮಾಡಬಹುದು. ಸಾಮಾಜಿಕ ಯೋಗಕ್ಷೇಮ ಪರಿಭಾವನೆಯ ಮೂಲಕ ಆರ್ಥಿಕ ಸಂಘಟನೆ ಮತ್ತು ನೀತಿಯ ಬದಲಾವಣೆಯಿಂದ ಯೋಗಕ್ಷೇಮದಲ್ಲಿ ಉಂಟಾಗುವ ಬದಲಾವಣೆಯನ್ನು ಅಂದಾಜು ಮಾಡಬಹುದು.

ಮೊದಲನೆಯ ನಿರಂಕುಶ ಪ್ರಭುತ್ವ ಸಾಮಾಜಿಕ ಯೋಗಕ್ಷೇಮವನ್ನು ಅರ್ಥಶಾಸ್ತ್ರಜ್ಞರು ಒಪ್ಪುವುದಿಲ್ಲ. ರಾಬಿನ್ಸ್ ಮತ್ತು ಅವನ ಅನುಯಾಯಿಗಳು ಅರ್ಥಶಾಸ್ತ್ರವನ್ನು ನೀತಿ ಶಾಸ್ತ್ರದಿಂದ ಪ್ರತ್ಯೇಕಿಸಲು ಪ್ರಯತ್ನಿಸಿದ್ದಾರೆ. ಆದರೆ ಬರ್ಗ್‌ಸನ್, ಸ್ಯಾಮ್ಯುಯಲ್‌ಸನ್, ಲಿಟ್ಲ್, ಏರ್ರೋ ಮುಂತಾದವರ ಪ್ರಕಾರ ಅರ್ಥಶಾಸ್ತ್ರದಿಂದ ಮೌಲ್ಯಾಧರಿತ ತೀರ್ಮಾನ ವನ್ನು (ನೀತಿಶಾಸ್ತ್ರ) ಪ್ರತ್ಯೇಕಿಸಲು ಸಾಧ್ಯವಿಲ್ಲ. ಅಲ್ಲದೆ ಸಾಮಾಜಿಕ ಯೋಗಕ್ಷೇಮವನ್ನು ಸರಿಯಾಗಿ ಲೆಕ್ಕಹಾಕಲು ಸಾಧ್ಯವಿಲ್ಲ. ಯಾಕೆಂದರೆ ಇದು ಸಮಾಜದಲ್ಲಿ ಜನರ ಆಸಕ್ತಿಯನ್ನು ಒಳಗೊಂಡಿದೆ. ಈ ಆಸಕ್ತಿಯು ವ್ಯಕ್ತಿಯಿದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ ಬದಲಾವಣೆಯನ್ನು ಹೊಂದುತ್ತದೆ. ಸಾಮಾಜಿಕ ಯೋಗಕ್ಷೇಮವನ್ನು ಅಳತೆ ಮಾಡುವುದಕ್ಕೆ ಅರ್ಥಶಾಸ್ತ್ರಜ್ಞರು ಬೇರೆ ಬೇರೆ ಮಾನದಂಡಗಳನ್ನು ಉಪಯೋಗಿಸಿರುತ್ತಾರೆ. ಅವುಗಳಲ್ಲಿ ಪ್ರಮುಖವಾದವುಗಳು ಯೋಗಕ್ಷೇಮ ಅರ್ಥಶಾಸ್ತ್ರದ ಪ್ರಥಮ ಮತ್ತು ದ್ವಿತೀಯ ತತ್ವಗಳು. ಇವನ್ನು ಪ್ರತಿಪಾದಿಸಿದವರು ಇಟಾಲಿಯನ್ ಅರ್ಥಶಾಸ್ತ್ರಜ್ಞರಾದ ವಿಲ್‌ಫ್ರೆಡ್ ಪೆರೆಟೊ (೧೮೪೮-೧೯೨೩).

### ೫.೧.೩. ಯೋಗಕ್ಷಮ ಅರ್ಥಶಾಸ್ತ್ರದ ಮೂಲಭೂತ ತತ್ವಗಳು

ಸಾಮಾಜಿಕ ಸಮತೋಲನದ (ಸಾಮಾಜಿಕ ಯೋಗಕ್ಷೇಮ) ತತ್ವವನ್ನು ನಾವು ಇಲ್ಲಿ ಪೈಪೋಟಿ ಮಾರುಕಟ್ಟೆಯು ಹೊಂದಿರುವ ಎರಡು ಪ್ರಮುಖ ಗುಣಲಕ್ಷಣಗಳನ್ನು ವಿವರಿಸಲು ಉಪಯೋಗಿಸುತ್ತೇವೆ. ಅವುಗಳು ಈ ಕೆಳಕಂಡಂತಿವೆ.

**ಪೈಪೋಟಿಯ ಸಮಾನತೆಯು ದಕ್ಷತೆಯಿಂದ ಕೂಡಿರುತ್ತದೆ:** ಪೈಪೋಟಿಯು ಪೆರೆಟೋ ರವರ ದಕ್ಷ ಹಂಚುವಿಕೆಯ ಮೇಲೆ ಪರಿಣಾಮ ಬೀರುತ್ತದೆ. ಎಲ್ಲ ಮಾರುಕಟ್ಟೆಗಳಲ್ಲೂ ಕೆಲವರಿಗೆ ಅನುಕೂಲವಾಗಬೇಕಾದರೆ (ಒಳಿತು) ಇನ್ನು ಕೆಲವರಿಗೆ ತೊಂದರೆ ಅಥವಾ ಅನಾನುಕೂಲವಾಗಬೇಕು.

**ಪೈಪೋಟಿಯಿಂದ ಯಾವುದೇ ದಕ್ಷ ಹಂಚುವಿಕೆಯನ್ನು ಸಾಧಿಸಬಹುದು :** ಪ್ರಾರಂಭ ದಲ್ಲಿ ಸರಕುಗಳ ಸೂಕ್ತ ರೀತಿಯ ಹಂಚುವಿಕೆಯಿಂದ ಪೈಪೋಟಿಕರ ವಿನಿಮಯದಲ್ಲಿ ಎಲ್ಲ ರೀತಿಯ ದಕ್ಷ ಹಂಚುವಿಕೆಯನ್ನು ಹೊಂದಬಹುದು.

ಅರ್ಥಶಾಸ್ತ್ರಜ್ಞರು ಈ ಪರಿಣಾಮಗಳನ್ನು ಅನುಕ್ರಮವಾಗಿ ಯೋಗಕ್ಷೇಮ ಅರ್ಥ ಶಾಸ್ತ್ರದ ಪ್ರಥಮ ಹಾಗೂ ದ್ವಿತೀಯ ತತ್ವ ಎಂದು ಕರೆದಿರುತ್ತಾರೆ. ಈ ಗುಣಲಕ್ಷಣಗಳು ಕೆಳಗಿನ ಸಂದರ್ಭಗಳಲ್ಲಿ ಮಾತ್ರ ಅನ್ವಯಿಸುತ್ತವೆ.

೧. ಎಲ್ಲ ವ್ಯಾಪಾರಿಗಳ ಆದ್ಯತೆಯು ತಿಳಿದಿದ್ದಾಗ

೨. ವ್ಯವಹಾರ ವೆಚ್ಚ ಇರುವುದಿಲ್ಲ

೩. ಔದಾಸೀನ್ಯ ರೇಖೆಯು ಸಾಮಾನ್ಯ ಆಕಾರವನ್ನು ಹೊಂದಿರುತ್ತದೆ

**ಸ್ಪರ್ಧಾತ್ಮಕ ಸಮತೋಲನ ಸ್ಥಿತಿ :** ಇಬ್ಬರು ವ್ಯಕ್ತಿಗಳು ವ್ಯಾಪಾರ ಮಾಡುವಾಗ

ಬೆಲೆಗೆ ಸಂಬಂಧಿಸಿದಂತೆ ಅವರು ಅಭಿಪ್ರಾಯ ವ್ಯಕ್ತಪಡಿಸಲು ಆಗುವುದಿಲ್ಲ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಜನರು ಬೇರೆ ಬೇರೆ ರೀತಿಯ ಅಭಿರುಚಿ ಮತ್ತು ವಿವಿಧ ಪ್ರಮಾಣದಲ್ಲಿ ಹಣವನ್ನು ಹೊಂದಿದ್ದಾಗ ಪ್ರತಿಯೊಬ್ಬ ವ್ಯಕ್ತಿಯು ಎರಡು ಸರಕುಗಳ ಬೆಲೆಯ ಮೇಲೆ ಅಭಿಪ್ರಾಯ ವ್ಯಕ್ತಪಡಿಸಲು ಸಾಧ್ಯವಾಗುತ್ತದೆ. ಇವರು ಯಾವ ರೀತಿ ಯಲ್ಲಿ ವ್ಯಾಪಾರ ಮಾಡುತ್ತಾರೆ ಎನ್ನುವುದನ್ನು ಎಡ್ಜ್‌ವರ್ತ್‌ರವರು ಪೆಟ್ಟಿಗೆ ಚಿತ್ರದ ಸಹಾಯದಿಂದ ವಿವರಿಸಿರುತ್ತಾರೆ. ಸ್ಪರ್ಧಾತ್ಮಕ ಸಮತೋಲನ ಸ್ಥಿತಿಗೆ ಕಾರಣವಾದ ಬೆಲೆಯನ್ನು ಜೇನ್ ಮತ್ತು ಡೆನಿಸ್‌ರವರ ಬೆಲೆ ರೇಖೆಯಲ್ಲಿ ವಿವರಿಸಲಾಗಿದೆ. ಹಾಗೆಯೆ ಬೆಲೆಯು ಸ್ಪರ್ಧಾತ್ಮಕ ಸಮತೋಲನ ಸ್ಥಿತಿಗೆ ಕಾರಣವಾಗುವುದಿಲ್ಲ ಎಂಬುದನ್ನು ಇವರು ಪ್ರಮಾಣಿಕರಿಸಿದ್ದಾರೆ. ಪೈಪೋಟಿ ಮಾರುಕಟ್ಟೆಯಲ್ಲಿ ಸರಕುಗಳ ಪೂರೈಕೆಯು ಬೇಡಿಕೆಗೆ ಸಮನಾಗಿರುವವರೆಗೆ ಬೆಲೆಯಲ್ಲಿ ಹೊಂದಾಣಿಕೆ ಇರುತ್ತದೆಂದು ಇವರು ತಿಳಿಸಿದ್ದಾರೆ. ಸಾಮಾನ್ಯವಾಗಿ ಪೂರೈಕೆಯು ಬೇಡಿಕೆಯ ಪ್ರಮಾಣಕ್ಕೆ ಸಮನಾಗಿರುವುದಿಲ್ಲ. ಈ ಪರಿಸ್ಥಿತಿಯಲ್ಲಿ ಬೆಲೆಯು ಸ್ಪರ್ಧಾತ್ಮಕ ಸಮತೋಲನ ಸ್ಥಿತಿಯ ಮೇಲೆ ಪರಿಣಾಮವನ್ನು ಬೀರುವುದಿಲ್ಲ. ಹೀಗೆ ಯೋಗಕ್ಷೇಮ ಅರ್ಥಶಾಸ್ತ್ರದ ತತ್ವಗಳು ಸ್ಪರ್ಧಾತ್ಮಕ ಸಮತೋಲನ ಸ್ಥಿತಿಗೆ ಕಾರಣವಾದ ಬೆಲೆಯನ್ನು ವಿವರಿಸುವುದರ ಜೊತೆಗೆ ಬೆಲೆಯು ಸ್ಪರ್ಧಾತ್ಮಕ ಸಮತೋಲನ ಸ್ಥಿತಿಗೆ ಕಾರಣವಾಗುವುದಿಲ್ಲ ಎಂಬುದನ್ನು ತಿಳಿಸುತ್ತವೆ.

**೫.೧.೪. ಯೋಗಕ್ಷೇಮದ ಪ್ರಥಮ ತತ್ವ ಅಥವಾ ಪೈಪೋಟಿಯುತ ದಕ್ಷತೆ**

ಪೈಪೋಟಿಯುತ ಸಮತೋಲನ ಸ್ಥಿತಿಯಲ್ಲಿ ಎರಡೂ ವಿಧದ ಅನುಭೋಗಿಗಳ ಔದಾಸೀನ್ಯ ರೇಖೆಯು ಒಂದೇ ಬಿಂದುವಿನಲ್ಲಿ ಬೆಲೆರೇಖೆಯನ್ನು ಸ್ಪರ್ಶಿಸುತ್ತವೆ. ಪರಿಣಾಮವಾಗಿ ಪ್ರತಿಯೋರ್ವ ವ್ಯಕ್ತಿಯ (MRS) ಔದಾಸೀನ್ಯ ರೇಖೆಯು ಬೆಲೆ ರೇಖೆಯ ಇಳಿಜಾರಿಗೆ ಸಮಾನವಾಗಿರುತ್ತದೆ. ಇದರಿಂದಾಗಿ ಔದಾಸೀನ್ಯ ರೇಖೆಯ ಇಳಿಜಾರು.

$$MRS = \frac{P_c}{P_w} = MRS_d$$

ಪೈಪೋಟಿಯುತ ಸಮತೋಲನಸ್ಥಿತಿಯಲ್ಲಿ ಬದಲಿ ಸರಕಿನ ಸೀಮಾಂತ ದರವು ಅನುಭೋಗಿಗಳ ನಡುವೆ ಸಮನಾಗಿದ್ದು, ಪೈಪೋಟಿಯುತ ಸಮಾನತೆಯು ಒಪ್ಪಂದದ ರೇಖೆಯ ಮೇಲಿರುತ್ತದೆ. ಈ ರೀತಿಯಾಗಿ ಯೋಗಕ್ಷೇಮ ಅರ್ಥಶಾಸ್ತ್ರದ ಪ್ರಥಮ ತತ್ವವನ್ನು ವಿವರಿಸಲಾಗಿದೆ.

ಯಾವುದೇ ರೀತಿಯ ಪೈಪೋಟಿಯುತ ಸಮತೋಲನ ಸ್ಥಿತಿಯು ಪೆರೆಟೋರವರ ದಕ್ಷತೆಯಾಗಿದೆ.

ಈ ಮೇಲಿನ ನಿರ್ಧಾರಕ್ಕೆ ಬರುವುದಕ್ಕೆ ಪ್ರಮುಖ ಕಾರಣವೆಂದರೆ ಜನರು ಸ್ವಯಂ

ಪ್ರೇರಿತ ವ್ಯಾಪಾರವನ್ನು ಪೈಪೋಟಿಯುತ ಮಾರುಕಟ್ಟೆಯಲ್ಲಿ ಕೈಗೊಳ್ಳುತ್ತಾರೆ. ಸ್ವಯಂ ಪ್ರೇರಿತ ವ್ಯಾಪಾರವಿರುವ ಪೈಪೋಟಿಯುತ ಸಮಾನತೆಯಲ್ಲಿ ಕೆಲವರಿಗೆ ಒಳಿತಾಗಿ ಇನ್ನು ಕೆಲವರಿಗೆ ಕೆಡುಕುಂಟಾಗುವುದಿಲ್ಲ.

**೫.೧.೫. ಯೋಗಕ್ಷೇಮದ ದ್ವಿತೀಯ ತತ್ವ ಅಥವಾ ಪೈಪೋಟಿಯನ್ನು ಉಪಯೋಗಿಸಿ ಕೊಂಡು ಯಾವುದಾದರೂ ದಕ್ಷ ಹಂಚುವಿಕೆಯನ್ನು ಪಡೆಯುವುದು**

ಪೆರೆಟೋ - ದಕ್ಷ ಹಂಚುವಿಕೆಯಲ್ಲಿರುವ ಹಲವು ಅಂಶಗಳಲ್ಲಿ, ಸರಕಾರವು ಯಾವು ದಾದರೂ ಒಂದನ್ನು ಆರಿಸುವ ಇಚ್ಛೆಯನ್ನು ಹೊಂದಿರುತ್ತದೆ. ಪೈಪೋಟಿಯುತ ಸಮಾನತೆಯ ಹಂಚುವಿಕೆ ಅಥವಾ ಸಂಪತ್ತಿನ ಆರಂಭಿಕ ವಿತರಣೆಯನ್ನು ಅವಲಂಬಿಸಿದೆ. ದ್ವಿತೀಯ ತತ್ವವು ಪೈಪೋಟಿಯಲ್ಲಿ ಸಮಾನತೆ ಸಾಧಿಸಲು ನಿರ್ದಿಷ್ಟ ಹಂಚುವಿಕೆಗಾಗಿ ವ್ಯಾಪಾರವು ಸರಿಯಾದ ಉದ್ದೇಶಿತ ಮೂಲ ಧನವನ್ನು ಹೊಂದಿರಬೇಕಾಗುತ್ತದೆ. ಇಲ್ಲದಿದ್ದರೆ, ಪೈಪೋಟಿ ಮಾರುಕಟ್ಟೆಯಲ್ಲಿ ಸಮತೋಲನ ಮತ್ತು ದಕ್ಷತೆ ಸಾಧ್ಯ ವಾಗುವುದಿಲ್ಲ. ಒಟ್ಟಾರೆ ಹೇಳುವುದಾದರೆ ಪೆರೆಟೋರವರ ಯಾವುದಾದರೂ ದಕ್ಷ ಸರಕು 'x' ನ್ನು ಪೈಪೋಟಿಯುತ ಸಮಾನತೆಯಾಗಿ ಆರಂಭಿಕ ಮೂಲಧನ 'x' ಆಗಿದ್ದಾಗ ಪಡೆಯಬಹುದು. ಮೂಲಧನ 'x' ಬೆಲೆರೇಖೆಯಲ್ಲಿದ್ದಾಗ ಬೆಲೆರೇಖೆಯ ಇಳಿಜಾರು ಔದಾಸೀನ್ಯ ರೇಖೆಗಳಲ್ಲಿನ ಬದಲಿ ಸರಕಿನ ಸೀಮಾಂತ ದರಕ್ಕೆ ಸಮನಾಗಿದ್ದು ಅದು 'x'ನ್ನು ಸ್ಪರ್ಷಿಸುತ್ತದೆ. ಇದು ಯೋಗಕ್ಷೇಮ ಅರ್ಥಶಾಸ್ತ್ರದ ಎರಡನೆಯ ತತ್ವವಾಗಿದೆ-

"ಸೂಕ್ತ ಮೂಲಧನವಿದ್ದಾಗ ಪೆರೆಟೋರವರ ಯಾವುದಾದರೂ ದಕ್ಷತೆಯ ಸಮತೋಲನವನ್ನು ಪೈಪೋಟಿಯ ಮೂಲಕ ಪಡೆಯಬಹುದು".

ಪ್ರಥಮ (ಮೊದಲ) ತತ್ವದ ಪ್ರಕಾರ ಪೈಪೋಟಿಯಿದ್ದಾಗ ಸಮಾಜವು ದಕ್ಷತೆಯನ್ನು ಸಾಧಿಸಬಹುದು. ಎರಡನೆಯ ಸೂತ್ರದ ಪ್ರಕಾರ ಆದಾಯ ಅಥವಾ ಮೂಲಧನವನ್ನು ಮೌಲ್ಯಾಧರಿತ ಸಮಾನ ಪುನರ್‌ಹಂಚುವಿಕೆಯ ಮೂಲಕ, ಸಮಾಜವು ತನ್ನ ಆದ್ಯತೆಯ ಮೇರೆಗೆ ನಿರ್ದಿಷ್ಟ ದಕ್ಷ ಹಂಚುವಿಕೆಯನ್ನು ಕೈಗೊಂಡು ಯೋಗಕ್ಷೇಮವನ್ನು ಹೆಚ್ಚಿಸ ಬಹುದು.

ಪೆರೆಟೋರರವರ ತತ್ವಗಳು ಎಲ್ಲಾ ಕಾಲದಲ್ಲೂ ಅನ್ವಯಿಸುವುದಿಲ್ಲ. ಏಕೆಂದರೆ ಜನರ ನಡುವೆ ಮೂಲಧನಗಳ ಹಂಚುವಿಕೆಯಲ್ಲಿ ಅಸಮಾನತೆಯಿದ್ದಾಗ ಸಮಾಜದ ಎಲ್ಲಾ ವರ್ಗದ ಜನರ ಯೋಗಕ್ಷೇಮವು ಹೆಚ್ಚಳಗೊಳ್ಳಲು ಸಾಧ್ಯವಿಲ್ಲ. ಆದುದರಿಂದ ಪೆರೆಟೋರವರ ಪೈಪೋಟಿಯುತ ಸಮತೋಲನಸ್ಥಿತಿಯನ್ನು ಯಾವಾಗಲೂ ಸಾಧಿಸಲು ಸಾಧ್ಯವಿಲ್ಲ.

## ೫.೨. ಸಾರಾಂಶ

ಕಲ್ಯಾಣ (ಯೋಗಕ್ಷೇಮ) ಅರ್ಥಶಾಸ್ತ್ರವು ಅರ್ಥವಿಜ್ಞಾನದ ಒಂದು ಪ್ರಮುಖ ಶಾಖೆಯಾಗಿದೆ. ಎಲ್ಲಾ ಬಗೆಯ ಆರ್ಥಿಕ ಚಟುವಟಿಕೆಗಳ ಪ್ರಮುಖ ಉದ್ದೇಶವೇ ಆರ್ಥಿಕ ಅಥವಾ ಸಾಮಾಜಿಕ ಕಲ್ಯಾಣ ಸಾಧಿಸುವುದಾಗಿದೆ. ವ್ಯಕ್ತಿಗತ ನಡವಳಿಕೆಗಳು ಅದೆಷ್ಟೋ ಸಲ ಸಾಮಾಜಿಕ ಕಲ್ಯಾಣದ ಗರಿಷ್ಠಗೊಳಿಸುವಿಕೆಗೆ ಅಡ್ಡಿ ಆತಂಕಗಳನ್ನು ಹುಟ್ಟುಹಾಕುವುವು. ಈ ಅಡಚಣೆಗಳನ್ನು ನಿವಾರಿಸುವುದೆ ಮಾರುಕಟ್ಟೆ ಮತ್ತು ಸರ್ಕಾರದ ಉದ್ದೇಶವಾಗಬೇಕು ಎಂಬುದೇ ಕಲ್ಯಾಣ ಅರ್ಥಶಾಸ್ತ್ರದ ಪ್ರತಿಪಾದನೆಯಾಗಿದೆ.

ಪರ್ಯಾಯ ಆರ್ಥಿಕ ಸ್ಥಿತಿಗಳ ನಡುವೆ ಆದರ್ಶಯುತವಾದುದನ್ನು ಸ್ಪರ್ಧಾತ್ಮಕ ಮಾರುಕಟ್ಟೆ ಸಂದರ್ಭಗಳಲ್ಲಿ ಆಯ್ಕೆ ಮಾಡಿಕೊಳ್ಳಲು ಮಾರ್ಗದರ್ಶನ ನೀಡುವುದೆ ಕಲ್ಯಾಣ ಅರ್ಥಶಾಸ್ತ್ರವಾಗಿದೆ. ಪ್ರೊ. ಎ.ಸಿ.ಪಿಗು, ಬ್ರಿಟಿಷ್ ಅರ್ಥಶಾಸ್ತ್ರಜ್ಞರು ಸಾಂಪ್ರದಾಯಿಕ ಅರ್ಥಶಾಸ್ತ್ರವನ್ನು ರೂಪಿಸಿ ವಿಸ್ತರಿಸಲೆತ್ನಿಸಿದರು. ನಂತರ ಕಲ್ಯಾಣ ಅರ್ಥಶಾಸ್ತ್ರದ ವಸ್ತುವಿಷಯ ಮತ್ತು ವ್ಯಾಪ್ತಿಯು ವಿಲ್‌ಫ್ರೆಡ್ ಪೆರೆಟೋ, ಪಿ. ಎ. ಸಾಮ್ಯುಯಲ್‌ಸನ್, ಬರ್ಗ್‌ಸನ್, ಕೋಸ್, ಕಾಲ್ಡಾರ್, ಹಿಕ್ಸ್, ಡೆಗ್ರಾಫ್‌ರವರ ಕೊಡುಗೆಗಳನ್ವಯ ವಿಸ್ತೃತವಾಗಿ ಶ್ರೀಮಂತವಾಗಿದೆ. ವಿಶೇಷವಾಗಿ ಡೇಗ್ರಾಫ್ ಅವರ ತಾತ್ವಿಕ ಕೊಡುಗೆಯನ್ನು ಆಧುನಿಕ ಕಲ್ಯಾಣ ಅರ್ಥಶಾಸ್ತ್ರವೆಂದೇ ಕರೆಯಲಾಗಿದೆ. ಈ ಎಲ್ಲವೂ ತಾತ್ವಿಕ ಕಲ್ಯಾಣ ಅರ್ಥಶಾಸ್ತ್ರ ಆಗಿದೆ. ಕಳೆದೆರಡು ದಶಕಗಳಲ್ಲಿ ಅನ್ವಯಿಕ ಕಲ್ಯಾಣ ಅರ್ಥಶಾಸ್ತ್ರವು ವಿಕಾಸವಾಗುತ್ತಾ ಬೆಳೆಯುತ್ತಿದೆ. ಈ ಕ್ಷೇತ್ರಕ್ಕೆ ೧೯೯೭ರ ನೋಬೆಲ್ ಅರ್ಥಶಾಸ್ತ್ರಜ್ಞ ಪ್ರೊ. ಅಮರ್ತ್ಯಸೇನ್ ಅವರ ಕೊಡುಗೆ ಮಹತ್ವದ್ದಾಗಿದೆ.

ಕಲ್ಯಾಣವೆಂದರೆ ಯೋಗಕ್ಷೇಮವೆಂದರ್ಥ. ಭೌತಿಕವಾಗಿ ತೃಪ್ತಿಕರ (ತುಷ್ಟಿಗುಣ) ಸ್ಥಿತಿ ಎಂದರ್ಥ. ಈ ಅಂಶವನ್ನು ಆರ್ಥಿಕ ಕಲ್ಯಾಣ (ಯೋಗಕ್ಷೇಮ) ಅಥವಾ ಸಾಮಾಜಿಕ ಕಲ್ಯಾಣ ಯೋಗಕ್ಷೇಮ ಎಂದೂ ಪರ್ಯಾಯವಾಗಿ ಕರೆಯಲಾಗುವುದು. ಎಲ್ಲಾ ಆರ್ಥಿಕ ಚಟುವಟಿಕೆಗಳ ಪರಮ ಉದ್ದೇಶವೇ ಆರ್ಥಿಕ ಕಲ್ಯಾಣವನ್ನು ಗರಿಷ್ಠಗೊಳಿಸುವುದಾಗಿದೆ. ಎಲ್ಲಾ ಬಗೆಯ ಆರ್ಥಿಕ ನೀತಿಗಳ ವೈಯಕ್ತಿಕ ಮತ್ತು ಸಾಮಾಜಿಕ ಕಲ್ಯಾಣ ಪರಿಣಾಮಗಳನ್ನು ಗುರುತಿಸಿ, ಮಾಪನ ಮಾಡಿ, ವಿವರಿಸುವ ಪ್ರಯತ್ನಗಳನ್ನು ಅರ್ಥಶಾಸ್ತ್ರಜ್ಞರು ಮಾಡಿದ್ದಾರೆ. ಅಂಥಹ ಪ್ರಯತ್ನ ನಿರಂತರವಾಗಿ ಮುಂದುವರಿದಿದೆ. ಕಲ್ಯಾಣ ಅರ್ಥಶಾಸ್ತ್ರವು ಸಾಮಾನ್ಯ ಅರ್ಥಶಾಸ್ತ್ರವನ್ನೇ ತಾತ್ವಿಕ ನೆಲೆಯಾಗಿ ಬಳಸುವುದು. ಅದು ವಾಸ್ತವಿಕ, ವಸ್ತುನಿಷ್ಠ ಮತ್ತು ನೈತಿಕ ಅರ್ಥಶಾಸ್ತ್ರದೊಂದಿಗೆ ನಿಕಟವಾದ ಸಂಬಂಧ ಹೊಂದಿದೆ. ಆರ್ಥಿಕ ನೀತಿಗಳ ಸಾಮಾಜಿಕ ಸಮಂಜಸತೆಯನ್ನು ತೀರ್ಮಾನಿಸಲು ಸೂಕ್ತ ಅಥವಾ ಅರ್ಹ ಮಾನದಂಡಗಳನ್ನು ನೈತಿಕ ಮೌಲ್ಯಗಳನ್ನು ಆಧರಿಸಿ ತೀರ್ಮಾನಿಸುವ

ಕ್ರಮವೇ (ವಿಚಾರ ಸರಣಿ ತತ್ವ ಮತ್ತು ನೀತಿ ನಿರೂಪಣೆ ಕ್ರಿಯೆ) ಕಲ್ಯಾಣ ಅರ್ಥಶಾಸ್ತ್ರವಾಗಿದೆ.

ಕಲ್ಯಾಣ ಪರಿಭಾವನೆಯನ್ನು ವ್ಯಕ್ತಿ ಮತ್ತು ಸಮಾಜದ ನೆಲೆಗಳಲ್ಲಿ ಪರಿಭಾವಿಸಿ ಮಾಪನ ಮಾಡಿ ವಿಶ್ಲೇಷಿಸಲಾಗುವುದು. ಹೀಗಾಗಿ ನಾವು ವೈಯಕ್ತಿಕ ಕಲ್ಯಾಣ (ಯೋಗಕ್ಷೇಮ) ಮತ್ತು ಸಾಮಾಜಿಕ ಕಲ್ಯಾಣ (ಯೋಗಕ್ಷೇಮ) ಎಂಬ ವರ್ಗೀಕರಣವನ್ನು ಕಾಣುವೆವು. ವ್ಯಕ್ತಿಗಳು ತಮ್ಮ ಸ್ವಂತ ಅನುಭೋಗದಿಂದ ಪಡೆವ (ಗಳಿಸುವ) ತುಷ್ಟಿಗುಣವೆ ಅವರ ವೈಯಕ್ತಿಕ ಕಲ್ಯಾಣವಾಗಿರುತ್ತದೆ. ಒಂದು ಸಮಾಜದ ಎಲ್ಲಾ ಪ್ರಜೆಗಳ ವೈಯಕ್ತಿಕ ತುಷ್ಟಿಗುಣಗಳನ್ನು ಒಟ್ಟು ಸೇರಿಸಿದರೆ (ಸಮಗ್ರೀಕರಣ) ನಮಗೆ ದೊರಕುವುದೆ ಸಾಮಾಜಿಕವಾಗಿ ಒಟ್ಟು ತುಷ್ಟಿಗುಣವಾಗಿದ್ದು ಅದು ಒಟ್ಟು ಸಾಮಾಜಿಕ ಕಲ್ಯಾಣದ ಸೂಚ್ಯಂಕವಾಗುತ್ತದೆ.

ಇಲ್ಲಿ ನಾವು ಕಲ್ಯಾಣ ಅರ್ಥಶಾಸ್ತ್ರದ ಎರಡು ಮೂಲಭೂತ ತತ್ವಗಳನ್ನು ಕಲಿಯಲೆತ್ನಿಸಿದ್ದೇವೆ. ಇವುಗಳನ್ನು ಸಾಕಷ್ಟು ವಿವರವಾಗಿ ವಿಶ್ಲೇಷಿಸಲೆತ್ನಿಸಲಾಗಿದೆ. ಪೆರೆಟೋ ಆದರ್ಶವೆಂದರೆ ಒಬ್ಬ ವ್ಯಕ್ತಿ ತನ್ನ ಸ್ಥಿತಿಯನ್ನು ಉತ್ತಮಪಡಿಸುವಾಗ ಬೇರೆ ವ್ಯಕ್ತಿಗಳ ಸ್ಥಿತಿ ಕುಸಿಯದಂತೆ (ಇಳಿತಾಯವಾಗದಂತೆ) ಮಾಡುವ ಯಾವುದೇ ಬದಲಾವಣೆಯು ಸಾಮಾಜಿಕ ಯೋಗಕ್ಷೇಮದಲ್ಲಿ ಹೆಚ್ಚಳ ತರುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಬೇರೆಯವರ ಸ್ಥಿತಿಯನ್ನು ಉತ್ತಮಪಡಿಸದೇ, ಆದರೆ ಇಬ್ಬರ ಪೈಕಿ ಯಾವನಾದರೊಬ್ಬನ ಕಲ್ಯಾಣ ಸ್ಥಿತಿಯು ಕುಸಿಯುವಂತೆ ಮಾಡುವ ಯಾವುದೇ ಬದಲಾವಣೆಯು ಸಾಮಾಜಿಕ ಯೋಗಕ್ಷೇಮ ಮಟ್ಟದಲ್ಲಿ ಕಡಿತವುಂಟು ಮಾಡುವುದು. ಆರ್ಥಿಕತೆಯೊಂದರಲ್ಲಿ ಪೆರೆಟೋ ದಕ್ಷತೆ ಸ್ಥಿತಿಯನ್ನು ಮೂರು ಸೀಮಾಂತ ನಿಬಂಧನೆಗಳನ್ನು ವಿನಿಮಯ ದಕ್ಷತೆ, ಉತ್ಪಾದನಾ ದಕ್ಷತೆ ಮತ್ತು ಉತ್ಪನ್ನ ಮಿಶ್ರಣ ಅಥವಾ ಸ್ವರೂಪದಲ್ಲಿ ದಕ್ಷತೆ-ತೃಪ್ತಪಡಿಸುವುದು ಅವಶ್ಯಕ. ಈ ಮೂರೂ ನಿಬಂಧನೆಗಳನ್ನು ನೀವು ಈಗಾಗಲೇ ವಿವರವಾಗಿ ಓದಿ ಮನನಮಾಡಿಕೊಂಡಿರುವಿರಿ.

ನಿರ್ದಿಷ್ಟ ಆರ್ಥಿಕ ಸಂದರ್ಭವೊಂದು ಸಾಮಾಜಿಕ ಯೋಗಕ್ಷೇಮವನ್ನು ಗರಿಷ್ಠಗೊಳಿಸದೆಯೇ ಪೆರೆಟೋ ಆದರ್ಶ ಸ್ಥಿತಿಯಾಗಿರಬಹುದು. ಆದರೆ ಪೆರೆಟೋ ಆದರ್ಶ ಸ್ಥಿತಿಯೊಂದರಲ್ಲಿ ಮಾತ್ರವೇ ಯೋಗಕ್ಷೇಮವನ್ನು ಗರಿಷ್ಠಗೊಳಿಸಬಹುದಾಗಿದೆ. ಬೇರೊಂದು ರೀತಿಯಲ್ಲಿ ಹೇಳುವುದಾದರೆ, ಕಲ್ಯಾಣವನ್ನು ಗರಿಷ್ಠಗೊಳಿಸಲು ಪೆರೆಟೋ ಆದರ್ಶವು ಅವಶ್ಯಕ ನಿಬಂಧನೆಯೇ ಹೊರತು ಅದು ತೃಪ್ತಿಕರ ನಿಬಂದನೆಯೇನೂ ಅಲ್ಲ. ಉತ್ಪಾದನಾ ಸಾಧ್ಯತಾ ರೇಖೆ ಮೇಲಿನ ಎಲ್ಲಾ ಬಿಂದುಗಳು ಪೆರೆಟೋ ಆದರ್ಶ ಸ್ಥಿತಿ ಆಗಿರುವುವು. ಈ ಪರ್ಯಾಯವಾದ ಪೆರೆಟೋ ಆದರ್ಶ ಸ್ಥಿತಿಗಳ ನಡುವಣ ಆಯ್ಕೆಯು ಸಾಮಾಜಿಕ ಕಲ್ಯಾಣದ ಸೂತ್ರವೊಂದನ್ನು ಅಥವಾ ಅಳತೆಗೋಲನ್ನು ಅಗತ್ಯವಾಗಿಸುತ್ತದೆ.

## ೫.೩. ಪಾರಿಭಾಷಿಕ ಕೋಶ

ಕಲ್ಯಾಣ (ಯೋಗಕ್ಷೇಮ) - Welfare : ಕಲ್ಯಾಣವು ವಿಸ್ತೃತ ನೆಲೆಯುಳ್ಳವ್ಯಕ್ತಿಗೆ ಮತ್ತು ಸಮಾಜಕ್ಕೆ ಅಧಿಕ ಉಪಯುಕ್ತತೆ ಅಥವಾ ತುಷ್ಟಿಗುಣದ ಮೂಲಕ ಹಿತಾನುಭವ ತರುವ ಅಂಶವಾಗಿದೆ. ಇದು ಸರಕು-ಸೇವೆಗಳ ಅನುಭೋಗದಿಂದ ಮೂಡಿಬರುವ ಸಂತೃಪ್ತಿ, ತುಷ್ಟಿಗುಣ, ಅನುಭವ, ಸುಖ ಆಗಿರುತ್ತದೆ. ಕಲ್ಯಾಣವು ಮಾನವನ ಮಾನಸಿಕ ಪ್ರಜ್ಞೆಗೆ ಸಂಬಂಧಿಸಿದೆ, ಅದನ್ನು ಹೆಚ್ಚು ಅಥವಾ ಕಡಿಮೆ ಎಂದಷ್ಟೇ ಮಾಪನ ಮಾಡಬಹುದಾಗಿದೆ.

ಆರ್ಥಿಕ (ಸಾಮಾಜಿಕ) ಕಲ್ಯಾಣ - Economic Welfare : ಇದು ಇಡಿ ಸಮಾಜದ ಕಲ್ಯಾಣದ (ಸುಖ ಸಂತೃಪ್ತಿ ಭಾವದ) ಸ್ಥಿತಿಯಾಗಿದೆ. ಅದು ಸಮಾಜವೊಂದರ ಎಲ್ಲಾ ಬಳಕೆದಾರರ ಸರಕುಸೇವೆಗಳ ಅನುಭೋಗದಿಂದ ಏರ್ಪಡುವ ತುಷ್ಟಿಗುಣ ಅಥವಾ ತೃಪ್ತಿ ಮಟ್ಟಗಳನ್ನು ಆಧರಿಸಿರುತ್ತದೆ.

ಮೌಲ್ಯ ವಿವೇಚನೆ - Valve Judgement - Positive Economics : ಆರ್ಥಿಕ ಅಥವಾ ಸಾಮಾಜಿಕ ಕಲ್ಯಾಣ ಕುರಿತಂತೆ ವ್ಯಕ್ತಿ ಮತ್ತು ಸಾಮಾಜಿಕ ನೆಲೆಗಳಲ್ಲಿ ಸಮಂಜಸತೆ ತೀರ್ಮಾನಗಳನ್ನು ನೀಡಲು, (ರೂಪಿಸಲು), ಬಳಸುವ ನೈತಿಕ ಮಾನದಂಡಗಳೇ ಮೌಲ್ಯ ವಿವೇಚನೆಯಾಗಿದೆ.

ವಸ್ತುನಿಷ್ಠ ಅರ್ಥಶಾಸ್ತ್ರ - Positive Economics : ಅಸ್ತಿತ್ವದಲ್ಲಿರುವ ಆರ್ಥಿಕ ಪರಿಸ್ಥಿತಿಯನ್ನು ಇರುವಂತೆಯೇ ವಿವರಿಸುವುದು ಮತ್ತು ಅದರ ಬಗೆಗೆ ಯಾವುದೇ ನೈತಿಕ ತೀರ್ಮಾನಗಳನ್ನು ಮಾಡದಿರುವುದು ವಸ್ತುನಿಷ್ಠ ಅರ್ಥಶಾಸ್ತ್ರವಾಗಿದೆ.

ನೈತಿಕ (ಮೌಲ್ಯಾಧಾರಿತ) ಅರ್ಥಶಾಸ್ತ್ರ - Normative Economics : ಆರ್ಥಿಕ ಪರಿಸ್ಥಿತಿಗಳ / ಚಟುವಟಿಕೆಗಳ ಮತ್ತು ಆರ್ಥಿಕ ನೀತಿಗಳ ಕಲ್ಯಾಣ ಸೂಚ್ಯಾರ್ಥಗಳನ್ನು ಸೂಚಿಸುವುದೇ ನೈತಿಕ ಅರ್ಥಶಾಸ್ತ್ರವಾಗಿದೆ. ಅಂದರೆ ಆರ್ಥಿಕ ಪರ್ಯಾಯಗಳನ್ನು ಕಲ್ಯಾಣದ ಪರಿಣಾಮಗಳನ್ನಾಧರಿಸಿ ತೀರ್ಮಾನಿಸುವ ಆರ್ಥಿಕ ವಿಧಾನವಿದು.

ಆರ್ಥಿಕ ನೀತಿ - Economic Policy : ಭವಿಷ್ಯದ ಆರ್ಥಿಕ ಪರಿಣಾಮಗಳನ್ನು ಪ್ರಭಾವಿಸಲು ಸರ್ಕಾರ ಬಳಸುವ ತೀರ್ಮಾನ, ಕ್ರಿಯೆ ಮತ್ತು ಸಾಧನವನ್ನು ಆರ್ಥಿಕ ನೀತಿ ಎನ್ನಲಾಗುವುದು. ಎಲ್ಲಾ ಆರ್ಥಿಕ ನೀತಿಗಳಿಗೂ ಆರ್ಥಿಕ ತತ್ವವೊಂದು ಆಧಾರವಾಗಿರುವುದು.

ಪೆರೆಟೋ ಆದರ್ಶ ಸ್ಥಿತಿ - Parato Optimality : ಇದು ವಸ್ತುನಿಷ್ಠವಾಗಿ ಅಳತೆ ಮಾಡಬಹುದಾದ ಆರ್ಥಿಕ ದಕ್ಷತೆಗೆ ಸಂಬಂಧಿಸಿದ್ದು. ಈ ಸೂತ್ರದ ಪ್ರಕಾರ ಒಬ್ಬನ ಸ್ಥಿತಿಯನ್ನು ಉತ್ತಮ ಪಡಿಸುವಾಗ ಬೇರೆಯವರ ಸ್ಥಿತಿಯು ಕುಸಿಯದಂತೆ ಮಾಡುವ ಯಾವುದೇ ಬದಲಾವಣೆಯು ಸಾಮಾಜಿಕ ಯೋಗಕ್ಷೇಮದಲ್ಲಿ ಹೆಚ್ಚಳ ತರುತ್ತದೆ. ಅಂದರೆ ಸಮಾಜದ ಯಾರಾದರೊಬ್ಬರ ಸ್ಥಿತಿಯನ್ನು ಹಾಳುಗೆಡವುದೇ ಬೇರೊಬ್ಬರ ಸ್ಥಿತಿಯನ್ನು ಉತ್ತಮಪಡಿಸುವುದು ಅಸಾಧ್ಯವಾದ ಆರ್ಥಿಕ ಸಂದರ್ಭವನ್ನು ಪೆರೆಟೋ

ಆದರ್ಶ ಅಥವಾ ಪೆರೆಟೋ ದಕ್ಷತೆ ಎನ್ನಲಾಗುವುದು.

ವೈಯಕ್ತಿಕ (ವ್ಯಕ್ತಿಗತ) ಕಲ್ಯಾಣ - Individual Welfare : ಸರಕು ಸೇವೆಗಳ ಅನುಭೋಗದಿಂದ ವ್ಯಕ್ತಿ ಪಡೆವ ಸಂತೃಪ್ತಿ, ತುಷ್ಟಿಗುಣ ಮತ್ತು ಸಂತೋಷವನ್ನು ವೈಯಕ್ತಿಕ ಕಲ್ಯಾಣವೆಂದು ಕರೆಯಲಾಗುವುದು. ವೈಯಕ್ತಿಕ ಕಲ್ಯಾಣ ಸರಕು (ಭೌತಿಕವಾದಿ) ನೆಲೆ ಮತ್ತು ಇತರೆ ಅಭೌತಿಕ (ಸರಕುರೂಪವಲ್ಲದ) ನೆಲೆಗಳೂ ಇರುವುವು. ಆದರೆ ವೈಯ ಕ್ತಿಕ ಮತ್ತು ಸಾಮಾಜಿಕ ಕಲ್ಯಾಣದ ಸರಕು ಸೇವೆ ನೆಲೆಯೆ ವಿಸ್ತೃತವಾದುದು.

ಸಾಮಾಜಿಕ (ಆರ್ಥಿಕ) ಕಲ್ಯಾಣ - Social Welfare : ಸಮಾಜವೊಂದರ ಎಲ್ಲಾ ವ್ಯಕ್ತಿಗಳ ಒಟ್ಟು ಸಂತೃಪ್ತಿ, ತುಷ್ಟಿಗುಣ, ಸಂತೋಷ ಎಂದು ಕರೆಯಲಾಗುವ ಕಲ್ಯಾಣ / ಯೋಗಕ್ಷೇಮ ಸ್ಥಿತಿ. ಆರ್ಥಿಕ ನೀತಿಗಳ ಸಾಮಾಜಿಕ ಸಮಂಜಸತೆ ಪರಿಮಾಮಗಳನ್ನು ವಿವೇಚಿಸುವುದೇ, ತನ್ಮೂಲಕ ಪರ್ಯಾಯ ಆರ್ಥಿಕ ನೀತಿಗಳನ್ನು ಕುರಿತು ತೀರ್ಮಾನಿಸುವುದೇ ಸಾಮಾಜಿಕ ಕಲ್ಯಾಣಕ್ಕೆ ಹಿತಕರವಿರುವುದು; ಆದನ್ನು ಹೆಚ್ಚಿಸುವುದು.

ತುಷ್ಟಿಗುಣ - Utility : ವ್ಯಕ್ತಿಯು ತಾನು ಅನುಭೋಗಿಸುವ ಸರಕು ಸೇವೆಗಳಿಂದ ಪಡೆವ ತೃಪ್ತಿ, ಸಂತುಷ್ಟಿ ಭಾವ. ಪ್ರತಿಯೊಂದು ಸರಕು ಸೇವೆಯು ಮನುಷ್ಯನ ಬಯಕೆ ತೃಪ್ತಿಪಡಿಸುವ ಸಾಮರ್ಥ್ಯವನ್ನು ತುಷ್ಠಿಗುಣ ಎನ್ನಲಾಗುವುದು. ತುಷ್ಠಿಗುಣವು ಸರಕು ಸೇವೆಗಳಿಗೆ ವಿನಿಮಯ ಮತ್ತು ಬಳಕೆ ಹಾಗೂ ಈ ಎರಡೂ ಬಗೆಯ ಉಪಯುಕ್ತತೆ ಪಾತ್ರಗಳನ್ನು ಅಂದರೆ ಮೌಲ್ಯಗಳನ್ನು ತರುವುದು.

ತುಷ್ಟಿಗುಣದ ಒಟ್ಟು ಮೊತ್ತ (ಸಮಗ್ರೀಕರಣ) - Aggregate : ಸಮಾಜವೊಂದರ ಎಲ್ಲಾ ವ್ಯಕ್ತಿಗಳ ತುಷ್ಟಿಗುಣವನ್ನು ಮಾಪನ ಮಾಡುವ ಕ್ರಮವನ್ನು ತುಷ್ಟಿಗುಣದ ಸಮಗ್ರೀಕರಣ ಎನ್ನಲಾಗುವುದು.

ಸ್ಪರ್ಧಾತ್ಮಕ ಸಮತೋಲನಸ್ಥಿತಿ - Competetive Equlibrium : ಪರಿಪೂರ್ಣ ಪೈಪೋಟಿ (ಮಾರುಕಟ್ಟೆ)ಯ ದೀರ್ಘಾವಧಿ ಬೆಲೆ ಮತ್ತು ಉತ್ಪನ್ನ ಪ್ರಮಾಣಗಳ ನಿರ್ಧಾರಕ ಕ್ರಿಯೆ. ಇಲ್ಲಿ ಸೀಮಾಂತ ಉತ್ಪನ್ನ = ಬೆಲೆ = ಸೀಮಾಂತ ವೆಚ್ಚ, ಮೂರೂ ಪರಸ್ಪರ ಸಮನಾಗುವ ಆರ್ಥಿಕ ಪರಿಸ್ಥಿತಿ ಕಂಡುಬರುತ್ತದೆ. ಇದು ದಕ್ಷತೆ ಪ್ರತೀಕ. ಸಂಪನ್ಮೂಲಗಳ ಅಪವ್ಯಯವಿರುವುದಿಲ್ಲ.

ಉತ್ಪನ್ನ ಮಿಶ್ರಣ ದಕ್ಷತೆ - Factor Proportion Efficiency : ಸರಕುಗಳ ನಡುವೆ ಉತ್ಪಾದನಾಂಗಗಳ ನಿಯತಗೊಳಿಸುವಿಕೆಯಲ್ಲಿ ದಕ್ಷತೆ (ಉತ್ಪನ್ನ ಮಿಶ್ರಣ ಅಥವಾ ಉತ್ಪನ್ನ ಸ್ವರೂಪದಲ್ಲಿ ದಕ್ಷತೆ).

ವಿನಿಮಯ ದಕ್ಷತೆ - Exchange Efficiency : ಬಳಕೆದಾರರ ನಡುವೆ ಸರಕುಗಳ ವಿನಿಮಯದಲ್ಲಿ (ವಿತರಣೆಯಲ್ಲಿ) ದಕ್ಷತೆ.

ಉತ್ಪಾದನಾ ದಕ್ಷತೆ - Production Effiency : ಘಟಕಗಳ (firm) ನಡುವೆ ಉತ್ಪಾದನಾಂಗಗಳ ಹಂಚಿಕೆಯ (ನಿಯತಗೊಳಿಸುವಿಕೆಯ) ದಕ್ಷತೆ.

## ೫.೪. ಪ್ರಶ್ನೆಗಳು

**I.** ಒಂದು ಅಂಕದ ಪ್ರಶ್ನೆ: (ಎರಡು ವಾಕ್ಯಗಳಲ್ಲಿ ಉತ್ತರಿಸುವುದು)

೧. ಯೋಗಕ್ಷೇಮ ಎಂದರೇನು?

೨. ಯೋಗಕ್ಷೇಮದ ಪ್ರಥಮ ಮತ್ತು ದ್ವಿತೀಯ ತತ್ವಗಳನ್ನು ರೂಪಿಸಿದವರು ಯಾರು?

೩. ತುಷ್ಟಿಗುಣ ಪದದ ಅರ್ಥ ವಿವರಿಸಿ.

**II.** ಎರಡು ಅಂಕಗಳ ಪ್ರಶ್ನೆ: (ಐದು ವಾಕ್ಯಗಳಲ್ಲಿ ಉತ್ತರಿಸಿರಿ)

೧. ವೈಯಕ್ತಿಕ ಯೋಗಕ್ಷಮ ಮತ್ತು ಸಾಮಾಜಿಕ ಯೋಗಕ್ಷೇಮದ ನಡುವಣ ಎರಡು ವ್ಯತ್ಯಾಸಗಳನ್ನು ಬರೆಯಿರಿ.

೨. ಯೋಗಕ್ಷೇಮ ಅರ್ಥಶಾಸ್ತ್ರದ ಅಧ್ಯಯನದ ಮಹತ್ವವನ್ನು ನಾಲ್ಕು ವಾಕ್ಯಗಳಲ್ಲಿ ಬರೆಯಿರಿ.

**III.** ಐದು ಅಂಕಗಳ ಪ್ರಶ್ನೆ: (ಹತ್ತರಿಂದ ಹನ್ನೆರಡು ವಾಕ್ಯಗಳಲ್ಲಿ ಉತ್ತರಿಸಿರಿ)

೧. ಯೋಗಕ್ಷಮ ಅರ್ಥಶಾಸ್ತ್ರದ ಪ್ರಥಮ ಮತ್ತು ದ್ವಿತೀಯ ತತ್ವಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

೨. ವಾಸ್ತವಿಕ ಮತ್ತು ನೈತಿಕ ಅರ್ಥಶಾಸ್ತ್ರ ಹಾಗೂ ಕಲ್ಯಾಣ ಅರ್ಥಶಾಸ್ತ್ರದ ನಡುವಣ ಸಂಬಂಧಗಳನ್ನು ವಿವರಿಸಿ.

೩. ಕಲ್ಯಾಣ ಅರ್ಥಶಾಸ್ತ್ರದ ಮೊದಲನೆಯ (ಪ್ರಥಮ) ಮತ್ತು ಎರಡನೆಯ (ದ್ವಿತೀಯ) ತತ್ವಗಳ ನಡುವಣ ವ್ಯತ್ಯಾಸಗಳನ್ನು ಗುರುತಿಸಿ, ವ್ಯಾಖ್ಯಾನಿಸಿರಿ.

೪. ಕಲ್ಯಾಣ ಯೋಗಕ್ಷೇಮ ಅರ್ಥಶಾಸ್ತ್ರದ ಅರ್ಥ, ಮಹತ್ವ ಮತ್ತು ವ್ಯಾಪ್ತಿಯನ್ನು ವಿವರಿಸಿ.

೫. ವೈಯಕ್ತಿಕ ಮತ್ತು ಸಾಮಾಜಿಕ ಕಲ್ಯಾಣ ಪರಿಭಾವನೆಗಳನ್ನು ವಿವರಿಸಿರಿ.

೬. ವಿಲ್‌ಫ್ರಡ್ ಪೆರೆಟೊರವರು ಕಲ್ಯಾಣ ಅರ್ಥಶಾಸ್ತ್ರಕ್ಕೆ ನೀಡಿರುವ ಕೊಡುಗೆಯನ್ನು ವಿವರಿಸಿ.

**IV.** ಸ್ವಅಧ್ಯಯನ ವರದಿ/ಪ್ರಬಂಧಗಳ ರಚನೆ :

೧. ನಿಮ್ಮ ಊರಿನಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ವ್ಯಕ್ತಿಗತ ಮತ್ತು ಸಾಮಾಜಿಕ ಕಲ್ಯಾಣದ ಮೇಲಾದ ಪರಿಣಾಮವನ್ನು ಗುರುತಿಸಿ, ನಿಮ್ಮ ತರಗತಿಯಲ್ಲಿ ಉಪನ್ಯಾಸ ಕರು ಮತ್ತು ಸಹ ವಿದ್ಯಾರ್ಥಿಗಳೊಂದಿಗೆ ಚರ್ಚಿಸಿ.

೨. ಬಡವರಿಗೆ ಸರ್ಕಾರ ಉಚಿತ ವಸತಿ, ಕುಡಿಯುವ ನೀರು ಪೂರೈಕೆ, ಸಮುದಾಯ ಶೌಚಾಲಯ ನೀಡುವುದರಿಂದ ಉಂಟಾಗುವ ಕಲ್ಯಾಣ ಪರಿಣಾಮಗಳನ್ನು ಗುರುತಿಸಿ, ವಿಶ್ಲೇಷಿಸಿರಿ.

೩. ತುಷ್ಟಿಗುಣ ಮಾಪನವನ್ನು ನಿಮ್ಮ ದೈನಂದಿನ ಅನುಭೋಗದಿಂದ ಮಾಡಿರಿ. ಈ ಅನುಭವವನ್ನು ನಿಮ್ಮ ತರಗತಿಯಲ್ಲಿ ಇತರರೊಂದಿಗೆ ಹಂಚಿಕೊಳ್ಳಿರಿ.

# ಅಧ್ಯಾಯ ೬

# ರಾಷ್ಟ್ರೀಯ ಆದಾಯ

## ೬.೧. ರಾಷ್ಟ್ರೀಯ ಆದಾಯದ ಪರಿಕಲ್ಪನೆಗಳು

### ೬.೧.೧. ಅರ್ಥ ಮತ್ತು ಮಹತ್ವ

ಸಮಗ್ರ ಅರ್ಥಶಾಸ್ತ್ರದ ಪ್ರಕಾರಕ್ಕೆ ಸೇರಿದ ಮಹತ್ವದ ಪರಿಭಾವನೆ ರಾಷ್ಟ್ರೀಯ ಆದಾಯ. ಇದು ಪರಿಮಾಣಾತ್ಮಕ ಚಲವಾಗಿದೆ. ಒಂದು ರಾಷ್ಟ್ರದ ಇಡಿ ಆರ್ಥಿಕತೆಗೆ ಅನ್ವಯಿಸುವ ಒಂದು ಸಂಗತಿ ರಾಷ್ಟ್ರೀಯ ಆದಾಯ. ರಾಷ್ಟ್ರೀಯ ಆದಾಯದ ನಿರ್ವಚನ, ಲೆಕ್ಕಾಚಾರ, ಮಾಪನ ಮುಂತಾದವುಗಳನ್ನು ಕುರಿತ ಚರ್ಚೆಯ ಅರ್ಥಶಾಸ್ತ್ರದಲ್ಲಿ ಒಂದು ಭಾವಗರ್ಭಿತ ವಿಚಾರವಾಗಿದೆ. ಒಂದು ದೇಶದ ಅಭಿವೃದ್ಧಿಯನ್ನು ಸೂಚಿಸುವ ಒಂದು ಮಾಪನ ರಾಷ್ಟ್ರೀಯ ಆದಾಯ. ಒಂದು ದೇಶವು ಹಿಂದುಳಿದಿದೆಯೋ ಅಥವಾ ಮುಂದುವರಿದಿದೆಯೋ ಎಂಬುದನ್ನು ರಾಷ್ಟ್ರೀಯ ಆದಾಯಕ್ಕೆ ಸಂಬಂಧಿಸಿದ ಮಾಹಿತಿಯಿಂದ ತಿಳಿದುಕೊಳ್ಳಬಹುದು. ಸರ್ಕಾರದ ಸಿದ್ಧಿ ಸಾಧನೆಗಳನ್ನು ಮೌಲ್ಯಮಾಪನ ಮಾಡಲು ರಾಷ್ಟ್ರೀಯ ಆದಾಯದ ಮಾಹಿತಿಯನ್ನು ಉಪಯೋಗಿಸಲಾಗುತ್ತದೆ. ರಾಷ್ಟ್ರೀಯ ಆದಾಯದ ಒಳರಚನೆಯ ವಿಶ್ಲೇಷಣೆಯಿಂದ ದೇಶದ ವಿವಿಧ ವಲಯಗಳ ಸಾಪೇಕ್ಷ ಸ್ಥಾನಮಾನ ಹಾಗೂ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬಹುದಾಗಿದೆ.

ಸ್ಥೂಲವಾಗಿ ಒಂದು ದೇಶದ ಉತ್ಪಾದನಾ ವಲಯದಿಂದ ವಾರ್ಷಿಕವಾಗಿ ಹರಿದು ಬರುವ ಸರಕು ಮತ್ತು ಸೇವೆಗಳ ರಾಶಿಯೇ ರಾಷ್ಟ್ರೀಯ ವರಮಾನ. ವಿದೇಶಗಳಲ್ಲಿ ನೆಲೆ ನಿಂತು ಉತ್ಪಾದನಾಂಗಗಳು ಗಳಿಸಿದ ಆದಾಯವನ್ನು ಇದು ಒಳಗೊಳ್ಳುತ್ತದೆ. ಇದಕ್ಕೆ ಸಂಬಂಧಿಸಿದ ಕೆಲವು ವ್ಯಾಖ್ಯೆಗಳು ಹೀಗಿವೆ.

ಆಲ್‌ಫ್ರೆಡ್ ಮಾರ್ಷಲ್ ಇದನ್ನು ಹೀಗೆ ನಿರ್ವಚಿಸಿದ್ದಾನೆ.

"ಒಂದು ರಾಷ್ಟ್ರದ ಶ್ರಮಶಕ್ತಿ ಹಾಗೂ ಬಂಡವಾಳ ಅಲ್ಲಿನ ನೈಸರ್ಗಿಕ ಸಂಪನ್ಮೂಲಗಳ ಜೊತೆ ಸೇರಿ ವಾರ್ಷಿಕವಾಗಿ ಉತ್ಪಾದಿಸುವ ಸರಕು ಮತ್ತು ಸೇವೆಗಳ ನಿವ್ವಳ ಮೊತ್ತವೇ ರಾಷ್ಟ್ರೀಯ ಆದಾಯ."

ಎ.ಸಿ. ಪಿಗುವಿನ ವ್ಯಾಖ್ಯೆ ಹೀಗಿದೆ :

"ಹಣದಿಂದ ಮಾಪನ ಮಾಡಬಹುದಾದ ಮತ್ತು ವಿದೇಶಗಳಿಂದ ಹರಿದುಬಂದ ಆದಾಯವನ್ನು ಒಳಗೊಂಡಿರುವ ಸಮುದಾಯವೊಂದರ ಭೌತಿಕ ಆದಾಯವೇ ರಾಷ್ಟ್ರೀಯ ಆದಾಯ.

ಸೈಮನ್ ಕುಜ್ನೆಟ್ಸ್‌ರವರು ಇದನ್ನು ಹೀಗೆ ಪರಿಭಾವಿಸಿಕೊಂಡಿದ್ದಾರೆ.

"ದೇಶವೊಂದರ ಉತ್ಪಾದನಾ ವ್ಯವಸ್ಥೆಯಿಂದ ಹರಿದುಬಂದು ಜನರ ಕೈಸೇರುವ ಅನುಭೋಗಿ ಮತ್ತು ಬಂಡವಾಳ ಸರಕು ಮತ್ತು ಸೇವೆಗಳ ನಿವ್ವಳ ಮೊತ್ತವೇ ರಾಷ್ಟ್ರೀಯ ಆದಾಯ."

ವಾಸ್ತವವಾಗಿ ರಾಷ್ಟ್ರೀಯ ಆದಾಯವೆಂದು ಇಲ್ಲಿ ಯಾವುದನ್ನು ಕರೆಯಲಾಗಿದೆಯೋ ಅದು ಅಕ್ಷರಶಃ ಉತ್ಪಾದನಾಂಗಗಳು ಪಡೆಯುವ ಪ್ರತಿಫಲ /ಸಂಭಾವನೆಯ ಮೊತ್ತವಾಗಿದೆ.

### ೬.೧.೨. ರಾಷ್ಟ್ರೀಯ ಆದಾಯದ ಲಕ್ಷಣಗಳು

ಮೇಲೆ ನೀಡಿರುವ ನಿರ್ವಚನಗಳು ಮತ್ತು ವಿವರಣೆ ಆಧಾರದ ಮೇಲೆ ರಾಷ್ಟ್ರೀಯ ಆದಾಯವು ಕೆಳಕಂಡ ಗುಣಲಕ್ಷಣ ಹೊಂದಿದೆಯೆಂದು ಹೇಳಬಹುದು.

೧. ಅದೊಂದು ಪರಿಮಾಣಾತ್ಮಕ ಚಲವಾಗಿದೆ

೨. ಇದನ್ನು ವಾರ್ಷಿಕವಾಗಿ ಲೆಕ್ಕ ಹಾಕಲಾಗುತ್ತದೆ.

೩. ಸರಕು ಮತ್ತು ಸೇವೆಗಳ ಅಂತಿಮ ರೂಪವನ್ನು ಮಾತ್ರ ಗಣನೆ ಮಾಡಲಾಗುತ್ತದೆ.

೪. ಇದನ್ನು ಹಣದ ರೂಪದಲ್ಲಿ ಲೆಕ್ಕ ಹಾಕಲಾಗುತ್ತದೆ.

೫. ಇದನ್ನು ಉತ್ಪನ್ನದ ರೂಪದಲ್ಲಿ, ಆದಾಯದ ರೂಪದಲ್ಲಿ ಮತ್ತು ವೆಚ್ಚದ ರೂಪದಲ್ಲಿ ವ್ಯಕ್ತಪಡಿಸಬಹುದಾಗಿದೆ.

### ೬.೧.೩. ಮೂರು ದೃಷ್ಟಿಕೋನ

ಈಗಾಗಲೆ ಹೇಳಿರುವಂತೆ ರಾಷ್ಟ್ರೀಯ ಆದಾಯವನ್ನು ಮೂರು ಪ್ರಕಾರಗಳಲ್ಲಿ ಅಭಿವ್ಯಕ್ತ ಪಡಿಸಹುದಾಗಿದೆ.

೧. ಉತ್ಪನ್ನ ದೃಷ್ಟಿಕೋನ : ಒಂದು ದೇಶದ ಉತ್ಪಾದನಾ ವಲಯದಿಂದ ಹರಿದುಬಂದ ಸರಕು ಮತ್ತು ಸೇವೆಗಳ ಒಟ್ಟು ಮೊತ್ತವನ್ನು ರಾಷ್ಟ್ರೀಯ ಉತ್ಪನ್ನವೆಂದು ಕರೆಯಬಹುದು. ಇದನ್ನು ಹಣದ ರೂಪದಲ್ಲಿ ವ್ಯಕ್ತಪಡಿಸಬಹುದು. ಉತ್ಪಾದನಾ ವಲಯದಿಂದ ಹರಿದುಬಂದ ಉತ್ಪನ್ನವನ್ನು (ಸರಕು ಮತ್ತು ಸೇವೆಗಳು) ಇಲ್ಲಿ ಗಣನೆ ಮಾಡಲಾಗುತ್ತದೆ. ಇದು ಉತ್ಪನ್ನ ದೃಷ್ಟಿಕೋನ.

**೨. ಆದಾಯ ದೃಷ್ಟಿಕೋನ :** ಸರಕು ಮತ್ತು ಸೇವೆಗಳ ಉತ್ಪಾದನೆಗೆ ಉತ್ಪಾದನಾಂಗಗಳ ಸೇವೆಯ ಅಗತ್ಯವಿದೆಯೆಂಬುದನ್ನು ನಾವು ತಿಳಿದುಕೊಂಡಿದ್ದೇವೆ. ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಗಳ ಒಟ್ಟು ಪ್ರಯತ್ನದ ಫಲವೇ ರಾಷ್ಟ್ರೀಯ ಉತ್ಪನ್ನ. ಈ ಉತ್ಪನ್ನದಲ್ಲಿ ಪ್ರತಿಯೊಂದು ಉತ್ಪಾದನಾಂಗದ ಕಾಣಿಕೆ, ಕೊಡುಗೆಯಿರುತ್ತದೆ.

ಉತ್ಪಾದನಾಂಗಗಳು ಸ್ವೀಕರಿಸುವ ಪ್ರತಿಫಲ ಅಥವಾ ಸಂಭಾವನೆಯನ್ನು ಕೂಡಿಸಿದರೆ ನಮಗೆ ರಾಷ್ಟ್ರೀಯ ಆದಾಯ ದೊರೆಯುತ್ತದೆ. ನಾಲ್ಕು ಉತ್ಪಾದನಾಂಗಗಳ ಒಟ್ಟು ಸಂಭಾವನೆಯ ಮೊತ್ತವು ರಾಷ್ಟ್ರೀಯ ಉತ್ಪನ್ನಕ್ಕೆ ಸಮನಾಗಿರುತ್ತದೆ. ಇದು ಆದಾಯ ದೃಷ್ಟಿಕೋನ.

೩. **ವೆಚ್ಚದ ದೃಷ್ಟಿಕೋನ :** 'ಒಬ್ಬರ ವೆಚ್ಚವು ಮತ್ತೊಬ್ಬರ ಆದಾಯ'ವೆಂಬುದು ಅರ್ಥಶಾಸ್ತ್ರದಲ್ಲಿ ಪ್ರಚಲಿತದಲ್ಲಿರುವ ಒಂದು ನಿಯಮ. ಆದಾಯಕ್ಕಿಂತ ವೆಚ್ಚವು ಅಧಿಕವಾಗಿರಲು ಸಾಧ್ಯವಿಲ್ಲ. ಅಂದ ಮೇಲೆ ರಾಷ್ಟ್ರೀಯ ಆದಾಯವನ್ನು ವೆಚ್ಚದ ನೆಲೆಯಿಂದಲೂ ಪರಿಭಾವಿಸಿಕೊಳ್ಳಬಹುದು. ಒಂದು ವರ್ಷದಲ್ಲಿ ಒಂದು ದೇಶದ ಜನತೆ ಅನುಭೋಗದ ಮೇಲೆ ಮತ್ತು ಬಂಡವಾಳ ಹೂಡಿಕೆ ಮೇಲೆ ಮಾಡುವ ಒಟ್ಟು ವೆಚ್ಚದ ಮೊತ್ತವೇ ರಾಷ್ಟ್ರೀಯ ಆದಾಯ. ಇಡೀ ರಾಷ್ಟ್ರವೊಂದರ ಸಮಗ್ರ ವೆಚ್ಚವು ಅದರ ರಾಷ್ಟ್ರೀಯ ಆದಾಯಕ್ಕಿಂತ ಅಧಿಕವಿರಲು ಸಾಧ್ಯವಿಲ್ಲ.

### ೬.೧.೪. ರಾಷ್ಟ್ರೀಯ ಆದಾಯದ ವಿವಿಧ ಪರಿಕಲ್ಪನೆಗಳು

ರಾಷ್ಟ್ರೀಯ ಆದಾಯದ ಚರ್ಚೆಯಲ್ಲಿ ವಿವಿಧ ಪರಿಭಾವನೆಗಳನ್ನು ಉಪಯೋಗಿಸುವುದು ಕಂಡುಬರುತ್ತದೆ. ಅವುಗಳನ್ನು ಈಗ ತಿಳಿದುಕೊಳ್ಳೋಣ.

### ೬.೧.೫. ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿ.ಎನ್.ಪಿ)

ಒಂದು ದೇಶದ ಒಟ್ಟು ಸರಕು ಮತ್ತು ಸೇವೆಗಳ ಒಟ್ಟು ಮೊತ್ತದ ವಿಸ್ತೃತವಾದ ವಾರ್ಷಿಕ ಮಾಪನ ಸೂಚಿಯೆಂದರೆ ಒಟ್ಟು ರಾಷ್ಟ್ರೀಯ ಉತ್ಪನ್ನ. ಆರ್ಥಿಕತೆಯ ಉತ್ಪಾದನಾ ವಲಯದಿಂದ ಸರಕು ಮತ್ತು ಸೇವೆಗಳು ಹರಿದುಬರುತ್ತಿರುತ್ತವೆ. ಈ ಬಗೆಯ ಸರಕು ಮತ್ತು ಸೇವೆಗಳ ಉತ್ಪಾದನೆಯಲ್ಲಿ ಉತ್ಪಾದನಾಂಗಗಳು ನಿರತ ವಾಗಿರುತ್ತವೆ. ದೇಶವೊಂದರಲ್ಲಿ ಉತ್ಪಾದನಾಂಗಗಳು ವಾರ್ಷಿಕವಾಗಿ ಉತ್ಪಾದಿಸುವ ಸರಕು ಮತ್ತು ಸೇವೆಗಳ ಮೊತ್ತವೇ ಒಟ್ಟು ರಾಷ್ಟ್ರೀಯ ಉತ್ಪನ್ನ. ಉತ್ಪಾದನಾಂಗಗಳು ತಾವು ಉತ್ಪಾದನೆಗೆ ಸಲ್ಲಿಸಿದ ಸೇವೆಗೆ ಪ್ರತಿಫಲ ಪಡೆಯುತ್ತವೆ. ಈ ಪ್ರತಿಫಲವು ಉತ್ಪನ್ನದ ಮೌಲ್ಯಕ್ಕೆ ಸಮನಾಗಿರುತ್ತದೆ. ಉತ್ಪಾದನಾಂಗಗಳು ನಾವು ಪಡೆದ ಪ್ರತಿಫಲ /ಸಂಭಾವನೆಯನ್ನು ಅನುಭೋಗ ಮತ್ತು ಬಂಡವಾಳ ಹೂಡಿಕೆ ಮೇಲೆ ವ್ಯಯಿಸುತ್ತವೆ. ಈ ವೆಚ್ಚದ ಸಮಗ್ರ ಮೊತ್ತದ ಮೂಲಕವೂ ಒಟ್ಟು ರಾಷ್ಟ್ರೀಯ ಆದಾಯವನ್ನು ಮಾಪನ ಮಾಡಬಹುದು.

ಒಟ್ಟು ರಾಷ್ಟ್ರೀಯ ಉತ್ಪನ್ನವು ಕೆಳಕಂಡ ಸಂಗತಿಗಳನ್ನು ಒಳಗೊಂಡಿದೆ.

೧. ಅನುಭೋಗಿ ಸರಕುಗಳು (ಸಿ)

೨. ಬಂಡವಾಳ ಹೂಡಿಕೆ (ಐ)

೩. ಸರ್ಕಾರದ ವ್ಯವಹಾರ (ಸರ್ಕಾರದ ಅನುಭೋಗ ಸರ್ಕಾರದ ಬಂಡವಾಳ ಹೂಡಿಕೆ)(ಜಿ)

೪. ನಿವ್ವಳ ರಫ್ತು (ಎಕ್ಸ್-ಎಮ್)

ಜಿಎನ್‌ಪಿ = ಸಿ + ಐ + ಜಿ + (ಎಕ್ಸ್ - ಎಮ್)

## ನಿವ್ವಳ ವಿದೇಶಿ ಆದಾಯ (ಎನ್ ಎಫ್ ಐ)

ಒಂದು ದೇಶದ ಉತ್ಪಾದನಾಂಗಗಳು ವಿದೇಶಗಳಿಗೆ ತೆರಳಿ, ಅಲ್ಲಿ ನೆಲೆನಿಂತು ಗಳಿಸಿದ ಆದಾಯವು. ಸದರಿ ಉತ್ಪದನಾಂಗಗಳ ದೇಶದ ರಾಷ್ಟ್ರೀಯ ಆದಾಯಕ್ಕೆ ಸೇರಬೇಕು. ಅದೇ ರೀತಿ ವಿದೇಶಗಳ ಉತ್ಪಾದನಾಂಗಗಳು ನಮ್ಮ ದೇಶದಲ್ಲಿ ನೆಲೆ ನಿಂತು ಗಳಿಸಿದ ಆದಾಯವು ಉತ್ಪಾದನಾಂಗಗಳ ಮೂಲ ದೇಶದ ಆದಾಯಕ್ಕೆ ಸೇರಬೇಕು. ಅಂದರೆ ನಮ್ಮ ದೇಶದಲ್ಲಿ ನೆಲೆನಿಂತ ವಿದೇಶಿ ಉತ್ಪಾದನಾಂಗಗಳು ಗಳಿಸಿದ ಆದಾಯವನ್ನು ನಮ್ಮ ದೇಶದ ರಾಷ್ಟ್ರೀಯ ಆದಾಯದಿಂದ ಕಳೆಯಬೇಕು. ಇಲ್ಲಿ ಎರಡು ಸಂಗತಿಗಳಿವೆ.

೧. ನಮ್ಮ ದೇಶದ ಉತ್ಪಾದನಾಂಗಗಳು ವಿದೇಶಗಳಲ್ಲಿ ನೆಲೆನಿಂತು ಗಳಿಸಿದ ಆದಾಯ. ಇದು ಒಟ್ಟು ರಾಷ್ಟ್ರೀಯ ಆದಾಯಕ್ಕೆ ಸೇರಬೇಕು.

೨. ವಿದೇಶಿ ಉತ್ಪಾದನಾಂಗಗಳು ನಮ್ಮ ದೇಶದಲ್ಲಿ ನೆಲೆನಿಂತು ಗಳಿಸಿದ ಆದಾಯ. ಇದನ್ನು ನಮ್ಮ ಒಟ್ಟು ರಾಷ್ಟ್ರೀಯ ಆದಾಯದಿಂದ ಕಳೆಯಬೇಕು.

ನಮ್ಮ ಆದಾಯಕ್ಕೆ ಸೇರುವ ಮೊತ್ತ ಹಾಗೂ ನಮ್ಮ ಆದಾಯದಿಂದ ಕಳೆಯುವ ಮೊತ್ತಗಳ ವ್ಯತ್ಯಾಸದ ಪ್ರಮಾಣವನ್ನೇ 'ನಿವ್ವಳ ವಿದೇಶಿ ಆದಾಯ'ವೆಂದು ಕರೆಯಲಾಗಿದೆ. ಈ ನಿವ್ವಳ ವಿದೇಶಿ ಆದಾಯವನ್ನು ಒಟ್ಟು ರಾಷ್ಟ್ರೀಯ ಆದಾಯಕ್ಕೆ ಸೇರಿಸಬೇಕು.

ಜಿಎನ್‌ಪಿ = (ಜಿಡಿಪಿ) + (ಎನ್‌ಎಫ್‌ಐ)

ನಿವ್ವಳ ವಿದೇಶಿ ಆದಾಯವು ಧನಾತ್ಮಕವಾಗಿರಬಹುದು ಅಥವಾ ಋಣಾತ್ಮಕ ವಾಗಿರಬಹುದು. ಉದಾಹರಣೆಗೆ ೨೦೦೦-೨೦೦೧ರಲ್ಲಿ ಭಾರತದ ನಿವ್ವಳ ವಿದೇಶಿ ಆದಾಯದ ಮೊತ್ತ - ರೂ.೧೭೪೧೪ ಕೋಟಿ. ಇಲ್ಲಿ ವಿದೇಶಗಳಲ್ಲಿ ನಮ್ಮ ದೇಶದ ಉತ್ಪಾದನಾಂಗಗಳು ಗಳಿಸಿದ ಆದಾಯಕ್ಕಿಂತ ನಮ್ಮ ದೇಶದಲ್ಲಿನ ವಿದೇಶಿ ಉತ್ಪಾದನಾಂಗಗಳು ಗಳಿಸಿದ ಆದಾಯವು ಅಧಿಕವಾಗಿದೆ.

## ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ

ಈಗಾಗಲೆ ತಿಳಿದುಕೊಂಡಿರುವಂತೆ ಒಂದು ದೇಶವು ಒಂದು ವರ್ಷದಲ್ಲಿ ಉತ್ಪಾದಿಸಿದ ಸರಕು ಮತ್ತು ಸೇವೆಗಳ ಒಟ್ಟು ಮೊತ್ತವೇ ಒಟ್ಟು ರಾಷ್ಟ್ರೀಯ ಉತ್ಪನ್ನ. ಈ ಸರಕು ಮತ್ತು ಸೇವೆಗಳ ಒಟ್ಟು ಮೌಲ್ಯವನ್ನು ಮಾರುಕಟ್ಟೆ ಬೆಲೆಗಳ ಆಧಾರದ ಮೇಲೆ ಗಣನೆ ಮಾಡಲಾಗುತ್ತದೆ. ಹೀಗೆ ಗಣನೆ ಮಾಡಿದ ಮೊತ್ತವನ್ನು "ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ"ವೆಂದು ಕರೆಯಬಹುದು. ಇದು ವಾಸ್ತವವಾಗಿ ಪ್ರಚಲಿತದಲ್ಲಿರುವ ರಾಷ್ಟ್ರೀಯ ಆದಾಯದ ಪರಿಭಾವನೆಯಾಗಿದೆ. ಮಾರುಕಟ್ಟೆ ಬೆಲೆಗಳಲ್ಲಿ

ಗಣನೆ ಮಾಡಿದ ಒಟ್ಟು ರಾಷ್ಟ್ರೀಯ ಉತ್ಪನ್ನವು ನಿವ್ವಳ ಪರೋಕ್ಷ ತೆರಿಗೆಗಳನ್ನು ಒಳಗೊಂಡಿರುತ್ತದೆ. ಪರೋಕ್ಷ ತೆರಿಗೆಗಳಿಂದ ಸಹಾಯಧನವನ್ನು ಕಳೆದರೆ ನಮಗೆ ನಿವ್ವಳ ಪರೋಕ್ಷ ತೆರಿಗೆ ದೊರೆಯುತ್ತದೆ.

**ಉತ್ಪಾದನಾಂಗಗಳ ವೆಚ್ಚದ ರೂಪದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ**

ಈಗಾಗಲೆ ತಿಳಿಸಿರುವಂತೆ ಸರಕು ಮತ್ತು ಸೇವೆಗಳನ್ನು ಉತ್ಪಾದಿಸಲು ಉತ್ಪಾದ ನಾಂಗಗಳ ಸೇವೆಯ ಅಗತ್ಯವಿರುತ್ತದೆ. ಉತ್ಪಾದನಾಂಗಗಳನ್ನು ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿಸಿದಾಗ ನಮಗೆ ಉತ್ಪನ್ನ ದೊರೆಯುತ್ತದೆ. ಅಂದಮೇಲೆ ಉತ್ಪನ್ನದಲ್ಲಿ ಉತ್ಪಾದ ನಾಂಗಗಳ ಕೊಡುಗೆಯಿರುತ್ತದೆ. ಉತ್ಪಾದನಾಂಗಗಳನ್ನು ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿಸಲು ಅವುಗಳಿಗೆ ಸಂಭಾವನೆ ನೀಡಬೇಕಾಗುತ್ತದೆ. ಉತ್ಪಾದನಾಂಗಗಳಿಗೆ ನೀಡುವ ಸಂಭಾವನೆಯನ್ನು ಉತ್ಪಾದನಾಂಗಗಳ ವೆಚ್ಚವೆಂದು ಕರೆಯಬಹುದು. ಒಂದು ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನ ಮೌಲ್ಯವು ಆ ದೇಶದ ಒಟ್ಟು ಉತ್ಪಾದನಾಂಗಗಳ ಸಂಭಾವನೆಯ ಮೌಲ್ಯಕ್ಕೆ ಸಮನಾಗಿರುತ್ತದೆ. ಉತ್ಪಾದನಾಂಗಗಳ ಒಟ್ಟು ಸಂಭಾವನೆಯನ್ನು ಕೂಡಿದರೆ ನಮ್ಮ ಒಟ್ಟು ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ. ಹೀಗೆ ಗಣನೆ ಮಾಡಿದ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು "ಉತ್ಪಾದನಾಂಗಗಳ ವೆಚ್ಚದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ"ವೆಂದು ಕರೆಯಲಾಗಿದೆ.

ಉತ್ಪಾದನಾಂಗಗಳ ವೆಚ್ಚದ ರೂಪದಲ್ಲಿರುವ ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ನಿವ್ವಳ ಪರೋಕ್ಷ ತೆರಿಗೆಗಳನ್ನು ಸೇರಿಸಿದರೆ ನಮಗೆ ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ. ಸಾಮಾನ್ಯವಾಗಿ ನಾವು ರೂಢಿಯಲ್ಲಿ ಬಳಸುವ ಪರಿಭಾವನೆಯೆಂದರೆ ಉತ್ಪಾದನಾಂಗಗಳ ವೆಚ್ಚದ ರೂಪದಲ್ಲಿರುವ ಒಟ್ಟು ರಾಷ್ಟ್ರೀಯ ಉತ್ಪನ್ನವಾಗಿದೆ.

**೬.೧.೬. ಒಟ್ಟು ದೇಶೀಯ ಉತ್ಪನ್ನ (ಜಿ ಡಿ ಪಿ)**

ರಾಷ್ಟ್ರೀಯ ಆದಾಯವನ್ನು ಕುರಿತ ಚರ್ಚೆಯಲ್ಲಿ ಬಳಸುವ ಮತ್ತೊಂದು ಪರಿಭಾವನೆ ಯೆಂದರೆ ಒಟ್ಟು ದೇಶೀಯ ಉತ್ಪನ್ನ. ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ಒಟ್ಟು ದೇಶೀಯ ಉತ್ಪನ್ನಗಳ ನಡುವೆ ಒಂದು ಮುಖ್ಯ ಭಿನ್ನತೆಯಿದೆ. ಅದನ್ನು ನಾವು ಅರ್ಥ ಮಾಡಿಕೊಳ್ಳಬೇಕು.

ಈಗಾಗಲೆ ತಿಳಿಸಿರುವಂತೆ ಒಂದು ದೇಶದ ಭೌಗೋಳಿಕ ವ್ಯಾಪ್ತಿಯನ್ನು ದಾಟಿ ವಿದೇಶಗಳಿಗೆ ತೆರಳಿ ಅಲ್ಲಿ ಉತ್ಪಾದನಾಂಗಗಳು ಆದಾಯ ಗಳಿಸುತ್ತಿರಬಹುದು. ಉದಾಹರಣೆಗೆ ಭಾರತದ ಜನರು ಅರಬ್ ದೇಶಗಳಲ್ಲಿ ನೆಲೆ ನಿಂತು ಆದಾಯ ಗಳಿಸುತ್ತಿರಬಹುದು. ಭಾರತದ ಉದ್ಯಮ ಸಾಹಸಿಯೊಬ್ಬ ಇಂಗ್ಲೆಂಡಿನಲ್ಲಿ ಬಂಡವಾಳ ಹೂಡಿ ಆದಾಯ ಗಳಿಸುತ್ತಿರಬಹುದು. ಹೀಗೆ ಭಾರತದ ಉತ್ಪಾದನಾಂಗಗಳು ಬೇರೆ

ದೇಶಗಳಿಗೆ ಹೋಗಿ ಅಲ್ಲಿ ದುಡಿದು ಆದಾಯ ಗಳಿಸುತ್ತಿರಬಹುದು. ಹೀಗೆ ವಿದೇಶಗಳಲ್ಲಿ ಗಳಿಸಿದ ಆದಾಯವು ಉತ್ಪಾದನಾಂಗಗಳ ಮೂಲ ದೇಶದ ರಾಷ್ಟ್ರೀಯ ಉತ್ಪನ್ನಕ್ಕೆ ಸೇರಬೇಕಾಗುತ್ತದೆ.

ಇದೇ ರೀತಿ ವಿದೇಶಗಳಿಗೆ ಸೇರಿದ ಉತ್ಪಾದನಾಂಗಗಳು ನಮ್ಮ ದೇಶದೊಳಗೆ ಬಂದು ದುಡಿಮೆ ಮಾಡಿ ಆದಾಯ ಗಳಿಸುತ್ತಿರಬಹುದು. ವಿದೇಶಿ ಉತ್ಪಾದನಾಂಗಗಳು ಭಾರತದಲ್ಲಿ ನೆಲೆ ನಿಂತು ಗಳಿಸಿದ ಆದಾಯವು ಉತ್ಪಾದನಾಂಗಗಳ ಮೂಲ ದೇಶದ ಆದಾಯಕ್ಕೆ ಸೇರಬೇಕು. ಇಲ್ಲಿ ಎರಡು ರೀತಿಯ ಸಂಗತಿಗಳಿವೆ.

೧. ಭಾರತದ ಉತ್ಪಾದನಾಂಗಗಳು ವಿದೇಶಗಳಲ್ಲಿ ಗಳಿಸಿದ ಆದಾಯ. ಇದನ್ನು ಭಾರತದ ರಾಷ್ಟ್ರೀಯ ಆದಾಯಕ್ಕೆ ಸೇರಿಸಬೇಕಾಗುತ್ತದೆ.

೨. ಭಾರತದಲ್ಲಿ ದುಡಿಮೆ ಮಾಡುತ್ತಿರುವ ವಿದೇಶಿ ಉತ್ಪಾದನಾಂಗಗಳು ಗಳಿಸಿದ ಆದಾಯ. ಇದನ್ನು ಭಾರತದ ರಾಷ್ಟ್ರೀಯ ಆದಾಯದಿಂದ ಕಳೆಯಬೇಕಾಗುತ್ತದೆ.

ಭಾರತದ ರಾಷ್ಟ್ರೀಯ ಆದಾಯಕ್ಕೆ ಸೇರಿಸಿದ ಮತ್ತು ಅದರಿಂದ ಕಳೆದ ಮೇಲೆ ಉಳಿಯುವ ಮೊತ್ತವನ್ನು ನಿವ್ವಳ ವಿದೇಶಿ ಆದಾಯವೆಂದು ಕರೆಯಲಾಗಿದೆ.

ಹೀಗೆ ಲೆಕ್ಕ ಹಾಕಿದ ನಿವ್ವಳ ವಿದೇಶಿ ಆದಾಯವನ್ನು ಒಟ್ಟು ರಾಷ್ಟ್ರೀಯ ಉತ್ಪನ್ನದಿಂದ ಕಳೆದರೆ ನಮಗೆ ಒಟ್ಟು ದೇಶೀಯ ಉತ್ಪನ್ನ ದೊರೆಯುತ್ತದೆ. ಕೋಷ್ಟಕ-೧ರಲ್ಲಿ ಇದರ ವಿವರವನ್ನು ನೀಡಲಾಗಿದೆ.

**ಕೋಷ್ಟಕ ೧**

**ಭಾರತದ ಒಟ್ಟು ರಾಷ್ಟ್ರೀಯ ಮತ್ತು ದೇಶೀಯ ಉತ್ಪನ್ನ ೧೯೫೦-೨೦೦೦**

| ವರ್ಷಗಳು | ಉತ್ಪಾದನಾ ವೆಚ್ಚದಲ್ಲಿ ಒಟ್ಟು ದೇಶೀಯ ಉತ್ಪನ್ನ | ನಿವ್ವಳ ವಿದೇಶಿ ಆದಾಯ | ಉತ್ಪಾದನಾ ವೆಚ್ಚದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ |
|---|---|---|---|
| | | (ಕೋಟಿ. ರೂ.ಗಳಲ್ಲಿ) | (ಚಾಲ್ತಿ ಬೆಲೆಗಳಲ್ಲಿ) |
| ೧೯೫೦ | ೯೫೪೭ | -೪೧ | ೯೫೦೬ |
| ೧೯೬೦ | ೧೬೨೨೦ | -೭೨ | ೧೬೧೪೮ |
| ೧೯೭೦ | ೪೨೨೨೨ | -೨೮೪ | ೪೧೯೩೮ |
| ೧೯೮೦ | ೧೩೦೧೭೮ | -೩೪೫ | ೧೩೦೫೨೩ |
| ೧೯೯೦ | ೫೧೦೯೫೪ | -೭೫೪೫ | ೫೦೩೪೦೯ |
| ೨೦೦೦ | ೧೮೯೫೮೪೩ | -೧೭೪೧೪ | ೧೮೭೮೪೨೯ |

ಮೂಲ : ನೇಷಿನಲ್ ಅಕೌಂಟ್ಸ್ ಸ್ಟಾಟಿಸ್ಟಿಕ್ಸ್ ಆಫ್ ಇಂಡಿಯಾ ೧೯೫೦ ೨೦೦೦ ಈ ಪಿ ಡಬ್ಲ್ಯು ರೀಸರ್ಚ್ ಫೌಂಡೇಶನ್ ೨೦೦೨, ಮುಂಬೈ, ಪು.೨೮

**ಸಮೀಕರಣಗಳು**

| |
|---|
| ೧. ಒಟ್ಟು ರಾಷ್ಟ್ರೀಯ ಉತ್ಪನ್ನ = (ಒಟ್ಟು ದೇಶೀಯ ಉತ್ಪನ್ನ) + (ನಿವ್ವಳ ವಿದೇಶಿ ಆದಾಯ) |
| ಒಟ್ಟು ರಾಷ್ಟ್ರೀಯ ಉತ್ಪನ್ನ = (ರೂ. ೯೫೪೭ ಕೋಟಿ) + (-ರೂ. ೪೧ ಕೋಟಿ) (೧೯೫೦) |
| ಒಟ್ಟು ರಾಷ್ಟ್ರೀಯ ಉತ್ಪನ್ನ = ರೂ. ೯೫೦೬ ಕೋಟಿ (೧೯೫೦) |

| |
|---|
| ೨. ಒಟ್ಟು ದೇಶೀಯ ಉತ್ಪನ್ನ = (ಒಟ್ಟು ರಾಷ್ಟ್ರೀಯ ಉತ್ಪನ್ನ) - (ನಿವ್ವಳ ವಿದೇಶಿ ಆದಾಯ) |
| ಒಟ್ಟು ದೇಶೀಯ ಉತ್ಪನ್ನ = (ರೂ. ೯೫೦೬ ಕೋಟಿ) - (-ರೂ. ೪೧ ಕೋಟಿ) |
| ಒಟ್ಟು ದೇಶೀಯ ಉತ್ಪನ್ನ = ರೂ. ೯೫೪೭ ಕೋಟಿ. (೧೯೫೦) |

**ಕೋಷ್ಟಕ ೨**

**ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ - ಭಾರತ**

**೧೯೫೦ - ೨೦೦೦**

| ವರ್ಷಗಳು | ಉತ್ಪಾದನಾಂಗಗಳ ವೆಚ್ಚದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ | ನಿವ್ವಳ ಪರೋಕ್ಷ ತೆರಿಗೆ | ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ |
|---|---|---|---|
| ೧೯೫೦ | ೯೫೦೮ | ೩೮೭ | ೯೮೯೫ |
| ೧೯೬೦ | ೧೬೧೪೮ | ೯೪೭ | ೧೭೦೯೫ |
| ೧೯೭೦ | ೪೧೯೩೮ | ೩೪೫೫ | ೪೫೩೯೩ |
| ೧೯೮೦ | ೧೩೦೫೨೩ | ೧೩೫೮೬ | ೧೪೪೧೦೯ |
| ೧೯೯೦ | ೫೦೩೪೦೯ | ೫೭೭೨೦ | ೨೬೧೧೨೯ |
| ೨೦೦೦ | ೧೮೭೮೪೨೯ | ೧೯೨೧೧೪೫ | ೨೦೭೦೫೭೪ |

ಮೂಲ : ನೇಷನಲ್ ಅಕೌಂಟ್ಸ್ ಸ್ಟ್ಯಾಟಿಸ್ಟಿಕ್ಸ್ ಆಫ್ ಇಂಡಿಯಾ ೧೯೫೦-೨೦೦೦.

ಈ ಪಿ ಡಬ್ಲ್ಯು ರೀಸರ್ಚ್ ಫೌಂಡೇಶನ್ ೨೦೦೨, ಮುಂಬೈ, ಪು.೨೮

೧. ಮಾರುಕಟ್ಟೆ ಬೆಲೆಗಳಲ್ಲಿ ಉತ್ಪಾದನಾಂಗಗಳ ವೆಚ್ಚದಲ್ಲಿ ನಿವ್ವಳ ಪರೋಕ್ಷ
ಒಟ್ಟು ರಾಷ್ಟ್ರೀಯ ಉತ್ಪನ್ನ = ಒಟ್ಟು ರಾಷ್ಟ್ರೀಯ ಉತ್ಪನ್ನ + ತೆರಿಗೆ

ಮಾರುಕಟ್ಟೆ ಬೆಲೆಗಳಲ್ಲಿ = ೯೫೦೬ ಕೋಟಿ + ರೂ. ೩೮೭ ಕೋಟಿ
ಒಟ್ಟು ರಾಷ್ಟ್ರೀಯ ಉತ್ಪನ್ನ = ರೂ. ೯೮೯೫ ಕೋಟಿ.
(೧೯೫೦)

**೬.೧.೭. ನಿವ್ವಳ ರಾಷ್ಟ್ರೀಯ ಉತ್ಪನ್ನ (ಎನ್‌ಎನ್‌ಪಿ)**

ಒಟ್ಟು ರಾಷ್ಟ್ರೀಯ ಉತ್ಪನ್ನವು ಒಳಗೊಂಡಿರುವ ಮಹತ್ವದ ಒಂದು ಅಂಶವೆಂದರೆ

ಬಂಡವಾಳ ಹೂಡಿಕೆ. ಸರಕು ಮತ್ತು ಸೇವೆಗಳ ಉತ್ಪಾದನೆಯಲ್ಲಿ ಬಂಡವಾಳ ಹೂಡಿಕೆಯ ಪಾತ್ರ ತುಂಬಾ ಮಹತ್ವದ್ದಾಗಿದೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿರುವ ಬಂಡವಾಳ ಸರಕುಗಳು ಕಾಲಕ್ರಮೇಣ ಸವೆದು ಹೋಗುತ್ತವೆ ಮತ್ತು ಹಳೆಯವಾಗಿ ಬಿಡುತ್ತವೆ. ಹೀಗೆ ಸವೆದುಹೋದ ಮತ್ತು ಹಳೆಯದಾದ ಬಂಡವಾಳ ಸರಕುಗಳನ್ನು ತೆಗೆದುಹಾಕಿ ಅಲ್ಲಿಗೆ ಹೊಸದನ್ನು ಕೂರಿಸಬೇಕಾಗುತ್ತದೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಉಂಟಾಗುವ ಬಂಡವಾಳ ಸರಕುಗಳ ಸವೆತ ಹಾಗೂ ಅವು ಹಳೆಯದಾಗುವ ಸಂಗತಿಯನ್ನು 'ಸವಕಳಿ'ಯೆಂದು ಗುರುತಿಸಲಾಗುತ್ತದೆ. ಸವೆದು ಹೋದ ಹಾಗೂ ಹಳೆಯದಾದ ಬಂಡವಾಳ ಸರಕುಗಳನ್ನು ತೆಗೆದು ಹಾಕಿ ಅಲ್ಲಿಗೆ ಹೊಸದನ್ನು ಕೂರಿಸುವುದರಿಂದ ನಿಜವಾಗಿ ದೇಶದ ಬಂಡವಾಳ ಸರಕುಗಳ ಪ್ರಮಾಣ ಅಧಿಕಗೊಳ್ಳುವುದಿಲ್ಲ. ಆದರೆ ಹಳೆಯದಾದುದರ ಮತ್ತು ಸವೆದು ಹೋದುದರ ಸ್ಥಳದಲ್ಲಿ ಹೊಸತನ್ನು ಕೂರಿಸ ಬೇಕಾಗುತ್ತದೆ. ಹೀಗೆ ಹಳೆಯದರ ಸ್ಥಳದಲ್ಲಿ ಕೂರಿಸುವ ಹೊಸ ಬಂಡವಾಳ ಸರಕು ಗಳನ್ನು ಆದಾಯವೆಂದು ಪರಿಗಣಿಸುವುದು ಸಾಧ್ಯವಿಲ್ಲ. ಈ ಬಗೆಯ ಸವಕಳಿ ಬಾಬ್ತು ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಸೇರಿಕೊಂಡು ಬಿಟ್ಟಿರುತ್ತದೆ. ಈ ಕಾರಣಕ್ಕೆ ಅದು ಒಟ್ಟು ರಾಷ್ಟ್ರೀಯ ಉತ್ಪನ್ನ.

ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಸವಕಳಿ ವೆಚ್ಚವನ್ನು ಕಳೆಯಬೇಕಾಗುತ್ತದೆ. ಹೀಗೆ ಒಟ್ಟು ರಾಷ್ಟ್ರೀಯ ಉತ್ಪನ್ನದಿಂದ ಸವಕಳಿ ಭಾಗವನ್ನು ಕಳೆದರೆ ಉಳಿಯುವ ಭಾಗವೇ ನಿವ್ವಳ ರಾಷ್ಟ್ರೀಯ ಉತ್ಪನ್ನ.

**ಕೋಷ್ಟಕ ೩**

**ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ನಿವ್ವಳ ರಾಷ್ಟ್ರೀಯ ಉತ್ಪನ್ನ : ಭಾರತ**

| ವರ್ಷಗಳು | ಒಟ್ಟು ರಾಷ್ಟ್ರೀಯ ಉತ್ಪನ್ನ ಉತ್ಪಾದನಾಂಗಗಳ ವೆಚ್ಚದಲ್ಲಿ | ಬಂಡವಾಳ ಸರಕುಗಳ (ಸವಕಳಿ) | ನಿವ್ವಳ ರಾಷ್ಟ್ರೀಯ ಉತ್ಪನ್ನ ಉತ್ಪಾದನಾಂಗಗಳ ವೆಚ್ಚದಲ್ಲಿ (ಚಾಲ್ತಿ ಬೆಲೆಗಳು ಕೋಟಿ ರೂ.ಗಳಲ್ಲಿ) |
|---|---|---|---|
| ೧೯೫೦-೫೧ | ೧೯೫೦೬ | ೩೬೪ | ೯೧೪೨ |
| ೧೯೬೦-೬೧ | ೧೬೧೪೮ | ೯೪೪ | ೧೫೨೦೪ |
| ೧೯೭೦-೭೧ | ೪೧೯೩೮ | ೨೯೭೦ | ೩೮೯೬೮ |
| ೧೯೮೦-೮೧ | ೧೩೦೫೨೩ | ೧೨೨೮೮ | ೧೧೮೨೩೫ |
| ೧೯೯೦-೯೧ | ೫೦೩೪೦೯ | ೫೩೨೬೪ | ೪೫೦೧೪೫ |
| ೨೦೦೦-೦೧ | ೧೮೭೮೪೨೯ | ೧೯೮೪೪೭ | ೧೬೭೯೯೮೨ |

ಆಕರ : ನೇಷನಲ್ ಅಕೌಂಟ್ಸ್ ಸ್ಟಾಟಿಸ್ಟಿಕ್ಸ್ ಆಫ್ ಇಂಡಿಯಾ ೧೯೫೦-೫೧ನಿಂದ ೨೦೦೦-೦೧. ಈ ಪಿ ಡಬ್ಲ್ಯು ರೀಸರ್ಚ್ ಫೌಂಡೇಶನ್ ೨೦೦೩, ಮುಂಬೈ, ಪು. ೨೮

(ನಿವ್ವಳ ರಾಷ್ಟ್ರೀಯ ಉತ್ಪನ್ನ) = (ಒಟ್ಟು ರಾಷ್ಟ್ರೀಯ ಉತ್ಪನ್ನ) - (ಸವಕಳಿ ವೆಚ್ಚ)

ಭಾರತದ ಒಟ್ಟು ರಾಷ್ಟ್ರೀಯ ಉತ್ಪನ್ನ, ಬಂಡವಾಳ ಸರಕುಗಳ ಸವಕಳಿ ಮತ್ತು ನಿವ್ವಳ ರಾಷ್ಟ್ರೀಯ ಉತ್ಪನ್ನದ ವಿವರಗಳನ್ನು ಕೋಷ್ಟಕ ೩ರಲ್ಲಿ ತೋರಿಸಿದೆ.

[ನಿವ್ವಳ ರಾಷ್ಟ್ರೀಯ ಉತ್ಪನ್ನ (ಉತ್ಪಾದನಾಂಗಗಳ ವೆಚ್ಚದಲ್ಲಿ)] = [ಉತ್ಪಾದನಾಂಗಗಳ ವೆಚ್ಚದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ] - [ಬಂಡವಾಳ ಸರಕುಗಳ ಸವಕಳಿ]

[ಉತ್ಪಾದನಾಂಗಗಳ ವೆಚ್ಚದಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನ ೧೯೫೦-೫೧] = (ರೂ. ೯೫೦೬ ಕೋಟಿ.) - (ರೂ. ೩೬೪ ಕೋಟಿ)

= ರೂ. ೯೧೪೨ ಕೋಟಿ

### ೬.೧.೮. ನಿವ್ವಳ ದೇಶೀಯ ಉತ್ಪನ್ನ

ನಿವ್ವಳ ರಾಷ್ಟ್ರೀಯ ಉತ್ಪನ್ನವನ್ನು ಗಣನೆ ಮಾಡಿದ ರೀತಿಯಲ್ಲಿಯೇ ನಿವ್ವಳ ದೇಶೀಯ ಉತ್ಪನ್ನವನ್ನು ಗಣನೆ ಮಾಡಬಹುದು. ಒಟ್ಟು ದೇಶೀಯ ಉತ್ಪನ್ನದಿಂದ ಬಂಡವಾಳ ಸರಕುಗಳ ಸವಕಳಿಯನ್ನು ಕಳೆದರೆ ನಮಗೆ ನಿವ್ವಳ ದೇಶೀಯ ಉತ್ಪನ್ನ ದೊರೆಯುತ್ತದೆ.

[ಉತ್ಪಾದನಾಂಗಗಳ ವೆಚ್ಚದಲ್ಲಿ ನಿವ್ವಳ ದೇಶೀ ಉತ್ಪನ್ನ] = [ಉತ್ಪಾದನಾಂಗಗಳ ವೆಚ್ಚದಲ್ಲಿ ಒಟ್ಟು ದೇಶೀ ಉತ್ಪನ್ನ] - [ಬಂಡವಾಳ ಸರಕುಗಳ ಸವಕಳಿ]

[ಉತ್ಪಾದನಾಂಗಗಳ ವೆಚ್ಚದಲ್ಲಿ ನಿವ್ವಳ ದೇಶೀ ಉತ್ಪನ್ನ (೧೯೮೦-೮೧)] = (ರೂ.೧೩೦೧೭೮ ಕೋಟಿ) - (ರೂ.೧೨೨೮೮ ಕೋಟಿ)

= ರೂ. ೧೧೭೮೯೦ ಕೋಟಿ

### ೬.೧.೯. ನಾಮಮಾತ್ರ ರಾಷ್ಟ್ರೀಯ ಉತ್ಪನ್ನ ಮತ್ತು ನೈಜ ರಾಷ್ಟ್ರೀಯ ಆದಾಯ

ರಾಷ್ಟ್ರೀಯ ಆದಾಯ / ರಾಷ್ಟ್ರೀಯ ಉತ್ಪನ್ನವನ್ನು ಎರಡು ರೀತಿಯಲ್ಲಿ ಅಭಿವ್ಯಕ್ತ ಪಡಿಸಬಹುದಾಗಿದೆ. ಮೊದಲನೆಯದಾಗಿ ಅದನ್ನು ಪ್ರಸ್ತುತ ವರ್ಷದ ಚಾಲ್ತಿ ಬೆಲೆಗಳನ್ನು ಆಧರಿಸಿ ಗಣನೆ ಮಾಡಬಹುದು. ಹೀಗೆ ಪ್ರಸಕ್ತ ವರ್ಷದ ಚಾಲ್ತಿ ಬೆಲೆಗಳಲ್ಲಿ ಗಣನೆ ಮಾಡಿದರೆ ಅದನ್ನು 'ನಾಮಮಾತ್ರ ರಾಷ್ಟ್ರೀಯ ಉತ್ಪನ್ನ'ವೆಂದು ಕರೆಯಲಾಗುತ್ತದೆ. ಎರಡನೆಯದಾಗಿ ರಾಷ್ಟ್ರೀಯ ಉತ್ಪನ್ನವನ್ನು ಪ್ರಸಕ್ತ ವರ್ಷಕ್ಕೆ ಪ್ರತಿಯಾಗಿ ಅದರ ಹಿಂದಿನ ಯಾವುದಾದರೂ ಒಂದು ವರ್ಷವನ್ನು ಮೂಲ ವರ್ಷವನ್ನಾಗಿ ಆಯ್ಕೆ ಮಾಡಿಕೊಂಡು ಮೂಲ ವರ್ಷದ ಬೆಲೆಗಳ ಆಧಾರದ ಮೇಲೆ ರಾಷ್ಟ್ರೀಯ ಉತ್ಪನ್ನವನ್ನು ಗಣನೆ ಮಾಡಬಹುದು. ಹೀಗೆ ಗಣನೆ ಮಾಡಿದರೆ ಅದನ್ನು 'ನೈಜ ರಾಷ್ಟ್ರೀಯ ಉತ್ಪನ್ನ'ವೆಂದು ಕರೆಯಲಾಗುತ್ತದೆ.

ಇವೆರಡು ರೀತಿಯ ಲೆಕ್ಕಾಚಾರಗಳ ನಡುವಿನ ವ್ಯತ್ಯಾಸವೆಂದರೆ ನಾಮಮಾತ್ರ ಗಣನೆಯಲ್ಲಿ ಮಾರುಕಟ್ಟೆಯಲ್ಲಾಗುವ ಬೆಲೆಗಳ ವ್ಯತ್ಯಾಸಗಳನ್ನು ಪರಿಗಣಿಸುವುದಿಲ್ಲ. ಆದರೆ ನೈಜ ರಾಷ್ಟ್ರೀಯ ಉತ್ಪನ್ನದ ಲೆಕ್ಕಾಚಾರದಲ್ಲಿ ಮಾರುಕಟ್ಟೆ ಬೆಲೆಗಳಲ್ಲಿನ ಉಂಟಾಗುವ ವ್ಯತ್ಯಾಸಗಳನ್ನು ಪರಿಗಣಿಸಲಾಗುತ್ತದೆ. ಅಂದರೆ ನೈಜ ರಾಷ್ಟ್ರೀಯ ಉತ್ಪನ್ನದ ಲೆಕ್ಕಾಚಾರದಲ್ಲಿ ಬೆಲೆಗಳನ್ನು ಸ್ಥಿರವಾಗಿಟ್ಟು ಕೊಳ್ಳಲಾಗುತ್ತದೆ. ಈ ಕಾರಣದಿಂದಾಗಿಯೇ ನೈಜ ರಾಷ್ಟ್ರೀಯ ಉತ್ಪನ್ನವನ್ನು 'ಸ್ಥಿರ ಬೆಲೆಗಳಲ್ಲಿ ರಾಷ್ಟ್ರೀಯ ಉತ್ಪನ್ನ'ವೆಂದು ಕರೆಯಬಹುದು.

**ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನದ ವ್ಯಾಖ್ಯೆ**

"ಒಂದು ವರ್ಷದಲ್ಲಿ ಒಂದು ದೇಶವು ಉತ್ಪಾದಿಸಿದ ಸರಕು ಮತ್ತು ಸೇವೆಗಳ ಮೌಲ್ಯವನ್ನು ಅದೇ ವರ್ಷದ ಮಾರುಕಟ್ಟೆ ಬೆಲೆಗಳಲ್ಲಿ ಲೆಕ್ಕ ಹಾಕಿದಾಗ ದೊರೆಯುವ ಮೊತ್ತವೆ ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ ಅಥವಾ ಚಾಲ್ತಿ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ."

**ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನದ ವ್ಯಾಖ್ಯೆ**

"ಒಂದು ವರ್ಷದಲ್ಲಿ ಒಂದು ದೇಶದಲ್ಲಿ ಉತ್ಪಾದನೆಯಾದ ಸರಕು ಮತ್ತು ಸೇವೆಗಳ ಮೌಲ್ಯವನ್ನು ಅದೇ ವರ್ಷದ ಚಾಲ್ತಿ ಬೆಲೆಗಳಿಗೆ ಪ್ರತಿಯಾಗಿ ಅದಕ್ಕೆ ಹಿಂದಿನ ಯಾವುದಾದರೂ ಒಂದು ಮೂಲ ವರ್ಷದ ಮಾರುಕಟ್ಟೆ ಬೆಲೆಗಳ ಆಧಾರದ ಮೇಲೆ ಲೆಕ್ಕ ಹಾಕಿದಾಗ ದೊರೆಯುವ ಮೊತ್ತವೇ 'ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನ' ಅಥವಾ 'ಸ್ಥಿರ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ'."

**ಕೋಷ್ಟಕ ೪**

ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ಡಿಪ್ಲೇಟರ್

| ವರ್ಷಗಳು | ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ | ಡಿಪ್ಲೇಟರ್ (ಬೆಲೆಗಳ ಸೂಚ್ಯಂಕ) | ನೈಜ ಒಟ್ಟುರಾಷ್ಟ್ರೀಯ ಉತ್ಪನ್ನ |
|---|---|---|---|
| ೧೯೯೩-೯೪ (ಮೂಲ ವರ್ಷ) | ೭೬೯೨೬೫ | ೧೦೦ | ೭೬೯೨೬೫ |
| ೧೯೯೬-೯೭ | ೧೨೨೪೨೦೮ | ೧೨೮.೩೬೮೪೯ | ೯೫೩೬೬೭ |
| ಶೇ.ಏರಿಕೆ | ೫೯.೧೪ | ..... | ೨೩.೯೭ |

ಆಕರ : ೧. ಭಾರತ ಸರ್ಕಾರ, ೨೦೦೦, ಆರ್ಥಿಕ ಸಮೀಕ್ಷೆ, ೧೯೯೯ ೨೦೦೦, ಪು. ಎಸ್. ೩ ಸಾಮ್ಯುಯಿಲ್‌ಸನ್ ಮತ್ತು ನಾಡ್ರೂಸ್, ಎಕಾನಾಮಿಕ್ಸ್

## ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನದ ಲೆಕ್ಕಾಚಾರ

ಕೋಷ್ಟಕ - ೪ರಲ್ಲಿ ಭಾರತದ ೧೯೯೩-೯೪ ಮತ್ತು ೧೯೯೬-೯೭ರ ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ ಹಾಗೂ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನದ ವಿವರಗಳನ್ನು ನೀಡಲಾಗಿದೆ. ಕೋಷ್ಟಕದಲ್ಲಿ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ಗಣನೆ ಮಾಡಲು ಅಗತ್ಯವಾದ ಒಟ್ಟು ರಾಷ್ಟ್ರೀಯ ಉತ್ಪನ್ನದ 'ಡಿಫ್ಲೇಟರ್' ಅನ್ನು ನೀಡಲಾಗಿದೆ.

ಕೋಷ್ಟಕ -೪ರಲ್ಲಿ ತೋರಿಸುವಂತೆ ೧೯೯೩-೯೪ ಮೂಲವರ್ಷ. ಮೂಲ ವರ್ಷದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ ರೂ. ೭೬೯೨೬೫ ಕೋಟಿ. ಇದು ಮೂಲ ವರ್ಷ ವಾಗಿರುವುದರಿಂದ ಬೆಲೆಗಳ ಡಿಫ್ಲೇಟರ್ ೧೦೦ ಆಗಿದೆ. ನಾಮಮಾತ್ರ ಹಾಗೂ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನಗಳು ಪರಸ್ಪರ ಸಮವಾಗಿವೆ. ಆದರೆ ೧೯೯೬-೯೭ರಲ್ಲಿ ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ ರೂ. ೧೨೨೪೨೦೮ ಕೋಟಿ. ಆದರೆ ಆ ವರ್ಷದ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನ ರೂ. ೯೫೩೬೬೭ ಕೋಟಿ. ಇದರಿಂದ ತಿಳಿಯುವುದೇನೆಂದರೆ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನವು ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕಿಂತ ಕಡಿಮೆಯಿದೆ.

೧೯೯೩-೯೪ರಿಂದ ೧೯೯೬-೯೭ರ ಅವಧಿಯಲ್ಲಿ ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಶೇ. ೫೯.೧೪ರಷ್ಟು ಏರಿಕೆಯಾಗಿದ್ದರೆ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿನ ಏರಿಕೆ ಕೇವಲ ಶೇ. ೨೩.೯೭. ೧೯೯೬-೯೭ರಲ್ಲಿ ಬೆಲೆಗಳ ಡಿಫ್ಲೇಟರ್ ೧೨೮.೩೬. ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನಗಳ ನಡುವಣ ಅನುಪಾತವೇ ಬೆಲೆಗಳ ಡಿಫ್ಲೇಟರ್.

**ಸಮೀಕರಣ**

$$\text{ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನ} = \frac{\text{ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ}}{\text{ಬೆಲೆಗಳ ಡಿಫ್ಲೇಟರ್}}$$

$$\underset{(\text{೧೯೯೬-೯೭})}{\text{ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನ}} = \frac{\text{೧೨೨೪೨೦೮}}{\text{೧೨೮.೩೬೮೪೯}}$$

ರೂ. ೯೫೩೬೬೭ ಕೋಟಿ

ಇಲ್ಲಿ ನೀಡಿರುವ ಭಾರತದ ನಿದರ್ಶನದ ಪ್ರಕಾರ ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನವು ೧೯೯೩-೯೪ ಮತ್ತು ೧೯೯೬-೯೭ರ ಅವಧಿಯಲ್ಲಿ ಏರಿಕೆಯಾಗಿದೆ. ಆದರೆ ಇದರ ಏರಿಕೆ ಪ್ರಮಾಣವು ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಾದ ಏರಿಕೆಗಿಂತ ಕೆಳಮಟ್ಟದಲ್ಲಿದೆ. ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಏರಿಕೆಯಲ್ಲಿನ ಕೆಲವು ಭಾಗ ಬೆಲೆಯೇರಿಕೆಯಿಂದ ಉಂಟಾಗಿದೆ.

### ೬.೧.೧೦. ತಲಾ ರಾಷ್ಟ್ರೀಯ ಉತ್ಪನ್ನ

ಒಟ್ಟು ರಾಷ್ಟ್ರೀಯ ಉತ್ಪನ್ನ, ಒಟ್ಟು ದೇಶೀಯ ಉತ್ಪನ್ನ ಹಾಗೂ ಅವುಗಳ ನಿವ್ವಳ ಮೊತ್ತಗಳು ಇಡೀ ದೇಶದ ಆದಾಯವನ್ನು ಒಂದು ಮೊತ್ತವಾಗಿ ತೋರಿಸುತ್ತವೆ. ಇದರಿಂದ ದೇಶದ ಪ್ರತಿಯೊಬ್ಬ ನಾಗರಿಕನ ಆದಾಯವೆಷ್ಟು ಎಂಬುದು ತಿಳಿಯುವುದಿಲ್ಲ. ಆದ್ದರಿಂದ ನಾವು ತಲಾ ರಾಷ್ಟ್ರೀಯ ಉತ್ಪನ್ನವನ್ನು ಲೆಕ್ಕ ಹಾಕಬೇಕಾಗುತ್ತದೆ.

ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ಸಂಬಂಧಿಸಿದ ದೇಶದ ಜನಸಂಖ್ಯೆಯಿಂದ ಭಾಗಿಸಿದರೆ ನಮಗೆ ತಲಾ ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ.

**ಸಮೀಕರಣಗಳು**

$$\text{೧. ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನ} = \frac{\text{ಒಟ್ಟು ರಾಷ್ಟ್ರೀಯ ಉತ್ಪನ್ನ}}{\text{ಜನಸಂಖ್ಯೆ}}$$

$$\text{೨. ತಲಾ ನಿವ್ವಳ ರಾಷ್ಟ್ರೀಯ ಉತ್ಪನ್ನ} = \frac{\text{ನಿವ್ವಳ ರಾಷ್ಟ್ರೀಯ ಉತ್ಪನ್ನ}}{\text{ಜನಸಂಖ್ಯೆ}}$$

ಮೇಲಿನ ಸಮೀಕರಣಗಳಿಂದ ತಿಳಿದುಬರುವ ಸಂಗತಿಯೆಂದರೆ, ತಲಾ ರಾಷ್ಟ್ರೀಯ ಉತ್ಪನ್ನವು ಎರಡು ಸಂಗತಿಗಳನ್ನು ಅವಲಂಬಿಸಿದೆ.

೧. ಒಟ್ಟು ಅಥವಾ ನಿವ್ವಳ ರಾಷ್ಟ್ರೀಯ ಉತ್ಪನ್ನ

೨. ಜನಸಂಖ್ಯೆ

ಇವೆರಡೂ ಚಲಗಳ ಪೈಕಿ ಯಾವುದಾದರೂ ಒಂದು ಅಥವಾ ಎರಡೂ ಚಲಗಳಲ್ಲಿ ಬದಲಾವಣೆಯಾದರೆ ತಲಾ ರಾಷ್ಟ್ರೀಯ ಉತ್ಪನ್ನದಲ್ಲೂ ಬದಲಾವಣೆಯಾಗುತ್ತದೆ. ಕೋಷ್ಟಕ - ೫ ರಲ್ಲಿ ಭಾರತದ ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನದ ವಿವರಗಳನ್ನು ತೋರಿಸಲಾಗಿದೆ.

**ಕೋಷ್ಟಕ ೫ ಭಾರತದ ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನ : ೧೯೫೦-೨೦೦೦**

| ವರ್ಷಗಳು | ಉತ್ಪಾದನಾ ವೆಚ್ಚದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ (ಕೋಟಿ ರೂ.ಗಳಲ್ಲಿ) | ಜನಸಂಖ್ಯೆ (ಕೋಟಿಗಳಲ್ಲಿ) | ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನ (ರೂಪಾಯಿಗಳಲ್ಲಿ) |
|---|---|---|---|
| ೧೯೫೦-೫೧ | ೯೫೦೬ | ೩೫.೭ | ೨೬೬ |
| ೧೯೬೦-೬೧ | ೧೬೧೪೮ | ೪೩.೭ | ೩೭೨ |
| ೧೯೭೦-೭೧ | ೪೧೯೩೮ | ೫೪.೧ | ೭೭೫ |
| ೧೯೮೦-೮೧ | ೧೩೦೫೨೩ | ೫೭.೯ | ೧೯೨೨ |
| ೧೯೯೦-೯೧ | ೫೦೩೪೦೯ | ೮೩.೯ | ೬೦೦೦ |
| ೨೦೦೦-೦೧ | ೧೮೭೮೪೨೯ | ೧೦೧.೯ | ೧೮೪೩೪ |

ಆಕರ : ನೇಷನಲ್ ಅಕೌಂಟ್ಸ್ ಸ್ಟಾಟಿಸ್ಟಿಕ್ಸ್ ಆಫ್ ಇಂಡಿಯಾ, ೧೯೫೦-೫೧ರಿಂದ ೨೦೦೦-೦೧. ಈ ಪಿ ಡಬ್ಲ್ಯು ರೀಸರ್ಚ್ ಫೌಂಡೇಶನ್ ೨೦೦೩, ಮುಂಬೈ, ಪು. ೨೮

ಭಾರತದ ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನವು ೧೯೯೦-೯೧ರಲ್ಲಿ ರೂ. ೬,೦೦೦ ಇತ್ತು. ಆದರೆ ಹತ್ತು ವರ್ಷಗಳ ನಂತರ ೨೦೦೦-೦೧ರಲ್ಲಿ ಅದು ರೂ. ೧೮೪೩೪ ರಷ್ಟಾಗಿದೆ. ಕೋಷ್ಟಕ - ೫ ನೀಡಿರುವ ಮೊತ್ತಗಳು ಚಾಲ್ತಿ ಬೆಲೆಗಳಲ್ಲಿವೆ. ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನವು ಜನರ ಜೀವನ ಮಟ್ಟವನ್ನು ಸೂಚಿಸುವ ಒಂದು ಮೊತ್ತವಾಗಿದೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ದೇಶವೊಂದು ಮುಂದುವರಿದಿದೆಯೋ ಅಥವಾ ಹಿಂದುಳಿದಿದೆಯೋ ಎಂಬುದನ್ನು ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನದ ತುಲನೆಯ ಆಧಾರದ ಮೇಲೆ ನಿರ್ಧರಿಸಲಾಗುತ್ತಿದೆ.

## ೬.೨. ರಾಷ್ಟ್ರೀಯ ಆದಾಯದ ಮಾಪನ

೬.೨.೧. ಈಗಾಗಲೆ ತಿಳಿದುಕೊಂಡಿರುವಂತೆ ರಾಷ್ಟ್ರೀಯ ಆದಾಯವನ್ನು ಉತ್ಪನ್ನ, ಉತ್ಪಾದನಾಂಗಗಳ ಸಂಭಾವನೆ / ಪ್ರತಿಫಲ ಹಾಗೂ ಸಮಗ್ರ ವೆಚ್ಚ ಹೀಗೆ ಮೂರು ಬಗೆಯಾಗಿ ಪರಿಭಾವಿಸಿಕೊಳ್ಳಬಹುದಾಗಿದೆ. ಉತ್ಪನ್ನ ದೃಷ್ಟಿಕೋನದ ಪ್ರಕಾರ ಒಂದು ದೇಶವು ಒಂದು ವರ್ಷದಲ್ಲಿ ಉತ್ಪಾದಿಸಿದ ಸರಕು ಮತ್ತು ಸೇವೆಗಳ ಮೊತ್ತವೇ ರಾಷ್ಟ್ರೀಯ ಆದಾಯ. ಎರಡನೆಯದಾಗಿ ಉತ್ಪಾದನಾಂಗಗಳು ವಾರ್ಷಿಕವಾಗಿ ಪಡೆಯುವ ಸಂಭಾವನೆಗಳಾದ ಗೇಣಿ (ಭೂಮಿ), ಕೂಲಿ (ಶ್ರಮ), ಬಡ್ಡಿ (ಬಂಡವಾಳ) ಮತ್ತು ಲಾಭ (ಸಂಘಟಕ) ಇವುಗಳ ಒಟ್ಟು ಮೊತ್ತವೇ ರಾಷ್ಟ್ರೀಯ ಆದಾಯ. ಅದೇ ರೀತಿ ದೇಶವೊಂದರ ಸಮಗ್ರ ಅನುಭೋಗ ಹಾಗೂ ಸಮಗ್ರ ಬಂಡವಾಳ ಹೂಡಿಕೆ ಮೊತ್ತವು ರಾಷ್ಟ್ರೀಯ ಆದಾಯವಾಗಿದೆ. ಯಾವ ದೃಷ್ಟಿಕೋನದಿಂದ ಪರಿಭಾವಿಸಿಕೊಂಡರೂ, ಅಂತಿಮವಾಗಿ ಬರುವ ಮೊತ್ತವು ಸಮನಾಗಿರಬೇಕು.

ರಾಷ್ಟ್ರೀಯ ಆದಾಯವನ್ನು ಹೇಗೆ ಮೂರು ಬಗೆಯಲ್ಲಿ ಪರಿಭಾವಿಸಿ ಕೊಳ್ಳಲಾಗುತ್ತದೋ ಅದೇ ರೀತಿ ಅದನ್ನು ಮೂರು ವಿಧಾನಗಳಲ್ಲಿ ಮಾಪನ ಮಾಡಬಹುದಾಗಿದೆ.

೧. ಉತ್ಪನ್ನಗಳ ಹರಿಯುವಿಕೆ ವಿಧಾನ.




ಚಿತ್ರ : ೬.೧

೨. ಉತ್ಪಾದನಾಂಗಗಳ ಸಂಭಾವನೆ ಒಟ್ಟುಗೂಡಿಸುವ ವಿಧಾನ.

೩. ಸಮಗ್ರ ವೆಚ್ಚದ ವಿಧಾನ.

ಈ ಮೂರು ವಿಧಾನಗಳ ಪೈಕಿ ಮೊದಲ ಎರಡು ವಿಧಾನಗಳ ಸ್ವರೂಪವನ್ನು ರೇಖಾಚಿತ್ರ ೬.೧.ರಲ್ಲಿ ತೋರಿಸಲಾಗಿದೆ.

ಚಿತ್ರದಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಮೇಲ್ಭಾಗ. ಎಡನೆಯದು ಕೆಳಭಾಗ. ಮೇಲ್ಭಾಗವು ಉತ್ಪನ್ನಗಳ ಹರಿಯುವಿಕೆ ವಿಧಾನವನ್ನು ತೋರಿಸಿದರೆ ಕೆಳಭಾಗವು ಉತ್ಪಾದನಾಂಗಗಳ ಸಂಭಾವನೆಯನ್ನು ಕೂಡಿಸುವ ಮೂಲಕ ಒಟ್ಟು ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವ ವಿಧಾನವನ್ನು ತೋರಿಸುತ್ತಿದೆ.

### ೧. ಉತ್ಪನ್ನ ಹರಿಯುವಿಕೆ ವಿಧಾನ

ಚಿತ್ರ ೬.೧. ರಲ್ಲಿ ಮೇಲ್ಭಾಗವು ಅಂತಿಮ ಸರಕು ಮತ್ತು ಸೇವೆಗಳನ್ನು ಖರೀದಿಸಲು ವಿನಿಯೋಗಿಸುವ ವೆಚ್ಚವನ್ನು ತೋರಿಸಲಾಗಿದೆ. ಇದು ಅನುಭೋಗ ವೆಚ್ಚವಾಗಿದೆ. ಇಡಿ ಆರ್ಥಿಕತೆಯ ವ್ಯವಹಾರ ಸಂಸ್ಥೆಗಳು ವಾರ್ಷಿಕವಾಗಿ ಉತ್ಪಾದಿಸುವ ಸರಕು ಮತ್ತು ಸೇವೆಗಳು ಮಾರುಕಟ್ಟೆ ಪ್ರವೇಶಿಸುತ್ತವೆ. ಮಾರುಕಟ್ಟೆಗೆ ಹರಿದು ಬಂದ ಸರಕು ಮತ್ತು ಸೇವೆಗಳನ್ನು ಇಡಿ ಆರ್ಥಿಕತೆಯ ಕುಟುಂಬ ಘಟಕಗಳು ಖರೀದಿಸುತ್ತವೆ. ಹೀಗೆ ವ್ಯವಹಾರ ಸಂಸ್ಥೆಗಳಿಂದ ಹರಿದುಬಂದ ಸರಕು ಮತ್ತು ಸೇವೆಗಳ ಮೌಲ್ಯವೇ ರಾಷ್ಟ್ರೀಯ ಆದಾಯ.

ಈ ವಿಧಾನದಲ್ಲಿ ಆರ್ಥಿಕತೆಯನ್ನು ವಿವಿಧ ವಲಯಗಳಾಗಿ ವರ್ಗೀಕರಿಸಿಕೊಳ್ಳಲಾಗುತ್ತದೆ. ಹೀಗೆ ವರ್ಗೀಕರಿಸಿದ ವಲಯಗಳಿಂದ ವಾರ್ಷಿಕವಾಗಿ ಹರಿದುಬಂದ ಸರಕು ಮತ್ತು ಸೇವೆಗಳನ್ನು ಗಣನೆ ಮಾಡಲಾಗುತ್ತದೆ. ಹೀಗೆ ಗಣನೆ ಮಾಡಿದ ಎಲ್ಲ ವಲಯಗಳ ಸರಕು ಮತ್ತು ಸೇವೆಗಳ ಒಟ್ಟು ಮೊತ್ತವೇ ರಾಷ್ಟ್ರೀಯ ಆದಾಯ.

ಈ ವಿಧಾನದಲ್ಲಿ ಗಣನೆ ಮಾಡುವಾಗ ಕೆಳಕಂಡ ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು.

೧. ಉತ್ಪನ್ನಗಳನ್ನು ಅವುಗಳ ಅಂತಿಮ ರೂಪದಲ್ಲಿ ಪರಿಗಣಿಸಬೇಕು. ಅವುಗಳು ಕಚ್ಚಾ ರೂಪದಲ್ಲಿರುವಾಗ ಗಣನೆ ಮಾಡಬಾರದು. ಏಕೆಂದರೆ ಕಚ್ಚಾರೂಪದಲ್ಲಿ ಸರಕು ಮತ್ತು ಸೇವೆಗಳನ್ನು ಗಣನೆ ಮಾಡಿದರೆ ಅಲ್ಲಿ ದ್ವಿಗಣನೆಯ ದೋಷ ಉಂಟಾಗುವ ಸಾಧ್ಯತೆಯಿರುತ್ತದೆ.

೨. ಉತ್ಪನ್ನದ ಮೊತ್ತವನ್ನು ಚಾಲ್ತಿ ಬೆಲೆಗಳಲ್ಲಾದರೂ ಗಣನೆ ಮಾಡಬಹುದು ಅಥವಾ ಸ್ಥಿರ ಬೆಲೆಗಳಲ್ಲಾದರೂ ಗಣನೆ ಮಾಡಬಹುದು. ಉತ್ಪನ್ನವನ್ನು ಚಾಲ್ತಿ ಬೆಲೆಗಳಲ್ಲಿ ಮಾಪನ ಮಾಡಿದರೆ ನಮಗೆ 'ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ' ದೊರೆಯುತ್ತದೆ ಮತ್ತು ಸ್ಥಿರ ಬೆಲೆಗಳಲ್ಲಿ ಗಣನೆ ಮಾಡಿದರೆ 'ನೈಜ

ಒಟ್ಟು ರಾಷ್ಟ್ರೀಯ ಉತ್ಪನ್ನ' ದೊರೆಯುತ್ತದೆ.

೩. ರಾಷ್ಟ್ರೀಯ ಆದಾಯದ ಒಟ್ಟು ಮೊತ್ತವನ್ನಾದರೂ ಗಣನೆ ಮಾಡಬಹುದು. ಅಥವಾ ಸವಕಳಿ ವೆಚ್ಚ ಕಳೆದು ನಿವ್ವಳ ಮೊತ್ತವನ್ನಾದರೂ ಲೆಕ್ಕ ಹಾಕಬಹುದು.

೪. ಈ ಮಾಪನದಲ್ಲಿ ನಿವ್ವಳ ವಿದೇಶಿ ಆದಾಯವನ್ನು ಪರಿಗಣಿಸಬೇಕಾಗುತ್ತದೆ.

### ೬.೨.೨. ಕೈಗಾರಿಕಾ ಮೂಲದ ರಾಷ್ಟ್ರೀಯ ಉತ್ಪನ್ನ

ಈಗಾಗಲೆ ತಿಳಿಸಿರುವಂತೆ ಉತ್ಪನ್ನ ಹರಿಯುವಿಕೆ ವಿಧಾನದಲ್ಲಿ ಆರ್ಥಿಕತೆಯನ್ನು ವಿವಿಧ ವಲಯಗಳನ್ನಾಗಿ ವರ್ಗೀಕರಿಸಲಾಗುತ್ತದೆ. ಹೀಗೆ ವರ್ಗೀಕರಿಸಿದ ವಿವಿಧ ವಲಯಗಳಿಂದ ಹರಿದುಬಂದ ಸರಕು ಮತ್ತು ಸೇವೆಗಳನ್ನು ಗಣನೆ ಮಾಡಿ ರಾಷ್ಟ್ರೀಯ ಆದಾಯವನ್ನು ಕಂಡುಹಿಡಿಯಬಹುದು. ಹೀಗೆ ಕಂಡುಹಿಡಿದ ಮೊತ್ತವನ್ನು ಕೈಗಾರಿಕಾ ಮೂಲದ ರಾಷ್ಟ್ರೀಯ ಉತ್ಪನ್ನವೆಂದು ಕರೆಯಲಾಗುತ್ತದೆ.

### ೬.೨.೩. ಉತ್ಪಾದನಾಂಗಗಳ ಸಂಭಾವನೆ ಸಂಕಲನ ವಿಧಾನ

ರಾಷ್ಟ್ರೀಯ ಆದಾಯವನ್ನು ಗಣನೆ ಮಾಡುವ ಎರಡನೆಯ ವಿಧಾನ ಇದಾಗಿದೆ. ಈಗಾಗಲೆ ಹೇಳಿರುವಂತೆ ಯಾವುದೇ ವಿಧಾನದಲ್ಲಿ ಮಾಪನ ಮಾಡಿದರೂ ದೊರೆಯುವ ಮೊತ್ತ ಒಂದೇ ಆಗಿರುತ್ತದೆ. ಒಂದು ಆರ್ಥಿಕತೆಯಲ್ಲಿ ಸರಕು ಮತ್ತು ಸೇವೆಗಳ ಉತ್ಪಾದನೆಗೆ ಅಲ್ಲಿನ ಆರ್ಥಿಕತೆಯ ಉತ್ಪಾದನಾಂಗಗಳು ಸೇವೆ ಸಲ್ಲಿಸಿರುತ್ತವೆ. ಉತ್ಪಾದನಾಂಗಗಳ ಒಟ್ಟು ಪ್ರಯತ್ನದ ಫಲವೇ ಉತ್ಪಾದನೆ. ಹೀಗೆ ಉತ್ಪಾದಿಸಿದ ಒಟ್ಟು ಉತ್ಪನ್ನದ ಮೌಲ್ಯವು ಉತ್ಪಾದನಾಂಗಗಳು ಉತ್ಪನ್ನದ ಉತ್ಪಾದನೆಗೆ ನೀಡಿದ ಸೇವೆಯ ಮೌಲ್ಯಕ್ಕೆ ಸಮನಾಗಿರುತ್ತದೆ. ಅಂದ ಮೇಲೆ ಇಡೀ ಆರ್ಥಿಕತೆಯಲ್ಲಿನ ಉತ್ಪಾದನಾಂಗಗಳು ವರ್ಷದಲ್ಲಿ ಪಡೆದ ಸಂಭಾವನೆಗಳ ಮೊತ್ತವು ರಾಷ್ಟ್ರೀಯ ಉತ್ಪನ್ನಕ್ಕೆ ಸಮನಾಗಿರುತ್ತದೆ. ಹೀಗೆ ಉತ್ಪಾದನಾಂಗಗಳು ವಾರ್ಷಿಕವಾಗಿ ಸ್ವೀಕರಿಸುವ ಪ್ರತಿಫಲ ಅಥವಾ ಸಂಭಾವನೆ ಯನ್ನು ಕೂಡಿಸಿದರೆ ನಮಗೆ ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ.

ಈ ವಿಧಾನವನ್ನು 'ಉತ್ಪಾದನಾಂಗಗಳ ವೆಚ್ಚ'ದ ವಿಧಾನವೆಂದು ಕರೆಯಬಹುದು. ಏಕೆಂದರೆ ಉತ್ಪಾದನಾಂಗಗಳು ಪಡೆಯುವ ಸಂಭಾವನೆ / ಪ್ರತಿಫಲವು ಉತ್ಪಾದನಾಂಗಗಳಿಗೆ ಆದಾಯವಾದರೆ ಉತ್ಪಾದನೆ ಸಂಘಟಿಸುವ ವ್ಯವಹಾರ ಸಂಸ್ಥೆಗಳಿಗೆ ಉತ್ಪಾದನಾ ವೆಚ್ಚವಾಗಿರುತ್ತದೆ. ಇಡೀ ಆರ್ಥಿಕತೆಯ ಉತ್ಪಾದನಾ ಪ್ರಕ್ರಿಯೆ ಒಳಗೊಳ್ಳುವ ಉತ್ಪಾದನಾ ವೆಚ್ಚವು ಅಲ್ಲಿನ ಉತ್ಪಾದನಾಂಗಗಳ ಆದಾಯಕ್ಕೆ ಸಮನಾಗಿರುತ್ತದೆ.

### ೬.೨.೪. ಸಮಗ್ರ ವೆಚ್ಚದ ವಿಧಾನ

ಈ ವಿಧಾನವನ್ನು ಅನುಭೋಗ ಮತ್ತು ಬಂಡವಾಳ ಹೂಡಿಕೆ ವಿಧಾನವೆಂದೂ ಕರೆಯಲಾಗಿದೆ. ಉತ್ಪಾದನಾಂಗಗಳು ಪಡೆಯುವ ಸಂಭಾವನೆ ಅಥವಾ ಪ್ರತಿಫಲವು ಎರಡು ರೀತಿ ವಿನಿಯೋಗವಾಗುತ್ತದೆ.

೧. ಅನುಭೋಗ ವೆಚ್ಚ

೨. ಬಂಡವಾಳ ಹೂಡಿಕೆ / ಉಳಿತಾಯ.

ಆದಾಯವು ಅನುಭೋಗ ವೆಚ್ಚ ಮತ್ತು ಬಂಡವಾಳ ಹೂಡಿಕೆಗಳಿಗೆ ಸಮವಾಗಿರುತ್ತದೆ.

$Y = C + I$

$Y = C + S$

ಸಮೀಕರಣದಲ್ಲಿ 'Y' ರಾಷ್ಟ್ರೀಯ ಉತ್ಪನ್ನವನ್ನು 'C' ಸಮಗ್ರ ಅನುಭೋಗ ವೆಚ್ಚವನ್ನು 'I' ಬಂಡವಾಳ ಹೂಡಿಕೆಯನ್ನು ಮತ್ತು 'S' ಉಳಿತಾಯವನ್ನು ಪ್ರತಿನಿಧಿಸುತ್ತವೆ.

ಅನುಭೋಗ ಮತ್ತು ಬಂಡವಾಳ ಹೂಡಿಕೆಗಳು ಎರಡು ಮೂಲಗಳಿಂದ ನಡೆಯುತ್ತಿರುತ್ತದೆ. ಇವು ಕುಟುಂಬ ಘಟಕಗಳ ನೆಲೆಯಿಂದ ಹಾಗೂ ವ್ಯವಹಾರ ಸಂಸ್ಥೆಗಳ ಮೂಲದಿಂದ ನಡೆಯುತಿರುತ್ತವೆ. ಎರಡನೆಯದಾಗಿ ಇವು ಸರ್ಕಾರದ ಮೂಲದಿಂದಲೂ ನಡೆಯುತ್ತಿರುತ್ತದೆ. ಇಲ್ಲಿ ಅನುಭೋಗ ಹಾಗೂ ಬಂಡವಾಳ ಹೂಡಿಕೆಗಳು ವ್ಯಕ್ತಿಗತ ಮೂಲ ಹಾಗೂ ಸರ್ಕಾರದ ಮೂಲಗಳೆರಡನ್ನೂ ಒಳಗೊಂಡಿರುತ್ತದೆ.

ಸಮಗ್ರ ವೆಚ್ಚದ ವ್ಯಾಪ್ತಿಯಲ್ಲಿನ ಬಾಬ್ತುಗಳು ಹೀಗಿವೆ.

೧. ಖಾಸಗಿ ಅನುಭೋಗ ವೆಚ್ಚ

೨. ಖಾಸಗಿ ಬಂಡವಾಳ ಹೂಡಿಕೆ

೩. ಸಾರ್ವಜನಿಕ ಅನುಭೋಗ ವೆಚ್ಚ

೪. ಸಾರ್ವಜನಿಕ ಬಂಡವಾಳ ವೆಚ್ಚ

೫. ನಿವ್ವಳ ರಫ್ತು ಗಳಿಕೆ.

ಈ ಐದು ಬಾಬ್ತುಗಳ ಮೊತ್ತವೇ ಒಟ್ಟು ರಾಷ್ಟ್ರೀಯ ಆದಾಯ.

### ೬.೨.೫. ಒಟ್ಟು ದೇಶೀಯ ಉತ್ಪನ್ನದ ಸಮಗ್ರ ಸಮತೆ

ರಾಷ್ಟ್ರೀಯ ಆದಾಯನನ್ನು ಕುರಿತ ಚರ್ಚೆಯಲ್ಲಿ ಮಹತ್ವದ ಒಂದು ಸಂಗತಿಯೆಂದರೆ ಅದನ್ನು ಯಾವ ಬಗೆಯಿಂದ ಪರಿಭಾವಿಸಿಕೊಂಡರೂ, ಯಾವ ವಿಧಾನದಿಂದ ಮಾಪನ ಮಾಡಿದರೂ ಅಂತಿಮವಾಗಿ ಬರುವ ಮೊತ್ತ ಮಾತ್ರ ಒಂದೇ ಆಗಿರುತ್ತದೆ.

ಉತ್ಪನ್ನ ದೃಷ್ಟಿಕೋನದಿಂದ ಪರಿಭಾವಿಸಿಕೊಂಡು ಗಣನೆ ಮಾಡಿದಾಗ ನಮಗೆ ಒಟ್ಟು ರಾಷ್ಟ್ರೀಯ ವೆಚ್ಚ ದೊರೆಯುತ್ತದೆ. ಇದನ್ನು ಉತ್ಪಾದನಾಂಗಗಳು ಪಡೆಯುವ ಸಂಭಾವನೆಯನ್ನು ಕೂಡುವುದರ ಮೂಲಕವೂ ಗಣನೆ ಮಾಡಬಹುದು. ಸಮಗ್ರ ಅನುಭೋಗ ವೆಚ್ಚ ಹಾಗೂ ಸಮಗ್ರ ಬಂಡವಾಳ ಹೂಡಿಕೆ ವೆಚ್ಚಗಳ ಮೊತ್ತವಾಗಿಯೂ ಇದನ್ನು ಲೆಕ್ಕ ಹಾಕಬಹುದು.

ಉತ್ಪನ್ನ-ಆದಾಯ-ವೆಚ್ಚ ಹೀಗೆ ಮೂರು ಭಿನ್ನ ದೃಷ್ಟಿಕೋನ ಮತ್ತು ವಿಧಾನಗಳಿವೆ.

ಆದರೆ ಈ ಮೂರು ವಿಧಾನಗಳಲ್ಲಿ ಅಂತಿಮವಾಗಿ ದೊರೆಯುವ ಮೊತ್ತವು ಪರಸ್ಪರ ಸಮನಾಗಿರಬೇಕಾಗುತ್ತದೆ. ಏಕೆಂದರೆ ಒಟ್ಟು ರಾಷ್ಟ್ರೀಯ ಉತ್ಪನ್ನದ ಮೌಲ್ಯವು ಒಟ್ಟು ಉತ್ಪಾದನಾಂಗಗಳ ಆದಾಯಕ್ಕೆ ಸಮನಾಗಿರುತ್ತದೆ. ಇವೆರಡೂ ರೀತಿಯಲ್ಲಿ ಕಂಡುಕೊಂಡ ಮೊತ್ತ ಒಟ್ಟು ರಾಷ್ಟ್ರೀಯ ವೆಚ್ಚದ ಮೊತ್ತಕ್ಕೆ ಸಮನಾಗಿರಬೇಕು. ಇದನ್ನೇ ಒಟ್ಟು ರಾಷ್ಟ್ರೀಯ ಉತ್ಪನ್ನದ ಸಮಗ್ರ ಸಮತೆಯೆಂದು ಕರೆಯಲಾಗಿದೆ. ಈ ಸಮಗ್ರ ಸಮತೆಯನ್ನು ಮೂರು ಅಡ್ಡಗೆರೆ ಹಾಕುವುದರ ಮೂಲಕ ಗುರುತಿಸಲಾಗುತ್ತದೆ. ಉದಾಹರಣೆಗೆ

ಒಟ್ಟು ರಾಷ್ಟ್ರೀಯ ಉತ್ಪನ್ನ ≡ ಒಟ್ಟು ರಾಷ್ಟ್ರೀಯ ಆದಾಯ ≡ ಒಟ್ಟು ರಾಷ್ಟ್ರೀಯ ವೆಚ್ಚ

ಈ ಮೂರು ಅಡ್ಡಗೆರೆಗಳನ್ನು ಹಾಕಿದರೆ, ಅದನ್ನು ನಿತ್ಯ ಸಮೀಕರಣವೆಂದು ಗಣಿತಶಾಸ್ತ್ರದಲ್ಲಿ ಕರೆಯಲಾಗುತ್ತದೆ.

## ೬.೩. ರಾಷ್ಟ್ರೀಯ ಆದಾಯ ಮತ್ತು ರಾಷ್ಟ್ರೀಯ ಕಲ್ಯಾಣ

೬.೩.೧. ಆದಾಯ ಮತ್ತು ಕಲ್ಯಾಣಗಳ ನಡುವೆ ಸಂಬಂಧವನ್ನು ಸುಲಭವಾಗಿ ಗುರುತಿಸಬಹುದು. ಆದಾಯವು ಅಧಿಕವಿದ್ದಾಗ ಜನರ ಯೋಗಕ್ಷೇಮ ಅಥವಾ ಕಲ್ಯಾಣ ಉತ್ತಮವಾಗಿರುತ್ತದೆ ಮತ್ತು ಅದು ಕಡಿಮೆಯಿದ್ದಾಗ ಜನರ ಯೋಗಕ್ಷೇಮವು ಕೆಳಮಟ್ಟದಲ್ಲಿರುತ್ತದೆ. ಇವೆರಡರ ನಡುವಿನ ಸಂಬಂಧದ ಬಗ್ಗೆ ಅನುಮಾನ ಸಾಧ್ಯವಿಲ್ಲ. ಆದರೆ ಈ ಸಂಬಂಧವನ್ನು 'ಕಾರಣ' ಮತ್ತು 'ಪರಿಣಾಮ'ಗಳ ರೀತಿಯಲ್ಲಿ ಪರಿಭಾವಿಸಿಕೊಳ್ಳುವುದು ಸಾಧ್ಯವಿಲ್ಲ. ಏಕೆಂದರೆ ಆದಾಯದಲ್ಲಾಗುವ ಬದಲಾವಣೆಯಿಂದ ಕಲ್ಯಾಣದಲ್ಲಿ ಯಾವ ಬಗೆಯ ಬದಲಾವಣೆಗಳಾಗುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಈ ಕಾರಣದಿಂದಾಗಿ ರಾಷ್ಟ್ರೀಯ ಆದಾಯವನ್ನು ರಾಷ್ಟ್ರೀಯ ಕಲ್ಯಾಣದ ಸೂಚಿಯಾಗಿ ಬಳಸುವುದು ಸಾಧ್ಯವಿಲ್ಲ. ಪಾಲ್ ಎ. ಸಾಮ್ಯುಯಲ್‌ಸನ್, ಅಮರ್ತ್ಯಸೇನ್, ಮೆಹಬೂಬ್ ಉಲ್ ಹಕ್ ಮುಂತಾದವರು ರಾಷ್ಟ್ರೀಯ ಆದಾಯವನ್ನು ರಾಷ್ಟ್ರದ ಕಲ್ಯಾಣಸೂಚಿಯಾಗಿ ಪರಿಗಣಿಸುವುದರ ಬಗ್ಗೆ ಅನುಮಾನ ವ್ಯಕ್ತಪಡಿಸಿದ್ದಾರೆ.

ಮೆಹಬೂಬ್-ಉಲ್-ಹಕ್ ಮತ್ತು ಅಮರ್ತ್ಯಸೇನ್ ಅವರು ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಪ್ರತಿಯಾಗಿ 'ಮಾನವ ಅಭಿವೃದ್ಧಿ ಸೂಚ್ಯಂಕ'ವೆಂಬ ಪರ್ಯಾಯ ಮಾಪನವನ್ನೇ ರೂಪಿಸಿದ್ದಾರೆ. ಸಾಮ್ಯುಯಲ್‌ಸನ್ ಅವರು ಕೂಡ ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಪ್ರತಿಯಾಗಿ ಪರ್ಯಾಯ ಮಾಪನಸೂಚಿ ರೂಪಿಸುವ ಬಗ್ಗೆ ಪ್ರಯತ್ನ ನಡೆಸಿದ್ದಾರೆ. ಒಟ್ಟಾರೆಯಾಗಿ ಇಲ್ಲಿ ಇಷ್ಟು ಹೇಳಬಹುದು.

೧. ರಾಷ್ಟ್ರೀಯ ಆದಾಯ ಮತ್ತು ರಾಷ್ಟ್ರ ಕಲ್ಯಾಣಗಳ ನಡುವೆ ಸಂಬಂಧವಿದೆ.
೨. ಆದರೆ ಈ ಸಂಬಂಧದ ಸ್ವರೂಪದ ಬಗ್ಗೆ ನಿರ್ದಿಷ್ಟವಾಗಿ ಏನನ್ನು ಹೇಳಲು ಸಾಧ್ಯವಿಲ್ಲ.
೩. ಇವೆರಡರ ನಡುವೆ ಕ್ರಮವಾಗಿ 'ಕಾರಣ' ಮತ್ತು 'ಪರಿಣಾಮ' ರೀತಿಯ ಸಂಬಂಧವನ್ನು ಗುರುತಿಸುವುದು ಸಾಧ್ಯವಿಲ್ಲ.

### ೬.೩.೨. ರಾಷ್ಟ್ರೀಯ ಆದಾಯ ಸೂಚಿಯ ಮಿತಿಗಳು

ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ರಾಷ್ಟ್ರದ ಕಲ್ಯಾಣದ ಸೂಚಿಯಾಗಿ ಬಳಸುವುದರ ಬಗ್ಗೆ ಟೀಕೆಗಳಿವೆ, ಅನುಮಾನಗಳಿವೆ. ಅವುಗಳನ್ನು ಹೀಗೆ ವಿವರಿಸಬಹುದು.

೧. ಒಂದು ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನ ಯಾವ ಪ್ರಮಾಣದಲ್ಲಿ ಏರಿಕೆಯಾಗುತ್ತಿದೆಯೋ ಅದಕ್ಕಿಂತ ಅಧಿಕ ಪ್ರಮಾಣದಲ್ಲಿ ದೇಶದ ಜನಸಂಖ್ಯೆ ಏರಿಕೆಯಾಗುತ್ತಿದ್ದರೆ ಒಟ್ಟು ರಾಷ್ಟ್ರೀಯ ಉತ್ಪನ್ನದ ಏರಿಕೆಯಿಂದ ಜನರ ಕಲ್ಯಾಣ ಉತ್ತಮಗೊಳ್ಳುವುದು ಸಾಧ್ಯವಿಲ್ಲ. ಒಟ್ಟು ರಾಷ್ಟ್ರೀಯ ಉತ್ಪನ್ನದ ಏರಿಕೆಯು ಜನರ ಕಲ್ಯಾಣವನ್ನು ಉತ್ತಮಪಡಿಸಬೇಕಾದರೆ ಜನಸಂಖ್ಯೆಯ ಬೆಳವಣಿಗೆಗೆ ಗತಿ ಕೆಳಮಟ್ಟದಲ್ಲಿರಬೇಕು.

೨. ಒಟ್ಟು ರಾಷ್ಟ್ರೀಯ ಉತ್ಪನ್ನದ ಬೆಳವಣಿಗೆಯಿಂದ ಜನರ ಜೀವನ ಮಟ್ಟವು ಸುಧಾರಿಸುತ್ತಿದೆಯೋ ಅಥವಾ ಇಲ್ಲವೋ ಎಂಬುದು ರಾಷ್ಟ್ರೀಯ ಉತ್ಪನ್ನವು ಯಾವ ಬಗೆಯ ಸರಕು ಮತ್ತು ಸೇವೆಗಳನ್ನು ಒಳಗೊಂಡಿದೆ ಎಂಬುದನ್ನು ಅವಲಂಬಿಸಿದೆ. ರಾಷ್ಟ್ರೀಯ ಉತ್ಪನ್ನದೊಳಗೆ ಜನೋಪಯೋಗಿ ಸರಕುಗಳಿಗೆ ಪ್ರತಿಯಾಗಿ ಶಸ್ತ್ರಾಸ್ತ್ರಗಳು, ಹಾನಿಕಾರಕ ರಸಾಯನಿಕಗಳು, ಐಷಾರಾಮದ ವಸ್ತುಗಳು ಅಧಿಕವಾಗಿದ್ದರೆ ಅಂತಹ ಸಂದರ್ಭದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನದ ಏರಿಕೆಯಿಂದ ಜನರ ಕಲ್ಯಾಣ ಸಾಧ್ಯವಿಲ್ಲ.

೩. ಒಟ್ಟು ರಾಷ್ಟ್ರೀಯ ಉತ್ಪನ್ನದ ಏರಿಕೆಯು ಆರ್ಥಿಕತೆಯಲ್ಲಿ ತೀವ್ರ ಗತಿಯ ಪರಿಸರ ಮಾಲಿನ್ಯ ಉಂಟು ಮಾಡಬಹುದು. ಒಟ್ಟು ರಾಷ್ಟ್ರೀಯ ಉತ್ಪನ್ನದ ಬದಲಾವಣೆಗೆ ಸ್ಪಂದಿಯಾದ ಪರಿಸರ ಮಾಲಿನ್ಯ ರೇಖೆಯು ತಲೆಕೆಳಗಾದ ಇಂಗ್ಲಿಷ್ ಅಕ್ಷರ 'ಯು'ನ ಆಕೃತಿಯದಾಗಿರುತ್ತದೆ ಎನ್ನಲಾಗಿದೆ. ಇದರ ಇಂಗಿತಾರ್ಥವೇನೆಂದರೆ ಆರ್ಥಿಕತೆಯ ಅಭಿವೃದ್ಧಿಯ ಆರಂಭದ ಹಂತದಲ್ಲಿ ಒಟ್ಟು ರಾಷ್ಟ್ರೀಯ ಆದಾಯದ ಏರಿಕೆಯೊಂದಿಗೆ ಪರಿಸರ ಮಾಲಿನ್ಯದ ಪ್ರಮಾಣವು ಅಧಿಕಗೊಳ್ಳುತ್ತದೆ. ಇದರಿಂದ ಜನರ ಕಲ್ಯಾಣ ದುರ್ಬಲಗೊಳ್ಳುವ ಸಾಧ್ಯತೆಯಿದೆ. ಒಂದು ಹಂತದ ನಂತರ ಇದು ಕಡಿಮೆಯಾಗುತ್ತದೆ ಎನ್ನಲಾಗಿದೆ. ಆದರೆ ಅದು ಯಾವಾಗ ಬರುತ್ತದೆ ಎಂಬುದು ಅಸ್ಪಷ್ಟ.

೪. ಒಂದು ಆರ್ಥಿಕತೆಯಲ್ಲಿ ಮಾರುಕಟ್ಟೆ ಪ್ರವೇಶಿಸದ ದುಡಿಮೆಯಿರುತ್ತದೆ. ಈ ಬಗೆಯ ದುಡಿಮೆಗೆ ಹಣ ರೂಪಿ ಸಂಭಾವನೆ ಇರುವುದಿಲ್ಲ. ಈ ಬಗೆಯ ದುಡಿಮೆಯು ಒಟ್ಟು ರಾಷ್ಟ್ರೀಯ ಆದಾಯದ ಸಂಕಲನದಲ್ಲಿ ಸೇರುವುದಿಲ್ಲ. ಮಾರುಕಟ್ಟೆ ರಹಿತ ಮತ್ತು ಸಂಭಾವನೆ ರಹಿತ ದುಡಿಮೆಯನ್ನು ಮಹಿಳೆಯರು ನಿಭಾಯಿಸುತ್ತಿರುತ್ತಾರೆ. ಗೃಹವಾರ್ತೆ ದುಡಿಮೆಯಲ್ಲಿ ಜರ್ಜರಿತವಾದ ಮಹಿಳೆಯರ ಬದುಕು ಒಟ್ಟು ರಾಷ್ಟ್ರೀಯ ಆದಾಯದ ಏರಿಕೆಯೊಂದಿಗೆ ಉತ್ತಮಗೊಳ್ಳುವುದಿಲ್ಲ. ಅಂದರೆ ಒಟ್ಟು ರಾಷ್ಟ್ರೀಯ ಆದಾಯವು ಲಿಂಗ ನಿರಪೇಕ್ಷ ಸೂಚಿಯಾಗಿದೆ. ಮಹಿಳೆಯರ ದುಡಿಮೆಯು ಒಟ್ಟು ರಾಷ್ಟ್ರೀಯ ಆದಾಯದ ಲೆಕ್ಕಕ್ಕೆ ಸೇರುವುದಿಲ್ಲ.

೫. ಪ್ರತಿಯೊಂದು ದೇಶದಲ್ಲೂ 'ಭೂಗತ' ಆರ್ಥಿಕತೆಯೊಂದು ಕ್ರಿಯಾಶೀಲ ವಾಗಿರುತ್ತದೆ. ಅಧಿಕೃತ ಆರ್ಥಿಕತೆ ಮತ್ತು ಭೂಗತ ಆರ್ಥಿಕತೆಗಳು ಪರಸ್ಪರ ಸಮಾನಾಂತರ ನೆಲೆ ಹೊಂದಿರುತ್ತವೆ. ತೆರಿಗೆಯನ್ನು ವಾಮ ಮಾರ್ಗಗಳ ಮೂಲಕ ತಪ್ಪಿಸಿಕೊಂಡು ಸಂಪಾದಿಸಿದ ಆದಾಯವು ಭೂಗತ ಆರ್ಥಿಕತೆಯಲ್ಲಿ ಆಶ್ರಯ ಪಡೆದುಕೊಳ್ಳುತ್ತದೆ. ಈ ಬಗೆಯ ತೆರಿಗೆ ತಪ್ಪಿಸಿಕೊಂಡ ಆದಾಯವು ಒಟ್ಟು ರಾಷ್ಟ್ರೀಯ ಆದಾಯವನ್ನು ಪ್ರವೇಶಿಸುವುದಿಲ್ಲ. ಇದರಿಂದಾಗಿ ರಾಷ್ಟ್ರೀಯ ಉತ್ಪನ್ನವನ್ನು ರಾಷ್ಟ್ರ ಕಲ್ಯಾಣದ ಸೂಚಿಯಾಗಿ ಪರಿಗಣಿಸುವುದು ಸಾಧ್ಯವಿಲ್ಲ.

೬. ಅನಕ್ಷರತೆ ಅಧಿಕವಾಗಿರುವ, ನಿರುದ್ಯೋಗ ವ್ಯಾಪಕವಾಗಿರುವ ಮತ್ತು ಅಸಂಘಟಿತ ಶ್ರಮ ಮಾರುಕಟ್ಟೆ ಕ್ರಿಯಾಶೀಲವಾಗಿರುವ ಭಾರತದಂತಹ ದೇಶದಲ್ಲಿ ಜನರು ಏಕಕಾಲದಲ್ಲಿ ಅನೇಕ ಬಗೆಯ ದುಡಿಮೆಯಲ್ಲಿ ನಿರತರಾಗಿರುತ್ತಾರೆ. ಇವರ ಆದಾಯವು ವಿವಿಧ ಉದ್ಯೋಗಗಳಿಂದ ಹರಿದು ಬರುತ್ತಿರುತ್ತದೆ. ಈ ಬಗೆಯ ಆದಾಯವನ್ನು ಮಿಶ್ರ ಆದಾಯವನ್ನು ಒಟ್ಟು ರಾಷ್ಟ್ರೀಯ ಆದಾಯದಲ್ಲಿ ಸೇರಿಸುವುದು ಕಷ್ಟ ಸಾಧ್ಯ. ಈ ಕಾರಣದಿಂದ ಒಟ್ಟು ರಾಷ್ಟ್ರೀಯ ಉತ್ಪನ್ನದ ಏರಿಕೆಯು ರಾಷ್ಟ್ರ ಕಲ್ಯಾಣದ ಏರಿಕೆಯ ಸೂಚಿಯಾಗಿರುವುದು ಅಸಾಧ್ಯ.

೭. ಆರ್ಥಿಕತೆಯಲ್ಲಿ ಆದಾಯದ ವಿತರಣೆ ಅಸಮವಾಗಿದ್ದಾಗ ಮತ್ತು ಉನ್ನತ ವರ್ಗದ ಆದಾಯವು ತೀವ್ರಗತಿಯಲ್ಲಿ ಮತ್ತು ಕೆಳವರ್ಗದ ಆದಾಯ ಮಂದಗತಿಯಲ್ಲಿ ಏರಿಕೆಯಾಗುತ್ತಿರುವ ಸಂದರ್ಭದಲ್ಲಿ ಒಟ್ಟು ರಾಷ್ಟ್ರೀಯ ಆದಾಯದ ಏರಿಕೆಯು ಜನರ ಜೀವನ ಮಟ್ಟವನ್ನು, ರಾಷ್ಟ್ರ ಕಲ್ಯಾಣವನ್ನು ಸಾಧಿಸುವುದು ಸಾಧ್ಯವಿಲ್ಲ.

೮. ಒಟ್ಟು ರಾಷ್ಟ್ರೀಯ ಆದಾಯವು ಕೇವಲ ಆದಾಯವನ್ನು ಮಾತ್ರ ಮಾಪನ ಮಾಡುತ್ತದೆ. ಆದರೆ ಜನರ ಜೀವನವನ್ನು, ರಾಷ್ಟ್ರ ಕಲ್ಯಾಣವನ್ನು ನಿರ್ಧರಿಸುವ ಶಿಕ್ಷಣದ ಮಟ್ಟ ಹಾಗೂ ಆರೋಗ್ಯದ ಮಟ್ಟವನ್ನು ಅದು ಒಳಗೊಳ್ಳುವುದಿಲ್ಲ. ಆದ್ದರಿಂದ ಒಟ್ಟು ರಾಷ್ಟ್ರೀಯ ಉತ್ಪನ್ನವು ಒಂದು ಅಪರಿಪೂರ್ಣ ಮಾಪನ ಸೂಚಿಯಾಗಿದೆ. ಈ ಅಪರಿಪೂರ್ಣತೆಯನ್ನು ಸರಿಪಡಿಸುವ ಉದ್ದೇಶದಿಂದ ರೂಪುಗೊಂಡ ಮಾಪನವೆಂದರೆ ಮಾನವ ಅಭಿವೃದ್ಧಿ ಸೂಚ್ಯಂಕ.

ಈ ಎಲ್ಲ ಕಾರಣಗಳಿಂದ ರಾಷ್ಟ್ರೀಯ ಆದಾಯ ಮತ್ತು ರಾಷ್ಟ್ರ ಕಲ್ಯಾಣಗಳ ನಡುವೆ ಕಾರಣ - ಪರಿಣಾಮ ರೀತಿಯ ಸಂಬಂಧ ಸಾಧ್ಯವಿಲ್ಲವೆಂದು ಹೇಳಬಹುದು. ನಿಜವಾಗಿ ಹೇಳಬೇಕೆಂದರೆ ಕಲ್ಯಾಣವನ್ನು ಹಣದ ರೂಪದಲ್ಲಿ ಅಳೆಯಲು ಬರುವುದಿಲ್ಲ. ರಾಷ್ಟ್ರೀಯ ಆದಾಯವು ಹಣರೂಪಿ ಸೂಚಿಯಾಗಿದೆ. ಆದರೆ ರಾಷ್ಟ್ರ ಕಲ್ಯಾಣವೆಂಬುದು ಭಾವನಾತ್ಮಕವಾದ ಪರಿಭಾವನೆಯಾಗಿದೆ.

ರಾಷ್ಟ್ರೀಯ ಆದಾಯವೆಂಬುದು ವಸ್ತುನಿಷ್ಠವಾದ ಪರಿಭಾವನೆ. ರಾಷ್ಟ್ರ ಕಲ್ಯಾಣ ವೆಂಬುದು ವ್ಯಕ್ತಿನಿಷ್ಠ - ಅನುಭವ ನಿಷ್ಠ ಪರಿಭಾವನೆ. ಈ ಕಾರಣದಿಂದಾಗಿ ಅದನ್ನು ಮಾಪನ ಮಾಡಲು ಬರುವುದಿಲ್ಲ.

## ೬.೪. ಸಾರಾಂಶ

ರಾಷ್ಟ್ರೀಯ ಉತ್ಪನ್ನ ಅಥವಾ ರಾಷ್ಟ್ರೀಯ ಆದಾಯವೆಂಬ ಪರಿಭಾವನೆಯು ಸಮಗ್ರಲಕ್ಷಿ ಅರ್ಥಶಾಸ್ತ್ರಕ್ಕೆ ಸೇರಿದ ಚಲವಾಗಿದೆ. ಒಂದು ದೇಶದ ಅಭಿವೃದ್ಧಿಯ ಮಾಪನಸೂಚಿ ಒಟ್ಟು ರಾಷ್ಟ್ರೀಯ ಉತ್ಪನ್ನ. ಸ್ಥೂಲವಾಗಿ ಒಂದು ದೇಶದ ಉತ್ಪಾದನಾ ವಲಯದಿಂದ ವಾರ್ಷಿಕವಾಗಿ ಹರಿದುಬರುವ ಸರಕು ಮತ್ತು ಸೇವೆಗಳ ರಾಶಿಯೆ ರಾಷ್ಟ್ರೀಯ ವರಮಾನ.

ರಾಷ್ಟ್ರೀಯ ಆದಾಯವು ಕೆಲವು ಲಕ್ಷಣಗಳನ್ನು ಹೊಂದಿವೆ.

೧. ಅದು ಪರಿಮಾಣಾತ್ಮಕ ಚಲ

೨. ಅದು ವಾರ್ಷಿಕವಾಗಿ ಲೆಕ್ಕಹಾಕುವ ಒಂದು ಮೊತ್ತ.

೩. ಸರಕು ಮತ್ತು ಸೇವೆಗಳ ಅಂತಿಮ ರೂಪವನ್ನು ಮಾತ್ರ ಇಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳಲಾಗುತ್ತದೆ.

೪. ಇದೊಂದು ಹಣರೂಪಿ ಚಲವಾಗಿದೆ.

ರಾಷ್ಟ್ರೀಯ ಆದಾಯವನ್ನು ಮೂರು ದೃಷ್ಟಿಕೋನದಿಂದ ಪರಿಭಾವಿಸಿಕೊಳ್ಳಬಹುದು.

ಮೊದಲನೆಯದು ಉತ್ಪನ್ನ ದೃಷ್ಟಿಕೋನ

ಎರಡನೆಯದು ಆದಾಯ ದೃಷ್ಟಿಕೋನ

ಮೂರನೆಯದು ವೆಚ್ಚದ ದೃಷ್ಟಿಕೋನ

ರಾಷ್ಟ್ರೀಯ ಆದಾಯ ಕುರಿತ ಚರ್ಚೆಯಲ್ಲಿ ಕೆಲವು ಸೂಚಿಗಳು ಹೀಗಿವೆ. ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿಎನ್‌ಪಿ) - ದಿನನಿತ್ಯ ಸಾರ್ವಜನಿಕವಾಗಿ ಬಳಕೆಯಲ್ಲಿರುವ ಸೂಚಿ ಇದಾಗಿದೆ. ಒಂದು ದೇಶದ ಒಟ್ಟು ಸರಕು ಮತ್ತು ಸೇವೆಗಳ ಮೊತ್ತದ ವಿಸ್ತೃತವಾದ ವಾರ್ಷಿಕ ಮಾಪನ ಸೂಚಿಯ ಒಟ್ಟು ರಾಷ್ಟ್ರೀಯ ಉತ್ಪನ್ನ.

ಒಂದು ದೇಶದ ಉತ್ಪಾದನಾಂಗಗಳು ವಿದೇಶಗಳಲ್ಲಿ ನೆಲೆನಿಂತು ಗಳಿಸಿದ ಆದಾಯ ಹಾಗೂ ವಿದೇಶಿ ಉತ್ಪಾದನಾಂಗಗಳು ಆ ದೇಶದಲ್ಲಿ ನೆಲೆನಿಂತು ಗಳಿಸಿದ ಆದಾಯಗಳ ವ್ಯತ್ಯಾಸದ ಮೊತ್ತವೇ ನಿವ್ವಳ ವಿದೇಶಿ ಆದಾಯ.

ಒಂದು ದೇಶವು ಒಂದು ವರ್ಷದಲ್ಲಿ ಉತ್ಪಾದಿಸಿದ ಸರಕು ಮತ್ತು ಸೇವೆಗಳ ಒಟ್ಟು ಮೊತ್ತವನ್ನು ಮಾರುಕಟ್ಟೆ ಬೆಲೆಗಳ ಆಧಾರದ ಮೇಲೆ ಗಣನೆ ಮಾಡಿದರೆ ಅದನ್ನು "ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ"ವೆಂದು ಕರೆಯಲಾಗುತ್ತದೆ.

ಸರಕು ಮತ್ತು ಸೇವೆಗಳ ಉತ್ಪಾದನೆಗೆ ಉತ್ಪಾದನಾಂಗಗಳು ತಮ್ಮ ಉತ್ಪಾದನಾ ಸಾಮರ್ಥ್ಯವನ್ನು ನೀಡಬೇಕಾಗುತ್ತದೆ. ಉತ್ಪಾದನಾಂಗಗಳು ನೀಡುವ ಸೇವೆಗೆ ಪ್ರತಿಯಾಗಿ ಅವುಗಳಿಗೆ ಪ್ರತಿಫಲವು ಸಂಭಾವನೆ ರೂಪದಲ್ಲಿ ದೊರೆಯುತ್ತದೆ. ಹೀಗೆ ನಾಲ್ಕು ಉತ್ಪಾದನಾಂಗಗಳು ವರ್ಷದಲ್ಲಿ ಪಡೆಯುವ ಸಂಭಾವನೆಯ ಮೊತ್ತವನ್ನು "ಉತ್ಪಾದ

ನಾಂಗಗಳ ವೆಚ್ಚದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ"ವೆಂದು ಕರೆಯಲಾಗಿದೆ.

ಒಟ್ಟು ರಾಷ್ಟ್ರೀಯ ಉತ್ಪನ್ನದಿಂದ ನಿವ್ವಳ ವಿದೇಶಿ ಆದಾಯವನ್ನು ಕಳೆದರೆ ಒಟ್ಟು ದೇಶೀಯ ಉತ್ಪನ್ನ ದೊರೆಯುತ್ತದೆ.

ಒಟ್ಟು ರಾಷ್ಟ್ರೀಯ ಉತ್ಪನ್ನ = (ಒಟ್ಟು ದೇಶೀಯ ಉತ್ಪನ್ನ) + (ನಿವ್ವಳ ವಿದೇಶಿ ಆದಾಯ)

ಒಟ್ಟು ದೇಶೀಯ ಉತ್ಪನ್ನ = (ಒಟ್ಟು ರಾಷ್ಟ್ರೀಯ ಉತ್ಪನ್ನ) - (ನಿವ್ವಳ ವಿದೇಶಿ ಆದಾಯ)

ಒಟ್ಟು ರಾಷ್ಟ್ರೀಯ ಉತ್ಪನ್ನದಿಂದ ಬಂಡವಾಳ ಸರಕುಗಳ ಸವಕಳಿ ವೆಚ್ಚವನ್ನು ಕಳೆದರೆ ನಿವ್ವಳ ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ.

ಒಂದು ವರ್ಷದಲ್ಲಿ ದೇಶವೊಂದು ಉತ್ಪಾದಿಸಿದ ಸರಕುಸೇವೆಗಳ ಮೌಲ್ಯವನ್ನು ಅದೇ ವರ್ಷದ ಮಾರುಕಟ್ಟೆ ಬೆಲೆಗಳಲ್ಲಿ ಲೆಕ್ಕ ಹಾಕಿದಾಗ ದೊರೆಯುವ ಮೊತ್ತವೇ 'ನಾಮಮಾತ್ರ ಒಟ್ಟು ರಾಷ್ಟ್ರೀಯ ಉತ್ಪನ್ನ'. ಒಂದು ವರ್ಷದಲ್ಲಿ ದೇಶವೊಂದು ಉತ್ಪಾದಿಸಿದ ಸರಕು ಸೇವೆಗಳ ಮೌಲ್ಯವನ್ನು ಅದೇ ವರ್ಷದ ಬೆಲೆಗಳಿಗೆ ಪ್ರತಿಯಾಗಿ ಅದಕ್ಕೆ ಹಿಂದಿನ ಯಾವುದಾದರೂ ಒಂದು ಮೂಲವರ್ಷದ ಮಾರುಕಟ್ಟೆ ಬೆಲೆಗಳ ಆಧಾರದ ಮೇಲೆ ಲೆಕ್ಕ ಹಾಕಿದಾಗ ದೊರೆಯುವ ಮೊತ್ತವೆ 'ನೈಜ ಒಟ್ಟು ರಾಷ್ಟ್ರೀಯ ಉತ್ಪನ್ನ'.

ಒಂದು ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ಅಲ್ಲಿನ ಜನಸಂಖ್ಯೆಯಿಂದ ಭಾಗಿಸಿದಾಗ ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ.

ರಾಷ್ಟ್ರೀಯ ಆದಾಯವನ್ನು ಮೂರು ವಿಧಾನಗಳಲ್ಲಿ ಮಾಪನ ಮಾಡಬಹುದು.

೧. ಉತ್ಪನ್ನಗಳ ಹರಿಯುವಿಕೆ ವಿಧಾನ

೨. ಉತ್ಪಾದನಾಂಗಗಳ ಸಂಭಾವನೆ ಸಂಕಲನ ವಿಧಾನ

೩. ಸಮಗ್ರ ವೆಚ್ಚದ ವಿಧಾನ

ಒಂದು ದೇಶದ ವಿವಿಧ ವಲಯಗಳಿಂದ ವಾರ್ಷಿಕವಾಗಿ ಹರಿದುಬಂದ ಸರಕು ಮತ್ತು ಸೇವೆಗಳ ಗಣನೆ ಮಾಡಿ ಒಟ್ಟು ರಾಷ್ಟ್ರೀಯ ಆದಾಯವನ್ನು ಕಂಡುಹಿಡಿದರೆ ಅದು ಉತ್ಪನ್ನಗಳ ಹರಿಯುವಿಕೆ ವಿಧಾನ.

ಉತ್ಪಾದನಾಂಗಗಳು ವಾರ್ಷಿಕವಾಗಿ ಪಡೆಯುವ ಸಂಭಾವನೆಯನ್ನು ಕೂಡಿಸುವುದರ ಮೂಲಕ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ಲೆಕ್ಕಹಾಕಿದರೆ ಅದು ಉತ್ಪಾದನಾಂಗಗಳ ಸಂಭಾವನೆ ಸಂಕಲನ ವಿಧಾನವೆನಿಸಿಕೊಳ್ಳುತ್ತದೆ.

ಒಂದು ದೇಶದ ವಾರ್ಷಿಕ ಖಾಸಗಿ ಅನುಭೋಗ ವೆಚ್ಚ, ವಾರ್ಷಿಕ ಬಂಡವಾಳ ಹೂಡಿಕೆ, ವಾರ್ಷಿಕ ಸಾರ್ವಜನಿಕ ಅನುಭೋಗ ವೆಚ್ಚ, ವಾರ್ಷಿಕ ಸಾರ್ವಜನಿಕ ಬಂಡವಾಳವೆಚ್ಚ ಹಾಗೂ ನಿವ್ವಳ ರಫ್ತು ಗಳಿಕೆಗಳ ಮೊತ್ತವಾಗಿ ಒಟ್ಟು ರಾಷ್ಟ್ರೀಯ

ಆದಾಯವನ್ನು ಗಣನೆ ಮಾಡಬಹುದು. ಇದು ಸಮಗ್ರ ವೆಚ್ಚದ ವಿಧಾನ.

ಒಟ್ಟು ರಾಷ್ಟ್ರೀಯ ಉತ್ಪನ್ನದ ಮೊತ್ತವು ಒಟ್ಟು ರಾಷ್ಟ್ರೀಯ ಆದಾಯದ ಮೊತ್ತಕ್ಕೆ ಮತ್ತು ಇವೆರಡೂ ಮೊತ್ತಗಳು ಒಟ್ಟು ರಾಷ್ಟ್ರೀಯ ವೆಚ್ಚದ ಮೊತ್ತಕ್ಕೆ ಸಮನಾಗಿರುತ್ತದೆ. ಇದನ್ನು ರಾಷ್ಟ್ರೀಯ ಆದಾಯದ ಸಮಗ್ರ ಸಮತೆ ಅಥವಾ ಒಟ್ಟು ರಾಷ್ಟ್ರೀಯ ಆದಾಯದ ನಿತ್ಯ ಸಮೀಕರಣವೆಂದು ಹೇಳಲಾಗಿದೆ.

ರಾಷ್ಟ್ರೀಯ ಆದಾಯವನ್ನು ರಾಷ್ಟ್ರೀಯ ಕಲ್ಯಾಣದ ಸೂಚಿಯಾಗಿ ಬಳಸಲಾಗುತ್ತದೆ. ಆದರೆ ರಾಷ್ಟ್ರೀಯ ಆದಾಯವನ್ನು ರಾಷ್ಟ್ರೀಯ ಕಲ್ಯಾಣದ ಸೂಚಿಯಾಗಿ ಬಳಸುವುದಕ್ಕೆ ಅನೇಕ ಸಮಸ್ಯೆಗಳನ್ನು ವಿದ್ವಾಂಸರು ಪಟ್ಟಿ ಮಾಡಿದ್ದಾರೆ.

ಜನಸಂಖ್ಯೆಯ ಬೆಳವಣಿಗೆ ಗತಿಯು ರಾಷ್ಟ್ರೀಯ ಆದಾಯದ ಬೆಳವಣಿಗೆ ಗತಿಗಿಂತ ಅಧಿಕವಿದ್ದಾಗ ರಾಷ್ಟ್ರೀಯ ಆದಾಯದ ಏರಿಕೆಯು ಜನರ ಕಲ್ಯಾಣವನ್ನು ಉತ್ತಮ ಪಡಿಸುವುದು ಸಾಧ್ಯವಿಲ್ಲ.

ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಶಸ್ತ್ರಾಸ್ತ್ರಗಳು, ಹಾನಿಕಾರಕ ರಸಾಯನಿಕಗಳು, ಐಷಾರಾಮಿ ಸರಕುಗಳು ಅಧಿಕವಾಗಿದ್ದರೆ, ರಾಷ್ಟ್ರೀಯ ಆದಾಯದ ಏರಿಕೆಯು ಜನರ ಕಲ್ಯಾಣ ಸಾಧಿಸುವುದು ಸಾಧ್ಯವಿಲ್ಲ.

ಒಟ್ಟು ರಾಷ್ಟ್ರೀಯ ಆದಾಯದ ಏರಿಕೆಯು ಪರಿಸರ ಮಾಲಿನ್ಯಕ್ಕೆ ಕಾರಣವಾದ ಜನರ ಕಲ್ಯಾಣಕ್ಕೆ ಪ್ರತಿಯಾಗಿ ಜನರಿಗೆ ಹಾನಿ ಅಧಿಕವಾಗುತ್ತದೆ.

ಆರ್ಥಿಕತೆಯಲ್ಲಿ ಅಧಿಕೃತ ವಲಯವಿರುವಂತೆ ಭೂಗತ ವಲಯವೂ ಇರುತ್ತದೆ. ಆದ್ದರಿಂದ ಅಧಿಕೃತ ವಲಯಕ್ಕೆ ಸೇರಿದ ರಾಷ್ಟ್ರೀಯ ಆದಾಯದ ಬೆಳವಣಿಗೆ ರಾಷ್ಟ್ರೀಯ ಕಲ್ಯಾಣವನ್ನು ಸೂಚಿಸುತ್ತದೆ ಎಂದು ಹೇಳಲು ಬರುವುದಿಲ್ಲ.

ಮಹಿಳೆಯರ ದುಡಿಮೆಯು ರಾಷ್ಟ್ರೀಯ ಆದಾಯದಲ್ಲಿ ಸೇರುವುದಿಲ್ಲ. ಆದ್ದರಿಂದ ಅದನ್ನು ರಾಷ್ಟ್ರ ಕಲ್ಯಾಣ ಸೂಚಿಯಾಗಿ ಬಳಸಲು ಸಾಧ್ಯವಿಲ್ಲ.

## ೬.೫. ಪಾರಿಭಾಷಿಕ ಕೋಶ

| | |
|---|---|
| ಸಮಗ್ರ ಅರ್ಥಶಾಸ್ತ್ರ | Macro Economics |
| ಪರಿಮಾಣಾತ್ಮಕ ಚಲ | Quantitative Variable |
| ಉತ್ಪಾದನಾಂಗಗಳ ಬೆಲೆಯಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನ | Net National Product at Factor cost |
| ಒಟ್ಟು ದೇಶೀಯ ಉತ್ಪನ್ನ | Gross Domestic Product |
| ನಿವ್ವಳ ವಿದೇಶಿ ಆದಾಯ | Net Foreign Income |
| ನಿವ್ವಳ ನಿರ್ಯಾತ | Net export |
| ಪರೋಕ್ಷ ತೆರಿಗೆಗಳು | Indirect taxes |
| ಸವಕಳಿ | Depreciation |
| ಸಹಾಯಧನ | Subsidies |
| ಮಾರುಕಟ್ಟೆ ಬೆಲೆಗಳಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನ | Net National Product at Market Prices |
| ಚಾಲ್ತಿ ವರ್ಷ | Current year |
| ಮೂಲವರ್ಷ | Base year |
| ಸ್ಥಿರ ಬೆಲೆಗಳು | Constant Prices |
| ನಾಮಮಾತ್ರ ನಿವ್ವಳ ರಾಷ್ಟ್ರೀಯ ಉತ್ಪನ್ನ | Nominal Net National Product |
| ನೈಜ ನಿವ್ವಳ ರಾಷ್ಟ್ರೀಯ ಉತ್ಪನ್ನ | Real Net National Product |
| ತಲಾ ನಿವ್ವಳ ರಾಷ್ಟ್ರೀಯ ಉತ್ಪನ್ನ | Per Capita Net National Product |
| ಅಂಶ | Numerator |
| ಛೇದ | Denominator |
| ಉತ್ಪನ್ನ ಹರಿಯುವಿಕೆ ಗಣನೆ | Product - Flow Method |
| ಉತ್ಪಾದನಾಂಗಗಳ ಪ್ರತಿಫಲ / ಉತ್ಪಾದನಾಂಗಗಳ ವೆಚ್ಚದ ಗಣನೆ | Factor Earning or Factor cost Method |
| ಏಕತ್ವ / ಸಮಗ್ರ ಸಮತೆ | Identity |
| ಆರ್ಥಿಕ ಕಲ್ಯಾಣ | Economic Welfare |
| ಭೂಗತ ಆರ್ಥಿಕತೆ | Underground Economy |
| ದ್ವಿಗಣನೆ | Double - Counting |

## ೭.೬. ಪ್ರಶ್ನೆಗಳು

**I. ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ನಿವ್ವಳ ವಿದೇಶಿ ವರಮಾನವೆನ್ನುವುದನ್ನು ವಿವರಿಸಿ.

೨. ಒಟ್ಟು ದೇಶೀಯ ಉತ್ಪನ್ನ ಹಾಗೂ ಒಟ್ಟು ರಾಷ್ಟ್ರೀಯ ಉತ್ಪನ್ನಗಳ ನಡುವಿನ ಒಂದು ನಿರ್ಣಾಯಕ ವ್ಯತ್ಯಾಸವನ್ನು ಹೇಳಿ.

೩. ಒಂದು ದೇಶದ ಒಟ್ಟು ದೇಶೀಯ ಉತ್ಪನ್ನ ರೂ. ೧೦೦೦ ಕೋಟಿ ಮತ್ತು ಆ ದೇಶದ ನಿವ್ವಳ ವಿದೇಶಿ ವರಮಾನ ರೂ. ೧೦೦ ಕೋಟಿ. ಆ ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ಲೆಕ್ಕ ಹಾಕಿ.

೪. ಒಂದು ದೇಶದ ೧೯೯೫-೯೬ನೆಯ ಸಾಲಿನ ಒಟ್ಟು ರಾಷ್ಟ್ರೀಯ ಉತ್ಪನ್ನ ರೂ. ೧೦೦೦ ಕೋಟಿ. ಆ ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನವು ೧೯೯೬-೯೭ರಲ್ಲಿ ರೂ. ೧೫೦೦ ಕೋಟಿಯಾಗಿದೆ. ಒಟ್ಟು ರಾಷ್ಟ್ರೀಯ ಉತ್ಪನ್ನದ ವಾರ್ಷಿಕ ಬೆಳವಣಿಗೆಯನ್ನು ಕಂಡುಹಿಡಿಯಿರಿ.

೫. ಒಂದು ದೇಶದ ನಿವ್ವಳ ರಾಷ್ಟ್ರೀಯ ಉತ್ಪನ್ನವನ್ನು ಯಾವ ಚಲದಿಂದ ಭಾಗಿಸಿದರೆ ನಮಗೆ ತಲಾ ನಿವ್ವಳ ರಾಷ್ಟ್ರೀಯ ಉತ್ಪನ್ನ ದೊರೆಯುತ್ತದೆ?

೬. ಚಾಲ್ತಿ ಬೆಲೆಗಳಲ್ಲಿ ಲೆಕ್ಕ ಹಾಕಿದ ಒಟ್ಟು ರಾಷ್ಟ್ರೀಯ ಉತ್ಪನ್ನದ ಬೆಳವಣಿಗೆಗೆ ಪ್ರಮಾಣವು ಸ್ಥಿರ ಬೆಲೆಗಳಲ್ಲಿ ಲೆಕ್ಕ ಹಾಕಿದ ಒಟ್ಟು ರಾಷ್ಟ್ರೀಯ ಉತ್ಪನ್ನದ ಬೆಳವಣಿಗೆಗೆ ಪ್ರಮಾಣಕ್ಕಿಂತ ಅಧಿಕವಾಗಿರುವುದಕ್ಕೆ ಒಂದು ಕಾರಣ ಕೊಡಿ.

೭. ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಶೇ. ೩ರಷ್ಟು ಬೆಳವಣಿಗೆಯಾಗಿದೆ. ಜನಸಂಖ್ಯೆಯ ಬೆಳವಣಿಗೆಯು ಶೇ. ೩ ರಷ್ಟಾಗಿದೆ. ಇಂತಹ ಸಂದರ್ಭದಲ್ಲಿ ತಲಾ ಒಟ್ಟು ರಾಷ್ಟ್ರೀಯ ಉತ್ಪನ್ನವು ಸ್ಥಿರವಾಗಿರುತ್ತದೊ ಅಥವಾ ಏರಿಕೆಯಾಗುತ್ತದೊ?

೮. ಉತ್ಪಾದನಾ ಪ್ರಕ್ರಿಯೆಯಲ್ಲಿ ಸವೆದುಹೋಗುವ ಬಂಡವಾಳ ಸರಕುಗಳ ವೆಚ್ಚವನ್ನು ಅರ್ಥಶಾಸ್ತ್ರದಲ್ಲಿ ಎಂತಹ ವೆಚ್ಚವೆಂದು ಕರೆಯಲಾಗಿದೆ?

೯. ನಾಮಮಾತ್ರ ರಾಷ್ಟ್ರೀಯ ಉತ್ಪನ್ನ ಮತ್ತು ನೈಜ ರಾಷ್ಟ್ರೀಯ ಉತ್ಪನ್ನಗಳ ನಡುವಿನ ವ್ಯತ್ಯಾಸ ತಿಳಿಸಿ.

೧೦. ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಸವಕಳಿ ವೆಚ್ಚವನ್ನು ಕಳೆದರೆ ದೊರೆಯುವ ಪರಿಭಾವನೆ ಯಾವುದು

**II. ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ರಾಷ್ಟ್ರೀಯ ಆದಾಯವನ್ನು ಪರಿಭಾವಿಸಿಕೊಂಡಿರುವ ಮೂರು ದೃಷ್ಟಿಕೋನಗಳನ್ನು ಹೆಸರಿಸಿ.

೨. ಒಟ್ಟು ರಾಷ್ಟ್ರೀಯ ಉತ್ಪನ್ನವು ನಿವ್ವಳ ರಾಷ್ಟ್ರೀಯ ಉತ್ಪನ್ನಕ್ಕಿಂತ ಹೇಗೆ ಭಿನ್ನವಾಗಿದೆ. ವಿವರಿಸಿ.
೩. ತಲಾ ಆದಾಯವನ್ನು ಕಂಡುಹಿಡಿಯುವ ಸೂತ್ರವನ್ನು ಬರೆಯಿರಿ.
೪. ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ ಹಾಗೂ ಉತ್ಪಾದನಾಂಗಗಳ ವೆಚ್ಚದಲ್ಲಿನ ಒಟ್ಟು ರಾಷ್ಟ್ರೀಯ ಉತ್ಪನ್ನಗಳ ನಡವಿನ ವ್ಯತ್ಯಾಸ ತಿಳಿಸಿ.
೫. ಒಟ್ಟು ರಾಷ್ಟ್ರೀಯ ಉತ್ಪನ್ನದ ಸಮಗ್ರ ಸಮತೆಯನ್ನು ವಿವರಿಸಿ.
೬. ಚಾಲ್ತಿ ಬೆಲೆಗಳಲ್ಲಿ ಕಂಡುಹಿಡಿದ ರಾಷ್ಟ್ರೀಯ ಉತ್ಪನ್ನ ಹಾಗೂ ಸ್ಥಿರ ಬೆಲೆಗಳಲ್ಲಿ ಲೆಕ್ಕ ಹಾಕಿದ ರಾಷ್ಟ್ರೀಯ ಉತ್ಪನ್ನಗಳ ನಡುವಿನ ವ್ಯತ್ಯಾಸ ತಿಳಿಸಿ.
೭. ಉತ್ಪನ್ನ ಹರಿಯುವಿಕೆ ವಿಧಾನವನ್ನು ವಿವರಿಸಿ.
೮. ನೈಜ ಆದಾಯವನ್ನು ಕಂಡುಹಿಡಿಯಲು ಬಳಸುವ ಸೂತ್ರವನ್ನು ಬರೆಯಿರಿ.
೯. ರಾಷ್ಟ್ರೀಯ ಉತ್ಪನ್ನದ ಮಹತ್ವವನ್ನು ವಿವರಿಸಿ.
೧೦. ನಿವ್ವಳ ವಿದೇಶಿ ಆದಾಯದ ವಿವರಣೆ ನೀಡಿ.

**III. ೧೫ ವಾಕ್ಯಗಳಲ್ಲಿ ಉತ್ತರಿಸಿ**

೧. ರಾಷ್ಟ್ರೀಯ ಆದಾಯವೆಂದರೇನು? ರಾಷ್ಟ್ರೀಯ ಆದಾಯ ಮತ್ತು ದೇಶೀಯ ಆದಾಯಗಳ ವ್ಯತ್ಯಾಸವನ್ನು ವಿವರಿಸಿ.
೨. ರಾಷ್ಟ್ರೀಯ ಆದಾಯ ಮತ್ತು ರಾಷ್ಟ್ರೀಯ ಕಲ್ಯಾಣಗಳ ನಡುವಣ ಸಂಬಂಧವನ್ನು ವಿವರಿಸಿ.
೩. ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವ ಮೂರು ವಿಧಾನಗಳನ್ನು ವಿವರಿಸಿ.
೪. ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ಒಟ್ಟು ದೇಶೀಯ ಉತ್ಪನ್ನಗಳ ನಡುವಿನ ವ್ಯತ್ಯಾಸ ತಿಳಿಸಿ. ರಾಷ್ಟ್ರೀಯ ಉತ್ಪನ್ನದ ಮಹತ್ವವನ್ನು ವಿವರಿಸಿ.
೫. ನೈಜ ರಾಷ್ಟ್ರೀಯ ಉತ್ಪನ್ನ ಮತ್ತು ನಾಮಮಾತ್ರ ರಾಷ್ಟ್ರೀಯ ಉತ್ಪನ್ನಗಳ ನಡುವಣ ವ್ಯತ್ಯಾಸ ತಿಳಿಸಿ.

**IV. ೪೦ ವಾಕ್ಯಗಳಲ್ಲಿ ಉತ್ತರಿಸಿ.**

೧. ರಾಷ್ಟ್ರೀಯ ಆದಾಯವೆಂದರೇನು? ರಾಷ್ಟ್ರೀಯ ಆದಾಯವು ರಾಷ್ಟ್ರೀಯ ಕಲ್ಯಾಣದ ಸೂಚಿಯಾಗಲು ಸಾಧ್ಯವಿಲ್ಲ. ಕಾರಣ ವಿವರಿಸಿ.
೨. ಒಟ್ಟು ರಾಷ್ಟ್ರೀಯ ಉತ್ಪನ್ನ, ನಿವ್ವಳ ರಾಷ್ಟ್ರೀಯ ಉತ್ಪನ್ನಗಳ ಅರ್ಥವನ್ನು ವಿವರಿಸಿ, ಅವುಗಳ ನಡುವಿನ ಭಿನ್ನತೆ ವಿವರಿಸಿ. ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವ ವಿಧಾನಗಳನ್ನು ತಿಳಿಸಿರಿ.

# ಅಧ್ಯಾಯ ೭

# ಹಣದ ಸಿದ್ಧಾಂತ

## ೭.೧. ಹಣ

ಮಾನವ ಅನಾದಿ ಕಾಲದಿಂದಲೂ ತನ್ನ ಜೀವನವನ್ನು ಹಿತದಾಯಕರವಾಗಿ ರೂಪಿಸಲು ಪ್ರಯತ್ನಿಸುತ್ತಾ ಬಂದಿದ್ದಾನೆ. ಅದರಂತೆ ಮಾನವ ಕುಲ ತನ್ನ ಜೀವನವನ್ನು ಹಾಗೂ ದಿನನಿತ್ಯ ಕಾರ್ಯಗಳನ್ನು ಸರಳಗೊಳಿಸಲು ಸಂಶೋಧಿಸುತ್ತಾ ಬಂದಿದೆ. ಮಾನವನ ಅನೇಕ ಸಂಶೋಧನೆಯಲ್ಲಿ ಹಣ ಪ್ರಥಮ ಸ್ಥಾನ ಪಡೆದಿದೆ. ನಾಗರಿಕತೆಗಳ ಇತಿಹಾಸದಲ್ಲಿ ಹಣದ ಬೆಳವಣಿಗೆ ಬಂದು ಪ್ರಮುಖ ಮೈಲುಗಲ್ಲಾಗಿದೆ. ವಿಜ್ಞಾನಗಳಲ್ಲಿನ ಸಂಶೋಧನೆಗಳಂತೆ ಹಣದ ಸೃಷ್ಠಿಯ ಒಂದೆ ದಿನದಲ್ಲಿ ಆಗಿರುವುದಿಲ್ಲ. ಅದು ಕಾಲಾಂತರದಲ್ಲಿ ಮಾನವನ ನಾಗರಿಕತೆಯ ಹಲವು ಹಂತಗಳಲ್ಲಿ ಅವಶ್ಯಕತೆಗಳಿಗೆ ತಕ್ಕಂತೆ ಬೆಳವಣಿಗೆಯಾಗಿ ಈ ರೂಪ ಹೊಂದಿದೆ. ಆರ್ಥಿಕ ಚಟುವಟಿಕೆಗಳಾದ ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ವ್ಯವಹಾರಗಳು ಬೆಳದಂತೆ ಹಣದ ಅನೇಕ ರೂಪಗಳು ಸೃಷ್ಠಿಯಾಗಿ ರೂಪಾಂತರಗೊಂಡು ಪ್ರಚಲಿತ ರೂಪ ಹೊಂದಿದೆ.

ಪುರಾತನ ಕಾಲದಲ್ಲಿ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ವಸ್ತು ರೂಪದ ಹಣ ಪ್ರಚಲಿತದಲ್ಲಿದ್ದುದನ್ನು ಆರ್ಥಿಕ ಇತಿಹಾಸ ಸಾರುತ್ತದೆ. ಉದಾಹರಣೆಗಾಗಿ

| ಅ.ಸಂ. | ದೇಶಗಳು | ವಸ್ತು ರೂಪದ ಹಣ |
|---|---|---|
| ೧. | ಫೀಜಿ ದ್ವೀಪದಲ್ಲಿ | ತಿಮಿಂಗಲದ ಹಲ್ಲುಗಳು |
| ೨. | ಯಾಪ ದ್ವೀಪದಲ್ಲಿ | ಕಲ್ಲಿನ ಚಕ್ರ |
| ೩. | ಸಾಂತಾ ಕ್ರೂಸ್ ದ್ವೀಪದಲ್ಲಿ | ಪಕ್ಷಿಗಳ ಗರಿಗಳು |
| ೪. | ಕಾಂಬೋಡಿಯಾ | ಎಮ್ಮೆಗಳು |
| ೫. | ಗೊಟೆಮಾಲಾ | ಮೆಕ್ಕೆ ತೆನೆಗಳು |
| ೬. | ಅಲಾಸ್ಕಾ | ಪ್ರಾಣಿಗಳ ತುಪ್ಪಳಗಳು |
| ೭. | ಚೈನಾ | ಉಪ್ಪು |
| ೮. | ಆಸ್ಟ್ರೇಲಿಯಾ | ಕಬ್ಬಿನಿಂದ ಮಾಡಿ ಮಧ್ಯ |
| ೯. | ಐರಲ್ಯಾಂಡ | ದನಕರಗಳು |
| ೧೦. | ಭಾರತ | ಆಕಳುಗಳು, ಆಹಾರಧಾನ್ಯಗಳು, ಕವಡೆಗಳು |

ಇವುಗಳಲ್ಲದೆ ಆಡುಗಳು, ದನಗಳು, ಹಂದಿಗಳು, ಪ್ರಾಣಿಗಳು, ಚರ್ಮ ಇತ್ಯಾದಿಗಳನ್ನು ಹಣವನ್ನಾಗಿ ಬಳಸಲಾಗುತ್ತಿತ್ತು. ವಸ್ತುರೂಪದ ಹಣದ ಜೊತೆ ಜೊತೆಯಾಗಿ ಕಾಲಾಂತರದಲ್ಲಿ ವಸ್ತು ವಿನಿಮಯ ಪದ್ಧತಿಯೂ ಜಾರಿಯಲ್ಲಿತ್ತು. ವಸ್ತು ವಿನಿಮಯ ಪದ್ಧತಿಯಲ್ಲಿ ವ್ಯಾಪಾರಿಗಳು ಹಾಗೂ ಗ್ರಾಹಕರು ಅನೇಕ ತೊಂದರೆಗಳನ್ನು ಎದುರಿಸ ಬೇಕಾಗುತ್ತಿತ್ತು.

ವಸ್ತು ವಿನಿಮಯ ಪದ್ಧತಿಯ ಅನೇಕ ತೊಂದರೆಗಳ ಕಾರಣದಿಂದ ಮಾನವನ ಆರ್ಥಿಕ ಚಟುವಟಿಕೆಗಳಾದ ಉಪಭೋಗ, ಉತ್ಪಾದನೆ, ವಿನಿಮಯಗಳು ಅತೀ ಮಂದಗತಿಯಲ್ಲಿ ಸಾಗುತ್ತಿದ್ದವು. ವ್ಯಾಪಾರ ಕೇವಲ ವಾರದ ಸಂತೆಗಳಲ್ಲಿ, ಜಾತ್ರೆಗಳಲ್ಲಿ, ಉರುಸುಗಳಲ್ಲಿ ಮಾತ್ರ ನಡೆಯುತ್ತಿದ್ದವು. ಈ ದಿನಗಳಲ್ಲಿ ದೇವರ / ಪೀರಗಳ ಜಾತ್ರೆ ಹಾಗೂ ಉರುಸುಗಳಲ್ಲಿ ಭಕ್ತಿ ಸಂಗಡ ಪೇಠೆಯು ಜನರ ಆಕರ್ಷಣೆಯಾಗಿತ್ತು. ಉದಾಹರಣೆಗಾಗಿ, ಕೊಡುಗು ಜಿಲ್ಲೆಯಲ್ಲಿ ವಾರದ ಸಂತೆ ನಡೆಯುವ ಹಳ್ಳಿಯಾದ ಸೋಮವಾರಪೇಟೆ ಒಂದು ನಿದರ್ಶನವಾಗಿದೆ. ಈಗ ವಾರದ ಎಲ್ಲಾ ದಿನಗಳಲ್ಲೂ ಅಲ್ಲಿ ಪೇಟೆ ನಡೆಯುತ್ತಿದ್ದರೂ ಹೆಸರು ಮಾತ್ರ ಸೋಮವಾರಪೇಟೆ ಆಗಿಯೇ ಉಳಿದಿದೆ. ವಸ್ತುವಿನಿಮಯ ಪದ್ಧತಿಯ ಕಾಲದಲ್ಲಿ ಉದ್ಯೋಗ ಸೃಷ್ಟಿ, ಸಾರಿಗೆ ಅಭಿವೃದ್ಧಿ, ವ್ಯಾಪಾರ ಅಭಿವೃದ್ಧಿ - ತೆರಿಗೆ ಸಂಗ್ರಹಣೆ ಇತ್ಯಾದಿಗಳು ಅತಿ ಕನಿಷ್ಠ ಮಟ್ಟದಲ್ಲಿದ್ದವು. ಒಟ್ಟಿನಲ್ಲಿ ಆರ್ಥಿಕ ಪ್ರಗತಿ ಮಂದಗತಿಯಲ್ಲಿ ಸಾಗುತ್ತಿತ್ತು. ಸಾಟಿ ಪದ್ಧತಿಯು, ಕಾಲಾಂತರದಲ್ಲಿ ಕಡಿಮೆಯಾಗುತ್ತಾ ಲೋಹದ ಹಣದ ಸೃಷ್ಟಿಯಾಗಿ ವ್ಯಾಪಾರದಲ್ಲಿ ವಿನಿಮಯದ ಮಾಧ್ಯಮವಾಯಿತು.



**ಹಣದ ಅರ್ಥ** : ಹಣವು ಮಾನವನ ಪ್ರಮುಖ ಸಂಶೋಧನೆಗಳಲ್ಲಿ ಒಂದಾಗಿದೆ. ಭೌತಶಾಸ್ತ್ರದಲ್ಲಿ ಚಕ್ರ, ರಸಾಯನಶಾಸ್ತ್ರದಲ್ಲಿ ಬೆಂಕಿ / ವಿದ್ಯುತ್‌ಶಕ್ತಿ, ರಾಜ್ಯಶಾಸ್ತ್ರದಲ್ಲಿ ಓಟು ಹೇಗೆ ಪ್ರಮುಖ ಪಾತ್ರ ವಹಿಸುತ್ತಿವೆಯೋ ಹಾಗೆ ಅರ್ಥಶಾಸ್ತ್ರದಲ್ಲಿ ಹಣವು ಪ್ರಮುಖ ಪಾತ್ರ ವಹಿಸುತ್ತಿದೆ. ಅದು ಮಾನವರ ದಿನನಿತ್ಯದ ವ್ಯವಹಾರದ ಅವಿಭಾಜ್ಯ ಅಂಗವಾಗಿದೆ.

ಹಣದ ಅರ್ಥವನ್ನು ನೀಡುವುದು ಹಾಗೂ ಅದನ್ನು ವ್ಯಾಖ್ಯಾನಿಸುವುದು ಕಷ್ಟಕರವಾಗಿದೆ. ಕೆಲವು ವ್ಯಾಖ್ಯೆಗಳು ತುಂಬಾ ಸೂಕ್ಷ್ಮವು ಕೆಲವು ವ್ಯಾಖ್ಯೆಗಳು ತುಂಬಾ ವಿಶಾಲವು ಆಗಿರುತ್ತದೆ. ಹಣವು ಸಾಮಾನ್ಯವಾಗಿ ಸರ್ವರಿಂದ ಸ್ವೀಕರಿಸಲ್ಪಡುವ ವಿನಿಮಯದ ಸಾಧನವೆಂದು ಮನ್ನಿಸಲ್ಪಟ್ಟ ಯಾವುದೇ ವಸ್ತುವಾಗಿದೆ.

ಅನೇಕ ಅರ್ಥಶಾಸ್ತ್ರಜ್ಞರು ಹಣದ ವ್ಯಾಖ್ಯೆಯನ್ನು ತಮ್ಮದೇ ಆದ ಅಭಿಪ್ರಾಯಗಳಲ್ಲಿ ವ್ಯಕ್ತಪಡಿಸಿದ್ದಾರೆ.

೧. ಪ್ರಾನ್ಸಿಸ್ ಎ. ವಾಕರರು ಈ ರೀತಿ ಹೇಳಿದ್ದಾರೆ : "ಹಣದ ಕಾರ್ಯವನ್ನು ನಿರ್ವಹಿಸುವ ವಸ್ತುವೇ ಹಣ."

೨. ಡಿ.ಎಚ್. ರಾಬರ್ಟ್‌ಸನ್‌ರು ಹಣದ ವ್ಯಾಖ್ಯೆಯನ್ನು ಈ ರೀತಿ ಬರೆದಿದ್ದಾರೆ: "ವ್ಯಾಪಾರ, ವ್ಯವಹಾರಗಳಲ್ಲಿ ಯಾವುದನ್ನು ಎಲ್ಲರೂ ಸ್ವೀಕರಿಸುತ್ತಾರೋ ಅದೇ ಹಣ."

೩. ಪ್ರೊ. ಜೋಪ್ರಿ ಕ್ರೌಥರ್ ಈ ರೀತಿ ವ್ಯಕ್ತಪಡಿಸಿದ್ದಾರೆ : "ವಿನಿಮಯದ ಮಾಧ್ಯಮವಾಗಿ, ಸಾರ್ವತ್ರಿಕವಾಗಿ ಸ್ವೀಕೃತವಾಗುವ ಮತ್ತು ಅದೇ ಸಮಯದಲ್ಲಿ ಮೌಲ್ಯಮಾಪನದ ಸಾಧನವಾಗಿ ಹಾಗೂ ಮೌಲ್ಯ ಸಂಚಯವಾಗಿ ಕೆಲಸ ಮಾಡುವ ಯಾವುದೇ ವಸ್ತು ಹಣ."

೪. ಆರ್.ಪಿ. ಕೇಂಟ್ ಹಣ ಎಂದರೆ : "ಸಾಮಾನ್ಯವಾಗಿ ಬಳಸುವ ಹಾಗೂ ವಿನಿಮಯದ ಮಾಧ್ಯಮವಾಗಿ, ಸಾರ್ವತ್ರಿಕವಾಗಿ ಸ್ವೀಕೃತವಾದ ಅಥವಾ ಮೌಲ್ಯಮಾಪನದ ಸಾಧನವಾದ ಯಾವುದೇ ವಸ್ತು."

೫. ಜೆ.ಡಿ.ಎಚ್. ಕೋಲೆ ಹಣದ ಪ್ರಾಮುಖ್ಯತೆ ಏನೆಂದರೆ : "ಚಲಾವಣೆಯಲ್ಲಿ ಅದನ್ನು ಒಂದು ಕೈಯಿಂದ ಮತ್ತೊಂದು ಕೈಗೆ ವರ್ಗಾಯಿಸಬಹುದಾಗಿದೆ."

ಈ ಮೇಲಿನ ಎಲ್ಲಾ ವ್ಯಾಖ್ಯೆಗಳಲ್ಲಿ ಪ್ರೊ. ಕ್ರೋಥರವರ ವ್ಯಾಖ್ಯೆ ತುಂಬಾ ವಿಸ್ತೃತವಾದುದಾಗಿದೆ. ಏಕೆಂದರೆ, ಈ ವ್ಯಾಖ್ಯೆ ಹಣದ ಪ್ರಮುಖ ಮೂರು ಕಾರ್ಯಗಳನ್ನು ಸೂಚಿಸುತ್ತದೆ. ಅವುಗಳೆಂದರೆ ಹಣವು ವಿನಿಮಯದ ಮಾಧ್ಯಮವಾಗಿದೆ. ಮೌಲ್ಯಮಾಪನದ ಹಾಗೂ ಮೌಲ್ಯ ಸಂಗ್ರಹಣೆಯ ಸಾಧನವಾಗಿದೆ.

ಒಟ್ಟಿನಲ್ಲಿ ಹಣವೆಂದರೆ, ಕೇವಲ ನಾಣ್ಯಗಳು ಹಾಗೂ ಕರೆನ್ಸಿ ನೋಟುಗಳಲ್ಲದೆ,

ಚೆಕ್ಕುಗಳು, ಹುಂಡಿಪತ್ರಗಳು, ಟ್ರೇಝರಿ ಬಿಲ್ಲುಗಳು, ಡಿಮಾಂಡ್ ಡ್ರಾಫ್ಟ್‌ಗಳು, ಕ್ರೆಡಿಟ್ ಕಾರ್ಡ್‌ಗಳು, ಸ್ಮಾರ್ಟ್ ಕಾರ್ಡ್‌ಗಳು ಇತ್ಯಾದಿ ಒಳಗೊಂಡಿವೆ. ಏಕೆಂದರೆ ಅವು ಸಹ ಹಣದ ಕಾರ್ಯಗಳನ್ನು ಮಾಡುತ್ತವೆ.

ಕೊನೆಯದಾಗಿ, ಹಣವು ವಿನಿಮಯದ ಮಾಧ್ಯಮವಾಗಿ, ಮೌಲ್ಯಮಾಪನ, ಮೌಲ್ಯ ಸಂಚಯ ಹಾಗೂ ಲೇವಾದೇವಿಯ ಸಾಧನವಾಗಿ ಸರ್ವರೂ ಸ್ವೀಕರಿಸುವ ಯಾವುದೇ ವಸ್ತುವಾಗಿದೆ.

ಪ್ರಚಲಿತ ಜಗತ್ತಿನಲ್ಲಿ ಪ್ರತಿಯೊಂದು ದೇಶವೂ ನನ್ನದೇ ಆದ ಹಣವನ್ನು ಹೊಂದಿವೆ.

| ಅ.ಸಂ. | ದೇಶಗಳು | ಪ್ರಮುಖ ಹಣ | ಉಪ ಹಣ |
|---|---|---|---|
| ೧. | ಭಾರತ | ರೂಪಾಯಿ | ಪೈಸೆ |
| ೨. | ಅಮೇರಿಕಾ | ಡಾಲರ್ | ಸೆಂಟ್ಸ್ |
| ೩. | ಇಂಗ್ಲೆಂಡ್ | ಪೌಂಡ್ | ಪೆನ್ಸ್ |
| ೪. | ಯುರೋಪಿನ್ ಏಕನಾಮಿಕ್ ಕಮ್ಯುನಿಟಿ (ಇ.ಇ.ಸಿ) | ಯುರೋ ಡಾಲರ್ | ಅವರವರ ದೇಶದ ಉಪ ಹಣ |
| ೫. | ಜಪಾನ | ಯೆನ್ | ಸೆನ್ |
| ೬. | ರಷ್ಯಾ | ರುಬಲ್ | ಕೊಪೆಕ್ಸ್ |
| ೭. | ಚೈನಾ | ಯುವಾನ | ಪೆನ್ |
| ೮. | ಸೌದಿ ಅರೇಬಿಯಾ | ರಿಯಾಲ | ಹಲಾಲಸ್ |

## ಹಣದ ಕಾರ್ಯಗಳು

ಹಣವು ಆಧುನಿಕ ಅರ್ಥವ್ಯವಸ್ಥೆಯಲ್ಲಿ ಎಲ್ಲಾ ಆರ್ಥಿಕ ಚಟುವಟಿಕೆಗಳ ಕೇಂದ್ರ ಬಿಂದುವಾಗಿದೆ. ಹಣವು ಉಪಭೋಗವನ್ನು ಸರಳಗೊಳಿಸಿ, ಅದರ ಪ್ರಮಾಣವನ್ನು ಹೆಚ್ಚಿಸಿತು. ಅಧಿಕ ಉಪಭೋಗವು ಉತ್ಪಾದನೆಯನ್ನು ಹೆಚ್ಚಿಸಿತು. ಅಧಿಕ ಉತ್ಪಾದನೆಯು ವಿನಿಮಯ, ಸಾರಿಗೆ-ಸಂಪರ್ಕ, ಬ್ಯಾಂಕಿಂಗ್ ವ್ಯವಹಾರ, ದಾಸ್ತಾನು, ವಿಮೆಯನ್ನು ಅಧಿಕಗೊಳಿಸಿತು. ಈ ಎಲ್ಲವು ಕೂಡಿ ಉದ್ಯೋಗ, ರಾಷ್ಟ್ರೀಯ ಉತ್ಪಾದನೆ, ಸರ್ಕಾರದ ಆದಾಯವನ್ನು ಹೆಚ್ಚಿಸಿದವು. ಈ ರೀತಿಯಾಗಿ ಹಣವು ಸಮಗ್ರ ಆರ್ಥಿಕ ಚಟುವಟಿಕೆಗಳನ್ನು ತೀವ್ರವಾಗಿ ಅಧಿಕಗೊಳಿಸಿದೆ. ಆದ್ದರಿಂದ ಹಣವು ಮಾನವನ ಎಲ್ಲ ಆರ್ಥಿಕ ಚಟುವಟಿಕೆಗಳಾದ ಉಪಭೋಗ, ಉತ್ಪಾದನೆ, ವಿನಿಮಯ, ಹಂಚಿಕೆ ಹಾಗೂ ಸಾರ್ವಜನಿಕರ ಹಣಕಾಸು ಮುಂತಾದ ಚಟುವಟಿಕೆಗಳಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆ. ಅದೇ ರೀತಿ ಹಣವು ಉಳಿತಾಯ ಹಾಗೂ ಬಂಡವಾಳ ಹೂಡವಿಕೆಯಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತಿದೆ.

ಹಣವು ಅನೇಕ ಕಾರ್ಯಗಳನ್ನು ನಿರ್ವಹಿಸುತ್ತದೆ. ಈ ಕಾರ್ಯಗಳನ್ನು ಮೂರು ಪ್ರಕಾರಗಳಾಗಿ ವಿಂಗಡಿಸಬಹುದು.

೧. ಪ್ರಾಥಮಿಕ ಕಾರ್ಯಗಳು

೨. ದ್ವಿತೀಯ ಅಥವ ಸಹಾಯಕ ಕಾರ್ಯಗಳು

೩. ಅವಲಂಬಿ ಕಾರ್ಯಗಳು

### ೧. ಪ್ರಾಥಮಿಕ ಕಾರ್ಯಗಳು

ಹಣವು ಎಲ್ಲ ದೇಶಗಳಲ್ಲಿ ಎಲ್ಲ ಕಾಲಗಳಲ್ಲಿ ಹಾಗೂ ಎಲ್ಲ ಪರಿಸ್ಥಿತಿಗಳಲ್ಲಿ ಪ್ರಾಥಮಿಕ ಅಥವಾ ಮೂಲಭೂತ ಕಾರ್ಯಗಳನ್ನು ನಿರ್ವಹಿಸುತ್ತಿದೆ. ಪ್ರಾಥಮಿಕ ಕಾರ್ಯಗಳನ್ನು ಮತ್ತೆ ಎರಡು ವಿಧಗಳಾಗಿ ವಿಂಗಡಿಸಬಹುದು.

#### ಅ. ವಿನಿಮಯದ ಸಾಧನ

ಹಣವು ಮಾನವನ ದಿನನಿತ್ಯ ವ್ಯವಹಾರದಲ್ಲಿ ಮಾರಾಟ ಹಾಗೂ ಕೊಂಡುಕೊಳ್ಳುವಿಕೆ ಕಾರ್ಯದಲ್ಲಿ ಪ್ರಮುಖ ವಿನಿಮಯದ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತದೆ. ಪ್ರಚಲಿತ ಆರ್ಥಿಕ ಜೀವನದ ಎಲ್ಲ ಪ್ರಕಾರದ ವಿನಿಮಯವು ಹಣದ ಮಾಧ್ಯಮದಿಂದ ಸಾಗುತ್ತಿದೆ. ಉತ್ಪಾದಕರು ತಾವು ಉತ್ಪಾದಸಿದ ವಸ್ತುಗಳನ್ನು ಮಾರಾಟಗಾರರಿಗೆ ಹಣ ಪಡೆದು ಮಾರಾಟ ಮಾಡುವರು, ಮಾರಾಟಗಾರರು ಈ ವಸ್ತುಗಳನ್ನು ಗ್ರಾಹಕರಿಗೆ ಮಾರಿ ಹಣ ಪಡೆಯುವರು. ಶ್ರಮ ಜೀವಿಗಳು ತಮ್ಮ ಸೇವೆಗೆ ಪ್ರತಿಯಾಗಿ ಹಣ ಪಡೆದು ಈ ಹಣದಿಂದ ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವರು.

ಈ ರೀತಿಯಾಗಿ ಹಣವು ಮಾರಾಟಗಾರರಿಗೆ ಹಾಗೂ ಗ್ರಾಹಕರಿಗೆ ತಮಗೆ ಬೇಕಾದ ಪ್ರಮಾಣದಲ್ಲಿ ಹಾಗೂ ತಮಗೆ ಇಷ್ಟವಾದ ಗುಣಮಟ್ಟದ ವಸ್ತುಗಳನ್ನು ಮಾರಲು ಹಾಗೂ ಕೊಂಡುಕೊಳ್ಳಲು ಸಾಕಷ್ಟು ಪ್ರಮಾಣದ ಸ್ವಾತಂತ್ರ್ಯವನ್ನು ನೀಡಿದೆ.

ಹಣವು ಆರ್ಥಿಕ ಚಟುವಟಿಕೆಗಳನ್ನು ವೃದ್ಧಿಗೊಳಿಸಿ ಮಾನವನ ಜೀವನಮಟ್ಟವನ್ನು ಸುಧಾರಿಸಿ, ಆರ್ಥಿಕ ಅಭಿವೃದ್ಧಿಯನ್ನು ತೀವ್ರಗೊಳಿಸಿದೆ.

#### ಆ. ಮೌಲ್ಯಮಾಪನದ ಸಾಧನ

ಹಣವು ಎಲ್ಲ ವಸ್ತುಗಳ ಹಾಗೂ ಸೇವೆಗಳು ಮೌಲ್ಯವನ್ನು ಅಳೆಯುವ ಸಾಧನವಾಗಿದೆ. ವಸ್ತುಗಳ ಹಾಗೂ ಸೇವೆಗಳು ಮೌಲ್ಯವನ್ನು ಹಣದ ರೂಪದಲ್ಲಿ ವ್ಯಕ್ತಪಡಿಸುವುದೇ 'ಬೆಲೆ'. ದೂರವನ್ನು ಮೀಟರ್‌ಗಳಲ್ಲಿ, ತೂಕವನ್ನು ಕಿಲೋಗ್ರಾಮ್‌ಗಳಲ್ಲಿ, ದ್ರವವನ್ನು ಲೀಟರ್‌ಗಳಲ್ಲಿ ಹೇಗೆ ಅಳೆಯುತ್ತೇವೆಯೋ ಹಾಗೆ ವಸ್ತುಗಳ ಹಾಗೂ ಸೇವೆಗಳ ಮೌಲ್ಯ ವನ್ನು ಹಣದ ಮಾಧ್ಯಮದಿಂದ ಅಳೆಯುತ್ತೇವೆ. ಈ ರೀತಿಯಾದ ಮೌಲ್ಯ ಅಳತೆಯ ಬೆಲೆ ಪದ್ಧತಿಯಿಂದ ಸಂಪನ್ಮೂಲಗಳ ಸಮರ್ಪಕ ವಿತರಣೆಯಾಗುತ್ತದೆ. ಹಣದ ಈ ಕಾರ್ಯದಿಂದಲೇ ಆಧುನಿಕ ಜಗತ್ತಿನ ಎಲ್ಲ ವ್ಯವಹಾರಗಳು ಸುಗುಮವಾಗಿ ಸಾಗಿವೆ.

ಇದರಿಂದ ಉತ್ಪಾದನೆ, ಉದ್ಯೋಗ, ಆದಾಯ ಹೆಚ್ಚಿ ಮಾನವನ ಜೀವನಮಟ್ಟ ಹೆಚ್ಚಿದೆ.

ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಹಾಗೂ ಸಂಘಟನೆಗಳಿಗೆ ಪ್ರತಿಫಲವಾಗಿ ಗೇಣಿ, ಕೂಲಿ, ಬಡ್ಡಿ ಹಾಗೂ ಲಾಭವನ್ನು ಹಣದ ರೂಪದಲ್ಲಿ ನೀಡಲಾಗುತ್ತದೆ. ಇದನ್ನು ಅರ್ಥಶಾಸ್ತ್ರದಲ್ಲಿ 'ಹಂಚಿಕೆ' ಎನ್ನುತ್ತೇವೆ.

ಹಣದ ಈ ಕಾರ್ಯವು ಒಂದು ವಸ್ತುವನ್ನು ಮತ್ತೊಂದು ವಸ್ತುವಿನೊಂದಿಗೆ ಹೋಲಿಸಿ, ನಾವು ದಿನನಿತ್ಯ ವ್ಯವಹಾರದಲ್ಲಿ ನಿರ್ಧಾರ ತೆಗೆದುಕೊಳ್ಳಲು ಸಹಾಯಕಾರಿಯಾಗಿದೆ. ವಸ್ತುಗಳ ಮೌಲ್ಯ-ಬೆಲೆ, ಕಾಲಕ್ಕೆ ತಕ್ಕಂತೆ ಬದಲಾಗುತ್ತದೆ. ಅದು ಸ್ಥಗಿತವಾಗಿರುವುದಿಲ್ಲ.

**೨. ದ್ವಿತೀಯ ಕಾರ್ಯಗಳು**

ದ್ವಿತೀಯ ಅಥವಾ ಮಾಧ್ಯಮಿಕ ಕಾರ್ಯಗಳನ್ನು ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

**ಅ. ಲೇವಾದೇವಿಯ ಸಾಧನ :** ಸಾಟಿ ಪದ್ಧತಿಯಲ್ಲಿ ಲೇವಾದೇವಿ ವ್ಯವಹಾರಗಳಾದ ಸಾಲವಾಗಿ ಪಡೆಯುವುದು, ಸಾಲವಾಗಿ ಕೊಡುವುದು ತುಂಬಾ ತೊಂದರೆದಾಯಕವಾಗಿತ್ತು. ಆದರೆ, ಹಣದ ಸಂಶೋಧನೆ ಲೇವಾದೇವಿ ವ್ಯವಹಾರಗಳನ್ನು ಪರಿಪೂರ್ಣವಾಗಿ ಅಭಿವೃದ್ಧಿಗೊಳಿಸಿದೆ. ಈಗ ವಸ್ತುಗಳನ್ನು ಮುಂಗಡವಾಗಿ ಪಡೆದು, ಅದರ ಮೊತ್ತವನ್ನು ಕೆಲಕಾಲದ ನಂತರ ಅಥವಾ ಕಂತುಗಳಲ್ಲಿ ಹಣದಲ್ಲಿ ಕೊಡಬಹುದಾಗಿದೆ. ಉದಾ. ಟಿ.ವಿ., ಯಂತ್ರಗಳು, ವಾಹನಗಳು ಇತ್ಯಾದಿ.

ಹಣದ ಈ ಕಾರ್ಯದಿಂದ ವ್ಯಾಪಾರ ಹಾಗೂ ಬ್ಯಾಂಕಿಂಗ್ ವ್ಯವಹಾರ ಅಭಿವೃದ್ಧಿಗೊಂಡಿವೆ. ಅವು ದೇಶದ ಒಟ್ಟು ರಾಷ್ಟ್ರೀಯ ವರಮಾನದಲ್ಲಿ ಪ್ರಮುಖ ಪಾಲು ಹೊಂದಿವೆ.

**ಆ. ಮೌಲ್ಯ ಸಂಚಯ (ಉಳಿತಾಯ) :** ಅನಾದಿ ಕಾಲದಿಂದಲೂ ಮಾನವ ತನ್ನ ಭವಿಷ್ಯಕ್ಕಾಗಿ ಸಂಪತ್ತನ್ನು ಸಂಚಯ (ಉಳಿತಾಯ) ಮಾಡುತ್ತಾ ಬಂದಿದ್ದಾನೆ. ಆದರೆ ಕೆಲವು ವಸ್ತುಗಳನ್ನು ಉದಾ. ಆಹಾರಧಾನ್ಯ, ಬಟ್ಟೆ, ಪ್ರಾಣಿಗಳು, ಮುಂತಾದವುಗಳನ್ನು ಭವಿಷ್ಯಕ್ಕಾಗಿ ಸಂಗ್ರಹಿಸಿಡುವುದು ದೀರ್ಘಾವಧಿಯಲ್ಲಿ ತುಂಬಾ ತೊಂದರೆದಾಯಕವಾಗಿದೆ. ಅವು ಕಾಲಕ್ರಮೇಣ ತಮ್ಮ ತೃಷ್ಟಿಗುಣವನ್ನು ಕಳೆದುಕೊಳ್ಳುತ್ತದೆ. ದೀರ್ಘಾವಧಿಯಲ್ಲಿ ಅವುಗಳ ಮೌಲ್ಯ ನಶಸಿ ಹೋಗುತ್ತದೆ. ಆದರೆ ಹಣದ ಮೌಲ್ಯ ಹೆಚ್ಚಾಗಿ ಸ್ಥಿರವಾಗಿರುವುದರಿಂದ, ಅದು ಮೌಲ್ಯ ಸಂಚಯನದ ಪ್ರಮುಖ ಸಾಧನವಾಗಿದೆ. ಹಣವು ನಶಿಸುವುದಿಲ್ಲ. ಮೌಲ್ಯವನ್ನು ಹೆಚ್ಚಾಗಿ ಕಳೆದುಕೊಳ್ಳುವುದಿಲ್ಲ. ಅದು ಕೊಂಡುಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಹಣವು ಸರ್ವ ಸ್ವೀಕೃತವಾಗಿದ್ದು ಅಧಿಕ ತುಷ್ಟಿಗುಣವನ್ನು ಹೊಂದಿದೆ. ಅದು ತನ್ನ ಮೌಲ್ಯವನ್ನು ಬಹುಮಟ್ಟಿಗೆ ಸ್ಥಿರವಾಗಿ ಕಾಪಾಡಿಕೊಂಡಿದೆ,

ಸಾಗಿಸಲು ಸುಲಭವಾಗಿದೆ. ಆದ್ದರಿಂದ ಜನರು ತಮ್ಮ ಸಂಪತ್ತನ್ನು ಹಣದ ರೂಪದಲ್ಲಿ ಉಳಿತಾಯ ಮಾಡಲು ಇಚ್ಛಿಸುತ್ತಾರೆ. ಅವರು ಹಣವನ್ನು ಬ್ಯಾಂಕುಗಳಲ್ಲಿ ಹಾಗೂ ಹಣಕಾಸಿನ ಸಂಸ್ಥೆಗಳಲ್ಲಿ ಉಳಿತಾಯ ಮಾಡುತ್ತಾರೆ. ಹಣದ ಈ ಕಾರ್ಯದಿಂದ ಜಗತ್ತಿನಲ್ಲಿ ಬ್ಯಾಂಕ್ ಠೇವಣಿಗಳು, ಶೇರು ವ್ಯವಹಾರ, ವಿಮೆ ವ್ಯವಹಾರ, ಡಿಬೆಂಚರುಗಳು, ಕಾರ್ಮಿಕರ ಭವಿಷ್ಯ ನಿಧಿ ತೀವ್ರಗತಿಯಲ್ಲಿ ಹೆಚ್ಚಾಗುತ್ತಿದೆ.

**ಇ. ಮೌಲ್ಯದ ಸ್ಥಳಾಂತರ :** ಹಣರಹಿತ ಕಾಲದಲ್ಲಿ ಉಪಜೀವನಕ್ಕಾಗಿ ಕುಟುಂಬಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಲು ಇಷ್ಟ ಪಡುತ್ತಿರಲಿಲ್ಲ. ಏಕೆಂದರೆ ಒಂದು ಪ್ರದೇಶದಲ್ಲಿದ್ದ ಭೂಮಿ, ಕಟ್ಟಡ, ಸರಂಜಾಮುಗಳನ್ನು ಹಾಗೂ ಸ್ಥಿರಾಸ್ಥಿಗಳನ್ನು ಮಾರಾಟ ಮಾಡುವುದು ಬಹಳ ಕಠಿಣವಾಗಿತ್ತು. ಆದರೆ ಇಂದು ಯಾವುದೇ ವಸ್ತುವಿನ ಮೌಲ್ಯವನ್ನು ಹಣದ ಮಾಧ್ಯಮದಿಂದ ಸುಲಭವಾಗಿ ಸ್ಥಳಾಂತರಿಸಬಹುದು. ಒಂದು ಪ್ರದೇಶದಲ್ಲಿದ್ದ ಸ್ಥಿರಾಸ್ಥಿಯನ್ನು ಹಣಕ್ಕೆ ಮಾರಾಟಮಾಡಿ, ತಮಗಿಷ್ಟವಾದ ಪ್ರದೇಶದಲ್ಲಿ ತಮಗೆ ಬೇಕಾದ ಸ್ಥಿರಾಸ್ಥಿಯನ್ನು ಖರೀದಿಸಬಹುದಾಗಿದೆ. ಹಣದ ಈ ಕಾರ್ಯದಿಂದ ಜನರು ಹಾಗೂ ಕುಟುಂಬಗಳು ಗ್ರಾಮೀಣ ಪ್ರದೇಶದಿಂದ ಪಟ್ಟಣ ಪ್ರದೇಶಕ್ಕೆ ಹಾಗೂ ಪಟ್ಟಣದಿಂದ ಗ್ರಾಮೀಣ ಪ್ರದೇಶಕ್ಕೆ, ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ, ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವಲಸೆ ಹೋಗುವ ಪ್ರಮಾಣ ಅಧಿಕವಾಗಿದೆ. ಈ ರೀತಿಯಾಗಿ ಹಣವು ಸ್ಥಿರಾಸ್ಥಿಗಳ ಮೌಲ್ಯದ ಸ್ಥಳಾಂತರದ ಪ್ರಮುಖ ಸಾಧನವಾಗಿದೆ. ಇಂದು ಬ್ಯಾಂಕ್ ಚೆಕ್ಕುಗಳು ಹಾಗೂ ಡಿಮಾಂಡ್ ಡ್ರಾಫ್ಟ್‌ಗಳು ಈ ಹಣದ ಕಾರ್ಯವನ್ನು ತುಂಬಾ ಸರಳಗೊಳಿಸಿವೆ.

### ೩. ಅವಲಂಬಿ ಕಾರ್ಯಗಳು

ಹಣವು ಪ್ರಾಥಮಿಕ ಹಾಗೂ ಸಹಾಯಕ ಕಾರ್ಯಗಳ ಸಂಗಡ ಕೆಲವು ಅವಲಂಬಿ ಕಾರ್ಯಗಳನ್ನು ನಿರ್ವಹಿಸುತ್ತದೆ. ಡೆವಿಡ್ ಕಿನಲೇ ಅವರು ತಮ್ಮ ಪುಸ್ತಕದಲ್ಲಿ ಹಣವು ಕೆಲವು ಅವಲಂಬಿ ಕಾರ್ಯಗಳನ್ನು ನಿರ್ವಹಿಸುತ್ತದೆಂದು ತಿಳಿಸಿದ್ದಾರೆ. ಹಣದ ಈ ಕಾರ್ಯಗಳು ಆ ದೇಶದ ಆರ್ಥಿಕ ಜೀವನದ ಮಟ್ಟ ಹಾಗೂ ಆರ್ಥಿಕ ಅಭಿವೃದ್ಧಿ ಪ್ರಮಾಣದ ಮೇಲೆ ಅವಲಂಬಿತವಾಗಿದೆ.

**ಅ. ರಾಷ್ಟ್ರೀಯ ಆದಾಯದ ವಿತರಣೆ :** ಹಣವು ವಿವಿಧ ವಲಯಗಳಲ್ಲಿ ರಾಷ್ಟ್ರೀಯ ಆದಾಯವನ್ನು ಹಂಚಲು ಸಹಾಯಕಾರಿಯಾಗಿದೆ. ಭೂಮಿಗೆ ಗೇಣಿ, ಕಾರ್ಮಿಕರಿಗೆ ಕೂಲಿ, ಬಂಡವಾಳಕ್ಕೆ ಬಡ್ಡಿ, ಸಂಘಟಕನಾಕಾರರಿಗೆ ಲಾಭವನ್ನು ಹಣದಲ್ಲಿ ವಿತರಿಸಲಾಗುವುದು. ಈ ರೀತಿಯಾಗಿ ಹಣವು ರಾಷ್ಟ್ರೀಯ ಆದಾಯದ ಹಂಚಿಕೆಯನ್ನು ಸರಳಗೊಳಿಸಿದೆ. ಅರ್ಥಶಾಸ್ತ್ರದಲ್ಲಿ ಇದನ್ನು ಹಂಚಿಕೆ ಎನ್ನುತ್ತಾರೆ.

**ಆ. ಅಂಚಿನ ತುಷ್ಟಿಗುಣದ ಸಮಾನತೆ :** ಹಣವು ಜನರು ಮಾಡುವ ಪ್ರತಿ ರೂಪಾಯಿ ವೆಚ್ಚಕ್ಕೆ ಸಮಾನ ಅಂಚಿನ ತುಷ್ಟಿಗುಣ ದೊರಕಿಸಿಕೊಳ್ಳಲು ಸಹಾಯ ಮಾಡುತ್ತದೆ.

ಇದು ಪ್ರತಿ ರೂಪಾಯಿ ಖರ್ಚಿಗೆ ದೊರೆಯುವ ತುಷ್ಟಿಗುಣವನ್ನು ಅಳೆಯಲು ಸಹಾಯಕಾರಿಯಾಗಿದೆ. ಹಣವು ಅನುಭೋಗಿಗಳು ಹಾಗೂ ಉತ್ಪಾದಕರು ತಮ್ಮ ತುಷ್ಟಿಗುಣ ಹಾಗೂ ಲಾಭವನ್ನು ಗರಿಷ್ಠ ಮಟ್ಟಕ್ಕೆ ಹೆಚ್ಚಿಸಿಕೊಳ್ಳಲು ಸಹಾಯಕಾರಿಯಾಗಿದೆ. ಹಣದ ಮಾಧ್ಯಮದಿಂದ ವಸ್ತುಗಳ ಬೆಲೆ ಹಾಗೂ ಅವುಗಳ ಅಂಚಿನ ತುಷ್ಟಿಗುಣವನ್ನು ಪರಸ್ಪರ ಸಮಗೊಳಿಸಿಕೊಳ್ಳಲು ಸಾಧ್ಯವಿದೆ.

**ಇ. ಉದ್ದರಿಯ ಹಣಕ್ಕೆ ಮೂಲಾಧಾರ :** ಆಧುನಿಕ ಅರ್ಥವ್ಯವಸ್ಥೆಯಲ್ಲಿ ಬ್ಯಾಂಕುಗಳು ಹಾಗೂ ಹಣಕಾಸಿನ ಸಂಸ್ಥೆಗಳು ಸೃಷ್ಟಿಸುವ ಉದ್ದರಿ ಹಣದ ಪ್ರಮುಖ ಪಾತ್ರವಹಿಸುತ್ತದೆ. ಉದ್ದರಿಯ ಸೃಷ್ಟಿ ಕೇವಲ ಹಣದಿಂದ ಮಾತ್ರ ಸಾಧ್ಯವಿದೆ. ಉದ್ದರಿಯ ಹಣದ ಸೃಷ್ಟಿಯಿಂದ ಜಗತ್ತಿನ ಆರ್ಥಿಕ ಅಭಿವೃದ್ಧಿ ತೀವ್ರಗೊಂಡಿದೆ. ಉದ್ದರಿಯ ಹಣದ ಪೂರೈಕೆಯು ಹಣದ ಪೂರೈಕೆಯನ್ನು ಅವಲಂಬಿಸಿದೆ.

**ಈ. ಸಂಪತ್ತಿನ ದ್ರವ್ಯತೆ :** ವಿವಿಧ ಬಗೆಯ ಸಂಪತ್ತನ್ನು ಹಣಕ್ಕೆ ಸರಳವಾಗಿ ಪರಿವರ್ತಿಸಬಹುದಾಗಿದೆ. ಹೊಲ, ಮನೆ, ಶೇರುಗಳು, ಯಂತ್ರಗಳು, ಕಾರ್ಖಾನೆಗಳು ಹಾಗೂ ಇನ್ನಿತರ ಸಂಪತ್ತನ್ನು ಹಣಕ್ಕೆ ಪರಿವರ್ತಿಸುವುದರಿಂದ ಸಂಪತ್ತಿನ ದ್ರವ್ಯತೆ ಅಧಿಕಗೊಳ್ಳುವುದು. ಇದರಿಂದ ಹಣವು ಉತ್ಪಾದನಾ ಕ್ಷೇತ್ರದಲ್ಲಿ ತೊಡಗಿ, ಉತ್ಪಾದನೆಯನ್ನು ಗರಿಷ್ಠಗೊಳಿಸುತ್ತದೆ. ಈ ರೀತಿಯಾಗಿ ಹಣ ಅನೇಕ ಕಾರ್ಯಗಳನ್ನು ಮಾಡುತ್ತದೆ.

## ಹಣಕ್ಕೆ ಸಮೀಪದ ಸ್ವತ್ತುಗಳು

ಇಂದಿನ ಆಧುನಿಕ ಅರ್ಥವ್ಯವಸ್ಥೆಯಲ್ಲಿ ಸಮೀಪ ಹಣ ಪ್ರಮುಖ ಪಾತ್ರವಹಿಸುತ್ತದೆ. ಇದು ಬ್ಯಾಂಕು ಚೆಕ್ಕುಗಳು, ಡ್ರಾಫ್ಟಗಳು, ಹುಂಡಿಗಳು, ಪ್ರಾಮಿಸರಿ ನೋಟುಗಳು, ಟ್ರೇಝರಿ ಬಿಲ್ಲುಗಳನ್ನು ಒಳಗೊಂಡಿರುತ್ತದೆ. ಇವುಗಳ ಶಾಸನಬದ್ಧ ಹಣವಲ್ಲ. ಜನರು ಈ ರೂಪದ ಹಣವನ್ನು ನಂಬಿಕೆಯ ಮೇಲೆ ಸ್ವೀಕರಿಸುತ್ತಾರೆ. ಈ ರೀತಿಯ ಹಣವನ್ನು ಸಮೀಪ ಹಣ, ಬ್ಯಾಂಕು ಅಥವಾ ಪತ್ತಿನ ಹಣ, ಐಚ್ಛಿಕ ಹಣ ಎಂದು ಕರೆಯುತ್ತಾರೆ. ಇವುಗಳನ್ನು ಕಡ್ಡಾಯವಾಗಿ ಸ್ವೀಕಸಲೇಬೇಕೆಂಬ ನಿಯಮವಿಲ್ಲ.

ಸಮೀಪ ಹಣ ಇಂದು ದೇಶದ ಆರ್ಥಿಕ ವ್ಯವಹಾರದ ಜೀವಾಳುವಿದ್ದಂತೆ. ಅವುಗಳು ವ್ಯವಹಾರದಲ್ಲಿ ತುಂಬಾ ಅನುಕೂಲಕರವು, ಕಡಿಮೆ ವೆಚ್ಚದಾಯಕವು ಆಗಿದೆ. ಅವುಗಳು ಒಟ್ಟು ಉಪಭೋಗದ ಪ್ರಮಾಣವನ್ನು ಹೆಚ್ಚಿಸಿ, ಉತ್ಪಾದನೆ ಹಾಗೂ ಉದ್ಯೋಗ ಮಟ್ಟವನ್ನು ಹೆಚ್ಚಿಸಿವೆ. ಇವುಗಳಿಂದ ಮಾರುಕಟ್ಟೆ ವ್ಯವಹಾರ ಅಧಿಕ ಪ್ರಮಾಣದಲ್ಲಿ ಹೆಚ್ಚಿ ಉಳಿತಾಯ, ಬಂಡವಾಳ ಹೂಡುವಿಕೆ ಮತ್ತು ಬಂಡವಾಳ ರಚನೆಯ ಪ್ರಮಾಣವನ್ನು ಅಗಾಧ ಪ್ರಮಾಣದಲ್ಲಿ ಹೆಚ್ಚಿಸಿವೆ.

## ಚೆಕ್ಕುಗಳು

"ಚೆಕ್ಕುಗಳು ಎಂದರೆ, ಬ್ಯಾಂಕಿನಿಂದ ಹಣ ಪಡೆಯುವವನು, ಬೇಡಿದಾಗ ಹಣ

ನೀಡಲು ಬ್ಯಾಂಕಿಗೆ ಬರೆದ ಆಜ್ಞಾ ಪತ್ರವಾಗಿದೆ." ಇದು ಬ್ಯಾಂಕಿನಿಂದ ಹಣ ಪಡೆಯಲು ನಿರ್ದಿಷ್ಟ ಬ್ಯಾಂಕಿಗೆ, ನಿರ್ಧಿಷ್ಟ ಮೊತ್ತದ ಹಾಗೂ ನಿರ್ದಿಷ್ಟ ಸಮಯ ಹೊಂದಿದ ಒಂದು ಆಜ್ಞಾಪತ್ರವಾಗಿದೆ. ಚೆಕ್ಕುಗಳನ್ನು ಬ್ಯಾಂಕಿನಿಂದ ಹಣ ಪಡೆಯಲು ಅಥವಾ ಹಣ ಸಂದಾಯ ಮಾಡಲು ಬಳಿಸಲಾಗುತ್ತದೆ.

ಚೆಕ್ಕು ನೀಡುವ ವ್ಯಕ್ತಿ / ಸಂಘಟನೆ ಬ್ಯಾಂಕಿನಲ್ಲಿ ಖಾತೆಯನ್ನು ಹೊಂದಿರಬೇಕಾಗುತ್ತದೆ. ಅವರು ತಮ್ಮ ಖಾತೆಯಲ್ಲಿ ಕನಿಷ್ಠ ಮೊತ್ತ ರೂ. ೫೦೦.೦೦ ಮೀಸಲಾಗಿಡಬೇಕು. ಚೆಕ್ಕು ಬುಕ್ಕುಗಳು ಕೌಂಟರ್‌ಫೋಲ್ಸ್ ಹೊಂದಿದ ಅಥವಾ ವ್ಯಕ್ತಿಗೋ ಅಥವಾ ಸಂಘಟನೆಗೋ ಬರೆಯಬೇಕು. ಹಣ ಪಡೆಯುವ ಮೊತ್ತವನ್ನು ದಿನಾಂಕವನ್ನು ಬರೆದು ಸಹಿ ಮಾಡಬೇಕು.

**ಪ್ರಕಾರಗಳು**

ಚೆಕ್ಕುಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು.

೧. ಓಪನ್ ಚೆಕ್ಕುಗಳು

೨. ಕ್ರಾಸಡ್ ಚೆಕ್ಕುಗಳು

ಓಪನ್ ಚೆಕ್ಕುಗಳು ಬ್ಯಾಂಕಿನ ಖಾತೆಯಿಂದ ಮುಕ್ತವಾಗಿ ಹಣ ಪಡೆಯುವ ಚೆಕ್ಕುಗಳಾಗಿವೆ. ಕ್ರಾಸಡ್ ಚೆಕ್ಕುಗಳಿಗೆ ಎಡಬದಿಯಲ್ಲಿ ಎರಡು ರೇಖೆಗಳನ್ನು ಹಾಕಲಾಗುತ್ತದೆ. ಈ ರೀತಿಯ ಚೆಕ್ಕುಗಳು ನೀಡಿದ ವ್ಯಕ್ತಿಯ ಖಾತೆಯಿಂದ ಒಟ್ಟು ಚೆಕ್ಕನಲ್ಲಿ ಬರೆದ ಹಣದ ಮೊತ್ತವನ್ನು ಚೆಕ್ಕು ಪಡೆದ ವ್ಯಕ್ತಿಯ ಖಾತೆಗೆ ಜಮಾ ಆಗುತ್ತದೆ. ಅದೇ ರೀತಿ ಚೆಕ್ಕುಗಳನ್ನು ಸ್ವಂತ ಚೆಕ್ಕು ಅಥವಾ ಬೆರರ ಚೆಕ್ಕುಗಳು (ಬೇರೆಯವರಿಗೆ ನೀಡಿದ) ಎಂದು ವಿಂಗಡಿಸುತ್ತಾರೆ.

ಚೆಕ್ಕುಗಳ ಮೇಲೆ ಸಂಬಂಧಪಟ್ಟ ಬ್ಯಾಂಕುಗಳಿಂದ ಮಾಗನೇಟಿಕ ಇಂಕಿನಿಂದ ನಂಬರುಗಳನ್ನು ಮುದ್ರಿಸಲಾಗುತ್ತದೆ. ಹಾಗೂ ಚೆಕ್ಕು ಹೊಂದಿದ ವ್ಯಕ್ತಿಯ ಬ್ಯಾಂಕ ಖಾತೆಯ ನಂಬರನ್ನು ನಮೂದಿಸಲಾಗುತ್ತದೆ.

ಪ್ರಚಲಿತ ವ್ಯವಹಾರದಲ್ಲಿ ಚೆಕ್ಕುಗಳ ಬಳಕೆಯಲ್ಲಿ ಹೆಚ್ಚಳವಾಗಿದ್ದು, ಅವು ಹಣ ಸಂದಾಯದಲ್ಲಿ ತುಂಬಾ ಸುರಕ್ಷಿತವು ಹಾಗೂ ಅನುಕೂಲಕರವೂ ಆಗಿವೆ. ಇವು ದೊಡ್ಡ ಮೊತ್ತ ಸಾಗಿಸುವ, ಕಳೆದುಕೊಳ್ಳುವ ಹಾಗೂ ಕಳ್ಳತನವಾಗುವ ತೊಂದರೆಯನ್ನು ನೀಗಿಸುತ್ತದೆ.

ವಿಲೇವಾರಿಯಾಗದ ಚೆಕ್ಕುಗಳನ್ನು ರದ್ದು ಪಡಿಸುತ್ತಾರೆ. ಅವುಗಳನ್ನು ರದ್ದುಪಡಿಸುವ ಚೆಕ್ಕುಗಳು ಎಂದು ಕರೆಯುತ್ತಾರೆ. ಚೆಕ್ಕುಗಳನ್ನು ಒಪ್ಪಬೇಕಾದರೆ ಬ್ಯಾಂಕುಗಳು, ಚೆಕ್ಕು ನೀಡಿದ ವ್ಯಕ್ತಿಯ ಮಾದರಿ ಸಹಿಯನ್ನು ಪರೀಕ್ಷಿಸುತ್ತಾರೆ. ಖಾತೆಯಲ್ಲಿ ನಿರ್ದಿಷ್ಟ ಹಣ ವಿಲ್ಲದೆ ಚೆಕ್ಕು ನೀಡುವುದು ಶಿಕ್ಷಾರ್ಹವಾಗಿದೆ. ಚೆಕ್ಕುಬುಕ್‌ಗಳನ್ನು ಸುರಕ್ಷಿತವಾಗಿಟ್ಟು ಕೊಳ್ಳಬೇಕು. ಖಾಲಿ ಚೆಕ್ಕುಗಳನ್ನು ಸಹಿ ಮಾಡಿ ಅಸುರಕ್ಷಿತವಾಗಿಡುವುದು ತುಂಬಾ

ಅಪಾಯಕಾರಿಯಾಗಿದೆ. ಬ್ಯಾಂಕು ಖಾತೆಯಲ್ಲಿಯ ಒಟ್ಟು ಉಳಿದ ಹಣದ ಅಥವಾ ಜಮಾ ಆದ ಹಣದ ವಿವರ ಪಾಸುಬುಕ್ಕಿನಲ್ಲಿ ಬರೆಯುತ್ತಾರೆ ಅಥವಾ ಕಂಪ್ಯೂಟರ್‌ನಿಂದ ಪ್ರಿಂಟ್ ಮಾಡಿದ ವಿವರಣೆ ನೀಡುತ್ತಾರೆ.

**ಟ್ರಾವೆಲರ್ಸ್ ಚೆಕ್ಕುಗಳು**

ಟ್ರಾವೆಲರ್ಸ್/ಪ್ರಯಾಣಿಕರ ಚೆಕ್ಕುಗಳನ್ನು ಪ್ರಯಾಣಿಕರ ಅನುಕೂಲಕ್ಕಾಗಿ ಬ್ಯಾಂಕುಗಳು ವಿವಿಧ ಬೆಲೆಯ ಖಾಲಿ ಚೆಕ್ಕುಗಳನ್ನು ನೀಡುತ್ತವೆ. ಇದನ್ನು ಪಡೆಯುವವರು, ಬ್ಯಾಂಕಿನಿಂದ ತಮಗೆ ಬೇಕಾದ ಮೊತ್ತದ ಹಾಗೂ ವಿವಿಧ ಮುಖ ಬೆಲೆಯ ಚೆಕ್ಕುಗಳನ್ನು ಹಣ ನೀಡಿ ಪಡೆಯಬಹುದು. ಬ್ಯಾಂಕುಗಳು ಪ್ರಯಾಣಿಕರ ಚೆಕ್ಕು ನೀಡುವಾಗ ಚೆಕ್ಕುಗಳ ಮೇಲೆ ಪಡೆಯುವವನ ಸಹಿ ಪಡೆದು ನೀಡುತ್ತಾರೆ. ಚೆಕ್ಕು ಪಡೆದ ವ್ಯಕ್ತಿ ತಮಗೆ ಬೇಕಾದಾಗ ಪ್ರಮಾಣದ ಬೇರೆ ಬೇರೆ ನಗರಗಳಲ್ಲಿ / ಸ್ಥಳಗಳಲ್ಲಿ ಅವುಗಳನ್ನು ಯಾವುದೇ ಬ್ಯಾಂಕಿನಿಂದ ಸಹಿ ಮಾಡಿ ಹಣ ಪಡೆಯಬಹುದು. ಪ್ರಯಾಣಿಕರ ಚೆಕ್ಕುಗಳು ಕಳೆದುಹೋದರೆ ಬ್ಯಾಂಕಿಗೆ ಶೀಘ್ರವಾಗಿ ತಿಳಿಸಬೇಕು.

**ಟ್ರೇಝರಿ ಬಿಲ್ಲುಗಳು**

ಟ್ರೇಝರಿ ಬಿಲ್ಲುಗಳು ಸರ್ಕಾರ ಅಲ್ಪಾವಧಿಯ ಸಾಲ ಪಡೆಯುವ ಸಾಧನವಾಗಿದೆ. ಇದು ವಾಲ್ಟರ ಬೆಗೆ ಹಾಟ್‌ರ ಸಲಹೆ ಮೆರೆಗೆ ೧೮೭೭ರ ಕಾಯ್ದೆ ಪ್ರಕಾರ ಅಸ್ತಿತ್ವದಲ್ಲಿ ಬಂದಿತು. ಭಾರತದಲ್ಲಿ ಭಾರತೀಯ ರಿಝರ್ವ ಬ್ಯಾಂಕು (ಆರ್.ಬಿ.ಐ.) ೧೯೫೨ರಲ್ಲಿ ವೆಗುಲ ವರ್ಕಿಂಗ್ ಗ್ರೂಫ್ ಸಲಹೆ ಮೇರೆಗೆ ಬಿಲ್ಲು ಮಾರ್ಕೆಟ್ ಸ್ಕೀಮನ್ನು ಜಾರಿಯಲ್ಲಿ ತಂದಿತು.

ಸರ್ಕಾರ ಸಾಲ ಎತ್ತಲು ಟ್ರೇಝರಿ ಬಿಲ್ಲುಗಳನ್ನು ಬಳಸುತ್ತದೆ. ಕೇಂದ್ರ ಸರ್ಕಾರದ ಕೊರತೆಯ ಮುಂಗಡಪತ್ರವನ್ನು ಸರಿದೂಗಿಸಲು ಟ್ರೇಝರಿ ಬಿಲ್ಲುಗಳನ್ನು ಮಾರಲಾಗುತ್ತದೆ. ಇವುಗಳನ್ನು ಹೆಚ್ಚಾಗಿ ಭಾರತೀಯ ರಿಝರ್ವ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳು ಹಾಗೂ ರಾಜ್ಯ ಸರ್ಕಾರಗಳು ಕೊಂಡುಕೊಳ್ಳುತ್ತವೆ.

ಟ್ರೇಝರಿ ಬಿಲ್ಲುಗಳನ್ನು ತಾತ್ಕಾಲಿಕ ಟ್ರೇಝರಿ ಬಿಲ್ಲುಗಳು ಹಾಗೂ ಕಾಲಮಿತಿ ಟ್ರೇಝರಿ ಬಿಲ್ಲುಗಳೆಂದು ವಿಂಗಡಿಸುತ್ತಾರೆ. ಟ್ರೇಝರಿ ಬಿಲ್ಲುಗಳಲ್ಲಿ ೯೧ ದಿನದ, ೧೮೨ ದಿನದ ಹಾಗೂ ೩೬೪ ದಿನದ ಬಿಲ್ಲುಗಳಿವೆ. ಅವು ಭಾರತದ ಹಣದ ಪೇಟೆಯ ಸಾಧನವಾಗಿವೆ. ೯೧ ದಿನದ ಟ್ರೇಝರಿ ಬಿಲ್ಲುಗಳು ಅಲ್ಪಾವಧಿಗಾಗಿ ಹಣ ಸಂಗ್ರಹಿಸುವ ಸರ್ಕಾರದ ಸಾಂಪ್ರದಾಯಿಕ ಸಾಧನವಾಗಿದೆ. ಇದರಲ್ಲಿ ವಾಣಿಜ್ಯ ಬ್ಯಾಂಕುಗಳು ತಮ್ಮ ಹಣವನ್ನು ಹೂಡುತ್ತವೆ. ಸರ್ಕಾರ ಪ್ರತಿವಾರ ಹರಾಜಿನ ಮುಖಾಂತರ ಹಣ ಸಂಗ್ರಹಿಸುತ್ತದೆ. ಇದು ತುಂಬಾ ಲೋಕಪ್ರಿಯವಾಗಿದ್ದು, ಸರ್ಕಾರ ಇದರಿಂದ ಪ್ರತಿವರ್ಷ ಸುಮಾರು ರೂ. ೧೫,೦೦೦ ದಿಂದ ರೂ. ೧೬,೦೦೦ ಕೋಟಿ ಹಣ ಸಂಗ್ರಹಿಸುತ್ತದೆ.

೧೮೨ ದಿನದ ಟ್ರೇಝರಿ ಬಿಲ್ಲುಗಳು ವಿವಿಧ ಬಡ್ಡಿದರದ ಬಿಲ್ಲುಗಳಾಗಿದ್ದು, ಪ್ರತಿ ೧೫ ದಿನಕ್ಕೊಮ್ಮೆ ಅವುಗಳನ್ನು ಹರಾಜು ಮಾಡಲಾಗುತ್ತದೆ. ಅವುಗಳು ಅಧಿಕಮಟ್ಟದ ಚಲನಾಶಕ್ತಿ ಹೊಂದಿವೆ.

೩೬೪ ದಿನದ ಟ್ರೇಝರಿ ಬಿಲ್ಲುಗಳು ದೀರ್ಘಾವಧಿಯ ಬಿಲ್ಲುಗಳಾಗಿದ್ದು, ಬ್ಯಾಂಕುಗಳ ಹಾಗೂ ಹಣಕಾಸಿನ ಸಂಸ್ಥೆಗಳ ಪ್ರಮುಖ ಆಕರ್ಷಣೆ ಹೊಂದಿವೆ. ಇವುಗಳು ಬ್ಯಾಂಕು ಸಾಲುಗಳು ಹಾಗೂ ಬಂಡವಾಳ ಹೂಡುವಿಕೆಗಿಂತಲೂ ಶ್ರೇಷ್ಠವಾಗಿವೆ. ಏಕೆಂದರೆ ಇವುಗಳನ್ನು ಸಂದರ್ಭಕ್ಕೆ ತಕ್ಕಂತೆ ಸರಳವಾಗಿ ಚಲಾಯಿಸಬಹುದು. ಇವುಗಳು ಹಣದ ಪೇಟೆಯಲ್ಲಿ ಸರ್ಕಾರ ಸಾಲ ಎತ್ತುವ ಪ್ರಮುಖ ಸಾಧನವಾಗಿವೆ. ಪ್ರತಿ ೧೫ ದಿನಕ್ಕೊಮ್ಮೆ ಸರ್ಕಾರ ಈ ಬಿಲ್ಲುಗಳನ್ನು ಹಣದ ಪೇಟೆಯಲ್ಲಿ ಹರಾಜು ಪಡಿಸುತ್ತದೆ. ಈ ಬಿಲ್ಲುಗಳಿಂದ ಸರ್ಕಾರಕ್ಕೆ ಪ್ರತಿವರ್ಷ ಸುಮಾರು ರೂ. ೨೦,೦೦೦ ಕೋಟಿ ಸಂಗ್ರಹವಾಗುತ್ತದೆ.

೧೯೯೭ರಲ್ಲಿ ಭಾ.ರಿ. ಬ್ಯಾಂಕು ಮತ್ತೆರಡು ಟ್ರೇಝರಿ ಬಿಲ್ಲುಗಳನ್ನು ಜಾರಿಯಲ್ಲಿ ತಂದಿದೆ. ಅವುಗಳೆಂದರೆ ೧೪ ದಿನದ ಮಾಧ್ಯಮಿಕ ಟ್ರೇಝರಿ ಬಿಲ್ಲುಗಳು ಹಾಗೂ ೧೪ ದಿನದ ಟ್ರೇಝರಿ ಬಿಲ್ಲುಗಳು. ಇವುಗಳು ರಾಜ್ಯ ಸರ್ಕಾರದ ಹಾಗೂ ಅರ್ಥವ್ಯವಸ್ಥೆಯ ವಿವಿಧ ವಿಭಾಗಗಳ ಅವಶ್ಯಕತೆಗೆ ಸ್ಪಂದಿಸುವ ಅಲ್ಪಾವಧಿಯ ಬಿಲ್ಲುಗಳಾಗಿವೆ.

**ಕ್ರೆಡಿಟ್ ಕಾರ್ಡ್**

ಆಧುನಿಕ ಜಗತ್ತಿನಲ್ಲಿ ಹಣದಂತೆ ಕೆಲಸ ಮಾಡುವ ಹಲವು ಸಾಧನಗಳು ಆವಿಷ್ಕಾರಗೊಂಡಿವೆ. ಅವುಗಳಲ್ಲಿ ಕ್ರೆಡಿಟ್ ಕಾರ್ಡ್, ಡೆಬಿಟ್ ಕಾರ್ಡ್, ಸ್ಮಾರ್ಟ್ ಕಾರ್ಡ್, ಸಿಮ್ ಕಾರ್ಡ್‌ಗಳು, ಪೆಟ್ರ ಕಾರ್ಡ್‌ಗಳು ಹಾಗೂ ಸ್ಟೂಡೆಂಟ್ ಕಾರ್ಡ್‌ಗಳು ಪ್ರಮುಖವಾಗಿವೆ.

ಕ್ರೆಡಿಟ್ ಕಾರ್ಡ್‌ಗಳು ಅಥವಾ ಸ್ಮಾರ್ಟ್ ಕಾರ್ಡ್‌ಗಳು, ಮೆಗನೇಟಿಕ್ ಸ್ಟ್ರಿಪ್ ಅಥವಾ ಕಂಪ್ಯೂಟರ್ ಚಿಪ್ ಹೊಂದಿದ್ದು, ವಿದ್ಯುತ್ಕರಣಗಳ ರೂಪದಲ್ಲಿ ಮಾಹಿತಿ ಸಂಗ್ರಹಿಸಿಟ್ಟುಕೊಳ್ಳುವ ಸಾಮರ್ಥ್ಯ ಇದ್ದು, ವಿವಿಧ ಕೆಲಸಕಾರ್ಯಗಳಿಗೆ ಅಗತ್ಯವಾದ ಮಾಹಿತಿಯನ್ನು ಒದಗಿಸುತ್ತದೆ.

ಕ್ರೆಡಿಟ್ ಕಾರ್ಡ್‌ಗಳೂ / ಸ್ಮಾರ್ಟ್ ಕಾರ್ಡುಗಳು ಕಾರ್ಡುದಾರನ ಹೆಸರು, ವಿಳಾಸ, ಹೆಬ್ಬೆರಳಿನ ಗುರುತು, ಬ್ಯಾಕು ಖಾತೆ ನಂಬರ್, ಎ.ಟಿ.ಎಂ. ಬಳಿಸಲು ಪಾಸವರ್ಡ್ ಮತ್ತು ಇತರ ವಿದ್ಯುನ್ಮಾನಗಳನ್ನು ಒಳಗೊಂಡಿರುತ್ತದೆ.

ಈ ಕಾರ್ಡ್‌ಗಳನ್ನು ಬಳಸುವ ವಿವಿಧ ಕ್ಷೇತ್ರಗಳೆಂದರೆ, ಬ್ಯಾಂಕುಗಳು, ಹಣಕಾಸು, ಸೇವೆಗಳು, ಶಿಕ್ಷಣ, ಸರ್ಕಾರ, ಆರೋಗ್ಯ ರಕ್ಷಣೆ, ಚಿಲ್ಲರೆ ವ್ಯಾಪಾರ, ದೂರಸಂಪರ್ಕ, ಸಾರಿಗೆ, ಪ್ರವಾಸ ಇತ್ಯಾದಿ.

ಈ ಕಾರ್ಡ್‌ಗಳು ಕೈಯಲ್ಲಿ ಅಥವಾ ಜೇಬಿನಲ್ಲಿಟ್ಟುಕೊಳ್ಳಬಹುದಾಗಿದೆ. ಅವುಗಳು

ಅತಿ ಹೆಚ್ಚು ಸಂಗ್ರಹ ಸಾಮರ್ಥ್ಯ, ಬಹುಉಪಯೋಗಿ, ಅಂಕಿ-ಅಂಶಗಳ ಸುರಕ್ಷತೆ, ಸಮರ್ಥ ಆನ್‌ಲೈನ್, ಆಫ್‌ಲೈನ್ ವಿಶ್ಲೇಷಣೆ ಸಾಮರ್ಥ್ಯ ಹೊಂದಿರುತ್ತದೆ. ಇವು ತುಂಬಾ ಅನುಕೂಲಕರವೂ ಹಾಗೂ ಭರವಸೆದಾಯಕವು ಆಗಿದೆ. ಇವು ಪರಿಣಾಮಕಾರಿ ಹಣಕಾಸು ನಿರ್ವಹಣೆಗೆ ಸಹಾಯಕಾರಿಯಾಗಿವೆ. ಇವು ಕಾಗದರಹಿತ ವ್ಯವಹಾರಕ್ಕೆ ನಾಂದಿ ಹಾಡಿವೆ. ಇಲ್ಲಿ ವಂಚನೆ ವಿರಳವಾಗಿದೆ.

ಈ ಕ್ರೆಡಿಟ್ ಕಾರ್ಡ್‌ಗಳನ್ನು ಬ್ಯಾಂಕುಗಳು, ಕಂಪನಿಗಳೂ ನೀಡುತ್ತವೆ. ಈ ಕಾರ್ಡ್‌ಗಳನ್ನು ಸ್ವೀಕರಿಸುವ ಕಂಪನಿಗಳಲ್ಲಿ ಕಾರ್ಡ್‌ದಾರರು ವಸ್ತುಗಳನ್ನು ಕೊಳ್ಳಬಹುದಾಗಿದೆ. ಈ ಕಾರ್ಡ್‌ಗಳನ್ನು ಹೊಂದಬೇಕಾದರೆ, ವ್ಯಕ್ತಿಗಳು ಸರಿಯಾದ ಸಮಯಕ್ಕೆ ಹಣ ಸಂದಾಯ ಮಾಡುವ ವಿಶ್ವಾಸವನ್ನು ಹೊಂದಿರಬೇಕಾಗುತ್ತದೆ. ಕಾರ್ಡ್ ನೀಡಿದ ಬ್ಯಾಂಕು ಅಥವಾ ಕಂಪನಿ, ಕಾರ್ಡ್‌ದಾರ ಖರೀದಿಸಿದ ಬಿಲ್ಲುಗಳನ್ನು ಸಂಬಂಧಪಟ್ಟವರಿಗೆ ಸೇವಾಶುಲ್ಕವನ್ನು ಮುರಿದುಬಿಲ್ಲನ್ನು ಸಂದಾಯ ಮಾಡುತ್ತದೆ. ಕಾರ್ಡುದಾರರು ಪ್ರತಿ ತಿಂಗಳು ಬಿಲ್ಲುಗಳನ್ನು ಪಡೆಯುತ್ತಾರೆ. ವೀಸಾ, .ಮಾಸ್ಟರ್ ಕಾರ್ಡ್, ಅಮೆರಿಕನ್ ಎಕ್ಸ್‌ಪ್ರೆಸ್, ಎಸೆಸ್, ಕಾರ್ಡ್ ಆರ್ಟ್, ಸಿಂಗಾಪೂರ ಟೆಲಿಕಾಮ್ ಟೆಲಿಯಾ ಮೆಂಬಿಟೆಲ್, ಪ್ರಿಂಟ್ ಕಾರ್ಡ್, ಇಂಟರ್‌ನ್ಯಾಶನಲ್ ಸ್ಟೂಡೆಂಟ್ ಐಡೆಂಟಿಟಿ ಕಾರ್ಡ್ (ಐ.ಎಸ್.ಐ.ಸಿ.) ಇತ್ಯಾದಿಗಳು ಉತ್ತಮ ಉದಾಹರಣೆಗಳಾಗಿವೆ.

ಡೆಬಿಟ್ ಕಾರ್ಡ್‌ಗಳು ಸಹ ಕ್ರೆಡಿಟ್‌ಗಳಂತೆ ಇರುತ್ತವೆ. ಡೆಬಿಟ್ ಕಾರ್ಡ್‌ಗಳನ್ನು ಹೊಂದಿದ ವ್ಯಕ್ತಿ ಖರೀದಿಸಿದ ವಸ್ತುಗಳ ಬಿಲ್ಲನ್ನು ನೇರವಾಗಿ ಅವನ ಖಾತೆಯಿಂದ ವಜಾ ಮಾಡಲಾಗುತ್ತದೆ.

**ಎ.ಟಿ.ಎಮ್.**

ಎ.ಟಿ.ಎಮ್. ಎಂಬುದು ಕಂಪ್ಯೂಟರ್ ವಿಧಾನವನ್ನು ಹೊಂದಿದ ಆಧುನಿಕ ವಿದ್ಯುನ್ಮಾನ ಬ್ಯಾಂಕಿಂಗ್ ಪದ್ಧತಿಯಾಗಿದೆ. ವಿದ್ಯುನ್ಮಾನ ಹಣ ರವಾನೆಯು ಇ.ಟಿ.ಎಂ.ದ ಒಂದು ವಿಧಾನವಾಗಿದೆ. ಇವುಗಳನ್ನು ಬ್ಯಾಂಕುಗಳಲ್ಲಿ, ವಿಮಾನ ನಿಲ್ದಾಣಗಳಲ್ಲಿ, ಶಾಪಿಂಗ್ ಕೇಂದ್ರಗಳಲ್ಲಿ ಹಾಗೂ ಇತರ ದಟ್ಟನೆಯ ಸ್ಥಳಗಳಲ್ಲಿ ಸ್ಥಾಪಿಸಲಾಗುತ್ತದೆ.

ಎ.ಟಿ.ಎಮ್.ನಲ್ಲಿ ಗ್ರಾಹಕರು ಸ್ಪೆಸಿಯಲ್ ಕಾರ್ಡ್‌ನ್ನು ಯಂತ್ರದಲ್ಲಿ ಅಳವಡಿಸುತ್ತಾನೆ. ಅದರಲ್ಲಿಯ ಕೀಪ್ಯಾಡ್ ಬಳಸಿ ವೈಯಕ್ತಿಕ ಗುರುತಿನ ನಂಬರನ್ನು ಅದರಲ್ಲಿ ಸೇರಿಸುತ್ತಾನೆ. ಈ ಯಂತ್ರದಿಂದ ಗ್ರಾಹಕರು ಬ್ಯಾಂಕಿಂಗ್ ಸೇವೆಯನ್ನು ಸ್ವಂತ ನಡೆಸಿಕೊಳ್ಳುತ್ತಾರೆ. ಜನರು ಇದನ್ನು ಠೇವಣಿ ಹಣವನ್ನು ತನ್ನ ಖಾತೆಗೆ ಜಮಾ ಮಾಡಲು, ಖಾತೆಯಿಂದ ಮಿತವಾದ ಹಣ ಪಡೆಯಲು, ತನ್ನ ಖಾತೆಯಿಂದ ಬೇರೆ ಖಾತೆಗೆ ಹಣ ರವಾನಿಸಲು ಬಳಸಿಕೊಳ್ಳುತ್ತಾರೆ.

ಎ.ಟಿ.ಎಮ್. ಯಂತ್ರದಿಂದ ಜನರು ಬ್ಯಾಂಕು ಸೇವೆಯನ್ನು ದಿನದ ೨೪ ಗಂಟೆಗಳಲ್ಲಿಯೂ ಪಡೆಯಬಹುದಾಗಿದೆ.

## ೭.೨. ಹಣದ ಪೂರೈಕೆ

**ಅರ್ಥ :** ಒಂದು ನಿರ್ದಿಷ್ಟ ಅವಧಿಯಲ್ಲಿ ಒಂದು ರಾಷ್ಟ್ರದಲ್ಲಿ ಚಲಾವಣೆಯಲ್ಲಿರುವ ಹಣದ ಪ್ರಮಾಣವೇ ಹಣದ ಪೂರೈಕೆಯಾಗಿರುತ್ತದೆ. ಅದು ಸಾರ್ವಜನಿಕರಲ್ಲಿರುವ ಒಟ್ಟು ಹಣದ ಸಂಗ್ರಹವಾಗಿದೆ.

ಹಣದ ಪೂರೈಕೆಯು ಸಾರ್ವಜನಿಕರಲ್ಲಿ ಚಲಾವಣೆಯಲ್ಲಿರುವ ನೋಟುಗಳು ಹಾಗೂ ನಾಣ್ಯಗಳು, ಬ್ಯಾಂಕುಗಳು ವ್ಯವಹರಿಸುವ ನಗದು ಹಣ, ಬ್ಯಾಂಕುಗಳಲ್ಲಿರುವ ಠೇವಣಿಗಳು, ಕೇಂದ್ರ ಬ್ಯಾಂಕಿನಲ್ಲಿರುವ ಬ್ಯಾಂಕುಗಳ ಮೀಸಲು ಹಣ, ಪ್ರಯಾಣಿಕರ ಚೆಕ್ಕುಗಳು, ಅಂಚೆ ಇಲಾಖೆಯ ಠೇವಣಿಗಳು ಇತ್ಯಾದಿ ಒಳಗೊಂಡಿದೆ.

### ಅರ್ಥವ್ಯವಸ್ಥೆಯಲ್ಲಿ ಹಣದ ಪೂರೈಕೆಯ ಪಾತ್ರ

ಹಣದ ಪೂರೈಕೆ ಆರ್ಥಿಕ ಚಟುವಟಿಕೆಗಳ ಸ್ವರೂಪ ಹಾಗೂ ಪ್ರಮಾಣದ ಮೇಲೆ ಪ್ರಭಾವ ಬೀರುತ್ತದೆ. ಅದು ಮಾರುಕಟ್ಟೆ ವಿನಿಮಯ ಚಕ್ರದ ಆಧಾರವಾಗಿದೆ. ಅದು ಒಟ್ಟು ದೊಡ್ಡ ವೆಚ್ಚದ ಪ್ರಮಾಣ ಹಾಗೂ ಸಾರ್ವತ್ರಿಕ ಬೆಲೆ ಪ್ರಮಾಣದ ಮೇಲೆ ಪ್ರಭಾವ ಬೀರುತ್ತದೆ.

ಹಣದ ಪೂರೈಕೆ ಹಾಗೂ ಬೆಲೆಗಳ ನಡುವೆ ನೇರ ಸಂಬಂಧವಿರುತ್ತದೆ. ಐರವಿಂಗ್ ಫಿಷ್‌ರ ಅಭಿಪ್ರಾಯದಂತೆ ಹಣದ ಪ್ರಮಾಣ ಹಾಗೂ ಬೆಲೆಗಳ ನಡುವಿನ ಸಂಬಂಧ ಒಂದೇ ದಿಕ್ಕಿನಲ್ಲಿ ಚಲಿಸುತ್ತವೆ. ಹಣದ ಪೂರೈಕೆ ಎರಡು ಚಲಗಳನ್ನು ಹೊಂದಿದೆ. ಅವು ಯಾವುವೆಂದರೆ ಹಣದ ಗಾತ್ರ (M) ಹಾಗೂ ಹಣದ ಚಲಾವಣೆಯ ವೇಗ (V). ಆದ್ದರಿಂದ ಹಣದ ಪೂರೈಕೆಯು MVನಿಂದಾ ನಿರ್ಧರಿಸಲ್ಪಡುತ್ತದೆ. ಹಣದ ಮೌಲ್ಯವು ಇತರ ವಸ್ತುಗಳ ಮೌಲ್ಯದಂತೆ ಹಣದ ಬೇಡಿಕೆ ಹಾಗೂ ಹಣದ ಪೂರೈಕೆಗಳ ಸಮತೋಲನದಿಂದ ನಿರ್ಧರಿಸಲ್ಪಡುತ್ತದೆ.

ಹಣದ ಪೂರೈಕೆಯು ಬೇಡಿಕೆಯ ಮಟ್ಟಕ್ಕಿಂತ ಅಧಿಕವಾದರೆ, ವೆಚ್ಚದ ಪ್ರಮಾಣ ಅಧಿಕವಾಗಿ, ಬೆಲೆಗಳ ಮಟ್ಟ ಅಧಿಕವಾಗುತ್ತದೆ. ಅದೇ ರೀತಿ ಹಣದ ಪೂರೈಕೆಯು ಬೇಡಿಕೆಯ ಪ್ರಮಾಣಕ್ಕಿಂತ ಕಡಿಮೆಯಾದರೆ, ವೆಚ್ಚದ ಪ್ರಮಾಣ ಕಡಿಮೆಯಾಗಿ ಬೆಲೆಗಳ ಮಟ್ಟ ಕಡಿಮೆಯಾಗುತ್ತದೆ. ಹಣದ ಪೂರೈಕೆ ಹಾಗೂ ಬೇಡಿಕೆಗಳು ಸಮನಾದಾಗ ವೆಚ್ಚದ ಪ್ರಮಾಣ ಹಾಗೂ ಬೆಲೆಗಳ ಮಟ್ಟದಲ್ಲಿ ಸಮತೋಲನ ಕಂಡುಬರುತ್ತದೆ.

ಹಣದ ಪೂರೈಕೆಯ ಅಧ್ಯಯನದಿಂದ ಆರ್ಥಿಕ ಸ್ಥಿರತೆ ಕಾಪಾಡಲು ಅನುಕೂಲವಾಗಿದೆ. ಇದರ ಅಧ್ಯಯನದಿಂದ ಬೆಲೆಗಳ ಏರಿಳಿತಗಳ ನಿಯಂತ್ರಣ ಸಾಧ್ಯವಿದೆ. ವಾಸ್ತವಿಕ ಕಾರಣಗಳಿಗಾಗಿ ಹಾಗೂ ವಿಮರ್ಶಾತ್ಮಕ ಕಾರಣಗಳಿಗಾಗಿ ಹಣವನ್ನು ಸಂಖ್ಯಾತ್ಮಕವಾಗಿ ಅಳತೆ ಮಾಡುವುದು ಅವಶ್ಯಕವಾಗಿದೆ. ಹಣದ ಪೂರೈಕೆ ಒಳಗೊಂಡ ಅನೇಕ ಅಂಶಗಳನ್ನು ವಿಮರ್ಶೆ ಮಾಡುವುದು ಆರ್ಥಿಕ ನಿಯಂತ್ರಣ ಹಾಗೂ ಅಭಿವೃದ್ಧಿಗೆ

ಅವಶ್ಯಕವಾಗಿದೆ.

ಗುರಲೇ ಹಾಗೂ ಷಾರವರ ಪ್ರಕಾರ ಸಮೀಪ ಹಣದ ಅಂಶಗಳಾದ ಬಾಂಡುಗಳು, ಸರ್ಕಾರಿ ಸೆಕ್ಯೂರಿಟಿಗಳು, ಸಾಲ ಪತ್ರಗಳು, ಇಕ್ವಿಟ್ ಶೇರುಗಳು ಹಾಗೂ ಇತರ ಹಣಕಾಸಿನ ಮಧ್ಯಮಗಳನ್ನು ಹಣದ ಪೂರೈಕೆಯು ಒಳಗೊಂಡಿವೆ.

ಸರ್ಕಾರ, ಕೇಂದ್ರ ಬ್ಯಾಂಕು, ಟ್ರೇಝುರಿಗಳು, ವಾಣಿಜ್ಯ ಬ್ಯಾಂಕುಗಳು, ಶೇರು ಪೇಟೆ, ಹಣದ ಪೂರೈಕೆಯಲ್ಲಿ ಪ್ರಮುಖಪಾತ್ರ ವಹಿಸುತ್ತವೆ. ಹಣದ ಪೂರೈಕೆಯಲ್ಲಿ ಏರುಪೇರಾಗಿ ಬೆಲೆಗಳು ಹೆಚ್ಚು ಕಡಿಮೆಯಾದರೆ ಯಾರ ಪಾತ್ರ ಎಷ್ಟು ಎಂದು ತಿಳಿಸಲು, ಕ್ರಮಕೈಕೊಳ್ಳಲು ಇದರ ಅಧ್ಯಯನ ಅವಶ್ಯಕವಾಗಿದೆ.

ಹಣದ ಪೂರೈಕೆಯನ್ನು ಅಭ್ಯಸಿಸಲು, ಹಣವನ್ನು ಎರಡು ವಿಧಗಳಾಗಿ ವಿಂಗಡಿಸುತ್ತಾರೆ. ಅವುಗಳೆಂದರೆ ಸೀಮಿತ ಹಣ ಹಾಗೂ ವಿಸ್ತೃತ ಹಣ.

## ಹಣದ ಪೂರೈಕೆಯ ಪ್ರಕಾರಗಳು

ಹಣದ ಪೂರೈಕೆಯ ಪ್ರಮಾಣವು ಸಾರ್ವಜನಿಕರಲ್ಲಿ ಒಟ್ಟು ಹಣದ ಪ್ರಮಾಣವಾಗಿದೆ. ಇದು ಜನರು ವ್ಯವಹರಿಸಲು ಬಿಲ್ಲುಗಳನ್ನು ನೀಡಲು, ಸಾಲ ಮರುಪಾವತಿಸಲು, ಉಪಯೋಗಿಸುವ ಒಟ್ಟು ಹಣದ ಪ್ರಮಾಣವಾಗಿದೆ. ರೆಡ್‌ಕ್ಲೀಪ್ ಕಮಿಟಿಯ (೧೯೫೯) ಪ್ರಕಾರ "ಹಣದ ಪೂರೈಕೆ ಎಂದರೆ ಖರ್ಚು ಮಾಡಲು ನಿರ್ಧರಿಸುವ ದ್ರವ್ಯತೆಯನ್ನು ಹೊಂದಿದ ಸಮಗ್ರ ವ್ಯವಸ್ಥೆಯಾಗಿದೆ." ದ್ರವ್ಯತೆಯು ಯಾವುದೇ ವಿಳಂಬವಿಲ್ಲದೆ, ತೊಂದರೆಯಿಲ್ಲದೆ, ಮೌಲ್ಯದ ಹಾನಿಯಿಲ್ಲದೆ, ವಿನಿಮಯದಲ್ಲಿ ಬಳಿಸಲು ಬರುವಂತಹ, ಪರಿವರ್ತಿಸುವ ಒಂದು ಸ್ವತ್ತಿನ ಸಾಮರ್ಥ್ಯವಾಗಿದೆ. ದ್ರವ್ಯತೆಯನ್ನು ಹೊಂದಿದ ಸ್ವತ್ತುಗಳು ವ್ಯವಹಾರದಲ್ಲಿ ತೀರ್ವವಾಗಿ ಬಳಕೆಯಾಗುತ್ತವೆ.

ನೋಟುಗಳು, ನಾಣ್ಯಗಳು ಹಾಗೂ ಚಾಲ್ತಿ ಠೇವಣಿಗಳು ಹೆಚ್ಚು ದ್ರವ್ಯತೆಯನ್ನು ಹೊಂದಿವೆ. ಅದೇ ರೀತಿಯಾಗಿ ಸಮೀಪ ಹಣದ ವಾಣಿಜ್ಯ ಬ್ಯಾಂಕುಗಳ ಉಳಿತಾಯ ಠೇವಣಿಗಳು, ಅಂಚೆ ಉಳಿತಾಯ ಠೇವಣಿಗಳು, ಬ್ಯಾಂಕೇತರ ಹಣಕಾಸಿನ ಸಂಸ್ಥೆಗಳ ಉಳಿತಾಯ ಠೇವಣಿಗಳು, ಅಲ್ಪಾವಧಿ ಸರ್ಕಾರಿ ಬಿಲ್ಲುಗಳು, ಸರ್ಕಾರಿ ಸೆಕ್ಯೂರಿಟಿಸ್‌ಗಳು ಇತ್ಯಾದಿಗಳು ದ್ರವ್ಯತೆಗೆ ಸಮೀಪವಾಗಿವೆ. ಏಕೆಂದರೆ ಅವುಗಳನ್ನು ಸರಳವಾಗಿ ಹಣವಾಗಿ ಪರಿವರ್ತಿಸಬಹುದಾಗಿದೆ. ಆದ್ದರಿಂದ ಪ್ರೊ.ಎಲ್.ವಿ. ಚಾಂಡಲರ್‌ರವರು ಸಮೀಪ ಹಣದ ಲಭ್ಯತೆಯು ಹಣದ ಬಳಕೆಯ ಪ್ರವೃತ್ತಿಯ ಮೇಲೆ ಪರಿಣಾಮ ಬೀರಬಹುದಾಗಿದೆ ಎಂದು ಹೇಳಿದ್ದಾರೆ.

ಹಣದ ಸಂಗ್ರಹಣೆಯಲ್ಲಿ ಜನರಲ್ಲಿರುವ ಒಟ್ಟು ಹಣ ಹಾಗೂ ಜನರಲ್ಲಿರುವ ಒಟ್ಟು ಹಣದ ಸ್ವತ್ತುಗಳು / ಸಂಪನ್ಮೂಲಗಳು ಒಳಗೊಂಡಿದೆ. ಹಣದ ಪೂರೈಕೆಯನ್ನು ಎರಡು ಪ್ರಕಾರಗಳನ್ನು ವಿಂಗಡಿಸಲಾಗಿದೆ. ಅವುಗಳಾದವೆಂದರೆ ಸೀಮಿತ ಹಣ ಹಾಗೂ ವಿಶಾಲ ಹಣ.

## ೧. ಸೀಮಿತ ಹಣ

ಸೀಮಿತ ಹಣವನ್ನು "ಸಾಮಾನ್ಯ ಹಣ"ವೆಂದು ಕರೆಯುತ್ತಾರೆ. ಸೀಮಿತ ಹಣವು ಜನರಲ್ಲಿರುವ ಅತ್ಯಧಿಕ ದ್ರವ್ಯತೆಯನ್ನು ಹೊಂದಿದ ನೋಟುಗಳು, ರೂಪಾಯಿ ನಾಣ್ಯಗಳು, ಚಿಲ್ಲರೆ ನಾಣ್ಯಗಳು, ಬ್ಯಾಂಕುಗಳ ಚಾಲ್ತಿ ಠೇವಣಿಗಳು ಹಾಗೂ ಕೇಂದ್ರ ಬ್ಯಾಂಕ್ (ಆರ್.ಬಿ.ಐ.)ನಲ್ಲಿರುವ ಇತರ ಠೇವಣಿಗಳು ಉದಾ. ಭಾರತೀಯ ರಿಝರ್ವ ಬ್ಯಾಂಕಿನ (ಆರ್.ಬಿ.ಐ.) ಠೇವಣಿಗಳನ್ನು ಒಳಗೊಂಡಿರುತ್ತದೆ. ಅಮೇರಿಕಾದಲ್ಲಿ ಪ್ರಯಾಣಿಕರ ಚೆಕ್ಕುಗಳನ್ನು ಈ ಗುಂಪಿಗೆ ಸೇರಿಸುತ್ತಾರೆ.

ಸಾರ್ವಜನಿಕರಲ್ಲಿರುವ ಸೀಮಿತ ಹಣ($M_1$)ವನ್ನು ಭಾರತದಲ್ಲಿ ಈ ರೀತಿಯಾಗಿ ವಿಂಗಡಿಸುತ್ತಾರೆ. ಅವು ಯಾವುವೆಂದರೆ ಜನರಲ್ಲಿರುವ ಕರೆನ್ಸಿ ಹಣ ಹಾಗೂ ಠೇವಣಿ ಹಣ.

ಅ. ಜನರಲ್ಲಿರುವ ಕರೆನ್ಸಿ ಹಣ (೧ + ೨ + ೩ + ೪)

೧. ಚಲಾವಣೆಯಲ್ಲಿರುವ ನೋಟುಗಳು

೨. ಚಲಾವಣೆಯಲ್ಲಿರುವ ರೂಪಾಯಿ ನಾಣ್ಯಗಳು

೩. ಚಲಾವಣೆಯಲ್ಲಿರುವ ಚಿಲ್ಲರೆ ನಾಣ್ಯಗಳು

೪. ಬ್ಯಾಂಕುಗಳ ಬಳಿಯಲ್ಲಿರುವ ನಗದುಹಣ

ಆ. ಜನರಲ್ಲಿರುವ ಠೇವಣಿ ಹಣ

೧. ಬ್ಯಾಂಕುಗಳ ಚಾಲ್ತಿ ಠೇವಣಿಗಳು

೨. ಭಾರತೀಯ ರಿಸರ್ವ ಬ್ಯಾಂಕಿನ ಇತರ ಠೇವಣಿಗಳು

ಸೀಮಿತ ಹಣವನ್ನು ಸಂಕ್ಷಿಪ್ತವಾಗಿ ಈ ರೀತಿ ಹೇಳಬಹುದು.

M1 = [ಅ (೧+೨+೩+೪) + ಆ (೧+೨)]

ಇವುಗಳ ವಿವರಣೆ ಈ ರೀತಿಯಾಗಿದೆ.

### ಅ. ಜನರಲ್ಲಿರುವ ಕರೆನ್ಸಿ ಹಣ

ಜನರಲ್ಲಿರುವ ಕರೆನ್ಸಿ ಹಣವು ಚಲಾವಣೆಯಲ್ಲಿರುವ ನೋಟುಗಳು, ರೂಪಾಯಿ ನಾಣ್ಯಗಳು, ಚಿಲ್ಲರೆ ನಾಣ್ಯಗಳು ಒಳಗೊಂಡಿರುತ್ತವೆ.

**೧. ಚಲಾವಣೆಯಲ್ಲಿರುವ ನೋಟುಗಳು** : ಭಾರತದಲ್ಲಿ ಚಲಾವಣೆಯಲ್ಲಿರುವ ನೋಟುಗಳಲ್ಲಿ ರೂ. ೫, ೧೦, ೨೦, ೫೦, ೧೦೦, ೫೦೦ ಹಾಗೂ ೧೦೦೦ ಮುಖಬೆಲೆಯ ನೋಟುಗಳು ಚಲಾವಣೆಯಲ್ಲಿವೆ. ಇವುಗಳನ್ನು ಭಾ.ರೀ. ಬ್ಯಾಂಕು ಮುದ್ರಿಸುತ್ತದೆ. ಇವು ಕಾನೂನುಬದ್ಧ ಹಣವಾಗಿದ್ದು ಸಾರ್ವಜನಿಕರಿಂದ ವಿನಿಮಯದ ಮಾಧ್ಯಮವಾಗಿ ಅಧಿಕ ಸ್ವೀಕೃತಿಯನ್ನು ಹೊಂದಿವೆ. ಆದ್ದರಿಂದ ಇವು ಅಧಿಕ ಪ್ರಮಾಣದಲ್ಲಿ ವ್ಯವಹಾರದಲ್ಲಿ ಚಲಾವಣೆಯಲ್ಲಿರುತ್ತವೆ. ಭಾ.ರಿ. ಬ್ಯಾಂಕಿನ ವರದಿಯ

ಪ್ರಕಾರ ೧೯೯೯-೨೦೦೦ರಲ್ಲಿ ಭಾರತದಲ್ಲಿ ರೂ.೧,೮೯,೩೨೦ ಕೋಟಿ ಮೊತ್ತದ ನೋಟುಗಳು ಚಲಾವಣೆಯಲ್ಲಿವೆ ಎಂದು ತಿಳಿಯುತ್ತದೆ.

೨. **ಚಲಾವಣೆಯಲ್ಲಿರುವ ರೂಪಾಯಿ ನಾಣ್ಯಗಳು** : ಭಾರತದಲ್ಲಿ ಚಲಾವಣೆಯಲ್ಲಿರುವ ರೂಪಾಯಿ ನಾಣ್ಯಗಳಲ್ಲಿ ರೂ. ೧, ೨, ೫ ಒಳಗೊಂಡಿವೆ. ಇವು ನಿಕ್ಕಲ ಲೋಹದ ಹಣವಾಗಿದೆ. ಇವು ಅಮಿತವಾದ ಕಾನೂನುಬದ್ಧ ಹಣವಾಗಿದೆ. ಇವು ಚಿಲ್ಲರೆ ವ್ಯಾಪಾರದಲ್ಲಿ ಬಳಕೆಯಲ್ಲಿದ್ದು, ಅಧಿಕ ಮಟ್ಟದ ಚಲಾವಣೆಯನ್ನು ಹೊಂದಿದೆ. ಇವುಗಳನ್ನು ಭಾರತ ಸರ್ಕಾರದ ಹಣಕಾಸಿನ ಇಲಾಖೆ ಮುದ್ರಿಸುತ್ತದೆ. ಭಾ.ರಿ. ಬ್ಯಾಂಕಿನ ವರದಿ ಪ್ರಕಾರ ೧೯೯೯-೨೦೦೦ರಲ್ಲಿ ಭಾರತದಲ್ಲಿ ರೂ. ೩,೦೩೦ ಕೋಟಿ ಮೌಲ್ಯದ ರೂಪಾಯಿ ನಾಣ್ಯಗಳು ಚಲಾವಣೆಯಲ್ಲಿದ್ದವು ಎಂದು ತಿಳಿಯುತ್ತದೆ.

೩. **ಚಲಾವಣೆಯಲ್ಲಿರುವ ಚಿಲ್ಲರೆ ನಾಣ್ಯಗಳು** : ಭಾರತದಲ್ಲಿ ಚಿಲ್ಲರೆ ಹಣದಲ್ಲಿ ೧೦, ೨೫, ೫೦ ಪೈಸೆ ನಾಣ್ಯಗಳು ಚಲಾವಣೆಯಲ್ಲಿವೆ. ಇವು ಮಿತವಾದ ಕಾನೂನುಬದ್ಧ ಹಣವಾಗಿದೆ. ಇವುಗಳನ್ನು ನಿಕ್ಕಲ ಲೋಹದಿಂದ ಭಾರತ ಸರ್ಕಾರದ ಹಣಕಾಸಿನ ಇಲಾಖೆ ಮುದ್ರಿಸುತ್ತದೆ. ಭಾ.ರಿ. ಬ್ಯಾಂಕಿನ ವರದಿಯ ಪ್ರಕಾರ ೧೯೯೯-೨೦೦೦ರಲ್ಲಿ ಬ್ಯಾಂಕುಗಳ ನಗದು ಹಣದ ಪ್ರಮಾಣ ರೂ. ೭,೩೬೦ ಕೋಟಿ ಇತ್ತೆಂದು ತಿಳಿಯುತ್ತದೆ.

## ಆ. ಜನರಲ್ಲಿರುವ ಠೇವಣಿ ಹಣ

ಜನರಲ್ಲಿರುವ ಠೇವಣಿ ಹಣ ಎರಡು ವಿಧಗಳಾಗಿ ವಿಂಗಡಿಸಲಾಗುವುದು. ಅವುಗಳೆಂದರೆ ಬ್ಯಾಂಕುಗಳಲ್ಲಿರುವ ಚಾಲ್ತಿ ಠೇವಣಿಗಳು ಹಾಗೂ ಭಾ.ರಿ. ಬ್ಯಾಂಕಿನಲ್ಲಿರುವ ಇತರ ಠೇವಣಿಗಳು.

೧. **ಬ್ಯಾಂಕುಗಳ ಚಾಲ್ತಿ ಠೇವಣಿಗಳು** : ವ್ಯಾಪಾರಿಗಳು ಹಾಗೂ ಸಂಸ್ಥೆಗಳು ತಮ್ಮ ದೈನಂದಿನ ವ್ಯವಹಾರಕ್ಕಾಗಿ ಬ್ಯಾಂಕುಗಳಲ್ಲಿ ಅಧಿಕ ಪ್ರಮಾಣ ಹಣವನ್ನು ಠೇವಣಿಯಾಗಿಡುತ್ತಾರೆ. ಅವರು ಈ ಠೇವಣಿ ಹಣವನ್ನು ತಮ್ಮ ದಿನನಿತ್ಯದ ವ್ಯಾಪಾರಕ್ಕೆ ಉಪಯೋಗಿಸುತ್ತಾರೆ. ಈ ಠೇವಣಿಗಳಲ್ಲಿ ಹಣ ಜಮಾಯಿಸಲು ಹಾಗೂ ಮರಳಿ ಪಡೆಯಲು ನಿರ್ಬಂಧಗಳಿರುವುದಿಲ್ಲ. ಬ್ಯಾಂಕುಗಳು ಈ ಠೇವಣಿದಾರರ ಅನುಕೂಲಕ್ಕಾಗಿ ನಗದು ಹಣವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಈ ಠೇವಣಿ ಮೇಲೆ ಬ್ಯಾಂಕುಗಳು ಬಡ್ಡಿ ನೀಡುವುದಿಲ್ಲ. ಭಾ.ರಿ. ಬ್ಯಾಂಕಿನ ವರದಿ ಪ್ರಕಾರ ೧೯೯೯-೨೦೦೦ರಲ್ಲಿ ಬ್ಯಾಂಕುಗಳ ಚಾಲ್ತಿ ಠೇವಣಿಯಲ್ಲಿ ರೂ. ೧,೪೭,೩೫೦ ಕೋಟಿ ಹಣವಿತ್ತೆಂದು ತಿಳಿಯುತ್ತದೆ. ಈ ಚಾಲ್ತಿ ಹಣಕ್ಕಾಗಿ ಜನರು ಡಿಮಾಂಡ್ ಡ್ರಾಫ್ಟ್ ಹಾಗೂ ಚೆಕ್ಕುಗಳನ್ನು ಬಳಸುತ್ತಾರೆ.

೨. **ಭಾರತೀಯ ರಿಝರ್ವ ಬ್ಯಾಂಕಿನ ಇತರ ಠೇವಣಿಗಳು** : ಭಾ.ರಿ. ಬ್ಯಾಂಕು ಎರಡು ಪ್ರಕಾರದ ಠೇವಣಿ ಹಣವನ್ನು ಹೊಂದಿರುತ್ತದೆ. ಒಂದು ಭಾ.ರಿ. ಬ್ಯಾಂಕಿನಲ್ಲಿ ವಾಣಿಜ್ಯ

ಬ್ಯಾಂಕುಗಳ ಇಟ್ಟ ಠೇವಣಿಗಳು ಹಾಗೂ ಕೆಲವು ವಿಶೇಷ ವ್ಯಕ್ತಿಗಳ ಠೇವಣಿಗಳು (ಭಾ.ರಿ. ಬ್ಯಾಂಕಿನ ಮಾಜಿ ಗವರ್ನರ್‌ಗಳ ಠೇವಣಿಗಳು) ಭಾ.ರಿ. ಬ್ಯಾಂಕಿನ ವರದಿಯ ಪ್ರಕಾರ ೧೯೯೯-೨೦೦೦ರಲ್ಲಿ ಇತರ ಠೇವಣಿಗಳಲ್ಲಿ ರೂ. ೩,೧೧೦ ಕೋಟಿ ಹಣ ವಿತ್ತೆಂದು ತಿಳಿಯುತ್ತದೆ.

ಸೀಮಿತ (ಸಾಮಾನ್ಯ) ಹಣದ ಪೂರೈಕೆಯಲ್ಲಿ ಪ್ರಥಮ ಸ್ಥಾನವನ್ನು ಚಲಾವಣೆಯಲ್ಲಿರುವ ನೋಟುಗಳು ಹೊಂದಿದ್ದರೆ ದ್ವಿತೀಯ ಸ್ಥಾನವನ್ನು ಬ್ಯಾಂಕುಗಳ ಬೇಡಿಕೆಯ ಠೇವಣಿಗಳು ಹೊಂದಿವೆ. ಸಾಮಾನ್ಯ ಹಣ($M_1$) ದ ಒಟ್ಟು ಮೊತ್ತ ೧೯೯೯-೨೦೦೦ರಲ್ಲಿ ರೂ. ೩,೪೩,೬೮೦ ಕೋಟಿ ಇತ್ತೆಂದು ಭಾ.ರಿ. ಬ್ಯಾಂಕಿನ ವರದಿ ತಿಳಿಸುತ್ತದೆ.

ಸಾಮಾನ್ಯ ಹಣ ಅಥವಾ ಸೀಮಿತ ಹಣದ ಪಟ್ಟಿ ಹಾಗೂ ಪೈ ಚಿತ್ರವನ್ನು ಈ ರೀತಿಯಾಗಿ ತಯಾರಿಸಬಹುದು.

**ಸೀಮಿತ ಹಣ ($M_1$)ದ ಪಟ್ಟಿ**

| ಕ್ರ.ಸಂ. | ವಿವರಗಳು | ಒಟ್ಟು ಹಣದ ಪೂರೈಕೆ | ಶೇಕಡ |
|---|---|---|---|
| ೧. | ಚಲಾವಣೆಯಲ್ಲಿರುವ ನೋಟುಗಳು | ೧,೮೯,೩೨೦ | ೫೫.೦೪ |
| ೨. | ಚಲಾವಣೆಯಲ್ಲಿರುವ ರೂಪಾಯಿ ನಾಣ್ಯಗಳು | ೩,೦೩೦ | ೦.೮೮ |
| ೩. | ಚಲಾವಣೆಯಲ್ಲಿರುವ ಚಿಲ್ಲರೆ ನಾಣ್ಯಗಳು | ೧,೧೭೦ | ೦.೩೪ |
| ೪. | ಬ್ಯಾಂಕುಗಳ ಚಾಲ್ತಿ ಠೇವಣಿಗಳು | ೧,೪೭,೩೫೦ | ೪೨.೮೪ |
| ೫. | ಭಾ.ರಿ. ಬ್ಯಾಂಕಿನ ಇತರ ಠೇವಣಿಗಳು | ೩,೧೧೦ | ೦.೯೦ |
| ೬. | ಒಟ್ಟು ಹಣದ ಪೂರೈಕೆ | ೩,೪೩,೯೮೦ | ೧೦೦.೦೦ |

**ಸೀಮಿತ ಹಣದ ಪೈ ಚಿತ್ರ**



## ವಿಸ್ತೃತ ಹಣ

ವಿಸ್ತೃತ ಹಣ ಎಂದರೆ ಜನರಲ್ಲಿರುವ ಸಮಗ್ರ ಹಣದ ಪ್ರಮಾಣವಾಗಿದೆ. ಭಾರತೀಯ ರಿಝರ್ವ್ ಬ್ಯಾಂಕು ಸಾಮಾನ್ಯ ಹಣ($M_1$)ಕ್ಕಿಂತಲೂ ವಿಶಾಲ ಹಣ ($M_3$) ಹೆಚ್ಚು ಮಹತ್ವ ನೀಡುತ್ತದೆ. ಇದನ್ನು ಶಕ್ತಿಶಾಲಿ ಹಣ ಎಂದು ಕರೆಯುವುದುಂಟು. ವಿಶಾಲ ಹಣ ($M_3$) ಪ್ರಮಾಣವು ಸಾಮಾನ್ಯ ಹಣ ($M_1$)ಕ್ಕಿಂತ ನಾಲ್ಕು ಪಟ್ಟು ಅಧಿಕವಾಗಿರುತ್ತದೆ. ವಿಶಾಲ ಹಣದಲ್ಲಿ ಸಾಮಾನ್ಯ ಹಣದ ಅಂಶಗಳಾದ ಜನರಲ್ಲಿರುವ ಕೆರೆನ್ಸಿ ಹಣ, ಚಲಾವಣೆಯಲ್ಲಿರುವ ನೋಟುಗಳು, ರೂಪಾಯಿಗಳು ನಾಣ್ಯಗಳು ಚಿಲ್ಲರೆ ನಾಣ್ಯಗಳು ಹಾಗೂ ಜನರಲ್ಲಿರುವ ಠೇವಣಿ ಹಣವಾದ ಬ್ಯಾಂಕುಗಳ ಬೇಡಿಕೆಯ ಠೇವಣಿಗಳು ಹಾಗೂ ಭಾ.ರಿ. ಬ್ಯಾಂಕಿನ ಇತರ ಠೇವಣಿಗಳು ಇರುತ್ತದೆ. ಇದಲ್ಲದೆ ವಿಶಾಲ ಹಣ ($M_3$) ಬ್ಯಾಂಕಿನಲ್ಲಿರುವ ಮುದ್ದತ್ತು ಠೇವಣಿಗಳನ್ನು ಒಳಗೊಂಡಿವೆ.

ವಿಸ್ತೃತ ಹಣ ದರ ಸಮೀಕರಣವು ಈ ರೀತಿ ಇರುತ್ತದೆ.

$M_3 = M_1 +$ ಬ್ಯಾಂಕಿನಲ್ಲಿರುವ ಜನರ ಮುದ್ದತ್ತು ಠೇವಣಿಗಳು

ಭಾ.ರಿ.ಬ್ಯಾಂಕಿನ ವರದಿಯ ಪ್ರಕಾರ, ವಿಶಾಲ ಹಣ($M_3$)ವು ಒಳಗೊಂಡ ಅಂಶಗಳು ಈ ಕೆಳಗಿನಂತಿವೆ.

ಅ. ಜನರಲ್ಲಿರುವ ಕರೆನ್ಸಿ ಹಣ

೧. ಚಲಾವಣೆಯಲ್ಲಿರುವ ನೋಟುಗಳು

೨. ಚಲಾವಣೆಯಲ್ಲಿರುವ ರೂಪಾಯಿ ನಾಣ್ಯಗಳು

೩. ಚಲಾವಣೆಯಲ್ಲಿರುವ ಚಿಲ್ಲರೆ ನಾಣ್ಯಗಳು

ಆ. ಜನರಲ್ಲಿರುವ ಠೇವಣಿ ಹಣ

೧. ಬ್ಯಾಂಕುಗಳ ಬೇಡಿಕೆಯ ಠೇವಣಿಗಳು

೨. ಭಾರತೀಯ ರಿಝರ್ವ ಬ್ಯಾಂಕಿನ ಇತರ ಠೇವಣಿಗಳು

ಇ. ಬ್ಯಾಂಕಿನಲ್ಲಿರುವ ಜನರ ಮುದ್ದತ್ತು ಠೇವಣಿಗಳು

ಭಾರತೀಯ ರಿಝರ್ವ ಬ್ಯಾಂಕಿನ ವರದಿ ಪ್ರಕಾರ ೧೯೯೯-೨೦೦೦ರಲ್ಲಿ ವಿಶಾಲ ಹಣ $M_3$ ದ ಪ್ರಮಾಣ ರೂ. ೧೧,೧೧,೭೧೦ ಕೋಟಿ ಇತ್ತು ಎಂದು ತಿಳಿಯುತ್ತದೆ.

ಮುದ್ದತ್ತು ಠೇವಣಿ ಹಣ ಬಡ್ಡಿ ಗಳಿಸುವ ಠೇವಣಿಗಳಾದರೂ ಇವತ್ತಿನ ಕಾಲದಲ್ಲಿ ಬ್ಯಾಂಕುಗಳ ಸರಳೀಕರಣದ ನೀತಿಯಿಂದಾಗಿ ಸಂಪೂರ್ಣ ಪ್ರಮಾಣದ ಪರಿವರ್ತನೀಯ ವಾಗಿವೆ. ಆದ್ದರಿಂದ ಈ ಠೇವಣಿಗಳ ದ್ರವ್ಯತೆಯ ಪ್ರಮಾಣ ಅಧಿಕವಾಗಿದೆ. ಭಾ.ರಿ. ಬ್ಯಾಂಕಿನ ವರದಿ ಪ್ರಕಾರ ೧೯೯೯-೨೦೦೦ರಲ್ಲಿ ಮುದ್ದತ್ತು ಠೇವಣಿಗಳು ರೂ. ೭,೭೧,೯೩೦ ಕೋಟಿ ಇತ್ತು ಎಂದು ತಿಳಿಯುತ್ತದೆ. ಇದು ಸಾಮಾನ್ಯ ಹಣ ($M_1$)ಕ್ಕಿಂತ ಎರಡು ಪಟ್ಟು ಅಧಿಕವಾಗಿದೆ.

೧. ಪೋಸ್ಟ್ ಆಫೀಸಿನ ಉಳಿತಾಯ ಬ್ಯಾಂಕು ಠೇವಣಿಗಳು.

೨. ಪರಿಸ್ಪರ ನಿಧಿ

೩. ಒಟ್ಟು ಪೋಸ್ಟ್ ಆಫೀಸಿನ ಠೇವಣಿಗಳು

೪. ಬ್ಯಾಂಕೇತರ ಹಣಕಾಸಿನ ಸಂಸ್ಥೆಗಳ ಠೇವಣಿಗಳು

ಇವು ಸಹ ಹಣದ ಪೂರೈಕೆಯ ಮೇಲೆ ಅಧಿಕ ಪ್ರಭಾವ ಬೀರುವ ಸಮೀಪ ಹಣವಾಗಿವೆ. ಇವುಗಳಲ್ಲಿ ಬ್ಯಾಂಕೇತರ ಹಣಕಾಸಿನ ಸಂಸ್ಥೆಗಳ ಠೇವಣಿ ಹಣ ೧೯೯೭ರಲ್ಲಿ ರೂ. ೩,೫೭,೧೫೦ ಕೋಟಿ ಇತ್ತೆಂದು ತಿಳಿಯುತ್ತದೆ. ಅಂದರೆ ಇವು ಬೇಡಿಕೆ ಠೇವಣಿಯ ಅರ್ಧದಷ್ಟು ಪ್ರಮಾಣವನ್ನು ಹೊಂದಿವೆ. ಆದರೆ ಭಾ.ರಿ. ಬ್ಯಾಂಕು ಕೇವಲ $M_1$ ಹಾಗೂ $M_3$ ಮಾತ್ರ ಹಣ ಪೂರೈಕೆಯಲ್ಲಿ ಪರಿಗಣಿಸುತ್ತದೆ.

ಇದಲ್ಲದೆ ಭಾ.ರಿ. ಬ್ಯಾಂಕು ಹಣದ ಪ್ರಮಾಣದಲ್ಲಿ $M_2 = M_1 +$ ಪೋಸ್ಟ್ ಆಫೀಸಿನ ಉಳಿತಾಯ ಠೇವಣಿಗಳು, $M_4 = M_3 +$ ಒಟ್ಟು ಪೋಸ್ಟ್ ಆಫೀಸಿನ ಠೇವಣಿಗಳು ಎಂದು ವಿಭಜಿಸುತ್ತದೆ. ಆದರೆ $M_1$ ಹಾಗೂ $M_3$ ಹಣದ ಪೂರೈಕೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಆದ್ದರಿಂದ ಅವುಗಳಿಗೆ ಸಾಮಾನ್ಯ ಹಣ ಹಾಗೂ ವಿಶಾಲ ಹಣ ಎಂದು ಕರೆಯಲಾಗುತ್ತದೆ.

**$M_3$ ವಿಶಾಲ ಹಣದ ಪಟ್ಟಿ ಹಾಗೂ ಪೈ ಚಿತ್ರ**

| ಕ್ರ.ಸಂ. | $M_3$ದ ಘಟಕಗಳು | ಒಟ್ಟು ಅಧಿಕ ಪೂರೈಕೆ |
|---|---|---|
| ೧. | ಸಂಕುಚಿತ ಹಣ | ೩,೩೯,೭೮೦ (ಶೇ.೩೦.೫೬) |
| ೨. | ಮುದ್ದತ್ತು ಠೇವಣಿಗಳು | ೭,೭೧,೯೩೦ (ಶೇ.೬೯.೪೪) |
| | ಒಟ್ಟು | ೧೧,೧೧,೭೧೦ |

**ವಿಶಾಲ ಹಣದ ಚಿತ್ರ**



## ವಾಣಿಜ್ಯ ಬ್ಯಾಂಕುಗಳ ಪತ್ತು ನಿರ್ಮಾಣ-ಹಣದ ಪೂರೈಕೆಯ ಮೂಲ

ಪತ್ತಿನ ನಿರ್ಮಾಣ ಎಂದರೆ, ಬ್ಯಾಂಕುಗಳು ಸಾಲ ಹಣವನ್ನು ಸೃಷ್ಠಿ ಮಾಡುವುದಾಗಿದೆ. ಬ್ಯಾಂಕುಗಳನ್ನು ಪತ್ತಿನ ನಿರ್ಮಾಣದ (ಸಾಲ ಹಣ ಸೃಷ್ಟಿಸುವ) ಕಾರ್ಖಾನೆಗಳೆಂದು ಕರೆಯುತ್ತಾರೆ. ಬ್ಯಾಂಕುಗಳ ಸಾಲ ಹಣದ ಸೃಷ್ಟಿಯಿಂದ ಹಣದ ಪೂರೈಕೆ ಅಧಿಕವಾಗಿ, ಬೆಲೆಗಳ ಮೇಲೆ ಅಧಿಕ ಪ್ರಭಾವ ಉಂಟಾಗುತ್ತದೆ. ಭಾರತೀಯ ರಿಸರ್ವ ಬ್ಯಾಂಕು (ಕೇಂದ್ರ ಬ್ಯಾಂಕು) ಹಣವನ್ನು ನಿರ್ಮಿಸಿದರೆ, ವಾಣಿಜ್ಯ ಬ್ಯಾಂಕುಗಳ ಸಾಲ ಹಣವನ್ನು ನಿರ್ಮಿಸುತ್ತವೆ. ಬ್ಯಾಂಕುಗಳ ಪತ್ತಿನ ನಿರ್ಮಾಣದ ಬಗ್ಗೆ ಅರ್ಥಶಾಸ್ತ್ರಜ್ಞರು ಈ ರೀತಿಯಾಗಿ ಹೇಳಿದ್ದಾರೆ.

ಸೇಯರ್ಸ್ : "ಬ್ಯಾಂಕುಗಳು ಕೇವಲ ಹಣದ ಸಂರಕ್ಷರಲ್ಲ. ಆದರೆ ಬಹುಮುಖ್ಯವಾದ ಅರ್ಥದಲ್ಲಿ ಅವು ಹಣಸೃಷ್ಟಿ ಮಾಡುವ ಸಂಸ್ಥೆಗಳಾಗಿವೆ."

ಡಾ. ವಾಲ್ಟರ್ ಲೀಪ್ : "ಸಾರ್ವಜನಿಕರು ತೆಗೆದುಕೊಳ್ಳದೆ ಬಿಟ್ಟಿರುವ ಠೇವಣಿಗಳ ನಿಧಿಯಿಂದ ಬ್ಯಾಂಕುಗಳು ಸಾಲ ರೂಪದ ಹಣ ನಿರ್ಮಿಸುತ್ತವೆ."

ಬ್ಯಾಂಕುಗಳ ಪತ್ತು ಹಣದ ಸೃಷ್ಟಿಗೆ ಬ್ಯಾಂಕುಗಳ ಠೇವಣಿಗಳು ಮೂಲವಾಗಿವೆ. ಬ್ಯಾಂಕುಗಳ ಪತ್ತು ಹಣ ಸೃಷ್ಟಿಸಲು ಕಾರಣವೇನೆಂದರೆ ಎಲ್ಲ ಬ್ಯಾಂಕುಗಳ ಗ್ರಾಹಕರು ಒಂದೇ ಸಮಯದಲ್ಲಿ ತಮ್ಮ ಠೇವಣಿ ಹಣವನ್ನು ಮರುಪಾವತಿಸುವುದಿಲ್ಲ (ವಾಪಸ್ಸು ಪಡೆಯುವುದಿಲ್ಲ) ಕೆಲವು ಗ್ರಾಹಕರು (ಖಾತೆದಾರರು) ತಮ್ಮ ಖಾತೆಯಿಂದ ಠೇವಣಿ ಹಣವನ್ನು ಚೆಕ್ ಮೂಲಕ ವಾಪಸು ಪಡೆಯುತ್ತಾರೆ. ಕೆಲವು ಖಾತೆದಾರರು ತಮ್ಮ ಖಾತೆಯಲ್ಲಿ ಹಣವನ್ನು ಜಮೆ ಮಾಡುತ್ತಾರೆ. ಸಾಮಾನ್ಯ ಪರಿಸ್ಥಿತಿಯಲ್ಲಿ ಗ್ರಾಹಕರು ಖಾತೆಯಿಂದ ಹಣ ವಾಪಸ್ಸು ಪಡೆಯುವ ಪ್ರಮಾಣವು ಗ್ರಾಹಕರ ಠೇವಣಿ ಪ್ರಮಾಣಕ್ಕಿಂತ ಕಡಿಮೆ ಇರುತ್ತದೆ. ಈ ರೀತಿಯಾಗಿ ಇದು ದೀರ್ಘಾವಧಿಯಲ್ಲಿ ಬ್ಯಾಂಕುಗಳಿಗೆ ಪತ್ತು ನಿರ್ಮಾಣ ಮಾಡಲು ಸಹಾಯಕಾರಿಯಾಗಿದೆ.

ಜನರು ಹೆಚ್ಚಾಗಿ ಬ್ಯಾಂಕು ಬಡ್ಡಿದರದ ಆಕರ್ಷಣೆಯಿಂದ ತಮ್ಮ ಖಾತೆಯಲ್ಲಿಯ ಹಣವನ್ನು ದುಡಿತಕ್ಕೆ ಹಚ್ಚುತ್ತಾರೆ. ಬೇಡಿಕೆಯ ಠೇವಣಿ ಖಾತೆದಾರರು ಕನಿಷ್ಠ ಠೇವಣಿ ರೂ. ೫೦೦.೦೦ (ಚೆಕ್ ಬುಕ್ ಹೊಂದಿದವರು) ಬಿಟ್ಟು, ಸಂದರ್ಭಕ್ಕೆ ತಕ್ಕಂತೆ ಖಾತೆಯಿಂದ ಪೂರ್ಣವಾಗಿ ಅಥವಾ ಅಲ್ಪ ಪ್ರಮಾಣದಲ್ಲಿ ಹಣವನ್ನು ಪಡೆಯುತ್ತಾರೆ. ಆದ್ದರಿಂದ ಬೇಡಿಕೆಯ ಠೇವಣಿಗಳು ಎಂದರೆ ನಗದು ಹಣವಿದ್ದಂತೆ. ಆದರೆ, ಮುದ್ದುತ್ತು ಠೇವಣಿಗಳು ಹಾಗಲ್ಲ. ಅವುಗಳ ದ್ರವತ್ವ ಕಡಿಮೆ ಇರುತ್ತದೆ. ಅವುಗಳು ಒಂದು ನಿರ್ದಿಷ್ಟ ಅವಧಿವರೆಗೆ ಬ್ಯಾಂಕಿನಲ್ಲಿರುತ್ತದೆ. ಈ ವ್ಯವಸ್ಥೆಯೇ ಬ್ಯಾಂಕುಗಳಿಗೆ ಪತ್ತಿನ (ಸಾಲದ) ನಿರ್ಮಾಣ ಮಾಡಲು ಅನುಕೂಲವಾಗುತ್ತದೆ.

ವಾಣಿಜ್ಯ ಬ್ಯಾಂಕುಗಳು ಸಾಲಗಾರರಿಗೆ ಸಾಲ ನೀಡುವುದರ ಮೂಲಕ ಬ್ಯಾಂಕಿನ

ಪತ್ತಿನ ಹಣವನ್ನು ನಿರ್ಮಿಸುತ್ತದೆ. ಬ್ಯಾಂಕು ಸಾಲ ನೀಡುವಾಗ ನಗದು ಹಣವನ್ನು ಸಾಲಗಾರರಿಗೆ ನೇರವಾಗಿ ನೀಡುವುದಿಲ್ಲ. ಅವರ ಬ್ಯಾಂಕು ಖಾತೆಗೆ (ಇಲ್ಲದಿದ್ದರೆ ಹೊಸ ಖಾತೆ ತೆಗೆದು) ಸಾಲ ಹಣವನ್ನು ಜಮೆ ಮಾಡಲಾಗುತ್ತದೆ. ಸಾಲಗಾರರಿಗೆ ಚೆಕ್ ಬುಕ್ ನೀಡಿ, ಖಾತೆಯಿಂದ ಹಣ ಪಡೆಯುವ ವ್ಯವಸ್ಥೆ ಮಾಡುತ್ತದೆ. ಇದರಿಂದ ಬ್ಯಾಂಕು ಠೇವಣಿ ಪ್ರಮಾಣ ಹೆಚ್ಚುತ್ತದೆ. ಆದ್ದರಿಂದ "ಪ್ರತಿಯೊಂದು ಠೇವಣಿಯು ಸಾಲವನ್ನು ನಿರ್ಮಿಸುತ್ತದೆ ಹಾಗೂ ಪ್ರತಿಯೊಂದು ಸಾಲವು ಠೇವಣಿಯನ್ನು ನಿರ್ಮಿಸುತ್ತದೆ." ಅದೇ ರೀತಿ ಬ್ಯಾಂಕುಗಳು ಹುಂಡಿ ಪತ್ರ, ಸಾಲ ಪತ್ರ, ಶೇರುಗಳಲ್ಲಿ ವ್ಯವಹರಿಸಿದಾಗ ಅವುಗಳ ಹಣವನ್ನು ಗಿರಾಕಿಗಳ ಖಾತೆಗೆ ಜಮೆ ಮಾಡುತ್ತಾರೆ.

ಬ್ಯಾಂಕು ನಿರ್ಮಿಸುವ ಠೇವಣಿಗಳಲ್ಲಿ ಎರಡು ಪ್ರಕಾರಗಳಿವೆ. ಅವುಗಳೆಂದರೆ 'ಮೂಲ ಠೇವಣಿಗಳು' ಹಾಗೂ 'ಅನ್ಯಪ್ರಾಪ್ತಿ' ಅಥವಾ 'ದ್ವಿತೀಯ ಠೇವಣಿಗಳು'. ಸಾರ್ವಜನಿಕರು ನಗದು ಹಣವನ್ನು ತಮ್ಮ ಖಾತೆಯಲ್ಲಿ ಠೇವಣಿ ಇಡುವುದು ಮೂಲ ಠೇವಣಿಯಾಗಿದೆ. ಬ್ಯಾಂಕುಗಳು ಮೂಲ ಠೇವಣಿ ಹಣದಿಂದ ತನ್ನ ಗ್ರಾಹಕರಿಗೆ ಸಾಲ ಮಂಜೂರು ಮಾಡಿ ಅವರ ಖಾತೆಗೆ ಜಮೆ ಮಾಡುವುದು ದ್ವಿತೀಯ ಠೇವಣಿಗಳಾಗಿವೆ. ಬ್ಯಾಂಕುಗಳ ದ್ವಿತೀಯ ಠೇವಣಿಗಳನ್ನು ನಿರ್ಮಿಸುವ ಸಾಮರ್ಥ್ಯವು ಬ್ಯಾಂಕುಗಳ ಮೂಲ ಠೇವಣಿಗಳ ಪ್ರಮಾಣವನ್ನು ಅವಲಂಬಿಸಿದೆ. ಬ್ಯಾಂಕುಗಳು ಬಡ್ಡಿ ಗಳಿಸಲು ಅಧಿಕ ಮಟ್ಟದ ಸಾಲವನ್ನು ನೀಡುತ್ತವೆ. ಅಧಿಕ ಸಾಲ ನೀಡಿದಂತೆ ಅಧಿಕ ಠೇವಣಿಗಳು ನಿರ್ಮಾಣವಾಗುತ್ತವೆ.

ವಾಣಿಜ್ಯ ಬ್ಯಾಂಕುಗಳ ಪತ್ತು ನಿರ್ಮಾಣವು ಹೆಚ್ಚಾಗಿ ನಗದು ನಿಧಿ ಮೀಸಲು ಪ್ರಮಾಣವನ್ನು ಅವಲಂಬಿಸಿದೆ. ನಗದು ನಿಧಿ ಮೀಸಲು ಪ್ರಮಾಣವೆಂದರೆ, ವಾಣಿಜ್ಯ ಬ್ಯಾಂಕುಗಳು ಗ್ರಾಹಕರ ಮರುಪಾವತಿಗಾಗಿ ಇಟ್ಟುಕೊಂಡ ನಗದು ಹಣದ ಪ್ರಮಾಣ. ಇದನ್ನು ಕೇಂದ್ರ ಬ್ಯಾಂಕು (ಭಾ.ರಿ. ಬ್ಯಾಂಕು) ನಿರ್ಧರಿಸುತ್ತದೆ. ಒಂದು ವೇಳೆ ಬ್ಯಾಂಕುಗಳು ತಮ್ಮ ಮೂಲ ಠೇವಣಿಯ ಪ್ರತಿಶತ ಪ್ರಮಾಣವನ್ನು ನಗದು ಹಣದ ರೂಪದಲ್ಲಿ ಬ್ಯಾಂಕಿನಲ್ಲಿ ಮೀಸಲಾಗಿಟ್ಟರೆ ಪತ್ತು ಹಣದ ನಿರ್ಮಾಣ ಅಸಾಧ್ಯವಾಗುತ್ತಿತ್ತು. ಆದರೆ ವಾಣಿಜ್ಯ ಬ್ಯಾಂಕುಗಳು, ಕೇಂದ್ರ ಬ್ಯಾಂಕು ನಿರ್ಧರಿಸಿದ ಸಿ.ಆರ್.ಆರ್. ಪ್ರಮಾಣದ ಠೇವಣಿ ಹಣವನ್ನು ಮಾತ್ರ ಗಿರಾಕಿಗಳ ಮರುಪಾವತಿಗಾಗಿ ಇಟ್ಟುಕೊಂಡು ಉಳಿದ ಠೇವಣಿ ಹಣವನ್ನು ಸಾಲಗಾರರಿಗೆ ಸಾಲವಾಗಿ ನೀಡುತ್ತದೆ. ಭಾರತದಲ್ಲಿ ಕೇಂದ್ರ ಬ್ಯಾಂಕು (ಭಾ.ರಿ. ಬ್ಯಾಂಕು), ನಗದು ಮೀಸಲು ಪ್ರಮಾಣವನ್ನು ಶ್ರೀ ನರಸಿಂಹಮ್ ಸಮಿತಿಯ ವರದಿಯ ಮೇರೆಗೆ ೧೯೯೭ ಮಾರ್ಚ್‌ನಲ್ಲಿ ಶೇ. ೧೫ ರಿಂದ ಶೇ. ೧೦ ಕ್ಕೆ ಇಳಿಸಿತು. ಇದರಿಂದ ವಾಣಿಜ್ಯ ಬ್ಯಾಂಕುಗಳಿಗೆ ರೂ. ೧೮,೦೦೦ ಕೋಟಿಯಷ್ಟು ಹಣ ಉಳಿತಾಯವಾಗಿ, ಬ್ಯಾಂಕುಗಳ ಪತ್ತು ನಿರ್ಮಾಣದ ಪ್ರಮಾಣ ಅಧಿಕಗೊಂಡಿತು. ಆದ್ದರಿಂದ ನಗದು ಮೀಸಲು ಪ್ರಮಾಣ ಬ್ಯಾಂಕು ಪತ್ತಿನ ಹಣದ ಸೃಷ್ಟಿಯ

ಪ್ರಮಾಣವನ್ನು ನಿರ್ಧರಿಸುತ್ತದೆ.

ಬ್ಯಾಂಕುಗಳ ಪತ್ತಿನ ಹಣದ ನಿರ್ಮಾಣ ಈ ಕೆಳಗಿನ ಅಂಶಗಳಿಂದ ನಿರ್ಧರಿಸಲ್ಪಡುತ್ತದೆ.

೧. ದೇಶದಲ್ಲಿರುವ ಒಟ್ಟು ಬ್ಯಾಂಕುಗಳ ಹಾಗೂ ಅವುಗಳ ಶಾಖೆಗಳ ಸಂಖ್ಯೆ

೨. ದೇಶದಲ್ಲಿರುವ ಬ್ಯಾಂಕುಗಳ ಒಟ್ಟು ಮೂಲ ಠೇವಣಿಗಳ ಮೊತ್ತ

೩. ಕೇಂದ್ರ ಬ್ಯಾಂಕು ನಿರ್ಧರಿಸುವ ನಗದು ನಿಧಿ ಮಿಸಲು ಪ್ರಮಾಣ

೪. ಬ್ಯಾಂಕುಗಳ ಬಡ್ಡಿ ದರ

೫. ಬ್ಯಾಂಕುಗಳು ಹಣವನ್ನು ದುಡಿಸುವ ಸಾಮರ್ಥ್ಯ

೬. ಬಂಡವಾಳ ಹೂಡುವಿಕೆಯ ಪ್ರಮಾಣ

೭. ರಾಷ್ಟ್ರದ ಆರ್ಥಿಕ ಚಟುವಟಿಕೆಗಳ ಪ್ರಮಾಣ

೮. ಒಟ್ಟು ರಾಷ್ಟ್ರೀಯ ವರಮಾನ ಇತ್ಯಾದಿ.

ಬ್ಯಾಂಕು ತಮ್ಮ ಮೂಲ ಠೇವಣಿಯ ಶೇ. ೧೦ರಷ್ಟು ಹಣವನ್ನು ನಗದು ಹಣವನ್ನಾಗಿಟ್ಟು, ಶೇ. ೯೦ರಷ್ಟು ಸಾಲ ಹಾಗೂ ಬಂಡವಾಳ ಹೂಡುವಿಕೆಗೆ ಬಳಸಿದಾಗ ಬ್ಯಾಂಕಿನ ಅಡಾವೆ ಪತ್ರಿಕೆ ಈ ರೀತಿಯಾಗಿರುತ್ತದೆ.

ಬ್ಯಾಂಕಿನ ಅಧಾವೆ ಪತ್ರಿಕೆ - ಒಂದು ಬ್ಯಾಂಕು ಪದ್ಧತಿ - ಏಕಸ್ವಾಮ್ಯ ಬ್ಯಾಂಕು

| ಹೊಣೆಗಳು | ಆಸ್ತಿಗಳು |
|---|---|
| ಠೇವಣಿಗಳು | ನಗದು ನಿಧಿ ಮೀಸಲು |
| ರೂ. ೧,೦೦,೦೦೦.೦೦ | ರೂ. ೧೦,೦೦೦.೦೦ |
| | ಸಾಲ ಮತ್ತು ಬಂಡವಾಳ ಹೂಡುವಿಕೆ |
| | ರೂ. ೯೦,೦೦೦.೦೦ |
| ಒಟ್ಟು ರೂ. ೧,೦೦,೦೦೦.೦೦ | ಒಟ್ಟು ರೂ. ೧,೦೦,೦೦೦.೦೦ |

ಈ ಬ್ಯಾಂಕು ರೂ. ೧,೦೦,೦೦೦.೦೦ ಠೇವಣಿ ಹಣದಲ್ಲಿ ಶೇ. ೧೦ ರಷ್ಟು ಮತ್ತು ೧೦,೦೦೦.೦೦ ಹಣವನ್ನು ನಗದು ನಿಧಿ ಮೀಸಲಾಗಿಟ್ಟು ಉಳಿದ ರೂ. ೯೦,೦೦೦.೦೦ ಹಣವನ್ನು ದುಡಿಸಲು ಸಾಲ ಹಾಗೂ ಬಂಡವಾಳ ಹೂಡುವಿಕೆಯಲ್ಲಿ ತೊಡಗಿಸಿದೆ. ಆದ್ದರಿಂದ ಈ ಬ್ಯಾಂಕು ರೂ. ೯೦,೦೦೦.೦೦ ಪತ್ತಿನ ಹಣ ನಿರ್ಮಿಸಿ, ಹಣದ ಪೂರೈಕೆಯನ್ನು ಹೆಚ್ಚಿಸಿವೆ. ಈ ಬ್ಯಾಂಕು ೧ / ೧೦ ರಷ್ಟು ಮಾತ್ರ ಠೇವಣಿ ಹಣವನ್ನು ನಗದಾಗಿರಿಸಿ, ೯ / ೧೦ರಷ್ಟು ಹಣವನ್ನು ಪತ್ತಿನ ಹಣದ ಸೃಷ್ಟಿಗೆ ಬಳಸಿಕೊಂಡಿದೆ.

**ಬಹುಬ್ಯಾಂಕ್ - ಸಮಗ್ರ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಬ್ಯಾಂಕ್ ಪತ್ತಿನ ನಿರ್ಮಾಣ**

ಬಹು ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಮೂಲ ಬ್ಯಾಂಕಿನ ರೂ. ೯೦,೦೦೦.೦೦ ಹಣವನ್ನು ಸಾಲ ಪಡೆದ ವ್ಯಕ್ತಿ ಅದೇ ಬ್ಯಾಂಕಿನಲ್ಲಿ ಮರು ಠೇವಣಿಯಾಗಿ ಇಡಬಹುದು

ಅಥವಾ ಮತ್ತೊಂದು ಬ್ಯಾಂಕಿನ ಖಾತೆಯಲ್ಲಿ ಜಮೆ ಮಾಡಬಹುದು. ಇದರಿಂದ ಆ ಬ್ಯಾಂಕು ರೂ. ೯೦,೦೦೦.೦೦ದಲ್ಲಿ ರೂ. ೯,೦೦೦.೦೦ ದಷ್ಟು ಹಣವನ್ನು ನಗದಾಗಿ ಮೀಸಲಿರಿಸಿ ಉಳಿದ ಹಣ ರೂ. ೮೧,೦೦೦.೦೦ ದಷ್ಟು ಹಣವನ್ನು ಸಾಲ ರೂಪವಾಗಿ ಬಂಡವಾಳ ಹೂಡುವಿಕೆಯಲ್ಲಿ ತೊಡಗಿಸುತ್ತದೆ. ಇದೇ ರೀತಿ ಎಲ್ಲ ಬ್ಯಾಂಕುಗಳು ತಾವು ಪಡೆದ ಠೇವಣಿಯ ಹಣದ ಶೇ. ೧೦ರಷ್ಟು ನಗದು ಹಣವನ್ನಾಗಿರಿಸಿ ಉಳಿದ ಹಣವನ್ನು ಸಾಲ ಹಾಗೂ ಬಂಡವಾಳ ಹೂಡುವಿಕೆಯಲ್ಲಿ ತೊಡಗಿಸುತ್ತವೆ.

**ಬಹುಬ್ಯಾಂಕ್ ವ್ಯವಸ್ಥೆಯಲ್ಲಿ ಪತ್ತಿನ ಸೃಷ್ಟಿ**

ಬಹುಬ್ಯಾಂಕ್ ವ್ಯವಸ್ಥೆಯಲ್ಲಿ ಒಂದು ಬ್ಯಾಂಕಿನ ಮೂಲ ಠೇವಣಿಯು ವಿವಿಧ ಬ್ಯಾಂಕಿನಲ್ಲಿ ಠೇವಣಿಗಳ ಸಾಲ ನಿರ್ಮಿಸುತ್ತದೆ. ಹೊಸ ಠೇವಣಿಗಳು, ಹೊಸ ಸಾಲ ಮತ್ತು ಹೊಸ ಠೇವಣಿಗಳು ಹಾಗೂ ಹೊಸ ಸಾಲುಗಳು ಹೀಗೆ ಠೇವಣಿಗಳ ಗುಣಕ ಸೃಷ್ಟಿಯಾಗುತ್ತದೆ.

ಇದನ್ನು ಈ ಕೆಳಗಿನ ಪಟ್ಟಿಯಿಂದ ತಿಳಿಯಬಹುದು.

| ಬ್ಯಾಂಕುಗಳು | ಪಡೆದ ಹೊಸ ಠೇವಣಿಗಳು ರೂ. | ಹೊಸ ಠೇವಣಿಗಳ ನಗದು ಹಣದ ಪ್ರಮಾಣ ೧೦% ರೂ. | ಉಳಿದ ಹಣದಿಂದ ಸೃಷ್ಟಿಸಿದ ದ್ವಿತೀಯ ಠೇವಣಿಗಳು ರೂ. |
|---|---|---|---|
| ಮೂಲ ಬ್ಯಾಂಕು | ೧,೦೦,೦೦೦ | ೧೦,೦೦೦ | ೯೦.೦೦೦ |
| ಬ್ಯಾಂಕ್ ಎ | ೯೦,೦೦೦ | ೯,೦೦೦ | ೮೧,೦೦೦ |
| ಬ್ಯಾಂಕ್ ಬಿ | ೮೧,೦೦೦ | ೮೧,೦೦೦ | ೭೨,೯೦೦ |
| ಬ್ಯಾಂಕ್ ಸಿ | ೭೨,೯೦೦ | ೭,೨೯೦ | ೬೫,೬೧೦ |
| ಬ್ಯಾಂಕ್ ಡಿ | ೬೫,೬೧೦ | ೬,೫೬೧ | ೫೯,೦೪೯ |
| ಬ್ಯಾಂಕ್ ಇ | ೫೯,೦೪೯ | ೫,೯೦೪,೯ | ೫೩,೧೪೪.೧ |
| ಬ್ಯಾಂಕ್ ಎಫ್ | ೫೩,೧೪೪.೧ | ೫,೩೧೪,೪ | ೪೭,೮೨೯.೭ |
| ಬ್ಯಾಂಕ್ ಜಿ | ೪೭,೮೨೯.೭ | ೪,೭೮೨,೯ | ೪೩,೦೪೬.೮ |
| ಬ್ಯಾಂಕ್ ಎಚ್ | ೪೩,೦೪೬.೮ | ೪,೩೦೪.೬ | ೩೮,೭೪೨.೨ |
| ಬ್ಯಾಂಕ್ ಐ | ೩೮,೭೪೨.೨ | ೩,೮೭೪.೨ | ೩೪,೮೬೮ |
| ಪ್ರಥಮ ೧೦ ಬ್ಯಾಂಕುಗಳು ಒಟ್ಟು ಮೊತ್ತ | ೬,೫೧,೩೨೧.೮ | ೬೫,೧೩೨.೦೦ | ೫,೮೬,೧೮೯.೮ |
| ಜೆ ದಿಂದ ಐ ಬ್ಯಾಂಕುಗಳು | ೩,೭೮,೬೭೮.೨೦ | ೩೪,೮೬೮.೦೦ | ೩,೧೮,೮೧೦.೨ |
| ಒಟ್ಟು | ೧೦,೦೦,೦೦೦.೦೦ | ೧,೦೦,೦೦೦.೦೦ | ೯,೦೦,೦೦೦.೦೦ |

ಪತ್ತು ನಿರ್ಮಾಣದ ಸಾಮರ್ಥ್ಯ ಠೇವಣಿಯ ನಗದು ಹಣದ ಪ್ರಮಾಣವನ್ನು ಅವಲಂಬಿಸಿದೆ. ಪತ್ತಿನ ಬಹುಘಟಕ ಪ್ರಮಾಣವನ್ನು ಈ ಕೆಳಗಿನ ಸಮೀಕರಣದಿಂದ ತಿಳಿಯಬಹುದು.

$K = \frac{1}{r}$ (K = ಠೇವಣಿಗಳ ಗುಣಕ)

r = ಠೇವಣಿಗಳ ನಗದು ಹಣದ ಪ್ರಮಾಣ

ಉದಾ. ಠೇವಣಿಗಳ ನಗದು ಹಣದ ಪ್ರಮಾಣ ಶೇ. ೧೦ ಅಥವಾ ೦.೧ ಇದ್ದಾಗ, ಠೇವಣಿಗಳ ಗಣಕವು

$$K = \frac{1}{r} = \frac{1}{10} = \frac{1}{10\%} = \frac{1}{10/100} = \frac{1 \times 10}{1} = 10$$

ಆಗುತ್ತದೆ.

ಈ ಸಮೀಪಕರಣದ ಆಧಾರದ ಮೇಲೆ ಸಮಗ್ರ ಬ್ಯಾಂಕು ವ್ಯವಸ್ಥೆಗೆ ಠೇವಣಿಗಳ ಗುಣಕದ ಸೂತ್ರವು ಕೆಳಗಿನಂತಿದೆ.

$$\Delta D = a \; \frac{1}{r}$$

ಇಲ್ಲಿ

$\Delta D$ = ಇಡೀ ಬ್ಯಾಂಕಿನ ವ್ಯವಸ್ಥೆಯಲ್ಲಿ ಒಟ್ಟು ಠೇವಣಿಗಳ ಗುಣಕ

$\Delta a$ = ಮೂಲ ಠೇವಣಿಯಲ್ಲಿ ಪ್ರಾರಂಭಿಕ ಹೆಚ್ಚಳ (ಮೂಲ ಬ್ಯಾಂಕು)

r = ನಗದು ಹಣದ ಮೀಸಲು ಪ್ರಮಾಣ (ಸಿ.ಆರ್.ಆರ್.)

ಈ ಮೇಲಿನ ಬಹುಬ್ಯಾಂಕು ಪತ್ತಿನ ಸೃಷ್ಟಿಯ ಉದಾಹರಣೆಯ ಆಧಾರದ ಮೇಲೆ ಬ್ಯಾಂಕು ಪತ್ತಿನ ಸೃಷ್ಟಿಯನ್ನು ಈ ರೀತಿಯಾಗಿ ಸೃಷ್ಟಿಪಡಿಸಬಹುದು.

$\Delta a$ = ರೂ. ೧,೦೦,೦೦೦.೦೦ ಮತ್ತು

r = ೦.೧ ................ಆಗ

$$\Delta D = ೧,೦೦,೦೦೦ \times \frac{೧}{೦.೧}$$

$$\Delta D = ೧,೦೦,೦೦೦ \times \frac{೧}{೧೦}$$

$$\Delta D = ೧೦,೦೦,೦೦೦.೦೦$$

ನಗದು ಹಣದ ಪ್ರಮಾಣ (ಸಿ.ಆರ್.ಆರ್.) ಶೇ. ೧೦ರಷ್ಟು ಇದ್ದರೆ, ಮೂಲ ಠೇವಣಿಯು ೧೦ ಪಟ್ಟು, ಪತ್ತಿನ ಹಣದ ಸೃಷ್ಟಿಸಲು ಎಲ್ಲ ಬ್ಯಾಂಕುಗಳಿಗೆ ಸಾಧ್ಯವಾಗುತ್ತದೆ.

ಇಲ್ಲಿ ಕಾಣುವ ಒಂದು ಸಂಗತಿ ಏನೆಂದರೆ, ನಗದು ನಿಧಿ ಮಿಸಲು ಪ್ರಮಾಣ (ಸಿ.ಆರ್.ಆರ್.) ಕಡಿಮೆ ಇದ್ದರೆ, ಗುಣಕದ ಬೆಲೆ ಹೆಚ್ಚು ಮತ್ತು ನಗದು ನಿಧಿ ಮಿಸಲು ಪ್ರಮಾಣ ಹೆಚ್ಚು ಇದ್ದರೆ, ಗುಣಕದ ಬೆಲೆ ಕಡಿಮೆ ಇರುತ್ತದೆ.

## ೭.೩. ಹಣದ ಬೇಡಿಕೆ

ಎಲ್ಲ ದೇಶವಾಸಿಗಳ ವೈಯಕ್ತಿಕ ಸಂಪತ್ತನ್ನು ಕೂಡಿಸಿದಾಗ ದೇಶದ ಒಟ್ಟು ಸಂಪತ್ತಿನ ಶೇಖರಣೆ ಕಂಡುಬರುತ್ತದೆ. ಈ ಸಂಪತ್ತು ಯಾವ ಯಾವ ವಿಧಗಳಲ್ಲಿದೆ ಅಥವಾ ಹೂಡಲಾಗಿದೆ ಎಂಬ ಅಂಶ ಇದರಿಂದ ಕಂಡುಬರುತ್ತದೆ. ದೇಶವಾಸಿಗಳು ತಮ್ಮ ಸಂಪತ್ತನ್ನು ಬಂಗಾರ, ಮನೆ, ಭೂಹಿಡುವಳಿ, ಕಾರ್ಖಾನೆಗಳು, ವಾಹನಗಳು, ಠೇವಣಿಗಳು, ಉಳಿತಾಯ ಪತ್ರಗಳು, ಬ್ಯಾಂಕುಗಳು, ಶೇರುಗಳು, ಪರಸ್ಪರ ನಿಧಿಗಳಲ್ಲಿ ತೊಡಗಿರಿಸುತ್ತಾರೆ. ಆದರೂ ಇವುಗಳಲ್ಲಿ ನೈಜ ಹಣಕ್ಕೆ ವಿವಿಧ ಸಂಪತ್ತುಗಳಿಗಿಂತಲೂ ಅಧಿಕ ಬೇಡಿಕೆ ಇರುತ್ತದೆ.

ಏಕೆಂದರೆ ಸಂಪತ್ತನ್ನು ಶೇರು, ಬ್ಯಾಂಕು-ಮುದ್ದತ್ತು ಠೇವಣಿ ಇತ್ಯಾದಿಗಳಲ್ಲಿ ತೊಡಗಿಸಿದರೆ ಡೆವಿಡೆಂಡ್ ಅಥವಾ ಬಡ್ಡಿ ಬರುತ್ತದೆ. ನೈಜ ಹಣ ಅಧಿಕ ಕೊಂಡುಕೊಳ್ಳುವ ಶಕ್ತಿ - ಮೌಲ್ಯ ಸಂಗ್ರಹವನ್ನು ಹೊಂದಿದೆ.

ಹಣದ ಬೇಡಿಕೆ ಎಂದರೆ ಆರ್ಥಿಕ ವ್ಯವಸ್ಥೆಯಲ್ಲಿ ನೈಜ ಹಣಕ್ಕೆ ಇರುವ ಬೇಡಿಕೆ. ನೈಜ ಹಣ ಎಂದರೆ ವ್ಯಕ್ತಿಗಳು ಹಾಗೂ ವ್ಯವಹಾರ ಸಂಸ್ಥೆಗಳು ಹೊಂದಿದ ಕೊಂಡುಕೊಳ್ಳುವ ಶಕ್ತಿ ಉಳ್ಳ ನಗದು ಹಣ ಹಾಗೂ ಚೆಕ್ಕುಗಳನ್ನು ಹೊಂದಿದ ಚಾಲ್ತಿಗೆ ಬರುವ ಠೇವಣಿಗಳು ಹಾಗೂ ಬ್ಯಾಂಕು ಹಣ.

ವಾಸ್ತವ್ಯದಲ್ಲಿ ಕೇಂದ್ರ ಬ್ಯಾಂಕು (ಭಾ.ರಿ. ಬ್ಯಾಂಕು) ಹಣದ ಪೂರೈಕೆಯ ಮೇಲೆ ನಿಯಂತ್ರಣ ಹೊಂದಿದೆ. ಆದರೆ ಅದು ಹಣದ ಬೇಡಿಕೆಯ ಮೇಲೆ ನಿಯಂತ್ರಣ ಹೊಂದಿರುವುದಿಲ್ಲ. ಅರ್ಥವ್ಯವಸ್ಥೆಯಲ್ಲಿ ಹಣದ ಬೇಡಿಕೆಯ ಪ್ರಮಾಣ ವ್ಯಕ್ತಿಗಳು ಹಾಗೂ ವ್ಯವಹಾರಗಳು ನಿರ್ಧರಿಸುತ್ತದೆ.

**ಮಹತ್ವ**

ಹಣದ ಬೇಡಿಕೆಯ ಅಧ್ಯಯನ ಅರ್ಥವ್ಯವಸ್ಥೆಯಲ್ಲಿ ಅತಿಅವಶ್ಯವಾಗಿದೆ. ಏಕೆಂದರೆ ಅದು ಬೆಲೆಗಳ ಮಟ್ಟ, ಹಣದುಬ್ಬರ, ಹಣದ ಮೌಲ್ಯಗಳನ್ನು ತಿಳಿಯಲು ಅವಶ್ಯವಾಗಿದೆ. ಇಲ್ಲಿ $M_1$ ಹಾಗೂ ಅತಿಪ್ರಸರಣದ ಸಂಬಂಧವನ್ನು ಅರ್ಥಶಾಸ್ತ್ರಜ್ಞರು ವಿಶ್ಲೇಷಿಸಬಹುದಾಗಿದೆ. ಒಂದು ವಸ್ತುವಿನ ಮೌಲ್ಯ, ಹಣದ ಮೌಲ್ಯ, ವಸ್ತುಗಳ ಬೆಲೆಯ ಮಟ್ಟವನ್ನು ಆ ಆರ್ಥಿಕ ವ್ಯವಸ್ಥೆಯಲ್ಲಿರುವ ಹಣದ ಪೂರೈಕೆ ಹಾಗೂ ಹಣದ ಬೇಡಿಕೆಯು ನಿರ್ಧರಿಸುತ್ತವೆ.

ಜನರು ಹಣವನ್ನು ಅಧಿಕವಾಗಿ ಹೊಂದಲು ಬಯಸುತ್ತಾರೆ. ಏಕೆಂದರೆ ಹಣವು ಪ್ರಮುಖ ವಿನಿಮಯದ ಮಾಧ್ಯಮವಾಗಿದೆ. ಅದು ಸಂಪೂರ್ಣ ದ್ರವ್ಯತೆಯನ್ನು ಹೊಂದಿದೆ. ಅದು ಮೌಲ್ಯಸಂಗ್ರಹಕ್ಕೆ ಸಹಾಯಕಾರಿಯಾಗಿದೆ. ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞರು ಹಣದ ಬೇಡಿಕೆಗೆ ಹಣದ ವಿನಿಮಯ ಮಾಧ್ಯಮ ಕಾರ್ಯಕ್ಕೆ ಮಹತ್ವ ನೀಡಿದ್ದಾರೆ. ಆದರೆ ಆಧುನಿಕ ಅರ್ಥಶಾಸ್ತ್ರಜ್ಞರು ಹಣದ ಮೌಲ್ಯದ ಸಂಗ್ರಹ ಕಾರ್ಯಕ್ಕೆ

ಮಹತ್ವ ನೀಡಿದ್ದಾರೆ.

ಕೆಂಬ್ರಿಡ್ಜ್ ವಿಶ್ವವಿದ್ಯಾಲಯದ ಅರ್ಥಶಾಸ್ತ್ರಜ್ಞರಾದ ಆಲ್ಫ್ರೆಡ್ ಮಾರ್ಷಲ್, ಪ್ರೊ. ಪೀಗೋ, ಡಿ.ಎಚ್.ರಾಬರ್ಟ್‌ಸನ್ ಹಾಗೂ ಜೆ.ಎಂ.ಕೇನ್ಸ್‌ರು ಹಣವು ಮೌಲ್ಯ ಸಂಗ್ರಹದ ಕಾರ್ಯ ನಿರ್ವಹಿಸುವ ಕಾರಣ ಹಣಕ್ಕೆ ಅಧಿಕ ಬೇಡಿಕೆ ಇದೆ ಎಂದು ವಾದಿಸಿದರು. ೧೯೩೬ರಲ್ಲಿ ಜೆ.ಎಂ.ಕೇನ್ಸ್‌ರು ತಮ್ಮ "ಜನರಲ್ ಥಿಯರಿ" ಪುಸ್ತಕದಲ್ಲಿ ಹಣಕ್ಕೆ ಅಧಿಕ ದ್ರವತ್ವ ಸಾಮರ್ಥ್ಯ ಇರುವ ಕಾರಣ ಹಣಕ್ಕೆ ಅಧಿಕ ಬೇಡಿಕೆ ಇರುತ್ತದೆ ಎಂದು ಹೇಳಿದರು. ಹಣವು ಅತ್ಯಧಿಕ ಪ್ರಮಾಣದ ದ್ರವತ್ವ ಸಾಮರ್ಥ್ಯ ಹೊಂದಿದ ಸಂಪತ್ತಾಗಿದೆ. ಆದ್ದರಿಂದ ಅದು ಜನರ ಹಾಗೂ ಅವರ ವ್ಯವಹಾರದಲ್ಲಿ ಅಧಿಕ ಬೇಡಿಕೆಯಿರುವ ಸಂಪತ್ತಾಗಿದೆ. ಪ್ರೊಫೆಸರ್ ಜೆ.ಎಂ.ಕೇನ್ಸ್‌ರವರು ದ್ರವತ್ವ ಅಭಿಲಾಷೆಗೆ ಮೂರು ಕಾರಣಗಳನ್ನು ನೀಡಿದ್ದಾರೆ.

೧. ದೈನಂದಿನ ವ್ಯವಹಾರದ ದೃಷ್ಟಿ

೨. ಮುಂಧೋರಣೆ (ದೂರದೃಷ್ಟಿ)ಯ ದೃಷ್ಟಿ

೩. ಸಟ್ಟಾ ವ್ಯಾಪಾರದ ದೃಷ್ಟಿ

ಇವುಗಳನ್ನು ಸವಿಸ್ತಾರವಾಗಿ ವಿಶ್ಲೇಸಿಸುವುದು ಅಗತ್ಯವಾಗಿದೆ. ಇವುಗಳಲ್ಲಿ ಮೊದಲಿನ ಎರಡು ದೃಷ್ಟಿಯು ಹಣವು ವಿನಿಮಯ ಮಾಧ್ಯಮವಾಗಿದೆ ಎಂಬುದಕ್ಕೆ ಸಂಬಂಧಿಸಿದ್ದಾಗಿದೆ. ತೃತೀಯ ದೃಷ್ಟಿಯು ಹಣವು ಮೌಲ್ಯ ಸಂಗ್ರಹದ ಮಾಧ್ಯಮವಾಗಿದೆ ಎಂಬುದಕ್ಕೆ ಸಂಬಂಧಿಸಿದ್ದಾಗಿದೆ.

### ೧. ದೈನಂದಿನ ವ್ಯವಹಾರದ ಬೇಡಿಕೆ

ಹಣದ ಬೇಡಿಕೆಯು ವ್ಯಕ್ತಿಗಳ ಹಾಗೂ ವ್ಯವಹಾರಸ್ಥರ ದೈನಂದಿಕ ವ್ಯವಹಾರದ ಬೇಡಿಕೆಯಿಂದ ಪ್ರಭಾವಿತವಾಗಿದೆ. ದೈನಂದಿನ ವ್ಯವಹಾರದ ಬೇಡಿಕೆಯು ಹಣವು ವಿನಿಮಯದ ಮಾಧ್ಯಮವಾಗಿರುವುದು ಹಾಗೂ ಸಾರ್ವತ್ರಿಕವಾಗಿ ಸ್ವೀಕಸುವ ಹಣದ ಕಾರ್ಯಕ್ಕೆ ಸಂಬಂಧಿಸಿದುದಾಗಿದೆ. ಜನರು ತಮ್ಮ ದಿನನಿತ್ಯ ವ್ಯವಹಾರಕ್ಕೆ ಬಳಸಲು ಹಾಗೂ ವಸ್ತುಗಳನ್ನು ಸೇವೆಯನ್ನು ಖರೀದಿಸಲು ಹಣವನ್ನು ಹೊಂದಲು ಬಯಸುತ್ತಾರೆ.

ಪ್ರೊ. ಎ.ಸಿ.ಎಲ್.ಡೇ ರವರು ತಮ್ಮ ಪುಸ್ತಕದಲ್ಲಿ ದೈನಂದಿನ ವ್ಯವಹಾರ ಹಣದ ಬೇಡಿಕೆಯಲ್ಲಿ ಪ್ರಮುಖವಾಗಿದೆ ಎಂದು ಹೇಳಿದ್ದಾರೆ. ಅವರು ಈ ಬೇಡಿಕೆಗೆ ಎರಡು ಕಾರಣಗಳನ್ನು ನೀಡಿದ್ದಾರೆ. ಹಣವು ಹೆಚ್ಚು ಅನುಕೂಲಕರವೂ, ನಿಶ್ಚಿತವು, ಸಾರ್ವತ್ರಿಕವಾಗಿ ಮನ್ನಿಸಲ್ಪಡುವ, ಸಾಗಿಸಲು ಹಾಗೂ ಸಂಗ್ರಹಿಸಲು ಸರಳವಾಗಿರುವುದರಿಂದ ಜನರು ಅದನ್ನು ಹೊಂದಲು ಇಷ್ಟಪಡುತ್ತಾರೆ ಎಂದು ಅಭಿಪ್ರಾಯಪಡುತ್ತಾರೆ.

ಹಣವು ಅತಿ ಹೆಚ್ಚು ಕೊಂಡುಕೊಳ್ಳುವ ಸಾಮರ್ಥ್ಯವನ್ನು ಹೊಂದಿದೆ. ಹಣದಿಂದ ಜನರು ಶೀಘ್ರವಾಗಿ ಹಾಗೂ ಸರಳವಾಗಿ ಬೇಕಾದ ವಸ್ತುಗಳನ್ನು ಹಾಗೂ ಸೇವೆಗಳನ್ನು ಕೊಂಡುಕೊಳ್ಳಲು ಹಾಗೂ ಮಾರಲು ಬಳಸಬಹುದಾಗಿದೆ.

ಹಣ ದೈನಂದಿನ ವ್ಯವಹಾರದ ದೃಷ್ಟಿಯನ್ನು ಎರಡು ಪ್ರಕಾರಗಳನ್ನಾಗಿ ವಿಂಗಡಿಸಬಹುದಾಗಿದೆ.

೧. ಆದಾಯದ ದೃಷ್ಟಿ

೨. ವ್ಯವಹಾರದ ದೃಷ್ಟಿ

ಆದಾಯದ ದೃಷ್ಟಿಯು ಗ್ರಾಹಕರ ದೈನಂದಿನ ವ್ಯವಹಾರದ ದೃಷ್ಟಿಗೆ ಸಂಬಂಧಿಸಿದ್ದಾಗಿದೆ. ಗ್ರಾಹಕರು ತಮ್ಮ ದೈನಂದಿನ ಉಪಭೋಗದ ವಸ್ತುಗಳಾದ ಆಹಾರ, ಬಟ್ಟೆ, ವಸತಿ, ಖರೀದಿಗೆ, ಸಾರಿಗೆ ಖರ್ಚು ಮನೋರಂಜನೆ ಇತರ ಉಪಕರಣಗಳನ್ನು ಕೊಂಡುಕೊಳ್ಳಲು ಹಣವನ್ನು ಬೇಡುತ್ತಾರೆ. ಗ್ರಾಹಕರ ಹಣದ ಬೇಡಿಕೆಯು ಅವರ ಆದಾಯದ ಮಟ್ಟವನ್ನು ಅವಲಂಬಿಸಿರುತ್ತದೆ.

ವ್ಯವಹಾರದ ದೃಷ್ಟಿಯು ವ್ಯವಹಾರ ಸಮುದಾಯದ ವ್ಯಾಪಾರಿಗಳು, ಉತ್ಪಾದಕರು, ಸಂಘಟನಾಕಾರರು ಹಾಗೂ ಸೇವಾ ಸಂಸ್ಥೆಗಳಿಗೆ ಸಂಬಂಧಿಸಿದ್ದಾಗಿದೆ. ಇವರು ಕಚ್ಚಾ ಸಾಮಗ್ರಿಗಳನ್ನು ಉತ್ಪಾದಿತ ವಸ್ತುಗಳನ್ನು ಕೊಂಡುಕೊಳ್ಳಲು, ಸಾರಿಗೆ ವೆಚ್ಚ, ಕೂಲಿ, ಬಡ್ಡಿ ಹಾಗೂ ದಿನನಿತ್ಯದ ಇತರ ಖರ್ಚು ನಿಭಾಯಿಸಲು ಹಣವನ್ನು ಬೇಡುತ್ತಾರೆ. ಇವರ ಹಣದ ಬೇಡಿಕೆಯು ಅವರ ವ್ಯವಹಾರದ ಪ್ರಮಾಣವನ್ನು ಅವಲಂಬಿಸಿರುತ್ತದೆ.

ಹಣದ ದೈನಂದಿನ ವ್ಯವಹಾರದ ದೃಷ್ಟಿಯ ಬೇಡಿಕೆಯ ಪ್ರಮಾಣವು ರಾಷ್ಟ್ರೀಯ ಆದಾಯದ ಮಟ್ಟ (ಪ್ರಚಲಿತ ಬೆಲೆಗಳಲ್ಲಿ)ವನ್ನು ಅವಲಂಬಿಸಿದೆ. ಅದನ್ನು ಈ ರೀತಿಯಾಗಿ ಸಮೀಕರಣಮಾಡಬಹುದಾಗಿದೆ.

MD = KPY

MD = ದೈನಂದಿನ ವ್ಯವಹಾರಕ್ಕೆ ಹಣದ ಬೇಡಿಕೆ

K = ರಾಷ್ಟ್ರೀಯ ವರಮಾನದ ಕಾರ್ಯ

P = ಬೆಲೆಯ ಮಟ್ಟ

Y = ನೈಜ ರಾಷ್ಟ್ರೀಯ ಆದಾಯ

ನಿರ್ದಿಷ್ಟ ಬೆಲೆಯ ಮಟ್ಟದಲ್ಲಿ ನೈಜ ರಾಷ್ಟ್ರೀಯ ಆದಾಯ ಹೆಚ್ಚಿದಂತೆ ದೈನಂದಿನ ವ್ಯವಹಾರದ ಹಣದ ಬೇಡಿಕೆಯು ಅಧಿಕವಾಗುತ್ತದೆ. ಅದರಂತೆ ನೈಜ ರಾಷ್ಟ್ರೀಯ ಆದಾಯ ಸ್ಥಗಿತವಾಗಿದ್ದು, ಬೆಲೆಗಳ ಮಟ್ಟ ಅಧಿಕವಾಗಲೂ ದೈನಂದಿನ ವ್ಯವಹಾರದ ಹಣದ ಬೇಡಿಕೆಯು ಅಧಿಕಗೊಳ್ಳುತ್ತದೆ. ಆದುದರಿಂದ ಸಮಯಕ್ಕೆ ತಕ್ಕಂತೆ ದೈನಂದಿನ ವ್ಯವಹಾರದ ಹಣದ ಬೇಡಿಕೆಯು ಬದಲಾವಣೆಗೆ ಒಳಪಡುತ್ತದೆ.

ಆಧುನಿಕ ಅರ್ಥಶಾಸ್ತ್ರಜ್ಞರ ಪ್ರಕಾರ, ದೈನಂದಿನ ವ್ಯವಹಾರದ ಹಣದ ಬೇಡಿಕೆಯು ಬಡ್ಡಿದರ ಪ್ರಮಾಣದಿಂದಲೂ ಪ್ರಭಾವಿತವಾಗುತ್ತದೆ.

ದೈನಂದಿನ ವ್ಯವಹಾರದ ಹಣದ ಬೇಡಿಕೆಯು ಗ್ರಾಹಕರು ಹಾಗೂ ವ್ಯವಹಾರಸ್ಥರು ತಮ್ಮ ನಿರ್ದಿಷ್ಟ ಯೋಜನಾ ವೆಚ್ಚಕ್ಕೆ ಹಣವನ್ನು ಬಳಸುತ್ತಾರೆ.

**೨. ಮುಂಧೋರಣೆ ಬೇಡಿಕೆ**

ಜನರು ನಗದು ಹಣದ ಬೇಡಿಕೆಗೆ ಎರಡನೆ ಕಾರಣವೇನೆಂದರೆ ಮುಂಧೋರಣೆ ದೃಷ್ಟಿ ಅಥವಾ ದೂರದೃಷ್ಟಿ. ಜನರು ಭವಿಷ್ಯದಲ್ಲಿ ಅನಿರ್ಧಿಷ್ಟ ಖರೀದಿಗಳು ಆಕಸ್ಮಿಕ ವಾಗಿ ಬಂದೋದಗುವ ಅನಾರೋಗ್ಯ, ರಿಪೇರಿ, ಅಪಘಾತಗಳು, ಆದಾಯದ ಕೊರತೆ ನೀಗಿಸಲು ತಮ್ಮ ಬಳಿ ನಗದು ಹಣ ಸಂಗ್ರಹಿಸಿಟ್ಟುಕೊಳ್ಳಲು ಆಪೇಕ್ಷೆ ಪಡುತ್ತಾರೆ. ಮುಂಧೋರಣೆ ಬೇಡಿಕೆಯನ್ನು "ಮಳೆಗಾಲದ ದಿನದ ದೃಷ್ಟಿ" ಎಂತಲೂ ಕರೆಯುವು ದುಂಟು. ಇದು ಜನರ ಹಾಗೂ ವ್ಯವಹಾರ ಸಂಸ್ಥೆಗಳ ಯೋಜನೇತರ ವೆಚ್ಚಕ್ಕಾಗಿ ಸಂಗ್ರಹಿಸಲು ಇಚ್ಛಿಸುವ ಹಣದ ಬೇಡಿಕೆಯಾಗಿದೆ. ಈ ಹಣದ ಮುಂಧೋರಣೆ ಬೇಡಿಕೆಯು ಹಣದ ಪ್ರಮಾಣ ಹಾಗೂ ಸಮಯದ ಬಗ್ಗೆ ಅನಿರ್ದಿಷ್ಟ ಹಾಗೂ ಅನಿಶ್ಚಿತವಾಗಿದೆ. ಆದರೆ ಇದು ಸಹ ಹಣದ ಕಾರ್ಯವಾದ ವಿನಿಮಯದ ಮಾಧ್ಯಮದ ಮೇಲೆ ಅವಲಂಬಿಸಿದೆ. ಈ ಹಣದ ಮುಂಧೋರಣೆ ಬೇಡಿಕೆಯು ಆದಾಯದ ಪ್ರಮಾಣದ ಸಂಗಡ ಸೂಕ್ಷ್ಮ ಸಂಬಂಧ ಹೊಂದಿದೆ. ಅದು ಭವಿಷ್ಯದಲ್ಲಿ ಬರುವ ಅನಿಶ್ಚಿತ ಘಟನಾವಳಿಗಳಾದ ಹಾಗೂ ವಸ್ತುಗಳ ಬೆಲೆಗಳ ಏರಿಳಿತದ ಮೇಲೆ ಅವಲಂಬಿ ಸಿದೆ. ಹಣದ ಮುಂಧೋರಣೆ ಬೇಡಿಕೆಯು ಆದಾಯವನ್ನು ಅವಲಂಬಿತವಾಗಿದೆ. ಜೆ.ಎಂ.ಕೇನ್ಸ್‌ರು "ಈ ಹಣದ ಮುಂಧೋರಣೆ ಬೇಡಿಕೆಯನ್ನು ಒಟ್ಟು ಸಂಪನ್ಮೂಲದಲ್ಲಿ 'ಭವಿಷ್ಯದ ಸುರಕ್ಷಿತತೆಯ ಧೋರಣೆ' ಇಟ್ಟು ಸ್ವಲ್ಪ ಪ್ರಮಾಣದ ಸಂಪನ್ಮೂಲವಾಗಿದೆ" ಎಂದು ಹೇಳಿದ್ದಾರೆ.

ಆದಾಯ ಹೆಚ್ಚಿದಂತೆ ಆಕಸ್ಮಿಕ ಪರಿಸ್ಥಿತಿಗಳನ್ನು ಎದುರಿಸಲು ಜನರ ಮುಂಧೋರಣೆ ನಗದು ಹಣದ ಪ್ರಮಾಣವನ್ನು ಹೊಂದುವ ಸಾಮರ್ಥ್ಯ ಅಧಿಕವಾಗುತ್ತದೆ. ರಾಷ್ಟ್ರೀಯ ಆದಾಯ ಹೆಚ್ಚಿದಂತೆ ಹಣದ ಮುಂಧೋರಣೆ ಬೇಡಿಕೆಯು ಅಧಿಕವಾಗುತ್ತದೆ. ಇದು ಹೆಚ್ಚಾಗಿ ಬಡ್ಡಿದರದಿಂದ ಪ್ರಭಾವಿತವಾಗುವುದಿಲ್ಲ. ಇದು ಅಲ್ಪಾವಧಿಯಲ್ಲಿ ಸ್ಥಗಿತವಾಗು ತ್ತದೆ. ಏಕೆಂದರೆ ಭವಿಷ್ಯದಲ್ಲಿ ಮುಂಧೋರಣೆ ನಗದು ಹಣದ ಬೇಡಿಕೆಯು ಥಟ್ಟನೆ ಬದಲಾಗುವುದಿಲ್ಲ. ಕುಟುಂಬಗಳು ಹಾಗೂ ವ್ಯವಹಾರಿ ಸಂಘಟನೆಗಳೂ ಮುಂಧೋರಣೆ ಬೇಡಿಕೆಯನ್ನು ಹೊಂದಿರುತ್ತವೆ. ಉದಾಹರಣೆಗಾಗಿ ಒಂದು ವ್ಯವಹಾರ ಸಂಸ್ಥೆಗೆ ತಾನು ಮಾರಿದ ವಸ್ತುಗಳಿಗೆ ವಾರದ ಕೊನೆಯ ಶನಿವಾರ ಪಾವತಿಯಾಗುವ ಸಂಭವವಿದೆ. ಹಾಗೂ ತಾನು ಕೊಂಡುಕೊಂಡ ಕಚ್ಚಾ ಸಾಮಗ್ರಿಗಳಿಗೆ ಶನಿವಾರ ಪಾವತಿ ಮಾಡುವುದಾಗಿ ಒಪ್ಪಿಕೊಂಡಿದೆ. ಆದರೆ ಅದು ವಸ್ತುಗಳ ಮಾರಿದ ಹಣದ ಪಾವತಿ ಬರುವ ಬಗ್ಗೆ ಅನಿಶ್ಚಿತತೆಯನ್ನು ಹೊಂದಿದೆ. ಶನಿವಾರ ಅದರ ಎಲ್ಲಾ ಗ್ರಾಹಕರು ಹಣವನ್ನು ಮರಳಿ ಪಾವತಿ ಮಾಡಿಲ್ಲ. ಇಂತಹ ಸಮಯದಲ್ಲಿ ಈ ವ್ಯವಹಾರ ಸಂಘಟನೆಯ ಹಣದ ಪಾವತಿ ಬಿಲ್ ಪಡೆಯುವ ವ್ಯಕ್ತಿಗಳು ಅಥವಾ ಸಂಘಟನೆಗಳಿಗೆ ಹಣ ಸಂದಾಯ ಮಾಡಲು, ಸಂಘಟನೆಯು ಮುಂಧೋರಣಾ ಬೇಡಿಕೆಗಾಗಿ ನಗದು ಹಣವನ್ನು

ಹೊಂದಿರುವುದು ಅತೀ ಅವಶ್ಯವಾಗಿದೆ. ಅದೂ ಅಲ್ಲದೆ, ವ್ಯವಹಾರ ಸಂಘಟನೆಗಳಿಗೆ ಕೆಲವೊಮ್ಮೆ ಅನಿರ್ಧಿಷ್ಟ ಪಾವತಿ ಮಾಡುವುದು ಆಕಸ್ಮಿಕ ಪರಿಸ್ಥಿತಿಗಳಿರುತ್ತವೆ.

ಆದ್ದರಿಂದ ಮುಂಧೋರಣೆ ದೃಷ್ಟಿಯಿಂದ ಅನಿರ್ದಿಷ್ಟ ಅಧಿಕ ಹಣದ ಪಾವತಿ ಅಥವಾ ಕಡಿಮೆ ಹಣದ ಜಮೆಯ ಪರಿಸ್ಥಿತಿಯನ್ನು ಯೋಗ್ಯವಾಗಿ ಎದುರಿಸಲು ಸಂಘಟನೆಯು ಅಗತ್ಯ ನಗದು ಹಣದ ಪ್ರಮಾಣಕ್ಕಿಂತ ಅಧಿಕ ಮೊತ್ತದ ನಗದು ಹಣದ ರಾಶಿ ಹೊಂದಿರಬೇಕಾಗುತ್ತದೆ. ಇಂತಹ ಅನಿರ್ದಿಷ್ಟ ಆರ್ಥಿಕ ಪರಿಸ್ಥಿತಿಗಳನ್ನು ಎದುರಿಸಲು ಹೊಂದಬೇಕಾದ ಹಣದ ಪ್ರಮಾಣಕ್ಕೆ ನಗದು ಹಣದ ಮುಂಧೋರಣೆ ಬೇಡಿಕೆ ಎಂದು ಕರೆಯುತ್ತಾರೆ. ಇಂತಹ ಹಣದ ಬೇಡಿಕೆಯು ಅನಿರ್ದಿಷ್ಟ ಹಾಗೂ ಆಕಸ್ಮಿಕವಾಗಿ ಬರುವ ಪರಿಸ್ಥಿತಿ ಎದುರಿಸಲು ವಿಮೆ ಮಾಡಿದಂತೆ.

ಹಣದ ಮುಂಧೋರಣೆ ಬೇಡಿಕೆಯು ಆದಾಯದ ಪ್ರಮಾಣ, ವ್ಯವಹಾರದ ಪ್ರಮಾಣ, ಅನಿಶ್ಚಿತತೆಯ ಪ್ರಮಾಣವನ್ನು ಅವಲಂಬಿಸಿದೆ. ಹಣದ ಮುಂಧೋರಣೆ ಬೇಡಿಕೆಯು ಬಡ್ಡಿದರದ ಅಸ್ಥಿತಿ ಸ್ಥಾಪಕತ್ವವನ್ನು ಹೊಂದಿದೆ.

ದೈನಂದಿನ ವ್ಯವಹಾರದ ಬೇಡಿಕೆ ಹಾಗೂ ಮುಂಧೋರಣೆ ಬೇಡಿಕೆಗಳು ರಾಷ್ಟ್ರೀಯ ಆದಾಯದ ಪ್ರಮಾಣದ ಮೇಲೆ ಅವಲಂಬಿಸಿದೆ




PY - ರಾಷ್ಟ್ರೀಯ ಆದಾಯ

M - ಹಣದ ಬೇಡಿಕೆ ಪ್ರಮಾಣ

T - ದೈನಂದಿನ ವ್ಯವಹಾರದ ಬೇಡಿಕೆ

ಹಣದ ಬೇಡಿಕೆ ಪ್ರಮಾಣ ಹಾಗೂ ರಾಷ್ಟ್ರೀಯ ಪ್ರಚಲಿತ ಬೆಲೆಗಳಲ್ಲಿ ಒಂದೇ ದಿಕ್ಕಿನಲ್ಲಿ ಚಲಿಸುತ್ತವೆ. ಅವು ನೇರ ಸಂಬಂಧವನ್ನು ಹೊಂದಿವೆ. PY ಆದಾಯವಿದ್ದಾಗ ಹಣದ ಬೇಡಿಕೆ ಪ್ರಮಾಣವು MD ಇರುತ್ತದೆ. $PY_1$ ಆದಾಯವಿದ್ದಾಗ ಹಣದ ಬೇಡಿಕೆ ಪ್ರಮಾಣವು $MD_1$ ಕ್ಕೆ ಏರುತ್ತದೆ. ಆದ್ದರಿಂದ ಹಣದ ಬೇಡಿಕೆ ಪ್ರಮಾಣ ಹಾಗೂ ರಾಷ್ಟ್ರೀಯ ಆದಾಯವು ನೇರ ಸಂಬಂಧವನ್ನು ಹೊಂದಿವೆ.

**೩. ಸಟ್ಟಾ ವ್ಯಾಪಾರ ಬೇಡಿಕೆ**

ಬಡ್ಡಿದರ ಹಾಗೂ ಬೆಲೆಗಳ ಹೆಚ್ಚಳದಿಂದ ಮುಂದೆ ಲಾಭ ಗಳಿಸಲು ಪ್ರಸ್ತುತದಲ್ಲಿ ಹಣ ಮತ್ತು ವಸ್ತುಗಳನ್ನು ಶೇಖರಿಸುವ ಪ್ರವೃತ್ತಿಗೆ ಸಟ್ಟಾ ವ್ಯಾಪಾರವೆಂದು ಕರೆಯುವರು. ಸಟ್ಟಾ ವ್ಯಾಪಾರಿಗಳು ಸರ್ಕಾರದ ಭದ್ರತಾ ಪತ್ರಗಳಲ್ಲಿ, ಶೇರುಗಳಲ್ಲಿ, ಸಾಲ ಪತ್ರಗಳಲ್ಲಿ ವ್ಯವಹರಿಸುತ್ತಾರೆ. ಮಾರುಕಟ್ಟೆ ಹಾಗೂ ಶೇರು ಪೇಟೆಯ ಸ್ಥಿತಿಗಳನ್ನು ಆಧರಿಸಿ ಅವುಗಳನ್ನು ಕೊಂಡುಕೊಳ್ಳುವುದು ಹಾಗೂ ಮಾರುವುದು ಮಾಡುತ್ತಾರೆ.

ಕೇನ್ಸ್‌ನು ಬಂಡವಾಳ ಸಂಪಾದನೆ ಮಾಡಲು ಜನರು ಹಣವನ್ನು ಸಟ್ಟಾ ವ್ಯಾಪಾರದಲ್ಲಿ ಹೂಡುತ್ತಾರೆ ಎಂದು ಅಭಿಪ್ರಾಯಪಡುತ್ತಾರೆ. ಸಟ್ಟಾ ವ್ಯಾಪಾರದ ಹಣದ ಬೇಡಿಕೆಯು ಅನಿಶ್ಚಿತ ಬಡ್ಡಿದರದ ಕಾರಣ ಉದ್ಭವಿಸುತ್ತದೆ. ಕೇನ್ಸ್‌ರ ಪ್ರಕಾರ ಸಟ್ಟಾ ವ್ಯಾಪಾರಕ್ಕೆ ನಗದು ಹಣದ ಬೇಡಿಕೆ ಅಧಿಕವಾಗಿದೆ. ಬೆಲೆ ಇಳಿದಾಗ ಅವುಗಳನ್ನು ಕೊಂಡುಕೊಂಡು ಬೆಲೆಯೇರಿದಾಗ ಅದನ್ನು ಮಾರಿ, ಸಟ್ಟಾ ವ್ಯಾಪಾರಿಗಳು ಲಾಭ ಗಳಿಸುತ್ತಾರೆ. ಈ ರೀತಿ ಲಾಭ ಗಳಿಸಲು ಜನರು ನಗದು ಹಣವನ್ನು ಹೊಂದಿರುತ್ತಾರೆ. ಹಣದ ಕಾರ್ಯವಾದ "ಮೌಲ್ಯದ ದಾಸ್ತಾನು" ಸಟ್ಟಾ ವ್ಯಾಪಾರದ ಹಣದ ಬೇಡಿಕೆಗೆ ಮೂಲವಾಗಿದೆ.

ಸಟ್ಟಾ ವ್ಯಾಪಾರದ ನಗದು ಹಣದ ಬೇಡಿಕೆ ಮತ್ತು ಬಡ್ಡಿದರಗಳು ವಿಲೋಮ ಸಂಬಂಧವನ್ನು ಹೊಂದಿವೆ. ಅದೇ ರೀತಿ ಸಾಲ ಪತ್ರಗಳು ಹಾಗೂ ಬಡ್ಡಿದರಗಳು ವಿಲೋಮ ಸಂಬಂಧವನ್ನು ಹೊಂದಿವೆ. ಕಡಿಮೆ ಬಡ್ಡಿದರವಿದ್ದಾಗ ಸಾಲ ಪತ್ರಗಳ ಬೆಲೆಗಳು ಕಡಿಮೆ ಇರುತ್ತವೆ. ಸಟ್ಟಾ ವ್ಯಾಪಾರಿಗಳು ಸಾಲಪತ್ರಗಳ ಬೆಲೆಗಳು ಕಡಿಮೆ ಇದ್ದಾಗ ಅವುಗಳನ್ನು ಕೊಂಡುಕೊಂಡು ಬೆಲೆ ಏರಿದಾಗ ಅವುಗಳನ್ನು ಮಾರುತ್ತಾರೆ. ಈ ರೀತಿಯಾಗಿ ಅವರು ಬಂಡವಾಳ ಲಾಭ ಗಳಿಸುತ್ತಾರೆ.

ಬಡ್ಡಿದರ ಅಧಿಕವಾದಾಗ ಸಾಲಪತ್ರಗಳ ಬೇಡಿಕೆ ಅಧಿಕವಾಗಿ ನಗದು ಹಣದ ಬೇಡಿಕೆ ಕಡಿಮೆಯಾಗುತ್ತದೆ. ಸಾಲ ಪಾತ್ರಗಳ ಬೆಲೆಗಳು ಅಧಿಕವಾಗಿದ್ದು, ಬಡ್ಡಿದರ ಕಡಿಮೆ ಇದ್ದಾಗ ಜನರು ಅಧಿಕ ನಗದು ಹಣವನ್ನು ಇಟ್ಟುಕೊಂಡು ಕಡಿಮೆ ಸಾಲಪತ್ರಗಳನ್ನು ಹೊಂದುತ್ತಾರೆ.

ಈ ಸಟ್ಟಾ ವ್ಯಾಪಾರ ಸೃಷ್ಟಿ ಸಿದ್ಧಾಂತವನ್ನು ೧೯೩೦ರಲ್ಲಿ ಜೆ.ಎಂ. ಕೇನ್ಸ್‌ರು ಪ್ರತಿಪಾದಿಸಿದರು. ನಂತರ ಅಮೇರಿಕಾದ ಅರ್ಥಶಾಸ್ತ್ರಜ್ಞರಾದ ಜೇಮ್ಸ್ ಟೋಬಿನ್‌ರು ಈ

ಸಿದ್ಧಾಂತವನ್ನು ೧೯೫೦ರಲ್ಲಿ ಸವಿಸ್ತಾರವಾಗಿ ಅಭಿವೃದ್ಧಿಗೊಳಿಸಿದರು. ಇವರಿಗೆ ೧೯೮೧ರಲ್ಲಿ ಅರ್ಥಶಾಸ್ತ್ರದ ನೊಬಲ್ ಬಹುಮಾನ ದೊರೆಯಿತು. ಇವರು ಬರೆದ ಸಿದ್ಧಾಂತವು ಈಗ ಪೋರ್ಟ್ ಪೋಲಿಯೊ ಬಾಲನ್ಸ್ ಥಿಯರಿ ಎಂದು ಕರೆಯಲ್ಪಡುತ್ತದೆ. ಜನರು ಹಣವನ್ನು ಒಂದುಕಡೆ ಹೂಡದೆ ವಿವಿಧ ಮಿಶ್ರಣದ ಸಟ್ಟಾ ವ್ಯಾಪಾರದಲ್ಲಿ ತೊಡಗಿಸುತ್ತಾರೆ. ಸಟ್ಟಾ ವ್ಯಾಪಾರದ ಬೇಡಿಕೆಯು ಬಡ್ಡಿದರದ ಕಾರ್ಯವಾಗಿದೆ. ಅದು ಬಡ್ಡಿದರ ಸ್ಥಿತಿಸ್ಥಾಪಕತ್ವವನ್ನು ಹೊಂದಿದೆ. ಇದಲ್ಲದೆ, ಡೆವಿಡೆಂಡ್ ಪ್ರಮಾಣ ಹಾಗೂ ಶೇರುಗಳ ಬೆಲೆಗಳಿಂದ ಪ್ರಭಾವಿಸಲ್ಪಡುತ್ತದೆ. ನಗದು ಹಣದ ದೈನಂದಿನ ವ್ಯವಹಾರದ ಬೇಡಿಕೆ ಹಾಗೂ ಮುಂಧೋರಣೆ ಬೇಡಿಕೆಯು ಆದಾಯದಿಂದ ನಿರ್ಧರಿಸಲ್ಪುತ್ತದೆ. ಆದರೆ ಸಟ್ಟಾ ವ್ಯಾಪಾರದ ಬೇಡಿಕೆಯು ಆದಾಯವನ್ನು ನಿರ್ಧರಿಸುವುದುದಾಗಿದೆ.

ಬಡ್ಡಿದರ ಹಾಗೂ ಬಂಡವಾಳ ಹೂಡುವಿಕೆ ಸಂಬಂಧದೊಂದಿಗೆ ಹಣದ ಸಟ್ಟಾ ವ್ಯಾಪಾರದ ಬೇಡಿಕೆಯು ಉದ್ಯೋಗದ ಮಟ್ಟ ಹಾಗೂ ಉತ್ಪಾದನಾ ಮಟ್ಟದ ವಿಶ್ಲೇಷಣೆಯಲ್ಲಿ ಚಲನಾತ್ಮಕ ಹಾಗೂ ಕ್ರಿಯಾತ್ಮಕ ಅಂಶವನ್ನು ಅಳವಡಿಸುತ್ತದೆ. ಹಣದ ಸಟ್ಟಾ ವ್ಯಾಪಾರದ ಬೇಡಿಕೆಯ ಮೂಲ ಉದ್ದೇಶ ಅಧಿಕ ಆದಾಯ ಗಳಿಸುವುದಾಗಿದೆ. ಸಟ್ಟಾ ವ್ಯಾಪಾರ ಬೇಡಿಕೆಯನ್ನು ಕೆಳಗಿನ ರೇಖಾಚಿತ್ರದ ಸಹಾಯದಿಂದ ತಿಳಿಯಬಹುದು.




ಹಣದ ಸಟ್ಟಾ ವ್ಯಾಪಾರದ ಬೇಡಿಕೆ

ಹಣದ ಸಟ್ಟಾ ವ್ಯಾಪಾರದ ಬೇಡಿಕೆಯು ಅಥವಾ ಬಡ್ಡಿದರವಿದ್ದಾಗ (LS) ಬೇಡಿಕೆಯನ್ನು ಹೊಂದಿದೆ. ಬಡ್ಡಿದರ ಇಳಿದಾಗ ಹಣದ ಸಟ್ಟಾ ವ್ಯಾಪಾರದ ಬೇಡಿಕೆ ಹೆಚ್ಚಿ (LS1) ಗೆ ಏರಿದೆ. ಅಧಿಕ ಬಡ್ಡಿದರವಿದ್ದಾಗ, ಜನರು ಶೇರು ಹಾಗೂ ಸಾಲಪತ್ರಗಳಲ್ಲಿ ಅಧಿಕ ಹಣ ತೊಡಗಿಸಿ ನಗದು ಹಣದ ಬೇಡಿಕೆ ಕಡಿಮೆ ಇರುತ್ತದೆ. ಇದರಿಂದ ತಿಳಿಯುವುದೇನೆಂದರೆ ಬಡ್ಡಿದರ ಕಡಿಮೆಯಾದಂತೆ ಹಣದ ಸಟ್ಟಾ ವ್ಯಾಪಾರದ ಬೇಡಿಕೆ ಅಧಿಕವಾಗುತ್ತದೆ.

ಕೇನ್ಸ್ ಹಾಗೂ ಟೊಬಿನ್‌ರ ಸಿದ್ಧಾಂತದ ಪ್ರಕಾರ ನಗದು ಹಣ ಹೊಂದುವ ಪ್ರಮಾಣ ಹಾಗೂ ಬಡ್ಡಿದರಗಳು ವಿರುದ್ಧ ಸಂಬಂಧ ಹೊಂದಿವೆ. ಅಧಿಕ ಬಡ್ಡಿದರವಿದ್ದಾಗ ಕಡಿಮೆ ಹಣದ ಬೇಡಿಕೆ, ಬಡ್ಡಿದರ ಕಡಿಮೆಯಾದಂತೆ ಹಣದ ಬೇಡಿಕೆಯು ಅಧಿಕವಾಗುತ್ತದೆ.

**ಹಣದ ಬೇಡಿಕೆಯ ಸಾರಾಂಶ**

| ಅ.ನಂ. | ಹಣದ ಬೇಡಿಕೆಯ ಪ್ರಕಾರಗಳು | ಹಣದ ಬೇಡಿಕೆಗೆ ಕಾರಣಗಳು | ಹಣ ಬೇಡಿಕೆ ಮೇಲೆ ಪ್ರಭಾವಿಸುವ ಅಂಶಗಳು | ಹಣ ಬೇಡಿಕೆಯ ಪ್ರಮಾಣದ ಮೇಲೆ ಪ್ರಭಾವ |
|---|---|---|---|---|
| ೧. | ದೈನಂದಿನ ವ್ಯವಹಾರದ ಬೇಡಿಕೆ | ವಸ್ತುಗಳನ್ನು ಸೇವೆಗಳನ್ನು ಖರೀದಿಸಲು | ನೈಜ ಆದಾಯದಲ್ಲಿ ಏರಿಕೆ | ಅಧಿಕ ಹಣದ ಬೇಡಿಕೆ |
| | | | ನೈಜ ಆದಾಯದಲ್ಲಿ ಇಳಿಕೆ | ಕಡಿಮೆ ಹಣದ ಬೇಡಿಕೆ |
| ೨. | ಮುಂಧೋರಣೆಯ ಬೇಡಿಕೆ | ಭವಿಷ್ಯದಲ್ಲಿ ಅನಿರ್ಧಿಷ್ಟ ಆಕಸ್ಮಿಕವಾಗಿ ಬಂದೊದಗುವ ಪರಿಸ್ಥಿತಿಗಳನ್ನು ಎದುರಿಸಲು | ನೈಜ ಆದಾಯದಲ್ಲಿ ಏರಿಕೆ | ಅಧಿಕ ಹಣದ ಬೇಡಿಕೆ |
| | | | ನೈಜ ಆದಾಯದಲ್ಲಿ ಇಳಿಕೆ | ಕಡಿಮೆ ಹಣದ ಬೇಡಿಕೆ |
| ೩. | ಸಟ್ಟಾ ವ್ಯಾಪಾರ ಬೇಡಿಕೆ | ಹಣವನ್ನು ಶೇರುಗಳು ಸಾಲ ಪತ್ರಗಳು, ಸರ್ಕಾರಿ ಸೆಕ್ಯೂರಿಟಿಗಳಲ್ಲಿ ತೊಡಗಿಸಿ | ಬಡ್ಡಿ ದರದಲ್ಲಿ ಏರಿಕೆ | ಕಡಿಮೆ ಹಣದ ಬೇಡಿಕೆ |
| | | ಬಂಡವಾಳ ಲಾಭ ಪಡೆಯುವುದು | ಬಡ್ಡಿದರ ಇಳಿಕೆ | ಅಧಿಕ ಹಣದ ಬೇಡಿಕೆ |

## ೭.೪. ಅತಿಪ್ರಸರಣ

ಅತಿಪ್ರಸರಣ ಅಥವಾ ಹಣದುಬ್ಬರ ಜಾಗತಿಕ ವಿಷಯವಾಗಿದೆ. ಅಭಿವೃದ್ಧಿ ಹೊಂದಿದ ಹಾಗೂ ಅನಭಿವೃದ್ಧಿ ರಾಷ್ಟ್ರಗಳು ಅತಿಪ್ರಸರಣವನ್ನು ಅನುಭವಿಸುತ್ತಿವೆ. ಇದು ಸಾರ್ವತ್ರಿಕ ವಿಷಯವಾಗಿದೆ. ಇದು ಕೇವಲ ಯುದ್ಧಕಾಲದಲ್ಲಿ, ಯುದ್ಧದ ನಂತರವಲ್ಲದೆ, ಶಾಂತಿ ಕಾಲದಲ್ಲಿಯೂ ಉದ್ಭವಿಸುತ್ತದೆ. ಅತಿಪ್ರಸರಣ ಮೂಲಭೂತವಾಗಿ ಹಣಕಾಸಿನ ಸಂಗತಿಯಾಗಿದೆ. ಒಂದು ಪ್ರಮುಖ ಆರ್ಥಿಕ ಸಮಸ್ಯೆಯಾಗಿದೆ.

**ಅತಿಪ್ರಸರಣದ ವ್ಯಾಖ್ಯೆಗಳು**

ಅತಿಪ್ರಸರಣದ ಅರ್ಥವನ್ನು ವಿವರಿಸಲು ಅರ್ಥಶಾಸ್ತ್ರಜ್ಞರು ಹಲವು ಬಗೆಯ ವ್ಯಾಖ್ಯೆಗಳನ್ನು ನೀಡಿದ್ದಾರೆ.

೧. ಪ್ರೊ. ಜೆಪ್ರಿ ಕ್ರೌಥರರವರ ಪ್ರಕಾರ : "ಹಣದ ಮೌಲ್ಯವು ಇಳಿಯುತ್ತಿರುವ ಅರ್ಥಾತ್ ಬೆಲೆಗಳು ಏರುತ್ತಿರುವ ಪರಿಸ್ಥಿತಿಯೇ ಅತಿಪ್ರಸರಣವಾಗಿದೆ". ಈ ವ್ಯಾಖ್ಯೆ ಅತಿಪ್ರಸರಣದ ಪರಿಣಾಮ ತಿಳಿಸುತ್ತದೆ.

೨. ಆರ್.ಜಿ. ಹೌಟ್ರೇರವರ ಪ್ರಕಾರ : "ಅತಿ ಹೆಚ್ಚಿನ ಪ್ರಮಾಣದ ಹಣದ ಪೂರೈಕೆಯಿಂದ ಉಂಟಾಗುವ ಸ್ಥಿತಿಯೇ ಅತಿಪ್ರಸರಣವಾಗಿದೆ. ಈ ವ್ಯಾಖ್ಯೆ ಅತಿಪ್ರಸರಣದ ಕಾರಣ ತಿಳಿಸುತ್ತದೆ."

೩. ಎ.ಸಿ. ಪಿಗೋರವರ ಪ್ರಕಾರ : "ಉತ್ಪಾದನಾ ಘಟಕಗಳು ಉತ್ಪಾದಿಸಿದ ಒಟ್ಟು ಉತ್ಪಾದನೆಗಿಂತಲೂ ಆದಾಯದ ಪ್ರಮಾಣವು ಅಧಿಕವಾಗಿ ಆದಾಯ ಗಿಟ್ಟಿಸುವ ಕಾರ್ಯಗಳಿಗಿಂತಲೂ ಆದಾಯ ಹೆಚ್ಚಿದಾಗ, ವಸ್ತುಗಳ ಪೂರೈಕೆಯಲ್ಲಿ ಹೆಚ್ಚುವರಿ ಇಲ್ಲದೆ ಹಣದ ಪೂರೈಕೆ ಅಧಿಕವಾದಾಗ ಏರುತ್ತಿರುವ ಬೆಲೆಗಳ ಪರಿಸ್ಥಿತಿಯೇ ಅತಿಪ್ರಸರಣವಾಗಿದೆ." ಈ ವ್ಯಾಖ್ಯೆ ಅತಿಪ್ರಸರಣದ ಕಾರಣ ಹಾಗೂ ಪರಿಣಾಮ ಎರಡನ್ನ ತಿಳಿಸುತ್ತದೆ.

೪. ಕೌಲಬಾರ್ನ್ ಪ್ರಕಾರ : "ಅತಿ ಹೆಚ್ಚು ಮೊತ್ತದ ಹಣವು ಅತಿ ಕಡಿಮೆ ವಸ್ತುಗಳನ್ನು ಬೆನ್ನಟ್ಟುವ ಸ್ಥಿತಿಯೇ ಅತಿಪ್ರಸರಣ." ಈ ವ್ಯಾಖ್ಯೆ ಅತಿಪ್ರಸರಣದ ಕಾರಣವನ್ನು ತಿಳಿಸುತ್ತದೆ.

೫. ಜೆ.ಎಂ. ಕೇನ್ಸ್‌ರ ಪ್ರಕಾರ : "ಪೂರ್ಣ ಹಣದುಬ್ಬರವು ಪೂರ್ಣೋದ್ಯೋಗದ ಮಟ್ಟ ಸಾಧಿಸಿದ ನಂತರ ಬೆಲೆ ಏರಿಕೆಗಳು ಉತ್ಪಾದನೆ ಹಾಗೂ ಉದ್ಯೋಗದ ಮಟ್ಟದಲ್ಲಿ ಹೆಚ್ಚಳ ಸಾಧಿಸಲಾಗದ ಪರಿಸ್ಥಿತಿ. ಈ ವ್ಯಾಖ್ಯೆಯು ಅತಿಪ್ರಸರಣದ ವೈಜ್ಞಾನಿಕ ಕಾರಣ ಹಾಗೂ ಪರಿಣಾಮ ತಿಳಿಸುತ್ತದೆ.

ಒಟ್ಟಿನಲ್ಲಿ ಅತಿಪ್ರಸರಣವು ಪ್ರಚಲಿತ ವಸ್ತುಗಳಿಗೆ ಅತ್ಯಧಿಕ ಬೇಡಿಕೆಯಾಗಿದೆ. ಅತಿಪ್ರಸರಣವು ಹಣದ ಪೂರೈಕೆ ಅಧಿಕಗೊಂಡು ವಸ್ತುವಿನ ಬೇಡಿಕೆಗನುಗುಣವಾಗಿ ವಸ್ತುವಿನ ಪೂರೈಕೆಯು ಹೊಂದಿಕೊಳ್ಳಲಾಗದ ಆರ್ಥಿಕ ಪರಿಸ್ಥಿತಿಯಾಗಿದೆ.

**ಅತಿಪ್ರಸರಣ ಲಕ್ಷಣಗಳು ಕೆಳಗಿನಂತಿವೆ.**

೧. ಅತಿಪ್ರಸರಣವು ಹಣದ ಪೂರೈಕೆ ಅಧಿಕವಾಗಿ ಉದ್ಭವಿಸುವ ಒಂದು ಹಣಕಾಸಿನ ಪರಿಸ್ಥಿತಿಯಾಗಿದೆ.

೨. ಅತಿಪ್ರಸರಣವು ನಿರಂತರ ಅಥವಾ ಎಡಬಿಡದೆ ಬೆಲೆ ಏರಿಕೆಯ ಪರಿಸ್ಥಿತಿಯಾಗಿದೆ ಹೊರತು ತಾತ್ಕಾಲಿಕ ಬೆಲೆ ಏರಿಕೆಯಲ್ಲ.

೩. ಅತಿಪ್ರಸರಣವು ಪ್ರಾರಂಭದಲ್ಲಿ ಬೆಲೆ ಏರಿಕೆ ಸಾಧಾರಣವಾಗಿ, ನಂತರ ಅಧಿಕವಾಗಿ ಏರಿ, ಕೊನೆಹಂತದಲ್ಲಿ ಅನಿಯಮಿತವಾಗಿ ಹೆಚ್ಚಾಗುತ್ತದೆ.

೪. ಅತಿಪ್ರಸರಣವು ಒಂದು ವಸ್ತುವಿನ ಬೆಲೆ ಏರಿಕೆಯಾಗಿರದೆ, ಎಲ್ಲಾ ವಸ್ತುಗಳ ಬೆಲೆ ಏರಿಕೆಯಾಗಿದೆ.

೫. ಅತಿಪ್ರಸರಣ ಸಮಯದಲ್ಲಿ ಕೇವಲ ಹಣದ ಪೂರೈಕೆ ಹಾಗೂ ಬೆಲೆಗಳು ಅಧಿಕವಾಗಿ ಉತ್ಪಾದನೆ ಹಾಗೂ ಉದ್ಯೋಗಗಳು ಹೆಚ್ಚಾಗುವುದಿಲ್ಲ.

೬. ಅತಿಪ್ರಸರಣ ಸಮಯದಲ್ಲಿ ವಸ್ತುಗಳ ಪೂರೈಕೆಗಿಂತ ವಸ್ತುಗಳ ಬೇಡಿಕೆ ಅಧಿಕವಾಗಿ, ಆರ್ಥಿಕ ಅಸಮತೋಲನ ಪರಿಸ್ಥಿತಿ ಉಂಟಾಗುತ್ತದೆ.

೭. ಅತಿಪ್ರಸರಣವು ಹೆಚ್ಚಾಗಿ ಮಾನವ ನಿರ್ಮಿತವಾಗಿದ್ದು, ಅದು ಸರ್ಕಾರ, ಕೇಂದ್ರ ಬ್ಯಾಂಕು, ಬ್ಯಾಂಕುಗಳು, ವ್ಯಾಪಾರಿಗಳು ಹಾಗೂ ಗ್ರಾಹಕರ ಚಟುವಟಿಕೆಗಳಿಂದ ಉದ್ಭವಿಸುತ್ತದೆ.

೮. ಅತಿಪ್ರಸರಣವು ಬೇಡಿಕೆ ಸೆಳೆತ ಅಥವಾ ಪೂರೈಕೆ ಸೆಳೆತದ ಅಂಶಗಳಿಂದ ಅಥವಾ ಎರಡರಿಂದಲೂ ಉದ್ಭವಿಸುತ್ತದೆ.

## ಅತಿಪ್ರಸರಣದ ಕಾರಣಗಳು

ಈ ಕೆಳಗಿನ ಅಂಶಗಳು ಅತಿಪ್ರಸರಣಕ್ಕೆ ಕಾರಣಗಳಾಗಿವೆ.

**೧. ಹಣದ ಪೂರೈಕೆ ಹೆಚ್ಚಳ :** ಕೇಂದ್ರ ಬ್ಯಾಂಕು ವಿಶಿಷ್ಟ ಸಂದರ್ಭದಲ್ಲಿ ಅಧಿಕ ಹಣ ಮುದ್ರಿಸುವುದು, ಅಧಿಕ ಪತ್ತಿನ ಹಣದ ಸೃಷ್ಟಿ, ಕೊರತೆಯ ಹಣಕಾಸಿನ ನಿರ್ವಹಣೆಯಿಂದ ಜನರು ಆದಾಯ ಅಧಿಕವಾಗಿ, ವಸ್ತುಗಳಿಗೆ ಹಾಗೂ ಸೇವೆಗಳಿಗೆ ಬೇಡಿಕೆ ಅಧಿಕವಾಗಿ, ಬೆಲೆಗಳ ಏರಿಕೆಗೆ ಕಾರಣವಾಗಿದೆ.

**೨. ಸರ್ಕಾರದ ವೆಚ್ಚದಲ್ಲಿ ಹೆಚ್ಚಳ :** ಆರ್ಥಿಕ ಅಭಿವೃದ್ಧಿ ಸಾಧಿಸಲು ಸರ್ಕಾರಿ ಹಾಗೂ ಖಾಸಗಿ ಯೋಜನೆಗಳು, ಶೀಘ್ರ ಮರು ಆದಾಯತಾರದ ಸೊತ್ತುಗಳಲ್ಲಿ ಹಣ ತೊಡಗಿಸುವುದರಿಂದ ಉತ್ಪಾದನೆ ಹೆಚ್ಚಾಗದೆ, ಕೇವಲ ಆದಾಯ ಹೆಚ್ಚಾಗುವುದರಿಂದ ಬೆಲೆ ಏರಿಕೆಗೆ ಕಾರಣವಾಗುವುದು.

**೩. ಖಾಸಗಿ ಬಂಡವಾಳ ಹೂಡುವಿಕೆಯಲ್ಲಿ ಹೆಚ್ಚಳ :** ಸ್ವದೇಶಿ ಹಾಗೂ ವಿದೇಶಿ ಬಂಡವಾಳ ಹೂಡುವಿಕೆಯಲ್ಲಿ ಹೆಚ್ಚಳವಾಗಿ ಉದ್ಯೋಗಾದಾಯ ಹಾಗೂ ಬೇಡಿಕೆ ಹೆಚ್ಚಿ

ಬೆಲೆಗಳು ಅಧಿಕಗೊಳ್ಳುತ್ತವೆ.

೪. **ರಫ್ತುವಿನಲ್ಲಿ ಹೆಚ್ಚಳ :** ರಫ್ತುಗಳು ಅಧಿಕವಾದಾಗ ರಾಷ್ಟ್ರೀಯ ಉಪಭೋಗದ ವಸ್ತುಗಳು ಪರರಾಷ್ಟ್ರಕ್ಕೆ ರವಾನೆಯಾಗಿ, ಮಾರುಕಟ್ಟೆಯಲ್ಲಿ ವಸ್ತುಗಳ ಕೊರತೆಯಾಗಿ ಬೆಲೆಗಳು ಹೆಚ್ಚಳವಾಗುತ್ತದೆ. ಉದಾ. ೧೯೯೮ರಲ್ಲಿ ಉಳ್ಳಾಗಡ್ಡಿ ಬೆಲೆ ರೂ. ೫.೦೦ ರಿಂದ ರೂ. ೫೦.೦೦ ಕ್ಕೆ ಏರಿತು.

೫. **ಉತ್ಪಾದನಾಂಗಗಳ ಪೂರೈಕೆಯಲ್ಲಿನ ಕೊರತೆ :** ಪೂರ್ಣೋದ್ಯೋಗ ಪ್ರಮಾಣದ ನಂತರ ಎಲ್ಲಾ ಉತ್ಪಾದನಾಂಗಗಳು ಉತ್ಪಾದನೆಯಲ್ಲಿ ತೊಡಗುವುದರಿಂದ ಉತ್ಪಾದ ನಾಂಗಗಳ ಕೊರತೆಯುಂಟಾಗುತ್ತದೆ. ವಸ್ತುಗಳ ಕೊರತೆ ನೀಗಿಸಲು ಅಧಿಕ ಉತ್ಪಾದನೆ ಮಾಡುವುದಾಗಲಿ ಅಥವಾ ಹೊಸ ಉತ್ಪಾದನಾ ಘಟಕಗಳನ್ನು ಸ್ಥಾಪಿಸುವುದಾಗಲಿ ಅಸಾಧ್ಯವಾಗುವುದು.

೬. **ತೆರಿಗೆಗಳ ಏರಿಕೆ ಅಥವಾ ಇಳಿಕೆ :** ತೆರಿಗೆಗಳು ಇಳಿಸುವುದರಿಂದ ಜನರ ಆದಾಯ ಅಧಿಕವಾಗಿ ಬೇಡಿಕೆ ಪ್ರಮಾಣ ಏರಿ ಬೆಲೆಗಳು ಏರುತ್ತವೆ. ಕಚ್ಚಾವಸ್ತುಗಳು, ತೈಲ, ವಿದ್ಯುತ್‌ಶಕ್ತಿಯ ಮೇಲೆ ಅಧಿಕ ತೆರಿಗೆ ಹೇರುವುದರಿಂದ ವಸ್ತುವಿನ ಉತ್ಪಾದನಾ ವೆಚ್ಚ ಅಧಿಕಗೊಂಡು ವಸ್ತುಗಳ ಬೆಲೆಗಳು ಏರುತ್ತವೆ.

೭. **ಕಾಳಸಂತೆ, ಕಳ್ಳದಾಸ್ತಾನು ಹಾಗೂ ಕಪ್ಪು ಹಣ :** ಕಾಳಸಂತೆ, ಕಳ್ಳದಾಸ್ತಾನು ಹಾಗೂ ಕಪ್ಪು ಹಣವನ್ನು ಪರ್ಯಾಯ ಅರ್ಥವ್ಯವಸ್ಥೆ ಎಂದು ಕರೆಯುತ್ತಾರೆ. ಇವುಗಳು ಲಾಭ ಗಳಿಸಲು ಕೃತಕ ಕೊರತೆಯುಂಟು ಮಾಡುತ್ತದೆ. ನಮ್ಮ ದೇಶದಲ್ಲಿ ಕಪ್ಪು ಹಣ (ತೆರಿಗೆ ನೀಡಿದ ಹಣ) ಅಧಿಕ ಪ್ರಮಾಣದಲ್ಲಿರುವುದರಿಂದ ಅದು ಅನಿಯಂತ್ರಿತ ಖರ್ಚು ಅಧಿಕಗೊಳಿಸುವುದು. ಇದು ಬೆಲೆ ಏರಿಕೆಗೆ ಕಾರಣವಾಗಿದೆ.

೮. **ವಸ್ತುಗಳ ಪೂರೈಕೆಯಲ್ಲಿ ಇಳಿಕೆ :** ವಸ್ತುಗಳ ಉತ್ಪಾದನೆ ಕುಂಠಿತಗೊಳ್ಳುವುದು, ಗಲಭೆಗಳು, ಮುಷ್ಕರಗಳು, ದಾಸ್ತಾನು ಮಳಿಗೆಗಳ ಕೊರತೆ, ಸಾರಿಗೆ ತೊಂದರೆ, ಆಮದುವಿನಲ್ಲಿ ಇಳಿಕೆ (ಉದಾ. ಕಚ್ಚಾ ಪೆಟ್ರೋಲಿಯಂ)ಯಾಗುವುದರಿಂದ ವಸ್ತುಗಳ ಪೂರೈಕೆ ಕಡಿಮೆಯಾಗಿ ಅವುಗಳ ಬೆಲೆಗಳು ಎಡಬಿಡದೆ ಏರುತ್ತವೆ.

೯. **ಜನಸಂಖ್ಯೆಯಲ್ಲಿ ಏರಿಕೆ :** ಜನಸಂಖ್ಯೆಯು ಹೆಚ್ಚಾದಂತೆ ರಾಷ್ಟ್ರೀಯ ಆಂತರಿಕ ಉಪಭೋಗದ ಪ್ರಮಾಣವು ಅಧಿಕಗೊಂಡು ವಸ್ತುಗಳ ಬೇಡಿಕೆಯ ಪ್ರಮಾಣ ಏರಿ ವಸ್ತುಗಳ ಬೆಲೆಗಳು ಏರುತ್ತವೆ. ಇಲ್ಲಿ ಜನರ ಬೇಡಿಕೆಗೆ ಅನುಗುಣವಾಗಿ ವಸ್ತುಗಳ ಪೂರೈಕೆಯಾಗಿದ್ದರೆ, ಬೆಲೆಗಳು ಏರುತ್ತವೆ.

## ಅತಿಪ್ರಸರಣದ ಪ್ರಕಾರಗಳು

ಅತಿಪ್ರಸರಣವನ್ನು ಅನೇಕ ಪ್ರಕಾರಗಳಾಗಿ ವರ್ಗೀಕರಿಸುತ್ತಾರೆ. ಅವುಗಳಲ್ಲಿ ಬೇಡಿಕೆ ಸೆಳೆತ ಅತಿಪ್ರಸರಣ ಹಾಗೂ ಪೂರೈಕೆ ಸೆಳೆತ ಅತಿಪ್ರಸರಣ ಪ್ರಮುಖವಾಗಿವೆ.

ಅತಿಪ್ರಸರಣದ ಪರಿಸ್ಥಿತಿಯಲ್ಲಿ ಒಂದಕ್ಕೊಂದು ಪ್ರತಿಸ್ಪರ್ದಿಯಾಗಿ ವರ್ತಿಸಿ, ಉತ್ಪಾದನಾ ಚಕ್ರದ ಮೇಲೆ ಪ್ರಭಾವಿಸುತ್ತವೆ. ಕೇನ್ಸ್‌ರು ಬೇಡಿಕೆ ಪರ ಹಾಗೂ ಪೂರೈಕೆ ಪರ ಅಂಶಗಳ ನಡುವಿನ ಸ್ಪರ್ಧೆಯ ಸಾಮೂಹಿಕ ಪರಿಣಾಮವಾಗಿ ಅತಿಪ್ರಸರಣ ಉದ್ಭವಿಸುತ್ತದೆ ಎಂದು ಹೇಳಿದ್ದಾರೆ.

**ಬೇಡಿಕೆ ಸೆಳೆತ ಅತಿಪ್ರಸರಣ**

ಪ್ರಚಲಿತ ಬೆಲೆಗಳಲ್ಲಿ ಬೇಡಿಕೆ ಪ್ರಮಾಣವು ಪೂರೈಕೆ ಪ್ರಮಾಣಕ್ಕಿಂತ ಅಧಿಕವಾಗಿ ಬೆಲೆಗಳು ಏರುವ ಪರಿಸ್ಥಿತಿಗೆ ಬೇಡಿಕೆ ಸೆಳೆತ ಅತಿಪ್ರಸರಣ ಎನ್ನುತ್ತಾರೆ. ಇದು ಬೇಡಿಕೆ ಪ್ರಮಾಣ ಹಾಗೂ ಪೂರೈಕೆ ಪ್ರಮಾಣ ಸರಿಸಾಟಿಯಿಲ್ಲದ ಅಸಮಾನ ಪರಿಸ್ಥಿತಿಗೆ ಕಾರಣ ವಾಗುತ್ತದೆ. ಇದನ್ನು ಅತ್ಯಧಿಕ ಬೇಡಿಕೆ ಅಥವಾ ಬೇಡಿಕೆ ಸೆಳೆತ ಅತಿಪ್ರಸರಣವೆನ್ನುತ್ತಾರೆ.

ವಸ್ತುಗಳ ಹಾಗೂ ಸೇವೆಗಳ ಬೇಡಿಕೆ ಹೆಚ್ಚಿ ಬೆಲೆಗಳು ಏರುತ್ತವೆ. ಇದು ವಾಸ್ತವಿಕ ನಗದು ಹಣದ ಪ್ರಮಾಣಕ್ಕಿಂತ ಗ್ರಾಹಕರ ಹಾಗೂ ಬಂಡವಾಳ ಹೂಡುವಿಕೆದಾರರ ವ್ಯಯದ ಪ್ರಮಾಣ ಅಧಿಕವಾಗಿ ಬೆಲೆಗಳು ಏರುತ್ತವೆ. ಇಲ್ಲಿ ಹಣದ ಪೂರೈಕೆ ಪ್ರಮಾಣವು ಹೆಚ್ಚಿ, ಬೆಲೆಗಳು ಏರುವುದರಿಂದ ಅತಿಪ್ರಸರಣ ಸೃಷ್ಟಿಯಾಗುತ್ತದೆ. ಇತರ ಸ್ಥಿತಿಗಳು ಸ್ಥಗಿತವಾಗಿದ್ದಾಗ, ಬೆಲೆಗಳ ಮಟ್ಟ ಹಾಗೂ ಅತಿಪ್ರಸರಣದ ದರಗಳು ಹಣದ ಪೂರೈಕೆಯನ್ನು ಅವಲಂಬಿಸಿದೆ. ಉತ್ಪಾದನೆ ಸ್ಥಿರವಾಗಿದ್ದಾಗ, ಸಾರ್ವಜನಿಕ ವ್ಯಯದ ಪ್ರಮಾಣ ಅಧಿಕವಾಗಿದ್ದಾಗಲೂ ಬೆಲೆಗಳು ಏರುತ್ತವೆ.

ಕೇನ್ಸ್‌ರು ಹಣದ ಪೂರೈಕೆ ಪ್ರಮಾಣಗಳ ನಡುವೆ ಹಾಗೂ ಬೆಲೆಗಳ ಮಟ್ಟ ನೇರ ಸಂಬಂಧವಿದೆ ಎಂದು ಹೇಳಿದ್ದಾರೆ. ನೋಬೆಲ್ ಪ್ರಶಸ್ತಿ ವಿಜೇತರಾದ ಮಿಲ್ಟನ್ ಫ್ರಿಡಮನ್‌ರು, ಸೀಮಿತ ಹಣದ ಪೂರೈಕೆಯ ಪ್ರಮಾಣ ಹಾಗೂ ಅತಿ ಪ್ರಸರಣದ ದರಗಳ ಮಧ್ಯೆ ನೇರ ಸಂಬಂಧವಿದೆ ಎಂದು ಹೇಳಿದ್ದಾರೆ. ಸ್ವಿಡನ್ ದೇಶದ ವಿಕಸೆಲ್‌ರು ಪೂರ್ಣೋದ್ಯೋಗದ ಮಟ್ಟದಲ್ಲಿ ಉಳಿತಾಯದ ಮಟ್ಟಕ್ಕಿಂತ ಬ್ಯಾಂಕ್ ಸಾಲಗಳ ಪ್ರಮಾಣವು ಹೆಚ್ಚಿ, ಬಂಡವಾಳ ಹೂಡುವಿಕೆ ಹೆಚ್ಚುವುದರಿಂದ ಬೆಲೆಗಳು ಏರಿ ಅತಿಪ್ರಸರಣವು ಸೃಷ್ಟಿಯಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಇದಲ್ಲದೆ ಎ.ಜೆ. ಬ್ರೌನ್, ಪಿಲಿಪ್ ಕಾಗನ್, ಚಿಕಾಗೊ ಸ್ಕೂಲ್ ಆಫ್ ಥಾಟನವರು ಪ್ರಯೋಗಜ್ಞಾನದ ಆದಾರದಿಂದ ಬೇಡಿಕೆ ಸೆಳೆತ ಅತಿಪ್ರಸರಣ ವಾಸ್ತವಿಕ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ.

ಇದಲ್ಲದೆ ಆದಾಯದ ಹೆಚ್ಚಳ, ಸರ್ಕಾರದ ವೆಚ್ಚ, ಕೊರತೆಯ ಹಣಕಾಸು .. ಪೂರೈಕೆಯಿಂದಲೂ ಬೇಡಿಕೆ ಸೆಳೆತ ಅತಿಪ್ರಸರಣಕ್ಕೆ ಕಾರಣವಾಗುವುದು.

**ವೆಚ್ಚ ತಳ್ಳಿದ ಅತಿಪ್ರಸರಣ**

ವೆಚ್ಚ ತಳ್ಳಿದ ಅತಿಪ್ರಸರಣವು ಲಾಭ ಪ್ರಚೋದಿತ ಅಥವಾ ಕೂಲಿ ಪ್ರಚೋದಿತ ಅಥವಾ ಎರಡರಿಂದಲೂ ಉದ್ಭವಿಸುವ ಅತಿಪ್ರಸರಣವಾಗಿದೆ. ಏಕಸ್ವಾಮ್ಯ ಅಥವಾ

ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯಲ್ಲಿ ವ್ಯಾಪಾರಿಗಳು ಅಧಿಕ ಲಾಭ ಗಳಿಸಲು ಬೆಲೆಗಳನ್ನು ಹೆಚ್ಚಿಸಿದಾಗ ಲಾಭ ಪ್ರಚೋದಿತ ಅತಿಪ್ರಸರಣವಾಗುತ್ತದೆ. ಇದಲ್ಲದೆ ಕಾರ್ಮಿಕ ಸಂಘಗಳು ತಮ್ಮ ಚೌಕಾಶಿ ಶಕ್ತಿಯಿಂದ ಕೂಲಿಮಟ್ಟವನ್ನು ಹೆಚ್ಚಿಸುವುದರಿಂದ ಬೆಲೆಗಳು ಏರಿ ಅತಿಪ್ರಸರಣ ಉಂಟಾಗುತ್ತದೆ. ಉತ್ಪಾದಕರು ತಾವು ಉತ್ಪಾದಿಸಿದ ವಸ್ತುಗಳ ಬೆಲೆಗಳನ್ನು ಉತ್ಪಾದನಾ ವೆಚ್ಚ ಹಾಗೂ ಬೇಡಿಕೆಯ ಪ್ರಮಾಣದ ಆಧಾರದ ಮೇಲೆ ನಿರ್ಧರಿಸುತ್ತಾರೆ. ಇದಲ್ಲದೆ ಅವರು ತಮ್ಮ ವಸ್ತುಗಳಿಗೆ ಇದ್ದ ಬೇಡಿಕೆ ಸ್ಥಿತಿಸ್ಥಾಪಕತ್ವ ಕಂಡುಕೊಂಡು ಬೆಲೆ ಹೆಚ್ಚಿಸುತ್ತಾರೆ. ಇದನ್ನು ಇತರ ಉತ್ಪಾದಕರು ಅನುಸರಿಸುವುದರಿಂದ ಸಾರ್ವತ್ರಿಕವಾಗಿ ವಸ್ತುಗಳ ಬೆಲೆ ಏರಿ ಅತಿಪ್ರಸರಣ ಉದ್ಭವಿಸುತ್ತದೆ. ಅದರಂತೆ ಕಾರ್ಮಿಕ ಸಂಘಗಳು ತಮ್ಮ ಚೌಕಾಶಿ ಶಕ್ತಿಯಿಂದ ಹಾಗೂ ಮುಷ್ಕರಗಳಿಂದ ಕೂಲಿಮಟ್ಟವನ್ನು ಹೆಚ್ಚಿಸುವುದರಿಂದ ಕೂಲಿ ಪ್ರಮಾಣ ಹೆಚ್ಚಿ ಉತ್ಪಾದನಾ ವೆಚ್ಚ ಅಧಿಕಗೊಂಡು ವಸ್ತುಗಳ ಬೆಲೆಗಳು ಹೆಚ್ಚುತ್ತವೆ. ಇದು ಅತಿಪ್ರಸರಣಕ್ಕೆ ಕಾರಣವಾಗುತ್ತದೆ. ವಾಸ್ತವಿಕವಾಗಿ ಕೂಲಿಮಟ್ಟವು ಕಾರ್ಮಿಕರ ಉತ್ಪಾದನಾ ಸಾಮರ್ಥ್ಯಕ್ಕಿಂತಲೂ ಅಧಿಕವಾಗಿರುವುದರಿಂದ ಉತ್ಪಾದನಾ ವೆಚ್ಚ ಹಾಗೂ ಬೆಲೆಗಳು ಏರುತ್ತವೆ. ಇಲ್ಲಿ ಕೂಲಿಯ ಮಟ್ಟ ಕಾರ್ಮಿಕರ ಬೇಡಿಕೆ ಹೆಚ್ಚಾಗದೆ, ಅಧಿಕವಾಗುತ್ತದೆ. ಇದು ಉತ್ಪಾದನಾ ವೆಚ್ಚವನ್ನು ಹೆಚ್ಚಿಸುತ್ತದೆ. ಅಧಿಕ ಉತ್ಪಾದನಾ ವೆಚ್ಚ ಉತ್ಪಾದನಾ ಮಟ್ಟವನ್ನು ಕಡಿತಗೊಳಿಸುತ್ತದೆ. ಆದರೆ ಬೇಡಿಕೆ ಪ್ರಮಾಣ ಅಷ್ಟೆ ಇರುವುದರಿಂದ ಬೆಲೆಗಳು ಏರಿ ಅತಿಪ್ರಸರಣ ಉಂಟಾಗುತ್ತದೆ.

### ಅತಿಪ್ರಸರಣದ ಪರಿಣಾಮಗಳು

ಅತಿಪ್ರಸರಣವು ದೇಶದ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಮೇಲೆ ಪ್ರಭಾವ ಬೀರುತ್ತದೆ.

#### ೧. ಉತ್ಪಾದನೆ ಹಾಗೂ ಉದ್ಯೋಗದ ಮೇಲೆ ಪರಿಣಾಮಗಳು

ಪೂರ್ಣೋದ್ಯೋಗದ ಮಟ್ಟಕ್ಕಿಂತ ಮುಂಚಿತವಾಗಿ ಸೌಮ್ಯ ಅತಿಪ್ರಸರಣವು ಉತ್ಪಾದನೆ, ಲಾಭ, ಬಂಡವಾಳ ಹೂಡುವಿಕೆ, ವ್ಯವಹಾರ ಹಾಗೂ ಉದ್ಯೋಗಾವಕಾಶಗಳನ್ನು ತ್ವರಿತಗೊಳಿಸಿ ಆರ್ಥಿಕ ಅಭಿವೃದ್ಧಿ ಸಾಧಿಸಲು ಸಹಾಯಕಾರಿಯಾಗುತ್ತದೆ. ಏಕೆಂದರೆ ಉತ್ಪಾದನಾ ವೆಚ್ಚಕ್ಕಿಂತ ಬೆಲೆಗಳು ಅಧಿಕವಾಗಿದ್ದು ಲಾಭದ ಪ್ರಮಾಣ ಹೆಚ್ಚುತ್ತದೆ.

ಆದರೆ ಪೂರ್ಣೋದ್ಯೋಗದ ನಂತರ ಅನಿಯಂತ್ರಿತ ನಾಗಾಲೋಟದ ಅತಿಪ್ರಸರಣವು ಉತ್ಪಾದನೆಯನ್ನು ಕಡಿತಗೊಳಿಸಿ ನಿರುದ್ಯೋಗದ ಪ್ರಮಾಣವನ್ನು ಅಧಿಕಗೊಳಿಸುತ್ತದೆ. ಇದು ಆರ್ಥಿಕ ಅಭಿವೃದ್ಧಿಗೆ ಮಾರಕವಾಗಿದೆ. ಹಣದ ಮೌಲ್ಯ ಇಳಿಮುಖವಾಗಿ ಉಳಿತಾಯ ಹಾಗೂ ಬಂಡವಾಳ ಹೂಡುವಿಕೆಗಳಲ್ಲಿ ಹಿನ್ನಡೆಯನ್ನುಂಟು ಮಾಡುತ್ತದೆ. ಉತ್ಪಾದಕರು ಭವಿಷ್ಯದಲ್ಲಿ ಎದುರಾಗುವ ಉತ್ಪಾದನಾ ಗಂಡಾಂತರ ಎದುರಿಸಲು

ಹಿಂಜರಿಯುತ್ತಾರೆ. ಅವರು ಕೇವಲ ದಾಸ್ತಾನು ಹೆಚ್ಚಿಸಿ, ಶೀಘ್ರ ಲಾಭ ಗಳಿಸಲು ಪ್ರಯತ್ನಿಸುತ್ತಾರೆ. ಇದು ಕಳ್ಳ ದಾಸ್ತಾನು ಹೆಚ್ಚಿಸಿ, ಕೃತಕ ಕೊರತೆಯನ್ನುಂಟು ಮಾಡುತ್ತದೆ. ಇದು ದೇಶವನ್ನು ದಕ್ಷ ಉತ್ಪಾದನಾ ನಿರ್ವಹಣೆಯಿಂದ ಮಾರುಕಟ್ಟೆ ಕೈಚಳಕ ಪ್ರದರ್ಶನಕ್ಕೆ ಎಡಮಾಡಿ ಮಾರುಕಟ್ಟೆ ದುರವ್ಯವಹಾರಕ್ಕೆ ನಾಂದಿಹಾಡುತ್ತದೆ. ಇದು ಮಾರುಕಟ್ಟೆಯನ್ನು ಗ್ರಾಹಕರ ಮಾರುಕಟ್ಟೆಯಿಂದ ಮಾರುವವರ ಮಾರುಕಟ್ಟೆಗೆ ಪರಿವರ್ತಿಸುತ್ತದೆ.

**೨. ರಾಷ್ಟ್ರೀಯ ವರಮಾನ ಹಂಚಿಕೆಯ ಮೇಲೆ ಪರಿಣಾಮಗಳು**

ಅತಿಪ್ರಸರಣವು ವಿವಿಧ ಸಮುದಾಯದ ಮೇಲೆ ಹೇಗೆ ಪರಿಣಾಮ ಬೀರುತ್ತದೆಂದು ಈ ಕೆಳಗಿನ ಅಂಶಗಳಿಂದ ತಿಳಿಯುತ್ತದೆ.

**೧. ಸಾಲ ನೀಡುವವರು ಹಾಗೂ ಸಾಲ ಪಡೆಯುವವರು :** ಅತಿಪ್ರಸರಣ ಸಮಯದಲ್ಲಿ ಸಾಲ ನೀಡುವವರು ಪ್ರತಿಕೂಲ ಪರಿಸ್ಥಿತಿ ಎದುರಿಸುತ್ತಾರೆ. ಆದರೆ ಸಾಲ ಪಡೆದವರು ಅನುಕೂಲ ಪರಿಸ್ಥಿತಿ ಹೊಂದುತ್ತಾರೆ. ಏಕೆಂದರೆ ಇಲ್ಲಿ ಬೆಲೆಗಳು ಏರಿ, ಹಣದ ಮೌಲ್ಯ ಇಳಿಕೆಯಾಗುವುದರಿಂದ ಸಾಲ ನೀಡಿದವರು, ಸಾಲ ನೀಡಿದಾಗ ಇದ್ದ ಹಣದ ಮೌಲ್ಯ ಸಾಲ ಮರಳಿ ಪಡೆಯುವಾಗ ಇರುವುದಿಲ್ಲ. ಆದ್ದರಿಂದ ಅವರು ಹಾನಿಗೊಳಗಾಗುತ್ತಾರೆ. ಅದೇ ರೀತಿ ಪಡೆದವರು ಸಾಲ ಪಡೆದಾಗ ಅಧಿಕ ಹಣದ ಮೌಲ್ಯವಿದ್ದು, ಸಾಲ ಮರಳಿಸುವಾಗ ಹಣದ ಮೌಲ್ಯ ಕಡಿಮೆ ಇರುವುದರಿಂದ ಲಾಭ ಹೊಂದುತ್ತಾರೆ.

**೨. ರೈತ ವರ್ಗ :** ರೈತರು ತಾವು ಬೆಳೆದ ಬೆಳೆಗಳಿಗೆ ಅಧಿಕ ಬೆಲೆ ಪಡೆಯುವುದರಿಂದ ಲಾಭ ಹೊಂದುತ್ತಾರೆ.

**೩. ಕೂಲಿ ಹಾಗೂ ವೇತನ ಪಡೆಯುವವರು :** ಕೂಲಿ ಹಾಗೂ ವೇತನ ಮಟ್ಟದಲ್ಲಿ ಪರಿಣಾಮಕಾರಿ ಬದಲಾವಣೆಯಿಲ್ಲದೆ ಬೆಲೆಗಳು ನಿರಂತರವಾಗಿ ಏರುವುದರಿಂದ ಕೂಲಿಕಾರರು ಹಾಗೂ ವೇತನ ಪಡೆಯುವವರು, ಅತಿಪ್ರಸರಣದಲ್ಲಿ ಕಷ್ಟವನ್ನು ಅನುಭವಿಸುತ್ತಾರೆ. ಅವರು ತಮ್ಮ ಕೂಲಿಗೆ ಹಾಗೂ ವೇತನಕ್ಕೆ ಕಡಿಮೆ ಪ್ರಮಾಣದ ವಸ್ತುಗಳನ್ನು ಹಾಗೂ ಸೇವೆಗಳನ್ನು ಪಡೆಯುತ್ತಾರೆ.

**೪. ಸ್ಥಿರ ಹಾಗೂ ನಿಗದಿತ ಆದಾಯದ ಸಮೂಹ :** ಅತಿಪ್ರಸರಣದಲ್ಲಿ ನಿವೃತ್ತಿ ವೇತನ, ಬ್ಯಾಂಕ್ ಬಡ್ಡಿ, ಬಾಡಿಗೆ ಪಡೆದು ಜೀವನ ನಡೆಸುವವರು, ನಿರಂತರ ಬೆಲೆಗಳು ಏರುವುದರಿಂದ ಅವರ ಜೀವನ ಮಟ್ಟ ಕಡಿಮೆಯಾಗಿ ಅತಿ ಕಷ್ಟವನ್ನು ಹೊಂದುತ್ತಾರೆ.

**೫. ಸಂಘಟನೆಕಾರರು ಹಾಗೂ ವ್ಯಾಪಾರಿಗಳು :** ಅತಿಪ್ರಸರಣದಲ್ಲಿ ಬೆಲೆಗಳು ನಿರಂತರವಾಗಿ ಏರುವುದರಿಂದ ಸಂಘಟನಾಕಾರರು ಹಾಗೂ ವ್ಯಾಪಾರಿಗಳು ಅಧಿಕ ಲಾಭ ಗಳಿಸುತ್ತಾರೆ. ಅತಿಪ್ರಸರಣವು ಅವರಿಗೆ ವರದಾನವಾಗುತ್ತದೆ. ಏಕೆಂದರೆ ಅವರು ತಾವು ಮಾರುವ ವಸ್ತುಗಳ ಉತ್ಪಾದನಾ ವೆಚ್ಚಕ್ಕಿಂತ ಬೆಲೆಗಳು ಅಧಿಕವಾಗಿರುತ್ತದೆ.

೬. **ಬಂಡವಾಳ ಹೂಡುವಿಕೆದಾರರು :** ಅತಿಪ್ರಸರಣದಲ್ಲಿ ಕಂಪನಿಗಳು ಅಧಿಕ ಲಾಭ ಗಳಿಸುವುದರಿಂದ ಶೇರುದಾರರು ಅಧಿಕ ಡೆವ್ಹಿಡೆಂಡ್ ಪಡೆಯುವರು. ಇದು ಅವರಿಗೆ ಲಾಭದಾಯಕವಾಗಿದೆ. ಆದರೆ ಬಾಂಡ್ ಅಥವಾ ಸಾಲಪತ್ರ ಹೊಂದಿದವರು ನಿರ್ದಿಷ್ಟ ಬಡ್ಡಿ ಪಡೆಯುವುದರಿಂದ ಹಾನಿಗೊಳಗಾಗುವರು. ಏಕೆಂದರೆ ಅವರ ಬಡ್ಡಿ, ಆದಾಯ ನಿರ್ದಿಷ್ಟವಿದ್ದು, ಹಣದ ಕೊಂಡುಕೊಳ್ಳುವ ಶಕ್ತಿ ಕಡಿಮೆಯಾಗಿರುತ್ತದೆ.

೭. **ಗ್ರಾಹಕರು :** ಅತಿಪ್ರಸರಣದಲ್ಲಿ ಬೆಲೆಗಳು ನಿರಂತರವಾಗಿ ಏರುವುದರಿಂದ ಹಾಗೂ ಹಣದ ಕೊಂಡುಕೊಳ್ಳುವ ಸಾಮರ್ಥ್ಯ ಇಳಿಯುವುದರಿಂದ ಗ್ರಾಹಕರು ತೊಂದರೆಗೊಳಗಾಗುತ್ತಾರೆ.

೮. **ಜೀವನ ಮಟ್ಟ :** ಬಡವರು ಹಾಗೂ ಮಧ್ಯಮ ವರ್ಗದವರು ಅತಿಪ್ರಸರಣದ ಕಾರಣದಿಂದ ಕಷ್ಟಕ್ಕೆ ಒಳಗಾಗುತ್ತಾರೆ. ಅದರ ಜೀವನ ಮಟ್ಟ ಕುಸಿಯುತ್ತದೆ. ಬಡವರು ಅಧಿಕ ಬಡವರಾಗುತ್ತಾರೆ. ಮಧ್ಯಮ ವರ್ಗದವರು ಬಡವರ ಗುಂಪಿಗೆ ಸೇರಿ ದೇಶದಲ್ಲಿ ಬಡತನದ ಪ್ರಮಾಣ ಅಧಿಕವಾಗುವುದು.

### ೩. ಸರ್ಕಾರದ ಮೇಲೆ ಪರಿಣಾಮ

ಅತಿಪ್ರಸರಣವು ಸರ್ಕಾರದ ಮೇಲೆ ಮಿಶ್ರ ಪರಿಣಾಮ ಬೀರುತ್ತದೆ. ಪ್ರಾರಂಭದಲ್ಲಿ ಉತ್ಪಾದನೆ-ಲಾಭ ಹೆಚ್ಚಿ ಸರ್ಕಾರ ಅಧಿಕ ತೆರಿಗೆ ಪಡೆಯುವುದರಿಂದ ಅದು ಅಧಿಕ ಆದಾಯಗಳಿಸುತ್ತದೆ. ಆದಾಯ ತೆರಿಗೆ, ಕಾರ್ಪೋರೇಶನ್ ತೆರಿಗೆ ಹಾಗೂ ಮಾರಾಟ ತೆರಿಗೆಗಳು ಸರ್ಕಾರಕ್ಕೆ ಅಧಿಕ ತೆರಿಗೆ ಆದಾಯ ತರುತ್ತವೆ.

ಆದರೆ ಸರ್ಕಾರ ಅತಿಪ್ರಸರಣದಲ್ಲಿ ಹಲವು ತೊಂದರೆಗಳನ್ನು ಎದುರಿಸುತ್ತದೆ. ಅತಿಪ್ರಸರಣವು ಅನನುಕೂಲಕರ ಸಂದಾಯ ಬಾಕಿಯನ್ನು ಸೃಷ್ಟಿಸುತ್ತದೆ. ಏಕೆಂದರೆ ಅತಿಪ್ರಸರಣವು ಆಮದು ಪ್ರಮಾಣವನ್ನು ಹೆಚ್ಚಿಸಿ ರಫ್ತುಗಳನ್ನು ಕಡಿಮೆಗೊಳಿಸುತ್ತದೆ.

ಅತಿಪ್ರಸರಣವು ಕಳ್ಳ ದಾಸ್ತಾನು, ಕಳ್ಳ ವ್ಯಾಪಾರ, ಕಾರ್ಮಿಕರ ಮುಷ್ಕರಗಳು ವರ್ಗಕಲಹ, ಕಲಬೆರಿಕೆ, ಲಂಚತನದ ಪ್ರಮಾಣವು ಅಧಿಕಗೊಳಿಸುವುದರಿಂದ ಸರ್ಕಾರಕ್ಕೆ ಆಡಳಿತಾತ್ಮಕ ತೊಂದರೆಗಳನ್ನು ಸೃಷ್ಟಿಸುತ್ತದೆ. ಇದು ರಾಜಕೀಯ ಅಸ್ಥಿರತೆಗೂ ಕಾರಣ ವಾಗಬಹುದು. ಇದು ಅಂತಾರಾಷ್ಟ್ರೀಯ ಮಟ್ಟದಲ್ಲಿ ವಿದೇಶಿ ವಿನಿಮಯದ ದರದಲ್ಲಿ ಬದಲಾವಣೆ ಕಾರಣವಾಗುವುದು. ಇದು ಹಣದ ಅಪಮೌಲ್ಯದ ಪ್ರಕರಣಗಳನ್ನು ಹೆಚ್ಚಿಸುವುದು, ವಿದೇಶಿ ನೇರ ಬಂಡವಾಳ ಹೂಡುವಿಕೆ ಪ್ರಮಾಣವನ್ನು ತಗ್ಗಿಸುವುದು.

ಮೊದಲನೆಯ ಮಹಾಯುದ್ಧ ನಂತರ ಜರ್ಮನಿ ಹಾಗೂ ೧೯೯೭-೯೮ರಲ್ಲಿ ದಕ್ಷಿಣ ಏಷ್ಯಾ ದೇಶಗಳು ಎದುರಿಸುವ ಆರ್ಥಿಕ ಪರಿಸ್ಥಿತಿಗಳು ಆರ್ಥಿಕ ಇತಿಹಾಸದಲ್ಲಿ ಒಂದು ಪ್ರಮುಖ ಉದಾಹರಣೆಗಳು.

## ಅತಿಪ್ರಸರಣದ ನಿಯಂತ್ರಣ

ಆರ್ಥಿಕ ಸ್ಥಿರತೆಯನ್ನು ಕಾಪಾಡಿಕೊಂಡು ದೇಶ ತನ್ನ ಆರ್ಥಿಕ ಅಭಿವೃದ್ಧಿ ಸಾಧಿಸಲು ದೇಶದಲ್ಲಿಯ ಅತಿಪ್ರಸರಣದ ಪ್ರಮಾಣವನ್ನು ಕಂಡುಹಿಡಿಯಬೇಕು. ಅತಿಪ್ರಸರಣದ ದರವನ್ನು ಈ ಸೂತ್ರದಿಂದ ಲೆಕ್ಕಾಚಾರ ಮಾಡುತ್ತಾರೆ.

$(M + V = P + Q)$

ಇಲ್ಲಿ

$M$ = ಎಂದರೆ ಹಣದ ಪೂರೈಕೆ ದರ

$V$ = ಎಂದರೆ ದ್ರವ್ಯತಾ ಪ್ರಮಾಣ

$P$ = ಎಂದರೆ ನೈಜ ಆದಾಯದ ಹೆಚ್ಚಳದ ದರ

$Q$ = ಎಂದರೆ ಅತಿಪ್ರಸರಣದ ದರ

ಉದಾಹರಣೆಗಾಗಿ

ಹಣದ ಪೂರೈಕೆ ದರ ಶೇ. ೧೨ರಷ್ಟಿದ್ದು, ದ್ರವ್ಯತಾ ಪ್ರಮಾಣ ಶೇ. ೦ವಿದ್ದು, ನೈಜ ಆದಾಯದ ಹೆಚ್ಚಳದ ದರ ಶೇ. ೪, ಇದ್ದಾಗ, ಅತಿಪ್ರಸರಣದ ದರ ಈ ಕೆಳಗಿನಂತಿರುತ್ತದೆ.

$12\ \% + 0\ \% = P + 4\%$

$P = 12\% - 4\ \% = 8\ \%$

ಇದಲ್ಲದೆ ಅತಿಪ್ರಸರಣವನ್ನು ಚಾಲ್ತಿ ಬೆಲೆಗಳ ಮಟ್ಟವನ್ನು, ಮೂಲ ವರ್ಷದ ಬೆಲೆಗೆ ಹೋಲಿಸುತ್ತಾರೆ. ಗ್ರಾಹಕರ ಬೆಲೆ ಸೂಚಕದಿಂದ ಪ್ರತಿ ತಿಂಗಳು ಗ್ರಾಹಕರು ಖರೀದಿಸಲು ಪ್ರಮುಖ ವಸ್ತುಗಳ ಬೆಲೆಗಳನ್ನು ವಿಶ್ಲೇಷಿಸುತ್ತಾರೆ. ಹೀಗೆ ಅತಿಪ್ರಸರಣ ದರವನ್ನು ಶೋಧಿಸುತ್ತಾರೆ.

ಅಂದರೆ ಅತಿಪ್ರಸರಣದ ದರ ಶೇ. ೮ರಷ್ಟಿದೆ ಎಂದರ್ಥ. ಈಗ ಭಾರತದಲ್ಲಿ ಅತಿಪ್ರಸರಣದ ದರ ಶೇ. ೪.೫. ರಷ್ಟಿದೆ. ಆದರೆ ಅತಿಪ್ರಸರಣದ ದರ ಅಧಿಕವಾಗಿದ್ದಾಗ ಅಥವಾ ಬೆಲೆಗಳು ಏರುತ್ತಾ ಹೋದಂತೆ ಅದನ್ನು ಪ್ರಾರಂಭದಲ್ಲೇ ವಿವಿಧ ಕ್ರಮಗಳಿಂದ ನಿಯಂತ್ರಿಸಬೇಕು. ಇಲ್ಲದಿದ್ದರೆ ಅದು ನಾಗಲೋಟ ಅತಿಪ್ರಸರಣದ ಮಟ್ಟಕ್ಕೆ ತಲುಪಿ ನಿಯಂತ್ರಿಸುವುದು ಅಸಾಧ್ಯವಾಗಿ ಆರ್ಥಿಕ ವ್ಯವಸ್ಥೆಯ ಮೇಲೆ ದುಷ್ಪರಿಣಾಮ ಬೀರುತ್ತದೆ.

ಅತಿಪ್ರಸರಣ ನಿಯಂತ್ರಣದ ಕ್ರಮಗಳು ಈ ಕೆಳಗಿನಂತಿವೆ.

### ೧. ಹಣಕಾಸಿನ ಕ್ರಮಗಳು

ದೇಶದ ಕೇಂದ್ರ ಬ್ಯಾಂಕು ಅತಿಪ್ರಸರಣ ನಿಯಂತ್ರಿಸಲು ಹಣದ ಪೂರೈಕೆಯನ್ನು ನಿಯಂತ್ರಿಸುವುದಕ್ಕಾಗಿ ಈ ಕೆಳಗಿನ ಕ್ರಮಗಳನ್ನು ಕೈಗೊಳ್ಳುತ್ತದೆ.

೧. ಬ್ಯಾಂಕಿನ ಪತ್ತಿನ ನಿಯಂತ್ರಣದಿಂದ ದೇಶದಲ್ಲಿಯ ಹಣದ ಪೂರೈಕೆಯನ್ನು ಕಡಿಮೆಗೊಳಿಸುತ್ತದೆ.

೨. ಬ್ಯಾಂಕ್ ಬಡ್ಡಿದರವನ್ನು ಹೆಚ್ಚಿಸಿ, ಸಾಲ ಹಣದ ಪೂರೈಕೆಯನ್ನು ಕಡಿಮೆ ಗೊಳಿಸುತ್ತದೆ.
೩. ಮುಕ್ತ ಮಾರುಕಟ್ಟೆ ವ್ಯವಹಾರದಿಂದ ಸರ್ಕಾರ ಸಾಲ ಪತ್ರಗಳನ್ನು ಮಾರಿ, ಅಧಿಕ ಮೊತ್ತದ ಹಣವನ್ನು ಸಂಗ್ರಹಿಸುತ್ತದೆ.
೪. ಬ್ಯಾಂಕುಗಳ ಕಾಯ್ದಿಟ್ಟ ಹಣದ ಪ್ರಮಾಣ (C.R.R.)ವನ್ನು ಹೆಚ್ಚಿಸಿ, ಬ್ಯಾಂಕ್ ಸಾಲಗಳನ್ನು ನಿಯಂತ್ರಿಸುತ್ತದೆ.
೫. ಕೇಂದ್ರ ಬ್ಯಾಂಕು ತನ್ನ ಬ್ಯಾಂಕ್‌ದರವನ್ನು ಹೆಚ್ಚಿಸಿ, ಬ್ಯಾಂಕ್ ಸಾಲಗಳನ್ನು ನಿಯಂತ್ರಿಸುತ್ತದೆ.
೬. ಕೇಂದ್ರ ಬ್ಯಾಂಕು ಒಟ್ಟು ಹಣದ ಗಾತ್ರವನ್ನು ನಿಯಂತ್ರಿಸಲು, ಆಯ್ದ ಪತ್ತಿನ ನಿಯಂತ್ರಣದ ವಿಧಾನವನ್ನು ಅನುಸರಿಸುತ್ತದೆ.

ಈ ಎಲ್ಲ ವಿಧಾನಗಳಿಂದ ಒಟ್ಟು ಬೇಡಿಕೆಯ ಪ್ರಮಾಣ ಹಾಗೂ ಬೆಲೆಗಳನ್ನು ನಿಯಂತ್ರಿಸಬಹುದಾಗಿದೆ.

### ೨. ಕೋಶೀಯ ಕ್ರಮಗಳು

ಸರ್ಕಾರ ಅತಿಪ್ರಸರಣವನ್ನು ನಿಯಂತ್ರಿಸಲು ಈ ಕೆಳಗಿನ ಕೋಶೀಯ ಕ್ರಮಗಳನ್ನು ಕೈಗೊಳ್ಳುತ್ತದೆ.

೧. ಅನವಶ್ಯಕ ಸಾರ್ವಜನಿಕ ಖರ್ಚನ್ನು ಸರ್ಕಾರ ಕಡಿತಗೊಳಿಸುತ್ತದೆ.
೨. ಸರ್ಕಾರ ಸಾರ್ವಜನಿಕರಿಗೆ ಬಾಂಡಗಳನ್ನು ಮಾರಿ ಸಾಲ ಎತ್ತುತ್ತದೆ.
೩. ತೆರಿಗೆ ಕಳ್ಳತನವನ್ನು ನಿಯಂತ್ರಿಸುತ್ತದೆ.
೪. ನೇರ ತೆರಿಗೆಗಳ ದರವನ್ನು ಹೆಚ್ಚಿಸುವುದು.
೫. ಸರ್ಕಾರ ತನ್ನ ವಿವಿಧ ತಂತ್ರಗಳಿಂದ ದೇಶದಲ್ಲಿಯ ಒಟ್ಟು ಉಳಿತಾಯ ಪ್ರಮಾಣವನ್ನು ಹೆಚ್ಚಿಸುವುದು.
೬. ಸರ್ಕಾರ ಉಳಿತಾಯ ಮುಂಗಡ ಪತ್ರವನ್ನು ಮಂಡಿಸುತ್ತದೆ.

### ೩. ಇತರೆ ಕ್ರಮಗಳು

ಸರ್ಕಾರ ಅತಿಪ್ರಸರಣವನ್ನು ನಿಯಂತ್ರಿಸಲು ಈ ಕೆಳಗಿನ ಕ್ರಮಗಳನ್ನು ಕೈಗೊಳ್ಳುತ್ತದೆ.

೧. ಜೀವನಾಶ್ಯಕ ವಸ್ತುಗಳನ್ನು ಪಡಿತರ ಪದ್ಧತಿಯಿಂದ ಹಂಚಿ, ಬೆಲೆ ನಿಯಂತ್ರಿಸುತ್ತದೆ.
೨. ಸಂಪನ್ಮೂಲಗಳನ್ನು ಯೋಗ್ಯ ರೀತಿಯಲ್ಲಿ ಬಳಸಿ, ಉತ್ಪಾದನೆಯನ್ನು ಹೆಚ್ಚಿಸು ವುದು.
೩. ಅವಶ್ಯಕ ವಸ್ತುಗಳ ಆಮದುವನ್ನು ಪ್ರೋತ್ಸಾಹಿಸುವುದು.
೪. ಕೂಲಿಯ ಮಟ್ಟ ಹಾಗೂ ಲಾಭ ಪ್ರಮಾಣವನ್ನು ನಿಯಂತ್ರಿಸುವುದು.
೫. ಕಪ್ಪು ಹಣವನ್ನು ಹೊರಗೆಳೆಯುವುದು. ಉದಾಹರಣೆಗಾಗಿ ಆದಾಯ ತೆರಿಗೆ ದಾಳಿಗಳು.

೬. ಜನಸಂಖ್ಯೆಯನ್ನು ನಿಯಂತ್ರಿಸುವುದು.

೭. ಕಳ್ಳದಾಸ್ತಾನು ಹಾಗೂ ಲಾಭಕೋರತನವನ್ನು ನಿಯಂತ್ರಿಸುವುದು. ಈ ಎಲ್ಲ ಕ್ರಮಗಳಿಂದ ಸರ್ಕಾರ ಹಾಗೂ ಕೇಂದ್ರ ಬ್ಯಾಂಕುಗಳು ಕೂಡಿಕೊಂಡು, ಹಣದ ಪೂರೈಕೆ ಬೇಡಿಕೆ ಪ್ರಮಾಣ ಹಾಗೂ ಪೂರೈಕೆಯ ಪ್ರಮಾಣವನ್ನು ಯೋಗ್ಯ ರೀತಿಯಲ್ಲಿ ನಿಭಾಯಿಸಿ ಬೆಲೆಗಳ ಅತಿಪ್ರಸರಣವನ್ನು ನಿಯಂತ್ರಿಸುತ್ತದೆ.

## ಅನಪ್ರಸರಣ

**ಅರ್ಥ :** ಅನಪ್ರಸರಣ ಅಥವಾ ಹಣಕುಗ್ಗುವಿಕೆಯು ಅತಿಪ್ರಸರಣದ ತದ್ವಿರುದ್ಧವಾದ ಆರ್ಥಿಕ ಪರಿಸ್ಥಿತಿಯಾಗಿದೆ. ವಸ್ತುಗಳು ಹಾಗೂ ಸೇವೆಗಳ ಉತ್ಪಾದನೆಯಲ್ಲಿ ಯಾವುದೇ ಬದಲಾವಣೆಯಿಲ್ಲದೆ ಯಥಾಸ್ಥಿತಿಯಲ್ಲಿದ್ದು, ಹಣದ ಪೂರೈಕೆ ಹಾಗೂ ಹಣದ ಚಲಾವಣೆ ಕಡಿಮೆಯಾಗಿ ಬೇಡಿಕೆ ಪ್ರಮಾಣವು ಪೂರೈಕೆಯ ಪ್ರಮಾಣಕ್ಕಿಂತ ಕಡಿಮೆಯಾಗುವುದರಿಂದ ಬೆಲೆಗಳು ಸತತ ಇಳಿಯುತ್ತವೆ ಹಾಗೂ ಹಣದ ಮೌಲ್ಯ ಏರುತ್ತವೆ. ಈ ಆರ್ಥಿಕ ಪರಿಸ್ಥಿತಿಗೆ ಅನಪ್ರಸರಣ ಎನ್ನುತ್ತಾರೆ. ಬೆಲೆಗಳು ಸತತವಾಗಿ ಇಳಿಯುವುದರಿಂದ ಉತ್ಪಾದಕರಿಗೆ ಹಾನಿಯಾಗುತ್ತದೆ. ಈ ಪರಿಸ್ಥಿತಿಯಲ್ಲಿ ಉತ್ಪಾದನೆ, ವರಮಾನ ಹಾಗೂ ಉದ್ಯೋಗಾವಕಾಶಗಳು ಕಡಿಮೆಯಾಗುತ್ತವೆ. ಲಾಭದ ಪ್ರಮಾಣ ಹಾಗೂ ಬಂಡವಾಳ ಹೂಡುವಿಕೆ ಕಡಿಮೆಯಾಗಿ, ಉತ್ಪಾದನೆ ಇಳಿಮುಖವಾಗುವುದರಿಂದ ನಿರುದ್ಯೋಗದ ಪ್ರಮಾಣ ಅಧಿಕಗೊಳ್ಳುತ್ತದೆ.

ಪ್ರೊ. ಪಾಲ್ ಐನ್‌ಜಿಗ್‌ರು ಅನಪ್ರಸರಣವು ಕೊಂಡುಕೊಳ್ಳುವ ಶಕ್ತಿಯ ಕಡಿತವು ಬೆಲೆ ಇಳಿತಕ್ಕೆ ಕಾರಣವಾಗುವ ಅಸಮತೋಲನ ಪರಿಸ್ಥಿತಿಯಾಗಿದೆ ಎಂದು ಬರೆದಿದ್ದಾರೆ.

ಕ್ರೊಥರರ ಪ್ರಕಾರ ಹಣದ ಮೌಲ್ಯವು ಹೆಚ್ಚುವ ಸ್ಥಿತಿಗೆ ಅಥವಾ ಬೆಲೆಗಳ ಇಳಿಮುಖವಾಗುವ ಆರ್ಥಿಕ ಸನ್ನಿವೇಶಕ್ಕೆ ಅನಪ್ರಸರಣ ಎನ್ನುತ್ತಾರೆ ಎಂದು ಅಭಿಪ್ರಾಯಪಡುತ್ತಾರೆ.

## ಲಕ್ಷಣಗಳು

೧. ಅನಪ್ರಸರಣವು ಹಣದ ಪೂರೈಕೆಯಲ್ಲಿ ಕಡಿಮೆಯಾದಾಗ ಉದ್ಭವಿಸುವ ಆರ್ಥಿಕ ಸನ್ನಿವೇಶವಾಗಿದೆ.

೨. ಸಾರ್ವತ್ರಿಕ ಬೆಲೆಗಳ ಮಟ್ಟದಲ್ಲಿ ಇಳಿಕೆಯಾಗುತ್ತದೆ. ಬೆಲೆಗಳ ಕುಸಿತ ಉಂಟಾಗುತ್ತದೆ.

೩. ಹಣದ ಮೌಲ್ಯದಲ್ಲಿ ಹೆಚ್ಚಳವಾಗುತ್ತದೆ.

೪. ಆದಾಯ ಇಳಿಮುಖವಾಗಿ ಸಾರ್ವಜನಿಕ ಕೊಂಡುಕೊಳ್ಳುವ ಸಾಮರ್ಥ್ಯವು ಕಡಿಮೆಯಾಗುವುದರಿಂದ ವಸ್ತುಗಳ ಹಾಗೂ ಸೇವೆಗಳ ಬೇಡಿಕೆ ಪ್ರಮಾಣ ಕಡಿಮೆಯಾಗುತ್ತದೆ.

೫. ಒಟ್ಟು ಬೇಡಿಕೆ ಪ್ರಮಾಣಕ್ಕಿಂತ ಒಟ್ಟು ಪೂರೈಕೆಗಳ ಪ್ರಮಾಣ ಅಧಿಕವಾಗಿ ಮಾರುಕಟ್ಟೆಯಲ್ಲಿ ಮಾರಾಟವಾಗದೇ ಉಳಿದ ವಸ್ತುಗಳ ಪ್ರಮಾಣ ಅಧಿಕವಾಗುತ್ತದೆ.

೬. ನಿರುದ್ಯೋಗ ಸಾರ್ವತ್ರಿಕವಾಗಿ ಹೆಚ್ಚಿ, ಆರ್ಥಿಕ ಚಟುವಟಿಕೆಗಳು ಕುಗ್ಗುತ್ತವೆ.

## ಅನಪ್ರಸರಣದ ಕಾರಣಗಳು

ಅನಪ್ರಸರಣದ ಕಾರಣಗಳು ಈ ಕೆಳಗಿನಂತಿವೆ.

**೧. ಹಣದ ಪೂರೈಕೆಯಲ್ಲಿ ಕುಸಿತ :** ಅನಪ್ರಸರಣಕ್ಕೆ ಪ್ರಮುಖ ಕಾರಣ ಹಣದ ಪೂರೈಕೆಯಲ್ಲಿ ಇಳಿಕೆಯಾಗುವುದು. ಕೇಂದ್ರ ಬ್ಯಾಂಕಿನ ನೋಟುಗಳ ಚಲಾವಣೆ ಹಾಗೂ ವಾಣಿಜ್ಯ ಬ್ಯಾಂಕುಗಳ ಪತ್ತಿನ ಸೃಷ್ಟಿಯಲ್ಲಿ ಕಡಿತವಾಗುವುದರಿಂದ ಹಣದ ಪೂರೈಕೆಯಲ್ಲಿ ಇಳಿಕೆ ಉಂಟಾಗುವುದು.

**೨. ತೆರಿಗೆಯ ಅಥವಾ ಕೋಶೀಯ ನೀತಿ :** ತೆರಿಗೆ ದರಗಳಲ್ಲಿ ಹೆಚ್ಚಳ, ಸಾರ್ವಜನಿಕ ವೆಚ್ಚದಲ್ಲಿ ಇಳಿಕೆ ಮುಂತಾದ ಸರ್ಕಾರದ ಕ್ರಮಗಳಿಂದ ಹಣದ ಚಲಾವಣೆ ಕುಸಿದು ಬೇಡಿಕೆ ಪ್ರಮಾಣ ಕಡಿಮೆಯಾಗುತ್ತದೆ.

**೩. ಮಿತಿಮೀರಿದ ಪೂರೈಕೆ :** ಅತ್ಯಧಿಕ ಬಂಡವಾಳ ಹೂಡುವಿಕೆ, ಮಿತಿಮೀರಿದ ಉತ್ಪಾದನೆ, ಹುಲುಸು ಬೆಳೆಗಳು ಹಾಗೂ ಉತ್ಪಾದಕರ ತಪ್ಪು ಮಾರುಕಟ್ಟೆ ಸಮೀಕ್ಷೆಗಳಿಂದ ಮಾರುಕಟ್ಟೆಯಲ್ಲಿ ವಸ್ತುಗಳ ಪೂರೈಕೆಯು ಬೇಡಿಕೆಯ ಮಟ್ಟಕ್ಕಿಂತ ಅತ್ಯಧಿಕವಾಗಿರುತ್ತದೆ.

**೪. ಬೇಡಿಕೆಯಲ್ಲಿ ಇಳಿಕೆ :** ರಾಷ್ಟ್ರೀಯ ವರಮಾನದಲ್ಲಿ ಇಳಿಕೆ, ಬ್ಯಾಂಕ್ ಪತ್ತಿನ ಸೃಷ್ಟಿಯಲ್ಲಿ ಇಳಿಕೆ, ಬಂಡವಾಳ ಹೂಡುವಿಕೆಯಲ್ಲಿ ಇಳಿಕೆ, ಲಾಭದಲ್ಲಿ ಇಳಿಕೆ, ಆದಾಯ ಅಸಮಾನತೆ, ನಿರುದ್ಯೋಗ ಹಾಗೂ ಬಡತನದ ಕಾರಣಗಳಿಂದ ಪರಿಣಾಮಕಾರಿ ಬೇಡಿಕೆಯಲ್ಲಿ ಇಳಿತವಾಗುವುದರಿಂದ ಉತ್ಪಾದನೆ ಹಾಗೂ ಉದ್ಯೋಗದ ಮೇಲೆ ದುಷ್ಪರಿಣಾಮ ಉಂಟಾಗುತ್ತದೆ.

**೫. ಸರ್ಕಾರದ ಹಣಕಾಸಿನ ನೀತಿ :** ಸರ್ಕಾರದ ಹಾಗೂ ಕೇಂದ್ರಬ್ಯಾಂಕಿನ ತುಟ್ಟಿಯ ಹಣಕಾಸು ನೀತಿಯ ಕಾರಣದಿಂದ ಅಧಿಕ ಬ್ಯಾಂಕ್ ದರ, ಮುಕ್ತ ಮಾರುಕಟ್ಟೆಯಲ್ಲಿ ಸಾಲ ಪತ್ರಗಳ ಮಾರಾಟ, ಅಧಿಕ ಕಾಯ್ದಿಟ್ಟ ನಿಧಿಯ ಪ್ರಮಾಣದಿಂದ ಹಣದ ಚಲಾವಣೆ ಕಡಿಮೆಯಾಗಿ ಬೇಡಿಕೆ ಹಾಗೂ ಬೆಲೆಗಳು ಕಡಿಮೆಯಾಗುತ್ತವೆ.

## ಅನಪ್ರಸರಣದ ಪರಿಣಾಮಗಳು

ಅನಪ್ರಸರಣವು ಅತಿಪ್ರಸರಣಕ್ಕಿಂತಲೂ ಅಪಾಯಕಾರಿಯಾಗಿದೆ.

### ೧. ಉತ್ಪಾದನೆ ಹಾಗೂ ಉದ್ಯೋಗದ ಮೇಲೆ ಪರಿಣಾಮಗಳು

ಅನಪ್ರಸರಣವು ಉತ್ಪಾದನೆ ಹಾಗೂ ಉದ್ಯೋಗದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ. ಬೆಲೆಗಳು ನಿರಂತರ ಇಳಿಯುವುದರಿಂದ ಲಾಭದ ಪ್ರಮಾಣ ಕಡಿಮೆ

ಯಾಗುತ್ತದೆ. ಕೆಲವರಿಗೆ ನಷ್ಟ ಆಗುತ್ತದೆ. ಇದರಿಂದ ಉತ್ಪಾದನೆ ಕುಂಠಿತಗೊಳ್ಳುತ್ತದೆ. ಕೆಲವು ಕಾರ್ಖಾನೆಗಳು ಹಾಗೂ ವ್ಯವಹಾರಿ ಸಂಘಟನೆಗಳು ಮುಚ್ಚಿ ಬಿಡುತ್ತವೆ.

ಇದು ಉತ್ಪಾದನಾ ಕ್ಷೇತ್ರದಲ್ಲಿ ಆಶಾರಹಿತವಾದ ಹಾಗೂ ನಿರಾಶೆಯ ಸನ್ನಿವೇಶ ಮೂಡಿಸಿ, ನಿಷ್ಕ್ರಿಯ ಆರ್ಥಿಕತೆಯನ್ನು ಹುಟ್ಟಿಸುತ್ತದೆ. ಇದರಿಂದ ಆದಾಯ, ಲಾಭ, ಬೇಡಿಕೆ ಹಾಗೂ ಜನರ ಜೀವನಮಟ್ಟದಲ್ಲಿ ಇಳಿಕೆ ಪ್ರಾರಂಭವಾಗುತ್ತದೆ. ಇದರಿಂದ ಕಾರ್ಖಾನೆಗಳು ಹಾಗೂ ವ್ಯವಹಾರಿ ಸಂಘಟನೆಗಳು ದಿವಾಳಿಯಾಗುತ್ತವೆ. ಈ ಪರಿಣಾಮ ಸಾಲ ಕೊಟ್ಟ ಬ್ಯಾಂಕುಗಳಿಗೂ ತಟ್ಟುತ್ತದೆ. ಇದು ಉದ್ವಿಮೆಯ ರೋಗವನ್ನು ಸೃಷ್ಟಿಸುತ್ತದೆ.

**೨. ವಿತರಣೆಯ ಮೇಲೆ ಅನಪ್ರಸರಣದ ಪರಿಣಾಮಗಳು**

ಅನಪ್ರಸರಣ ವಿತರಣೆಯ ಮೇಲೆ ಹಾಗೂ ವಿವಿಧ ಸಮೂಹದ ಮೇಲೆ ಈ ರೀತಿ ಪರಿಣಾಮ ಬೀರುತ್ತವೆ.

**ಅ. ಕೂಲಿ ಹಾಗೂ ನಿರ್ದಿಷ್ಟ ಆದಾಯ ಪಡೆಯುವವರು :** ಅನಪ್ರಸರಣವು ಕೂಲಿ, ವೇತನ ಹಾಗೂ ನಿರ್ದಿಷ್ಟ ವೇತನ ಪಡೆಯುವವರಿಗೆ (ನಿವೃತ್ತಿ ವೇತನದಾರರು) ಲಾಭ ದಾಯಕವಾಗಿದೆ. ಅವರ ಜೀವನಮಟ್ಟ ಅಧಿಕವಾಗಿ ಅವರು ಅತ್ಯಂತ ಸುಖವಾಗಿರುತ್ತಾರೆ. ಏಕೆಂದರೆ ಬೆಲೆಗಳ ಇಳಿತ ಹಾಗೂ ಹಣದ ಮೌಲ್ಯದಲ್ಲಿಯ ಏರಿಕೆಯಿಂದ ಅವರು ಅನುಕೂಲ ಹೊಂದುತ್ತಾರೆ.

ಆದರೆ ಕೂಲಿ ಪಡೆಯುವ ಕಾರ್ಮಿಕರು, ಉದ್ಯೋಗ ಕಳೆದುಕೊಳ್ಳುವ ಭಯ ಹೊಂದಿರುತ್ತಾರೆ. ಕಾರ್ಖಾನೆಗಳು ಮುಚ್ಚಿ ನಿರುದ್ಯೋಗ ಹೆಚ್ಚುವುದರಿಂದ ಕಾರ್ಮಿಕರು ಅಸ್ಥಿರತೆಯಲ್ಲಿ ಕಾಲ ಕಳೆಯುತ್ತಾರೆ.

**ಆ. ಸಾಲಗಾರರು ಹಾಗೂ ಸಾಲಿಗರು :** ಅನಪ್ರಸರಣವು ಸಾಲಗಾರರಿಗೆ (ಸಾಲ ನೀಡುವವರು) ಅನುಕೂಲಕರವಾಗಿದ್ದು, ಸಾಲಿಗರಿಗೆ (ಸಾಲ ತೆಗೆದುಕೊಂಡುವರಿಗೆ) ಪ್ರತಿಕೂಲವಾಗಿದೆ. ಏಕೆಂದರೆ ಹಣದ ಮೌಲ್ಯ ಹೆಚ್ಚುವುದರಿಂದ ಸಾಲಗಾರರು, ಮೊದಲಿಗಿಂತಲೂ ಅಧಿಕ ಮೌಲ್ಯದ ಹಣ ಪಡೆಯುತ್ತಾರೆ. ಸಾಲಿಗರು ಮೊದಲಿಗಿಂತಲೂ ಅಧಿಕ ಮೌಲ್ಯದ ಹಣ ನೀಡುತ್ತಾರೆ.

**ಇ. ಹಣ ತೊಡಗಿಸುವವರು :** ಅನಪ್ರಸರಣ ಸಮಯದಲ್ಲಿ ಬ್ಯಾಂಕುಗಳಲ್ಲಿ ಹಣ ತೊಡಗಿಸಿ, ಬಡ್ಡಿ ಪಡೆಯುವವರು, ಅನುಕೂಲ ಪರಿಸ್ಥಿತಿ ಹೊಂದುತ್ತಾರೆ. ಆದರೆ ಕಾರ್ಖಾನೆಗಳ ಶೇರುಗಳಲ್ಲಿ ಹಣ ತೊಡಗಿಸಿದರು ಹಾನಿಗೊಳಗಾಗುತ್ತಾರೆ. ಅವರು ಕಡಿಮೆ ಡೆವ್ಹಿಡೆಂಡ್ ಅಥವಾ ಡೆವ್ಹಿಡೆಂಡ್ ಇಲ್ಲದ ಪರಿಸ್ಥಿತಿಯನ್ನು ಎದುರಿಸುತ್ತಾರೆ.

**ಈ. ರೈತ ವರ್ಗ :** ತಾವು ಬೆಳೆದ ಬೆಳೆಗಳ ಬೆಲೆಗಳ ಇಳಿಕೆಯಾಗುವುದರಿಂದ ರೈತರು ಹಾನಿಗೊಳಗಾಗುತ್ತಾರೆ. ಅನಿಶ್ಚಿತ ಆದಾಯ ಪಡೆಯುವ ರೈತರು ಈ ಬೆಲೆ ಕುಸಿತದಿಂದ ತುಂಬಾ ಕಷ್ಟಕ್ಕೆ ಈಡಾಗುತ್ತಾರೆ.

ಅನಪ್ರಸರಣವು ಉತ್ಪಾದನೆ, ಉದ್ಯೋಗ ಮತ್ತು ಆದಾಯ ಮಟ್ಟವನ್ನು ಕಡಿತಗೊಳಿಸುವುದರಿಂದ ಸರ್ಕಾರ ಹಾಗೂ ಸಾರ್ವಜನಿಕರು ಕಷ್ಟವನ್ನು ಅನುಭವಿಸುತ್ತಾರೆ.

**ಅನಪ್ರಸರಣದ ನಿಯಂತ್ರಣ**

ಅನಪ್ರಸರಣ ನಿಯಂತ್ರಿಸಲು ಈ ಕೆಳಗಿನ ಕ್ರಮಗಳನ್ನು ಕೈಗೊಳ್ಳಬಹುದು.

ಕೇಂದ್ರಬ್ಯಾಂಕು ಮತ್ತು ಸರ್ಕಾರ ಅನಪ್ರಸರಣ ನಿಯಂತ್ರಿಸಲು ಈ ಕ್ರಮಗಳನ್ನು ಕೈಗೊಳ್ಳುತ್ತವೆ.

೧. ಕೊರತೆಯ ಮುಂಗಡ ಪತ್ರ ಮಂಡಿಸಿ, ಸರ್ಕಾರದ ವೆಚ್ಚವನ್ನು ಹೆಚ್ಚಿಸುತ್ತದೆ. ಇದರಿಂದ ಹಣದ ಪೂರೈಕೆ ಹೆಚ್ಚಿ, ಅಧಿಕ ಬೇಡಿಕೆ ಉಂಟಾಗುತ್ತದೆ.

೨. ಕೇಂದ್ರ ಬ್ಯಾಂಕು ಬ್ಯಾಂಕ್ ದರ ಹಾಗೂ ಬಡ್ಡಿ ದರವನ್ನು ಇಳಿಸುತ್ತದೆ. ಇದು ಬ್ಯಾಂಕು ಸಾಲ ಅಧಿಕಗೊಳಿಸಿ ಹಣದ ಚಲಾವಣೆಯನ್ನು ಹೆಚ್ಚಿಸುತ್ತದೆ.

೩. ಸರ್ಕಾರ ಆಂತರಿಕ ಸಾರ್ವಜನಿಕ ಸಾಲವನ್ನು ಮರಳಿಸುವುದು. ಇದು ಹಣದ ಚಲಾವಣೆಯನ್ನು ಹೆಚ್ಚಿಸುತ್ತದೆ ಹಾಗೂ ಬೇಡಿಕೆಯನ್ನು ಏರಿಸುತ್ತದೆ.

೪. ಮುಕ್ತ ಮಾರುಕಟ್ಟೆಯಲ್ಲಿ ಸರ್ಕಾರವು ಸಾರ್ವಜನಿಕರಿಂದ ಸಾಲಪತ್ರವನ್ನು ಮರಳಿ ಖರೀದಿಸುವುದು. ಇದು ಹಣದ ಚಲಾವಣೆ ಹೆಚ್ಚಿಸಿ, ಬೇಡಿಕೆ ಅಧಿಕಗೊಳಿಸುತ್ತದೆ.

೫. ಕೇಂದ್ರ ಬ್ಯಾಂಕು ತನ್ನ ಕಾಯ್ದಿಟ್ಟ ನಿಧಿಯ ಪ್ರಮಾಣವನ್ನು ಇಳಿಸಿ, ಬ್ಯಾಂಕುಗಳ ಸಾಲ ನೀಡುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.

೬. ಸರ್ಕಾರವು ತೆರಿಗೆ ದರಗಳನ್ನು ಕಡಿಮೆ ಮಾಡುವುದು. ಇದು ಜನರ ಆದಾಯವನ್ನು ಹೆಚ್ಚಿಸಿ, ಬೇಡಿಕೆಯನ್ನು ಹೆಚ್ಚಿಸುತ್ತದೆ.

೭. ಸರ್ಕಾರವು ಬೆಂಬಲ ಬೆಲೆ ಘೋಷಣೆಯಿಂದ ಬೆಲೆ ಇಳಿಕೆಯ ಪ್ರವೃತ್ತಿಯನ್ನು ನಿಯಂತ್ರಿಸುವುದು.

೮. ಸರ್ಕಾರವು ಸಾರ್ವಜನಿಕ ಉದ್ಯೋಗಗಳನ್ನು ಹೆಚ್ಚಿಸಿ, ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದರಿಂದ ಜನರ ಆದಾಯ ಹಾಗೂ ಬೇಡಿಕೆ ಹೆಚ್ಚುತ್ತದೆ.

## ೭.೫. ಸಾರಾಂಶ

ಮಾನವನು ಶೋಧಿಸಿದ ಒಂದು ಅದ್ಭುತ ವಸ್ತು ಹಣ. ಪ್ರಾಚೀನ ಕಾಲದಲ್ಲಿ ಪ್ರಪಂಚದ ವಿವಿಧ ಭಾಗಗಳಲ್ಲಿ ಜನರು ವಿವಿಧ ವಸ್ತುಗಳನ್ನು ಹಣವಾಗಿ ಬಳಸುತ್ತಿದ್ದರು. ಒಂದು ಕಾಲದಲ್ಲಿ ಜನರು ವಸ್ತುಗಳನ್ನು ವಸ್ತುಗಳಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು. ಇದನ್ನು ವಸ್ತುವಿನಿಮಯ ಅಥವಾ ಸಾಟಿ ಪದ್ಧತಿಯೆಂದು ಕರೆಯುತ್ತಾರೆ. ಸಾಟಿ ಪದ್ಧತಿಯು ಕಾಲಕ್ರಮೇಣ ತನ್ನ ಮಹತ್ವ ಕಳೆದುಕೊಂಡಿತು. ಲೋಹದ ಹಣವು ಸೃಷ್ಟಿಯಾದ ಮೇಲೆ ಅದು ವಿನಿಮಯ ಮಾಧ್ಯಮವಾಯಿತು.

"ವಿನಿಮಯದ ಮಾಧ್ಯಮವಾಗಿ, ಸಾರ್ವತ್ರಿಕವಾಗಿ ಸ್ವೀಕೃತವಾಗುವ ಮತ್ತು ಮೌಲ್ಯ ಮಾಪನದ ಸಾಧನವಾಗಿ ಮತ್ತು ಮೌಲ್ಯ ಸಂಚಯವಾಗಿ ಕೆಲಸ ಮಾಡುವ ಯಾವುದೇ ವಸ್ತು ಹಣ". ಇದು ಹಣದ ವಿಸ್ತೃತ ನಿರ್ವಚನ.

ಹಣದ ಕಾರ್ಯಗಳನ್ನು ಮೂರು ಗುಂಪುಗಳಾಗಿ ವರ್ಗೀಕರಿಸಬಹುದು.

೧. ಪ್ರಾಥಮಿಕ ಕಾರ್ಯಗಳು

೨. ದ್ವಿತೀಯ / ಸಹಾಯಕ ಕಾರ್ಯಗಳು

೩. ಅವಲಂಬಿ ಕಾರ್ಯಗಳು

ಪ್ರಾಥಮಿಕ ಕಾರ್ಯಗಳು ಎರಡು. ಮೊದಲನೆಯದು ಹಣವು ವಿನಿಮಯ ಸಾಧನವಾಗಿ ಕೆಲಸ ಮಾಡುತ್ತದೆ. ಅದು ಮೌಲ್ಯಮಾಪನದ ಸಾಧನವಾಗಿ ಕೆಲಸ ಮಾಡುತ್ತದೆ. ದ್ವಿತೀಯ ಕಾರ್ಯಗಳು ಮೂರು. ಮೊದಲನೆಯದು ಹಣವು ಲೇವಾದೇವಿಯ ಸಾಧನವಾಗಿ ಕೆಲಸ ಮಾಡುತ್ತದೆ. ಎರಡನೆಯದಾಗಿ ಅದು ಮೌಲ್ಯ ಸಂಚಯನದ ಸಾಧನ. ಮೂರನೆಯದಾಗಿ ಅದು ಮೌಲ್ಯದ ಸ್ಥಳಾಂತರವನ್ನು ಅನು ಮಾಡಿಕೊಡುತ್ತದೆ.

ಇವಲ್ಲದೆ ಹಣವು ಅನೇಕ ಅವಲಂಬಿ ಕಾರ್ಯಗಳನ್ನ ನಿರ್ವಹಿಸುತ್ತದೆ. ರಾಷ್ಟ್ರೀಯ ಆದಾಯ ಹಂಚಿಕೆವು ಹಣದಿಂದ ಸಾಧ್ಯವಾಗುತ್ತದೆ.

ಅಂಚಿನ ತುಷ್ಟಿಗುಣವನ್ನು ಪ್ರತಿ ರೂಪಾಯಿ ವಿನಿಯೋಜನೆಯಿಂದಲೂ ಸಮನಾಗಿರುವಂತೆ ಹಣವು ಮಾಡುತ್ತದೆ.

ಹಣವು ಉದ್ದರಿ ವ್ಯವಸ್ಥೆಯ ಮೂಲವಾಗಿದೆ.

ಹಣವು ಸಂಪತ್ತಿಗೆ ದ್ರವ್ಯದ ಗುಣವನ್ನು ಒದಗಿಸುತ್ತದೆ. ಹಣಕ್ಕೆ ಶಾಸನದ ಒಂದು ಮನ್ನಣೆ ಹಾಗೂ ಅಡಿಪಾಯವಿರುತ್ತದೆ. ಆದರೆ ಆರ್ಥಿಕತೆಯಲ್ಲಿ ಶಾಸನದ ಮನ್ನಣೆಯಿಲ್ಲದಿದ್ದರೂ ಹಣದ ಕೆಲಸ ಮಾಡುವ ಅನೇಕ ವಸ್ತುಗಳಿವೆ. ಅವುಗಳನ್ನು ಸಮೀಪ ಹಣವೆಂದು ಕರೆಯುಬಹುದು. ಸಮೀಪ ಹಣದ ಮುಖ್ಯ ವಸ್ತುಗಳೆಂದರೆ ಚೆಕ್ಕುಗಳು, ಟ್ರಾವಲರ್ಸ್ ಚೆಕ್ಕುಗಳು, ಟ್ರೆಜರಿ ಬಿಲ್ಲುಗಳು, ಕ್ರೆಡಿಟ್ ಕಾರ್ಡ್‌ಗಳು ಇತ್ಯಾದಿ.

ಸರಕು ಮತ್ತು ಸೇವೆಗಳ ಬೆಲೆಗಳು ಅವುಗಳ ಪೂರೈಕೆ ಹಾಗೂ ಬೇಡಿಕೆಗಳ ನಡುವಿನ ಸಂಬಂಧದ ಮೂಲಕ ನಿರ್ಧಾರವಾಗುತ್ತವೆ. ಅದೇ ರೀತಿ ಹಣದ ಮೌಲ್ಯವು ಅದರ ಪೂರೈಕೆ ಮತ್ತು ಬೇಡಿಕೆಗಳ ನಡುವಣ ಸಂಬಂಧದ ಮೂಲಕ ನಿರ್ಧಾರವಾಗುತ್ತದೆ.

ಒಂದು ಕಾಲಘಟ್ಟದಲ್ಲಿ ರಾಷ್ಟ್ರದೊಳಗೆ ಚಲಾವಣೆಯಲ್ಲಿರುವ ಹಣದ ಮೊತ್ತವೇ ಹಣದ ಪೂರೈಕೆ. ಆರ್ಥಿಕತೆಯಲ್ಲಿ ಹಣದ ಪೂರೈಕೆಯು ಮಹತ್ವದ ಪಾತ್ರ ನಿರ್ವಹಿಸುತ್ತದೆ. ಐರ್‌ವಿಂಗ್ ಫಿಷರ್ ಪ್ರಕಾರ ಹಣದ ಮೌಲ್ಯ, ಅಂದರೆ ಬೆಲೆಗಳ ಮಟ್ಟವು ಹಣದ ಪೂರೈಕೆಯನ್ನು ಅವಲಂಬಿಸಿರುತ್ತದೆ.

ಭಾರತದಲ್ಲಿ ಹಣದ ಪೂರೈಕೆಯನ್ನು ಎರಡು ಮುಖ್ಯ ಪರಿಭಾವನೆಗಳಲ್ಲಿ ಗುರುತಿಸಲಾಗುತ್ತದೆ. ಮೊದಲನೆಯದು ಸೀಮಿತ ಹಣ ($M_1$) ಮತ್ತು ಎರಡನೆಯದು ವಿಸ್ತೃತ ಹಣ ($M_3$).

ಜನರ ಬಳಿಯಲ್ಲಿ ಚಲಾವಣೆಯಲ್ಲಿರುವ ನೋಟು, ನಾಣ್ಯ, ಚಾಲ್ತಿ ಠೇವಣಿಗಳ ಮೊತ್ತವೇ ಸೀಮಿತ ಹಣ. ಇಂದು ಭಾರತದಲ್ಲಿರುವ ಸೀಮಿತ ಹಣದ ಮೊತ್ತ ರೂ. ೩,೪೩,೯೪೦ ಕೋಟಿ (೨೦೦೦).

ಜನರ ಬಳಿಯಲ್ಲಿ ಚಲಾವಣೆಯಲ್ಲಿರುವ ನೋಟು, ನಾಣ್ಯ, ಚಾಲ್ತಿ ಠೇವಣಿ, ಇತರೆ ಠೇವಣಿ ಹಾಗೂ ಮುದ್ದತ್ ಠೇವಣಿಗಳ ಮೊತ್ತವೇ ವಿಸ್ತೃತ ಹಣ. ಇಂದು ಚಲಾವಣೆಯಲ್ಲಿರುವ ವಿಸ್ತೃತ ಹಣದ ಮೊತ್ತ ರೂ. ೧೩,೧,೭೧೦ ಕೋಟಿ (೨೦೦೦) ಬ್ಯಾಂಕುಗಳು ಕೇವಲ ಹಣದೊಂದಿಗೆ ವ್ಯವಹಾರ ಮಾಡುವ ಸಂಸ್ಥೆಗಳು ಮಾತ್ರವಲ್ಲ. ಅವು ಮುಖ್ಯವಾಗಿ ಪತ್ತು ಹಣವನ್ನು ಸೃಷ್ಟಿಸುವ ಸಂಸ್ಥೆಗಳು ಬ್ಯಾಂಕು ನೀಡಿದ ಪ್ರತಿಯೊಂದು ಸಾಲವೂ ಠೇವಣಿಯೊಂದನ್ನು ಪಡೆಯುತ್ತದೆ. ಸಾಲವು ಪಡೆದ ಠೇವಣಿಯನ್ನೇ 'ಪತ್ತು ಹಣ'ವೆಂದು ಕರೆಯಲಾಗಿದೆ. ಬ್ಯಾಂಕುಗಳು ಸೃಷ್ಟಿಸುವ ಠೇವಣಿ ಹಣ ಅಥವಾ 'ಪತ್ತು ಹಣ'ವು ಮೂಲ ಠೇವಣಿ / ಸಾಲದ ಅನೇಕ ಪಟ್ಟು, ಅಧಿಕವಾಗಿರುತ್ತದೆ.

ಈಗಾಗಲೆ ಚರ್ಚಿಸಿರುವಂತೆ ಹಣದ ಪೂರೈಕೆ ಇದ್ದಂತೆ ಹಣದ ಬೇಡಿಕೆಯೂ ಇರುತ್ತದೆ. ಜನರು ಯಾವ ಕಾರಣಗಳಿಗೆ ಹಣವನ್ನು ಬಯಸುತ್ತಾರೆ - ಅಥವಾ ಜನರಿಗೆ ಹಣ ಯಾವ ಕಾರಣಗಳಿಗೆ ಬೇಕಾಗುತ್ತದೆ? ಜೆ.ಎಂ.ಕೇನ್ಸ್‌ರವರು ಹಣದ ಬೇಡಿಕೆಗೆ ಮೂರು ಸಂಗತಿಗಳನ್ನು ಗುರುತಿಸಿದ್ದಾರೆ.

೧. ದೈನಂದಿನ ವ್ಯವಹಾರದ ಬೇಡಿಕೆ - ದಿನನಿತ್ಯದ ವ್ಯವಹಾರ ನಡೆಸಲು ಜನರಿಗೆ ಹಣ ಬೇಕಾಗುತ್ತದೆ.
೨. ಮುಂಧೋರಣೆ ಬೇಡಿಕೆ - ಭವಿಷ್ಯತ್ತಿನ ಅಗತ್ಯಗಳನ್ನು ಗಮನದಲ್ಲಿಟ್ಟುಕೊಂಡು ಜನರು ಹಣವನ್ನು ಇಟ್ಟುಕೊಳ್ಳಲು ಬಯಸುತ್ತಾರೆ.
೩. ಸಟ್ಟಾ ವ್ಯಾಪಾರದ ಬೇಡಿಕೆ - ಶೇರು ಮಾರುಕಟ್ಟೆಯಲ್ಲಿ ಸಟ್ಟಾ ವ್ಯಾಪಾರದಲ್ಲಿ ತೊಡಗಿಸಲು ಜನರಿಗೆ ಹಣವು ಬೇಕಾಗುತ್ತದೆ.

ಮೊದಲೆರಡು ಸಂಗತಿಗಳು ಬೇಡಿಕೆಯು ಆರ್ಥಿಕತೆಯು ರಾಷ್ಟ್ರೀಯ ವರಮಾನದ ಪ್ರಮಾಣವನ್ನು ಅವಲಂಬಿಸಿದೆ. ಆದರೆ ಮೂರನೆಯ ಬೇಡಿಕೆಯು ಆರ್ಥಿಕತೆಯಲ್ಲಿನ ಬಡ್ಡಿ ಪ್ರಮಾಣವನ್ನು ಅವಲಂಬಿಸಿದೆ.

ಹಣದ ಪೂರೈಕೆಯು ಆರ್ಥಿಕತೆಯಲ್ಲಿ ಅದರ ಬೇಡಿಕೆಗಿಂತ ಅಧಿಕವಾದಾಗ ಅದರ ಮೌಲ್ಯ ತಗ್ಗುತ್ತದೆ. ಹಣದ ಮೌಲ್ಯ ತಗ್ಗುವುದೆಂದರೆ ಸರಕು ಮತ್ತು ಸೇವೆಗಳ ಬೆಲೆ ಏರುವುದೆಂದರ್ಥ. ಹಣದ ಪೂರೈಕೆಯ ಅತಿಯಾದ ಏರಿಕೆಯಿಂದ ಉಂಟಾಗುವ ಬೆಲೆ ಏರಿಕೆಯನ್ನು ಅತಿಪ್ರಸರಣವೆಂದು ಕರೆಯುತ್ತಾರೆ. ಇದನ್ನು ಹಣದುಬ್ಬರವೆಂದು ಹೇಳಬಹುದು.

ಹಣದುಬ್ಬರ ಅಥವಾ ಅತಿಪ್ರಸರಣ ಉಂಟಾಗಲು ಅನೇಕ ಕಾರಣಗಳಿವೆ. ಹಣದ ಪೂರೈಕೆಯು ಅತಿಯಾದ ಏರಿಕೆ, ಸರ್ಕಾರದ ಸಾರ್ವಜನಿಕ ವೆಚ್ಚದಲ್ಲಿ ಹೆಚ್ಚಳ, ಖಾಸಗಿ ಬಂಡವಾಳ ಹೂಡಿಕೆಯಲ್ಲಿ ಏರಿಕೆ, ರಫ್ತುವಿನಲ್ಲಿ ಏರಿಕೆ, ಉತ್ಪಾದನಾಂಗಗಳ ಪೂರೈಕೆಯಲ್ಲಿ ಹೆಚ್ಚಳ, ಕಳ್ಳ ದಾಸ್ತಾನು ಮುಂತಾದವು ಅತಿಪ್ರಸರಣಕ್ಕೆ ಕಾರಣಗಳು.

ಅತಿಪ್ರಸರಣವನ್ನು ಅನೇಕ ರೀತಿಯಲ್ಲಿ ವರ್ಗೀಕರಿಸಬಹುದು. ಆದರೆ ಬಹಳ ಮುಖ್ಯವಾದ ವರ್ಗೀಕರಣಗಳು ಎರಡು.

೧. ಬೇಡಿಕೆ ಸ್ಪಂದಿ ಅತಿಪ್ರಸರಣ ಅಥವಾ ಬೇಡಿಕೆ ಸೆಳೆತ ಅತಿಪ್ರಸರಣ.

೨. ವೆಚ್ಚ ಸ್ಪಂದಿ ಅತಿಪ್ರಸರಣ ಅಥವಾ ವೆಚ್ಚ ತಳ್ಳಿದ ಅತಿಪ್ರಸರಣ.

ಅತಿಪ್ರಸರಣವು ಆರ್ಥಿಕತೆಯಲ್ಲಿ ಅನೇಕ ಪರಿಣಾಮಗಳನ್ನು ಉಂಟು ಮಾಡುತ್ತದೆ.

೧. ಆರ್ಥಿಕತೆಯು ಪೂರ್ಣೋದ್ಯೋಗವನ್ನು ಸಾಧಿಸಿಕೊಳ್ಳುವುದಕ್ಕೆ ಪೂರ್ವದಲ್ಲಿ ಅತಿಪ್ರಸರಣವು ಅಭಿವೃದ್ಧಿ ಪೂರಕವಾಗಿರುತ್ತದೆ. ಆದರೆ ಪೂರ್ಣೋದ್ಯೋಗವನ್ನು ಸಾಧಿಸಿಕೊಂಡ ನಂತರ ಅದು ಅಪಾಯಕಾರಿ.
೨. ಅತಿಪ್ರಸರಣದ ಕಾಲದಲ್ಲಿ ಸಾಲ ನೀಡುವವರಿಗೆ ಸಂಕಟ ಉಂಟಾದರೆ ಸಾಲ ಪಡೆದವರಿಗೆ ಅಥವಾ ಸಾಲ ಹಿಂತಿರುಗಿಸುವವರಿಗೆ ಅನುಕೂಲ.
೩. ರೈತಾಪಿ ವರ್ಗಕ್ಕೆ ಅತಿಪ್ರಸರಣ ಲಾಭ ತಂದುಕೊಡುತ್ತದೆ.
೪. ರೈತ ಕೂಲಿಕಾರರಿಗೆ ಇದು ಅಪಾಯಕರ.
೫. ಬಂಡವಾಳದಾರರಿಗೆ ಅತಿಪ್ರಸರಣ ಲಾಭತಂದುಕೊಡುತ್ತದೆ.
೬. ಅನುಭೋಗಿಗಳಿಗೆ - ಜನಸಾಮಾನ್ಯರಿಗೆ ಇದು ಅಪಾಯಕಾರಿ.
೭. ಜೀವನ ಮಟ್ಟವನ್ನು ಇದು ಹದಗೆಡಿಸುತ್ತದೆ.
೮. ಇದೊಂದು ರೀತಿ ತೆರಿಗೆಯಿದ್ದಂತೆ.

ಅತಿಪ್ರಸರಣದ ಗತಿ ತೀವ್ರವಾದಾಗ ಅದು ಅಪಾಯಕಾರಿಯಾಗುತ್ತದೆ. ಅದನ್ನು ನಿಯಂತ್ರಿಸಲು ಸರ್ಕಾರವು ಅನೇಕ ಕ್ರಮಗಳನ್ನು ತೆಗೆದುಕೊಳ್ಳಬಹುದು. ಮೂರು ಬಗೆಯ ಕ್ರಮಗಳಿವೆ.

೧. ಹಣಕಾಸು ಕ್ರಮಗಳು

೨. ಕೋಶೀಯ ಕ್ರಮಗಳು

೩. ಇತರೆ ಕ್ರಮಗಳು

ಕೇಂದ್ರಬ್ಯಾಂಕು ತನ್ನ ಬಡ್ಡಿದರವನ್ನು ಏರಿಸುವುದು, ಹಣದ ಪೂರೈಕೆಯನ್ನು ಕಡಿತ ಗೊಳಿಸುವುದು, ಮುಕ್ತ ಮಾರುಕಟ್ಟೆಯಲ್ಲಿ ಸಾಲಪತ್ರಗಳನ್ನು ಮಾರುವುದು, ನಗದು ಮೀಸಲು ಪ್ರಮಾಣವನ್ನು ಹೆಚ್ಚಿಸುವುದು, ವಿಶೇಷ ನಿಯಂತ್ರಣ ಕ್ರಮಗಳನ್ನು ಜಾರಿ ಗೊಳಿಸುವುದು ಮುಂತಾದವು ಹಣಕಾಸು ಕ್ರಮಗಳು.

ಸರ್ಕಾರವು ಸಾರ್ವಜನಿಕ ವೆಚ್ಚವನ್ನು ತಗ್ಗಿಸುವುದು, ತೆರಿಗೆ ದರ ಹೆಚ್ಚಿಸುವುದು, ಬಾಂಡುಗಳನ್ನು ಸಾರ್ವಜನಿಕರಿಗೆ ಮಾರಾಟ ಮಾಡುವುದು, ಉಳಿತಾಯವನ್ನು ಹೆಚ್ಚಿಸು ವುದು. ತುಟ್ಟಿಭತ್ಯೆಯನ್ನು ತಡೆಹಿಡಿಯುವುದು ಮುಂತಾದವು ಕೋಶೀಯ ಕ್ರಮಗಳು.

ಪಡಿತರ ವ್ಯವಸ್ಥೆಯನ್ನು ಜಾರಿಗೆ ತರುವುದು, ಅವಶ್ಯಕ ವಸ್ತುಗಳ ಬೆಲೆಗಳನ್ನು ಸರ್ಕಾರ ನಿಗದಿಪಡಿಸುವುದು, ಕಳ್ಳ ದಾಸ್ತಾನು ಹೊರ ತೆಗೆಯುವುದು ಜನರಿಗೆ ತಿಳುವಳಿಕೆ ನೀಡುವುದು ಮುಂತಾದ ಕ್ರಮಗಳ ಮೂಲಕವೂ ಅತಿಪ್ರಸರಣವನ್ನು ತಡೆಯಬಹುದು.

ಹಣದ ಪೂರೈಕೆಯು ಅದರ ಬೇಡಿಕೆಗಿಂತ ಕಡಿಮೆಯಾದಾಗ ಬೆಲೆಮಟ್ಟ ಕುಸಿದು ಬಿಡುತ್ತದೆ. ಮಾರುಕಟ್ಟೆ ಮುಗ್ಗಟ್ಟು ಉಂಟಾಗುತ್ತದೆ. ಸರಕುಗಳ ಪೂರೈಕೆ ಅತಿಯಾಗುತ್ತದೆ. ಬೇಡಿಕೆ ನೆಲ ಕಚ್ಚಿಬಿಡುತ್ತದೆ. ಇಂತಹ ಸನ್ನಿವೇಶವನ್ನು ಅನಪ್ರಸರಣ ಅಥವಾ ಹಣದಿಳಿತವೆಂದು ಕರೆಯಲಾಗಿದೆ.

## ೭.೬. ಪಾರಿಭಾಷಿಕ ಕೋಶ

ವಸ್ತುರೂಪದ ಹಣ - Commodity Money

ವಸ್ತು ವಿನಿಮಯ ಅಥವಾ ಸಾಟಿ ವಿನಿಮಯ - Barter Exchange

ವಿನಿಮಯ ಸಾಧನ - Medium of Exchange

ಮೌಲ್ಯ ಮಾಪನದ ಸಾಧನ - Measure of Valve

ಲೇವಾದೇವಿಯ ಸಾಧನ - Source of Credit

ಮೌಲ್ಯ ಸಂಚಯ - Store of Valve

ಅವಲಂಬಿ ಕಾರ್ಯಗಳು - Contigency functions

ಸಂಪತ್ತಿನ ದ್ರವ್ಯತೆ - Liquidity of Wealth

ಚೆಕ್ಕುಗಳು - Cheques

ಹಣದ ಪೂರೈಕೆ - Supply of Money

ಚಲಾವಣೆಯ ವೇಗ - Velocity of Circulation of Money

ಸೀಮಿತ ಹಣ - Narrow Money ($M_1$)

ವಿಸ್ತೃತ ಹಣ - Broad Money ($M_1$)

ಸಮೀಪ ಹಣ - Near Money

ಪತ್ತು ಹಣ - Credit Money

ಠೇವಣಿ ಹಣ - Deposit Money

ಚಾಲ್ತಿ ಠೇವಣಿಗಳು - Demand Deposits

ಮುದ್ದತು ಠೇವಣಿ - Fixed Deposit

ಅಡಾವೆ ಪತ್ರ - Balance Sheet

ಹೊಣೆಗಳು - Liabilities

ಆಸ್ತಿ - Assets

ಹಣದ ಬೇಡಿಕೆ - Demand for Money

ದೈನಂದಿನ ಹಣದ ಬೇಡಿಕೆ - Transactionary demand for Money.

ಮುಂಧೋರಣೆಯ ಹಣದ ಬೇಡಿಕೆ - Precautionary demand for Money.

ಸಟ್ಟಾ ವ್ಯಾಪಾರದ ಹಣದ ಬೇಡಿಕೆ - Speculative demand for Money.

ಅತಿಪ್ರಸರಣ - Inflation

ಬೇಡಿಕೆ ಸ್ಪಂದಿ ಅತಿಪ್ರಸರಣ - Demand-pull Inflation

ವೆಚ್ಚ ಸ್ಪಂದಿ ಅತಿಪ್ರಸರಣ - Cost-push inflation

ಹಣಕಾಸಿನ ಕ್ರಮಗಳು - Monetary measures

ಕೋಶೀಯ ಕ್ರಮಗಳು - Fiscal Measure

ಅನಪ್ರಸರಣ - Deflation

ಪೂರ್ಣೋದ್ಯೋಗ - Full Employment

## ೬.೭. ಪ್ರಶ್ನೆಗಳು

**I. ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಹಣ ಎಂದರೇನು?

೨. ಚೆಕ್ಕುಗಳು ಎಂದರೇನು?

೩. ಚೆಕ್ಕುಗಳ ಎರಡು ಪ್ರಕಾರಗಳನ್ನು ಹೆಸರಿಸಿರಿ.

೪. ಟ್ರಾವೆಲರ್ಸ್ ಚೆಕ್ಕುಗಳು ಎಂದರೇನು?

೫. ಟ್ರೆಝರಿ ಬಿಲ್ಲುಗಳೆಂದರೇನು?

೬. ಟ್ರೆಝರಿ ಬಿಲ್ಲುಗಳನ್ನು ಹೇಗೆ ವಿಂಗಡಿಸುತ್ತಾರೆ

೭. ಕ್ರೆಡಿಟ್ ಕಾರ್ಡ್‌ನ ಸಂಶೋಧಕರನ್ನು ಹೆಸರಿಸಿ.

೮. ಡೆಬಿಟ್ ಕಾರ್ಡ್‌ಗಳು ಎಂದರೇನು?

೯. ಎ.ಟಿ.ಎಂ. ಎಂದರೇನು?

೧೦. ಹಣದ ಪೂರೈಕೆ ಎಂದರೇನು?

೧೧. ಹಣದ ಪೂರೈಕೆಯ ಎರಡು ಚಲಗಳನ್ನು ತಿಳಿಸಿರಿ.

೧೨. ಹಣದ ಪೂರೈಕೆಯ ಎರಡು ಪ್ರಕಾರಗಳನ್ನು ತಿಳಿಸಿರಿ.

೧೩. ಸೀಮಿತ ಹಣವನ್ನು ಏನೆಂದು ಕರೆಯುತ್ತಾರೆ?

೧೪. ಸಮೀಪ ಹಣದಲ್ಲಿ ಪ್ರಥಮ ಸ್ಥಾನ ಯಾವ ಹಣ ಹೊಂದಿದೆ?

೧೫. ವಿಸ್ತೃತ ಹಣ ಎಂದರೇನು?

೧೬. ವಿಸ್ತೃತ ಹಣವನ್ನು ಏನೆಂದು ಕರೆಯುತ್ತಾರೆ?

೧೭. ವಿಸ್ತೃತ ಹಣದ ಸಮೀಕರಣ ಬರೆಯಿರಿ.

೧೮. ಪತ್ತು ನಿರ್ಮಾಣ ಎಂದರೇನು?

೧೯. ದ್ವಿತೀಯ ಠೇವಣಿ ಎಂದರೇನು?

೨೦. ನಗದು ನಿಧಿ ಮೀಸಲು ಪ್ರಮಾಣ ಎಂದರೇನು?

೨೧. ಭಾರತದಲ್ಲಿ ಈಗ ನಗದು ನಿಧಿ ಮೀಸಲು ಪ್ರಮಾಣ ಎಷ್ಟಿದೆ?

೨೨. ಹಣದ ಬೇಡಿಕೆ ಎಂದರೇನು?

೨೩. ದ್ರವತ್ವ ಅಭಿಲಾಷೆಗೆ ಮೂರು ಕಾರಣಗಳನ್ನು ಯಾರು ನೀಡಿದ್ದಾರೆ?

೨೪. "ಮಳೆಗಾಲದ ದಿನದ ಬೇಡಿಕೆ" ಎಂದು ಯಾವ ಹಣದ ಬೇಡಿಕೆಯನ್ನು ಕರೆಯುತ್ತಾರೆ?

೨೫. ಅತಿಪ್ರಸರಣ ಎಂದರೇನು?

೨೬. ಅತಿಪ್ರಸರಣದ ಎರಡು ಪ್ರಕಾರಗಳನ್ನು ತಿಳಿಸಿರಿ.

೨೭. ಬೇಡಿಕೆ ಸೆಳೆತ ಅತಿಪ್ರಸರಣ ಎಂದರೇನು?

೨೮. ವೆಚ್ಚ ತಳ್ಳಿದ ಅತಿಪ್ರಸರಣ ಎಂದರೇನು?
೨೯. ಅನಪ್ರಸರಣ ಎಂದರೇನು?
೩೦. ವ್ಯಾಪಾರಿ ಚಕ್ರಗಳು ಎಂದರೇನು?

**II. ಕೆಳಗಿನ ಪ್ರತಿ ಪ್ರಶ್ನೆಗಳಿಗೆ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ವಸ್ತುವಿನಿಮಯ ಪದ್ಧತಿಯ ದೋಷಗಳನ್ನು ತಿಳಿಸಿರಿ.
೨. ಸಮೀಪ ಹಣ ಎಂದರೇನು?
೩. ಟ್ರಾವೆಲರ್ಸ್ ಚೆಕ್ಕುಗಳು ಎಂದರೇನು?
೪. ಕ್ರೆಡಿಟ್ ಕಾರ್ಡ್‌ಗಳ ಒಳ್ಳೆಯ ಗುಣಗಳನ್ನು ತಿಳಿಸಿರಿ.
೫. ಕ್ರೆಡಿಟ್ ಕಾರ್ಡ್‌ಗಳೆಂದರೇನು? ಉದಾಹರಣೆಗಳನ್ನು ಕೊಡಿರಿ.
೬. ಸೀಮಿತ ಹಣವು ಒಳಗೊಂಡ ಅಂಶಗಳನ್ನು ಘಟಕಗಳನ್ನು ತಿಳಿಸಿರಿ.
೭. ಬ್ಯಾಂಕುಗಳ ಪತ್ತಿನ ಹಣದ ಸೃಷ್ಟಿಯನ್ನು ನಿರ್ಧರಿಸುವ ೪ ಅಂಶಗಳನ್ನು ಬರೆಯಿರಿ.
೮. ಜೆ.ಎಂ.ಕೇನ್ಸ್‌ರು ತಿಳಿಸಿದ ದ್ರವತ್ವ ಅಭಿಲಾಷೆಗೆ ಮೂರು ಕಾರಣಗಳನ್ನು ತಿಳಿಸಿರಿ.
೯. ಅತಿಪ್ರಸರಣದ ನಾಲ್ಕು ಲಕ್ಷಣಗಳನ್ನು ತಿಳಿಸಿರಿ.
೧೦. ಅನಪ್ರಸರಣ ಎಂದರೇನು?
೧೧. ಅನಪ್ರಸರಣದ ನಾಲ್ಕು ಲಕ್ಷಣಗಳನ್ನು ತಿಳಿಸಿರಿ.
೧೨. ಅನಪ್ರಸರಣ ನಿಯಂತ್ರಣದ ನಾಲ್ಕು ಕ್ರಮಗಳನ್ನು ತಿಳಿಸಿರಿ.
೧೩. ಆರ್ಥಿಕ ಹಿನ್ನಡೆ ಎಂದರೇನು?

**III. ಕೆಳಗಿನ ಪ್ರತಿ ಪ್ರಶ್ನೆಗಳಿಗೆ ೧೫ ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಸಮೀಪ ಹಣದ ವಿವಿಧ ಸ್ವತ್ತುಗಳನ್ನು ಸಂಕ್ಷಿಪ್ತವಾಗಿ ವಿವರಿಸಿರಿ.
೨. ಅರ್ಥವ್ಯವಸ್ಥೆಯಲ್ಲಿ ಹಣದ ಪೂರೈಕೆ ಪಾತ್ರವನ್ನು ವಿವರಿಸಿರಿ.
೩. ಸೀಮಿತ ಹಣದ ಬಗ್ಗೆ ಟಿಪ್ಪಣಿ ಬರೆಯಿರಿ.
೪. ವಿಶಾಲ ಹಣದ ಬಗ್ಗೆ ಟಿಪ್ಪಣಿ ಬರೆಯಿರಿ.
೫. ಹಣದ ಬೇಡಿಕೆ ಎಂದರೇನು? ಹಣದ ಬೇಡಿಕೆಯ ಕಾರಣಗಳನ್ನು ಸಂಕ್ಷಿಪ್ತವಾಗಿ ವಿವರಿಸಿರಿ.
೬. ದೈನಂದಿನ ವ್ಯವಹಾರದ ಬೇಡಿಕೆಯನ್ನು ವಿವರಿಸಿರಿ.
೭. ಮುಂಧೋರಣೆಯ ಬೇಡಿಕೆಯನ್ನು ವಿವರಿಸಿರಿ.
೮. ಸಟ್ಟಾ ವ್ಯಾಪಾರದ ಬೇಡಿಕೆಯನ್ನು ವಿವರಿಸಿರಿ.
೯. ಅತಿಪ್ರಸರಣದ ಕಾರಣಗಳನ್ನು ವಿವರಿಸಿರಿ.

೧೦. ಅತಿಪ್ರಸರಣದ ಪರಿಣಾಮಗಳನ್ನು ವಿವರಿಸಿರಿ.

೧೧. ಅತಿಪ್ರಸರಣದ ನಿಯಂತ್ರಣ ಕ್ರಮಗಳನ್ನು ವಿವರಿಸಿರಿ.

೧೨. ಅತಿಪ್ರಸರಣದ ಕಾರಣಗಳನ್ನು ಹಾಗೂ ಪರಿಣಾಮಗಳನ್ನು ವಿವರಿಸಿರಿ.

೧೩. ಆರ್ಥಿಕ ಹಿನ್ನಡೆಯ ಬಗ್ಗೆ ಟಿಪ್ಪಣೆ ಬರೆಯಿರಿ.

**IV. ಕೆಳಗಿನ ಪ್ರತಿ ಪ್ರಶ್ನೆಗೆ ಪ್ರತಿಯೊಂದಕ್ಕೂ ೪೦ ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಹಣದ ಕಾರ್ಯಗಳನ್ನು ವಿವರಿಸಿರಿ.

೨. ವಾಣಿಜ್ಯ ಬ್ಯಾಂಕುಗಳ ಪತ್ತಿನ ನಿರ್ಮಾಣದ ಬಗ್ಗೆ ಟಿಪ್ಪಣೆ ಬರೆಯಿರಿ.

**IIV. ಯೋಜನೆಗಳು ಮತ್ತು ಪ್ರಾಯೋಗಿಕ ಕಾರ್ಯಗಳು**

೧. ಎ.ಟಿ.ಎಂ. ಕೇಂದ್ರ ಸಂಪರ್ಕಿಸಿ, ಅದರ ಕಾರ್ಯ ಹಾಗೂ ಉಪಯೋಗಗಳನ್ನು ಸಂಗ್ರಹಿಸಿರಿ.

೨. ಸಂಕುಚಿತ ಸಾಮಾನ್ಯ ಹಣ ಪಟ್ಟಿ ಆಧಾರದ ಮೇಲೆ ಪೈ ಚಿತ್ರ ಬಿಡಿಸಿರಿ.

೩. ವಿಶಾಲ ಹಣದ ಪಟ್ಟಿ ಆಧಾರದ ಮೇಲೆ ಪೈ ಚಿತ್ರವನ್ನು ಬಡಿಸಿರಿ.

೪. ಬಹು ಬ್ಯಾಂಕ್ ವ್ಯವಸ್ಥೆಯಲ್ಲಿ ಪತ್ತಿನ ಸೃಷ್ಟಿಯನ್ನು ಪಟ್ಟಿಯ ಸಹಾಯದಿಂದ ವಿವರಿಸಿರಿ.

೫. ಮುಂಧೋರಣಾ ಹಣದ ಬೇಡಿಕೆಯನ್ನು ರೇಖಾಚಿತ್ರದ ಸಹಾಯದಿಂದ ವಿವರಿಸಿರಿ.

೬. ಸಟ್ಟಾವ್ಯಾಪಾರದ ಬೇಡಿಕೆಯನ್ನು ರೇಖಾಚಿತ್ರದ ಸಹಾಯದಿಂದ ವಿವರಿಸಿರಿ.

# ಅಧ್ಯಾಯ ೮

# ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು

## ೮.೧. ವ್ಯಾಪಾರ ಸಿದ್ಧಾಂತ ಮತ್ತು ನೀತಿಯ ಮೂಲಾಂಶಗಳು

### ೮.೧.೧. ಅರ್ಥ ವಿವರಣೆ

ವ್ಯಕ್ತಿಗಳ ಅಥವಾ ಗುಂಪುಗಳ ನಡುವೆ ಸರಕುಗಳು ಮತ್ತು ಸೇವೆಗಳು ವಿನಿಮಯವಾಗುವುದಕ್ಕೆ ವ್ಯಾಪಾರ ಎಂದು ಹೆಸರು. ವ್ಯಾಪಾರವು ಸಾಟಿ ವಿನಿಮಯವಾದರೆ ನೇರವಾಗಿರುತ್ತದೆ. ಹಣವನ್ನು ವಿನಿಮಯ ಮಾಧ್ಯಮವಾಗಿ ಬಳಸಿ ನಡೆಸುವ ವ್ಯಾಪಾರವು ಪರೋಕ್ಷ ವಿನಿಮಯವಾಗಿರುತ್ತದೆ. ಈಗ ಸಾಟಿ ವಿನಿಮಯ ತೀರಾ ಅಪರೂಪವಾಗಿ ನಡೆಯಬಹುದು. ಹಣದ ಮೂಲಕವೇ ಹೆಚ್ಚಾಗಿ ವ್ಯಾಪಾರ ನಡೆಯುತ್ತದೆ.

ವ್ಯಾಪಾರದಲ್ಲಿ

೧. ಆಂತರಿಕ ವ್ಯಾಪಾರ ಮತ್ತು

೨. ಅಂತಾರಾಷ್ಟ್ರೀಯ ವ್ಯಾಪಾರವೆಂಬ ಎರಡು ವಿಧಗಳಿವೆ.

ಒಂದು ದೇಶದ ಅಥವಾ ಪ್ರಾಂತದ ಭೌಗೋಳಿಕ ಗಡಿಗಳೊಳಗೆ ನಡೆಯುವ ವ್ಯಾಪಾರವನ್ನು ಆಂತರಿಕ ವ್ಯಾಪಾರ ಅಥವಾ ದೇಶೀಯ ವ್ಯಾಪಾರ ಎಂದು ಕರೆಯಲಾಗುತ್ತದೆ. ದೇಶಗಳ ನಡುವೆ ಅಥವಾ ದೇಶವೊಂದರ ಭೌಗೋಳಿಕ ಗಡಿದಾಟಿ ನಡೆಯುವ ವ್ಯಾಪಾರವು ಅಂತಾರಾಷ್ಟ್ರೀಯ ವ್ಯಾಪಾರವಾಗಿರುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರವನ್ನು ವಿದೇಶೀ ವ್ಯಾಪಾರ ಎಂದು ಕೂಡಾ ಕರೆಯಲಾಗುತ್ತದೆ. ವಿಭಿನ್ನ ಪ್ರಾಂತಗಳ ನಡುವಣ ವ್ಯಾಪಾರವು ಅಂತರ-ಪ್ರಾಂತೀಯ ವ್ಯಾಪಾರ ಎಂದು ಕರೆಯಲ್ಪಡುತ್ತದೆ.

ಆಂತರಿಕ ಮತ್ತು ಅಂತಾರಾಷ್ಟ್ರೀಯ ವ್ಯಾಪಾರದ ನಡುವಣ ವ್ಯತ್ಯಾಸಗಳು ಇವು :

೧. **ಭೌಗೋಳಿಕ ಗಡಿಗಳು :** ಆಂತರಿಕ ವ್ಯಾಪಾರವು ದೇಶವೊಂದರ ಭೌಗೋಳಿಕ ಗಡಿಗಳ ನಡುವೆ ನಡೆಯುವ ವ್ಯಾಪಾರವಾಗಿರುತ್ತದೆ. ಆಂತರಿಕ ವ್ಯಾಪಾರವೆಂದರೆ ದೇಶೀಯ ಉತ್ಪನ್ನಗಳ ದೇಶೀಯ ಮಾರಾಟವೆಂದರ್ಥ. ಅಂತಾರಾಷ್ಟ್ರೀಯ ವ್ಯಾಪಾರವು ದೇಶ-ದೇಶಗಳ ನಡುವಣ ವ್ಯಾಪಾರವಾಗಿರುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ದೇಶೀಯ ಉತ್ಪನ್ನಗಳು ದೇಶದ ಗಡಿಯನ್ನು ದಾಟಿ ಹೊರ ಹೋಗುತ್ತವೆ. ಅದು

ನಿರ್ಯಾತ ಎನಿಸಿಕೊಳ್ಳುತ್ತದೆ. ಅಲ್ಲದೆ ವಿದೇಶಿ ಉತ್ಪನ್ನಗಳು ದೇಶದ ಗಡಿಯನ್ನು ದಾಟಿ ಒಳಬರುತ್ತವೆ. ಅದು ಆಯಾತ ಎಂದು ಕರೆಯಲ್ಪಡುತ್ತದೆ.

೨. **ಸಮುದಾಯಗಳು :** ಒಂದು ದೇಶದ ಪ್ರಜೆಗಳನ್ನು ಒಂದು ಸಮುದಾಯವೆಂದು ಭಾವಿಸಲಾಗುತ್ತದೆ. ಆದುದರಿಂದ ಆಂತರಿಕ ವ್ಯಾಪಾರವು ಒಂದು ಸಮುದಾಯದೊಳಗೆ ನಡೆಯುವ ವ್ಯಾಪಾರವಾಗಿರುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರವು ವಿಭಿನ್ನ ಸಮುದಾಯಗಳ ನಡುವೆ ನಡೆಯುವ ವ್ಯಾಪಾರವಾಗಿರುತ್ತದೆ. ಈ ಕಾರಣಕ್ಕಾಗಿ ಫ್ರೆಡೆರಿಕ್ ಲಿಸ್ಟ್ "ದೇಶೀಯ ವ್ಯಾಪಾರವು ನಮ್ಮೊಳಗೆ ನಡೆಯುವ ವ್ಯಾಪಾರವಾಗಿರುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರವು ನಮ್ಮ ಮತ್ತು ಅವರ ನಡುವೆ ನಡೆಯುವ ವ್ಯಾಪಾರವಾಗಿರುತ್ತದೆ" ಎಂದಿದ್ದಾನೆ.

೩. **ರಾಜಕೀಯ ಘಟಕಗಳು :** ಒಂದು ದೇಶವು ಒಂದು ರಾಜಕೀಯ ಘಟಕವಾಗಿರುತ್ತದೆ. ಆದುದರಿಂದ ಆಂತರಿಕ ವ್ಯಾಪಾರವು ಒಂದು ರಾಜಕೀಯ ಘಟಕದೊಳಗೆ ನಡೆಯುವ ವ್ಯಾಪಾರವಾಗಿರುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರವು ವಿಭಿನ್ನ ರಾಜಕೀಯ ಘಟಕಗಳ ನಡುವೆ ನಡೆಯುವ ವ್ಯಾಪಾರವಾಗಿದೆ. ಹೀಗೆ ನಡೆಯುವ ವ್ಯಾಪಾರದಲ್ಲಿ ಒಂದು ದೇಶವು ಇತರ ದೇಶಗಳ ಹಿತಾಸಕ್ತಿಗಳನ್ನು ನಿರ್ಲಕ್ಷಿಸಿ, ತನ್ನ ಹಿತಾಸಕ್ತಿಗಳನ್ನು ಮಾತ್ರ ಕಾಪಾಡಿಕೊಳ್ಳಲು ಬಯಸುತ್ತದೆ.

೪. **ನೀತಿಗಳು ಮತ್ತು ಕಾನೂನುಗಳು :** ಒಂದು ದೇಶದೊಳಗೆ ಒಂದೇ ರೀತಿಯ ನೀತಿಗಳು ಮತ್ತು ಕಾನೂನುಗಳು ಅನುಷ್ಠಾನದಲ್ಲಿರುತ್ತದೆ. ಆದುದರಿಂದ ದೇಶೀಯ ವ್ಯಾಪಾರದಲ್ಲಿ ಹೆಚ್ಚು ಸಮಸ್ಯೆಗಳಿರುವುದಿಲ್ಲ. ಆದರೆ ಅಂತಾರಾಷ್ಟ್ರೀಯ ವ್ಯಾಪಾರವು ತುಂಬಾ ಸಂಕೀರ್ಣತೆಗಳನ್ನು ಒಳಗೊಂಡಿರುತ್ತದೆ. ಕಾನೂನುಗಳು, ಆರ್ಥಿಕ ನೀತಿಗಳು, ತೆರಿಗೆ ವ್ಯವಸ್ಥೆಗಳು, ವ್ಯಾಪಾರ ನೀತಿಗಳು ಭಿನ್ನವಾಗಿರುವುದು ಇದಕ್ಕೆ ಕಾರಣವಾಗಿರುತ್ತದೆ.

೫. **ಕರೆನ್ಸಿಗಳು :** ಒಂದು ದೇಶದೊಳಗೆ ಒಂದೇ ರೀತಿಯ ಕರೆನ್ಸಿ ಹಣ ಅಸ್ತಿತ್ವದಲ್ಲಿರುತ್ತದೆ. ಉದಾ: ಭಾರತದಲ್ಲಿ ರೂಪಾಯಿ. ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ವಿಭಿನ್ನ ಕರೆನ್ಸಿಗಳು ಬಳಕೆಯಾಗುತ್ತವೆ. ಡಾಲರು, ಪೌಂಡು, ಯುರೋ, ರೂಬಲ್ಲು, ಯೆನ್, ದೀನಾರ್ ಇತ್ಯಾದಿಗಳು ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಹೆಚ್ಚಾಗಿ ಬಳಕೆಯಾಗುವ ಕರೆನ್ಸಿಗಳಾಗಿವೆ. ಅನೇಕ ಕರೆನ್ಸಿಗಳು ಬಳಕೆಯಾಗುವುದರಿಂದ ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ವಿದೇಶಿ ವಿನಿಮಯ ದರದ ನಿರ್ಧಾರದ ಸಮಸ್ಯೆ ಉದ್ಭವವಾಗುತ್ತದೆ. ದೇಶೀಯ ವ್ಯಾಪಾರದಲ್ಲಿ ಈ ಸಮಸ್ಯೆಯಿರುವುದಿಲ್ಲ.

೬. **ನಿರ್ಬಂಧಗಳು :** ದೇಶೀಯ ವ್ಯಾಪಾರದಲ್ಲಿ ನಿರ್ಬಂಧಗಳಿರುವುದಿಲ್ಲ. ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಸುಂಕ ಹೇರಿಕೆ, ಪ್ರಮಾಣ ನಿಯಂತ್ರಣ, ಅನುಮತಿ ಪತ್ರ, ವಿನಿಮಯ ದರ ನಿರ್ಧಾರ ಇತ್ಯಾದಿಗಳು ನಿರ್ಬಂಧ ರೂಪದಲ್ಲಿ ಕಾಡುತ್ತವೆ.

೭. **ಉತ್ಪಾದನಾಂಗಗಳ ಚಲನೆ :** ದೇಶೀಯ ವ್ಯಾಪಾರದಲ್ಲಿ ಉತ್ಪಾದನಾಂಗಗಳಿಗೆ

ಹೆಚ್ಚು ಚಲನೆಯಿರುತ್ತದೆ. ಶ್ರಮ ಮತ್ತು ಬಂಡವಾಳಗಳು ದೇಶದೊಳಗೆ ಸುಲಭವಾಗಿ ಚಲಿಸುತ್ತವೆ. ಅಂತಾರಾಷ್ಟ್ರೀಯವಾಗಿ ಉತ್ಪಾದನಾಂಗಗಳಿಗೆ ಹೆಚ್ಚು ಚಲನೆಯಿರುವುದಿಲ್ಲ. ವಲಸೆ ಕಾನೂನುಗಳು, ನಾಗರಿಕತೆಯ ಕಾನೂನುಗಳು, ಅರ್ಹತೆ - ಇತ್ಯಾದಿಗಳು, ಉತ್ಪಾದ ನಾಂಗಗಳ (ಶ್ರಮದ) ಅಂತಾರಾಷ್ಟ್ರೀಯ ಚಲನೆಯನ್ನು ನಿರ್ಬಂಧಿಸುತ್ತವೆ.

**೮. ಸಾಮರ್ಥ್ಯ ವ್ಯತ್ಯಾಸಗಳು :** ಸಾಮಾನ್ಯವಾಗಿ ದೇಶವೊಂದರ ಪ್ರಜೆಗಳ ಸಾಮರ್ಥ್ಯ ದಲ್ಲಿ ವಿಶೇಷ ವ್ಯತ್ಯಾಸಗಳಿರುವುದಿಲ್ಲ. ಉದಾ: ಕಲಬುರ್ಗಿಯ ವ್ಯಾಪಾರಿಯಷ್ಟೇ ಕೋಲಾರದ ವ್ಯಾಪಾರಿ ಬುದ್ಧಿವಂತನಾಗಿರುತ್ತಾನೆ. ಆದರೆ ಅಂತಾರಾಷ್ಟ್ರೀಯವಾಗಿ ಮಾನವ ಸಾಮರ್ಥ್ಯದಲ್ಲಿ ವ್ಯತ್ಯಾಸಗಳಿರುತ್ತದೆ. ಉದಾ: ಐರೋಪ್ಯರ ಶ್ರಮದಕ್ಷತೆಯು ಭಾರತೀಯರದಕ್ಕಿಂತ ಎಂಟು ಪಾಲು ಅಧಿಕ. ಸಾಮರ್ಥ್ಯ ವ್ಯಸ್ಯಾಸಗಳು ಆಂತರಿಕ ವ್ಯಾಪಾರವನ್ನು ಅಂತಾರಾಷ್ಟ್ರೀಯ ವ್ಯಾಪಾರದಿಂದ ಪ್ರತ್ಯೇಕಿಸುತ್ತವೆ.

**೯. ಅಪಾಯಗಳು :** ದೇಶೀಯ ವ್ಯಾಪಾರದಲ್ಲಿ ಅಪಾಯಗಳು ತೀರಾ ಕಡಿಮೆಯಿರುತ್ತವೆ. ಉದಾಹರಣೆಗೆ ಬೆಳಗಾವಿಯ ಕುಡಚಿಯಿಂದ ಸರಕುಗಳನ್ನು ಸುಲಭವಾಗಿ ಚಾಮರಾಜ ಪೇಟೆಯ ಹನೂರಿಗೆ ಲಾರಿಗಳು ಸಾಗಿಸುತ್ತದೆ. ಮಂಗಳೂರಿನಿಂದ ಶುದ್ಧೀಕೃತ ತೈಲ ಸುಲಭವಾಗಿ ಬೆಂಗಳೂರಿಗೆ ಸಾಗಿಸಲ್ಪಡುತ್ತದೆ. ಆದರೆ ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಅನೇಕ ಅಪಾಯಗಳಿರುತ್ತದೆ. ಸಮುದ್ರದಲ್ಲಿ ಹಡಗುಗಳು ನೈಸರ್ಗಿಕ ಪ್ರಕೋಪಗಳಿಂದಾಗಿ ಮುಳುಗಿ ಬಿಡಬಹುದು. ಯುದ್ಧಾಸಕ್ತ ಗುಂಪುಗಳ ಕ್ಷಿಪಣಿಗಳು ಸರಕು ಸಾಕಾಟದ ಹಡಗುಗಳನ್ನು ಮತ್ತು ವಿಮಾನಗಳನ್ನು ಬಲಿ ತೆಗೆದುಕೊಳ್ಳಬಹುದು. ಅಂತಹ ಅಪಾಯಗಳು ದೇಶೀಯ ವ್ಯಾಪಾರದಲ್ಲಿಲ್ಲ.

### ೮.೧.೨. ವ್ಯಾಪಾರದ ತಳಹದಿ

ರಾಷ್ಟ್ರಗಳ ನಡುವೆ ವ್ಯಾಪಾರ ನಡೆಯುವುದೇಕೆ ಎಂಬ ಪ್ರಶ್ನೆಗೆ ಅರ್ಥಶಾಸ್ತ್ರಜ್ಞರು ಸಿದ್ಧಾಂತ ರೂಪದಲ್ಲಿ ಉತ್ತರಗಳನ್ನು ನೀಡಿದ್ದಾರೆ. ಉತ್ಪಾದನಾ ವೆಚ್ಚದಲ್ಲಿನ ವ್ಯತ್ಯಾಸವು ವ್ಯಾಪಾರಕ್ಕೆ ತಳಹದಿಯಾಗಿರುತ್ತದೆನ್ನುವುದು ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಅರ್ಥಶಾಸ್ತ್ರದ ಪಿತನೆಂಬ ಗೌರವಕ್ಕೆ ಪಾತ್ರನಾದ ಆಡಂಸ್ಮಿತ್ ಉತ್ಪಾದನಾ ವೆಚ್ಚಗಳ ನಿರಪೇಕ್ಷ ಪ್ರಯೋಜನಗಳು ವ್ಯಾಪಾರಕ್ಕೆ ಕಾರಣವಾಗಿರುತ್ತವೆಂದು ಹೇಳಿದ್ದಾನೆ. ಅವನನ್ನು ಮಾದರಿಯಾಗಿ ಸ್ವೀಕರಿಸಿದ ಡೇವಿಡ್ ರಿಕಾರ್ಡೋ ಉತ್ಪಾದನಾ ವೆಚ್ಚದ ಸಾಪೇಕ್ಷ ಪ್ರಯೋಜನಗಳು ವ್ಯಾಪಾರಕ್ಕೆ ತಳಹದಿಯಾದಗಿಸುತ್ತದೆ ಎಂದು ವಿಶ್ಲೇಷಿಸಿದ್ದಾನೆ.

### ನಿರಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆ

ನಿರಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಪರಿಚಯಿಸಿದವನು ಮತ್ತು ಅಭಿವೃದ್ಧಿ ಪಡಿಸಿದವನು ಆಡಂಸ್ಮಿತ್. ಅವನ ಪ್ರಕಾರ ಉತ್ಪಾದನಾ ವೆಚ್ಚದಲ್ಲಿನ

ನಿರಪೇಕ್ಷ ಪ್ರಯೋಜನವು ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಕಾರಣವಾಗಿರುತ್ತದೆ. ನಿರಪೇಕ್ಷ ವೆಚ್ಚದಲ್ಲಿನ ವ್ಯತ್ಯಾಸಗಳಿಗೆ ಶ್ರಮವಿಭಜನೆಯು ಕಾರಣವಾಗಿರುತ್ತದೆ. ಶ್ರಮ ವಿಭಜನೆಯಿಂದುಂಟಾಗುವ ನಿರಪೇಕ್ಷ ಉತ್ಪಾದನಾ ವೆಚ್ಚ ವ್ಯತ್ಯಾಸಗಳು ವ್ಯಾಪಾರಕ್ಕೆ ಕಾರಣವಾಗುವುದರಿಂದ ಆ್ಯಡಂಸ್ಮಿತ್ ಅಂತಾರಾಷ್ಟ್ರೀಯ ವ್ಯಾಪಾರವನ್ನು ಶ್ರಮವಿಭಜನೆಯ ಅಂತಾರಾಷ್ಟ್ರೀಯ ವಿಸ್ತರಣೆ ಎಂದು ಕರೆದಿದ್ದಾನೆ.

**ವಿವರಣೆ :** ಆ್ಯಡಂಸ್ಮಿತ್ತನು ಫ್ರಾನ್ಸಿನ ಕೃಷಿಪಂಥೀಯರಿಂದ ಪ್ರೇರಿತನಾದವನು. ಅವರು ಮಾನವನ ಆರ್ಥಿಕ ಚಟುವಟಿಕೆಗಳು ನೈಸರ್ಗಿಕವಾಗಿರುತ್ತವೆ; ಆದುದರಿಂದ ಸರಕಾರಗಳು ಆರ್ಥಿಕ ಚಟುವಟಿಕೆಗಳಲ್ಲಿ ಹಸ್ತಕ್ಷೇಪ ಮಾಡಬಾರದು ಎಂದು ಪ್ರತಿಪಾದಿಸಿದ್ದರು. ಅವರಿಗಿಂತ ಹಿಂದಿನ ವಾಣಿಜ್ಯ ಪಂಥೀಯರು ಪ್ರಭುತ್ವಕ್ಕೆ ಪರಮಾಧಿಕಾರವಿರುವುದರಿಂದ ಅದು ವ್ಯಾಪಾರವನ್ನು ನಿರ್ಬಂಧ ಮತ್ತು ನಿಯಂತ್ರಣಕ್ಕೊಳಪಡಿಸಬೇಕು ಎಂಬ ವಾದವನ್ನು ಮಂಡಿಸಿದ್ದರು. ವಾಣಿಜ್ಯ ಪಂಥೀಯರ ವಾದವನ್ನು ಮಟ್ಟಹಾಕಲು ಆ್ಯಡಂಸ್ಮಿತ್ ನಿರಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಪ್ರತಿಪಾದಿಸಿದ.

ಆ್ಯಡಂಸ್ಮಿತ್‌ನ ಪ್ರಕಾರ ಶ್ರಮವಿಭಜನೆಯು ಉತ್ಪಾದನೆಯಲ್ಲಿ ವೈಶಿಷ್ಟ್ಯ ಸಾಧನೆಗೆ ಮತ್ತು ವಿನಿಮಯಕ್ಕೆ ಕಾರಣವಾಗಿರುತ್ತದೆ. ಶ್ರಮವಿಭಜನೆಯನ್ನು ಆತ ಮಾನವನಲ್ಲಿನ ವಸ್ತುಗಳ ವಿನಿಮಯದ ನೈಸರ್ಗಿಕ ಪ್ರವೃತ್ತಿ ಎಂದು ಕರೆದಿದ್ದಾನೆ. ಶ್ರಮ ವಿಭಜನೆ ವೈಶಿಷ್ಟ್ಯಕ್ಕೆ ಕಾರಣವಾಗಿ ಉತ್ಪಾದನಾ ವೆಚ್ಚವನ್ನು ತಗ್ಗಿಸುತ್ತದೆ. ಸ್ಮಿತ್‌ನ ಪ್ರಕಾರ ಯಾವನೇ ವಿವೇಕಿಯಾದ ಮನುಷ್ಯನು ತಾನು ಕೊಳ್ಳುವ ಸರಕುಗಳ ಬೆಲೆಯು ತನ್ನ ಸ್ವಂತ ಉತ್ಪಾದನಾ ವೆಚ್ಚಕ್ಕಿಂತ ಕಡಿಮೆಯಾದರೆ, ಅಂತಹ ಸರಕುಗಳನ್ನು ತಾನೇ ಉತ್ಪಾದಿಸಲಾರ. ಸಿಂಪಿಗನು ತನ್ನ ಪಾದರಕ್ಷೆಗಳನ್ನು ಚಮ್ಮಾರನಿಂದ ಕೊಂಡುಕೊಳ್ಳುತ್ತಾನೆ. ಚಮ್ಮಾರನು ತನ್ನ ಬಟ್ಟೆಗಳನ್ನು ಸಿಂಪಿಗನಿಂದ ಹೊಲಿಸಿಕೊಳ್ಳುತ್ತಾನೆ. ಇದುವೇ ಶ್ರಮ ವಿಭಜನೆ.

ಹೀಗೆ ಶ್ರಮವಿಭಜನೆಯಿಂದ ಸಾಧಿತವಾಗುವ ನಿರಪೇಕ್ಷ ವೆಚ್ಚ ಪ್ರಯೋಜನವು ವಿನಿಮಯಕ್ಕೆ ಕಾರಣವಾಗಿರುತ್ತದೆ. ಶ್ರಮ ವಿಭಜನೆಗೆ ಕಾರಣವೇನು? ಅದು ನೈಸರ್ಗಿಕವಾದುದು. ತನ್ನನ್ನು ತಾನೇ ಉದ್ಧರಿಸಬೇಕಾಗುತ್ತದೆಂಬ ಸತ್ಯದರ್ಶನದಿಂದ ಸ್ಫೂರ್ತವಾದದ್ದು. ಸ್ವಹಿತ ಸಾಧನೆಯಿಂದ ಪ್ರೇರಿತವಾದದ್ದು. ಪ್ರತಿಯೊಬ್ಬ ವ್ಯಕ್ತಿಯ ಚಟುವಟಿಕೆಗಳ ಹಿಂದೆ ಸ್ವಹಿತವೆಂಬ ಕಾಣದ ಕೈ ಕ್ರಿಯಾಶೀಲವಾಗಿರುತ್ತದೆ. ಹಾಗಾಗಿ ಆ್ಯಡಂಸ್ಮಿತ್ ಹೇಳುತ್ತಾನೆ, "ನಾವು ನಮ್ಮ ಊಟವನ್ನು ನಿರೀಕ್ಷಿಸುವುದು ಮಾಂಸ ಮಾರುವ ಕಟುಕ, ಮದ್ಯಮಾರುವ ಭಟ್ಟಿಯಾತ ಅಥವಾ ಬ್ರೆಡ್ಡು ಮಾರುವ ಬೇಕರಿಯಾತನ ಕರುಣೆಯಿಂದಲ್ಲ. ಬದಲಾಗಿ ಅವರವರ ಸ್ವಂತ ಹಿತದ ಬಗ್ಗೆ ಅವರವರಿಗಿರುವ ಕಾಳಜಿಯಿಂದಾಗಿ".

**ಕಲ್ಪನೆಗಳು :** ಶ್ರಮವಿಭಜನೆಯ ಪರಿಣಾಮವಾದ ಉತ್ಪಾದನಾ ವೆಚ್ಚದ ಪೂರ್ಣ ವ್ಯತ್ಯಾಸ ಪ್ರಯೋಜನಗಳನ್ನು ಪಡೆಯಲು ಅಂತಾರಾಷ್ಟ್ರೀಯ ವ್ಯಾಪಾರ ನಡೆಯುತ್ತದೆಂದು ಸ್ಮಿತ್ ಭಾವಿಸುತ್ತಾನೆ. ಅವನ ಸಿದ್ಧಾಂತವು ಈ ಕೆಳಗಿನ ನಾಲ್ಕು ಕಲ್ಪನೆಗಳನ್ನು ಆಧರಿಸಿದೆ.

೧. ಉತ್ಪಾದನಾ ವೆಚ್ಚವೆಂದರೆ ಶ್ರಮವೆಚ್ಚ ಮಾತ್ರವಾಗಿರುತ್ತದೆ.

೨. ಎರಡು ರಾಷ್ಟ್ರಗಳು ಮತ್ತು ಎರಡು ಸರಕುಗಳು ಅಸ್ತಿತ್ವದಲ್ಲಿರುತ್ತದೆ. ಇವೆರಡು ರಾಷ್ಟ್ರಗಳಲ್ಲಿ ಸ್ಥಿರ ಪ್ರತಿಫಲವಿರುತ್ತದೆ.

೩. ಎರಡು ರಾಷ್ಟ್ರಗಳು ಎರಡೂ ಸರಕುಗಳನ್ನು ಉತ್ಪಾದಿಸುವ ಸಾಮರ್ಥ್ಯ ಹೊಂದಿರುತ್ತವೆ.

೪. ಒಂದು ಸರಕಿನ ಉತ್ಪಾದನೆಯಲ್ಲಿ ಒಂದು ದೇಶ ನಿರಪೇಕ್ಷ ವೆಚ್ಚ ಪ್ರಯೋಜನ ಹೊಂದಿರುತ್ತದೆ. ಇನ್ನೊಂದು ದೇಶ ಇನ್ನೊಂದು ಸರಕಿನ ಉತ್ಪಾದನೆಯಲ್ಲಿ ನಿರಪೇಕ್ಷ ವೆಚ್ಚ ಪ್ರಯೋಜನ ಹೊಂದಿರುತ್ತದೆ.

ಈ ಕಲ್ಪನೆಗಳ ಆಧಾರದಲ್ಲಿ ಆ್ಯಡಂಸ್ಮಿತ್ ನಿರಪೇಕ್ಷ ವೆಚ್ಚ ಸಿದ್ಧಾಂತವನ್ನು ರೂಪಿಸಿದ್ದಾನೆ. ಈ ಸಿದ್ಧಾಂತದ ಪ್ರಕಾರ ದೇಶವೊಂದು ತಾನು ನಿರಾಪೇಕ್ಷ ಉತ್ಪಾದನಾ ವೆಚ್ಚ ಪ್ರಯೋಜನಗಳನ್ನು ಹೊಂದಿರುವ ಸರಕುಗಳನ್ನು ಉತ್ಪಾದನೆ ಮಾಡಿ ನಿರ್ಯಾತ ಮಾಡುತ್ತದೆ. ತಾನು ನಿರಪೇಕ್ಷ ಉತ್ಪಾದನಾ ವೆಚ್ಚ ಪ್ರಯೋಜನಗಳನ್ನು ಹೊಂದಿರದ ಸರಕುಗಳನ್ನು ಅನ್ಯ ದೇಶಗಳಿಂದ ಆಯಾತ ಮಾಡಿಕೊಳ್ಳುತ್ತದೆ. ಆದುದರಿಂದ ನಿರಪೇಕ್ಷ ಉತ್ಪಾದನಾ ವೆಚ್ಚ ಪ್ರಯೋಜನವು ವ್ಯಾಪಾರಕ್ಕೆ ಮೂಲ ಕಾರಣವಾಗಿರುತ್ತದೆ.

**ಉದಾಹರಣೆ:** ಆ್ಯಡಂಸ್ಮಿತ್ತನ ಸಿದ್ಧಾಂತವನ್ನು ಉದಾಹರಣೆಯೊಂದರ ಮೂಲಕ ಇನ್ನಷ್ಟು ಸ್ಪಷ್ಟಪಡಿಸಬಹುದು. ಎರಡು ದೇಶಗಳನ್ನು ಮತ್ತು ಎರಡು ಸರಕುಗಳನ್ನು ಉದಾಹರಣೆಯಾಗಿ ತೆಗೆದುಕೊಳ್ಳೋಣ.

ಇಂಗ್ಲೆಂಡು ಮತ್ತು ಪೋರ್ಚುಗಲ್ಲುಗಳು ಬಟ್ಟೆ ಮತ್ತು ದ್ರಾಕ್ಷಾರಸ ಉತ್ಪಾದಿಸುತ್ತವೆ. ಇಂಗ್ಲೆಂಡಿನಲ್ಲಿ ೧೦ ಕಾರ್ಮಿಕರು ಒಂದು ದಿನದಲ್ಲಿ ೨೦ ಲೀಟರು ದ್ರಾಕ್ಷಾರಸ ಮತ್ತು ೩೦ ಮೀಟರು ಬಟ್ಟೆ ಉತ್ಪಾದಿಸುತ್ತಾರೆ. ಪೋರ್ಚುಗಲ್‌ನಲ್ಲಿ ೧೦ ಕಾರ್ಮಿಕರು ಒಂದು ದಿನದಲ್ಲಿ ೩೫ ಲೀಟರು ದ್ರಾಕ್ಷಾರಸ ಮತ್ತು ೧೫ ಮೀಟರು ಬಟ್ಟೆ ಉತ್ಪಾದಿಸುತ್ತಾರೆ. ಈ ಸ್ಥಿತಿಯನ್ನು ಈ ಕೆಳಗಿನಂತೆ ತೋರಿಸಬಹುದು.

**ಕೋಷ್ಟಕ ೮.೧**

**ಹತ್ತು ಕಾರ್ಮಿಕರ ಉತ್ಪಾದನಾ ಸಾಮರ್ಥ್ಯ**

| ಉತ್ಪನ್ನ | ಇಂಗ್ಲೆಂಡು | ಪೋರ್ಚುಗಲ್ಲು | ಒಟ್ಟು |
|---|---|---|---|
| ಬಟ್ಟೆ | ೩೦ ಮೀಟರು | ೧೫ ಮೀಟರು | ೪೫ ಮೀಟರು |
| ದ್ರಾಕ್ಷಾರಸ | ೨೦ ಲೀಟರು | ೩೫ ಲೀಟರು | ೫೫ ಲೀಟರು |

ಇಂಗ್ಲೆಂಡಿಗೆ ಬಟ್ಟೆಯ ಉತ್ಪಾದನೆಯಲ್ಲಿ ನಿರಪೇಕ್ಷ ವೆಚ್ಚ ಪ್ರಯೋಜನವಿದೆ. ಆದುದರಿಂದ ಅದು ಬಟ್ಟೆಯ ಉತ್ಪಾದನೆಯಲ್ಲಿ ವೈಶಿಷ್ಟ್ಯ ಸಾಧಿಸುತ್ತದೆ. ಬಟ್ಟೆಯನ್ನು ಮಾತ್ರ ಉತ್ಪಾದಿಸುತ್ತದೆ. ಪೋರ್ಚುಗಲ್ಲಿಗೆ ದ್ರಾಕ್ಷಾರಸದ ಉತ್ಪಾದನೆಯಲ್ಲಿ ನಿರಪೇಕ್ಷ

ವೆಚ್ಚ ಪ್ರಯೋಜನವಿದೆ. ಆದುದರಿಂದ ಅದು ದ್ರಾಕ್ಷಾರಸವನ್ನು ಮಾತ್ರ ಉತ್ಪಾದಿಸುತ್ತದೆ. ಈಗಿನ ಸ್ಥಿತಿ ಈ ಕೆಳಗಿನಂತಿರುತ್ತದೆ.

**ಕೋಷ್ಟಕ ೮.೨**

**ಉತ್ಪನ್ನ ವೈಶಿಷ್ಟ್ಯ ಸಾಧನೆ**

| ಉತ್ಪನ್ನ | ಇಂಗ್ಲೆಂಡು | ಪೋರ್ಚುಗಲ್ಲು | ಒಟ್ಟು |
|---|---|---|---|
| ಬಟ್ಟೆ | ೬೦ ಮೀಟರು | ---------- | ೬೦ ಮೀಟರು |
| ದ್ರಾಕ್ಷಾರಸ | ---------- | ೨೦ ಲೀಟರು | ೨೦ ಲೀಟರು |

ಉತ್ಪನ್ನ ವೈಶಿಷ್ಟ್ಯ ಸಾಧನೆಗೆ ಮುನ್ನ ಒಟ್ಟು ೪೫ ಮೀಟರು ಬಟ್ಟೆ ಉತ್ಪಾದನೆಯಾಗುತ್ತಿತ್ತು. ಉತ್ಪನ್ನ ವೈಶಿಷ್ಟ್ಯ ಸಾಧನೆಯ ಬಳಿಕ ಒಟ್ಟು ೬೦ ಮೀಟರು ಬಟ್ಟೆ ಉತ್ಪಾದನೆಯಾಗುತ್ತದೆ. ಉತ್ಪನ್ನ ವೈಶಿಷ್ಟ್ಯಕ್ಕೆ ಮುನ್ನ ಒಟ್ಟು ೫೫ ಲೀಟರು ದ್ರಾಕ್ಷಾರಸ ಉತ್ಪಾದನೆಯಾಗುತ್ತಿತ್ತು. ಉತ್ಪನ್ನ ವೈಶಿಷ್ಟ್ಯದ ಬಳಿಕ ಉತ್ಪಾದನೆಯಾಗುವ ದ್ರಾಕ್ಷಾರಸ ಪ್ರಮಾಣ ೨೦ ಲೀಟರುಗಳು. ಹೀಗೆ ವ್ಯಾಪಾರಕ್ಕೆ ವೈಶಿಷ್ಟ್ಯವು ಕಾರಣವಾಗುತ್ತದೆ. ವೈಶಿಷ್ಟ್ಯಕ್ಕೆ ನಿರಪೇಕ್ಷ ವೆಚ್ಚ ಪ್ರಯೋಜನಗಳು ಕಾರಣವಾಗಿರುತ್ತವೆ.

**ದೋಷಗಳು** : ಆ್ಯಡಂಸ್ಮಿತ್ತನ ಸಿದ್ಧಾಂತದ ದೋಷಗಳಿವು :

೧. ಸ್ಮಿತ್‌ನು ಶ್ರಮವೆಚ್ಚವನ್ನಷ್ಟೇ ಪರಿಗಣಿಸಿದ್ದಾನೆ. ಇತರ ಉತ್ಪಾದನಾಂಗಗಳ ವೆಚ್ಚಗಳನ್ನು ಅವಗಣಿಸಿದ್ದಾನೆ.

೨. ಅವನು ಪೂರೈಕೆಯ ಭಾಗದಿಂದ ಮಾತ್ರ ಅಂತಾರಾಷ್ಟ್ರೀಯ ವ್ಯಾಪಾರವನ್ನು ನೋಡಿದ್ದಾನೆ. ಬೇಡಿಕೆಯ ಭಾಗವನ್ನು ಅವಗಣಿಸಿದ್ದಾನೆ.

೩. ನಿರಪೇಕ್ಷ ಪ್ರಯೋಜನಗಳನ್ನು ಮಾತ್ರವೇ ತಳಪಾಯ ಮಾಡಿಕೊಂಡರೆ ಹಿಂದುಳಿದ ದೇಶಗಳು ಏನನ್ನೂ ಉತ್ಪಾದಿಸುವಂತಿಲ್ಲ. ಮುಂದುವರಿದ ದೇಶಗಳಿಗೆ ಮಾತ್ರ ಎಲ್ಲಾ ಪ್ರಯೋಜನಗಳು ಲಭ್ಯವಾಗುತ್ತವೆ.

೪. ಅಂತಾರಾಷ್ಟ್ರೀಯ ವ್ಯಾಪಾರದಿಂದ ಎಲ್ಲಾ ರಾಷ್ಟ್ರಗಳು ಪ್ರಯೋಜನ ಪಡೆಯುತ್ತವೆಂದು ಸ್ಮಿತ್ ಭಾವಿಸಿದ್ದ. ಆದರೆ ಅಂತಾರಾಷ್ಟ್ರೀಯ ವ್ಯಾಪಾರದಿಂದ ಹೆಚ್ಚು ಪ್ರಯೋಜನ ದಕ್ಕಿದ್ದು ಮುಂದುವರಿದ ರಾಷ್ಟ್ರಗಳಿಗೆ ಮಾತ್ರ.

೫. ಮುಕ್ತ ವ್ಯಾಪಾರ ನೀತಿಯಿಂದ ಮಾತ್ರ ಅಂತಾರಾಷ್ಟ್ರೀಯ ವ್ಯಾಪಾರದ ಪ್ರಯೋಜನಗಳನ್ನು ದಕ್ಕಿಸಿಕೊಳ್ಳಲು ಸಾಧ್ಯವೆನ್ನುವುದು ಸ್ಮಿತ್‌ನ ಅಭಿಪ್ರಾಯವಾಗಿತ್ತು. ಆದರೆ ಮುಕ್ತ ವ್ಯಾಪಾರ ನೀತಿಯು ಹಿಂದುಳಿದ ದೇಶಗಳ ಪರಿಸ್ಥಿತಿಯನ್ನು ಶೋಚನೀಯಗೊಳಿಸುವ ಸಾಧ್ಯತೆಯಿದೆ.

ಆ್ಯಡಂಸ್ಮಿತ್ತನ ನಿರಪೇಕ್ಷವೆಚ್ಚ ಪ್ರಯೋಜನ ಪರಿಕಲ್ಪನೆಯ ದೋಷಗಳನ್ನು ಮನಗಂಡ ಡೇವಿಡ್ ರಿಕಾರ್ಡೋ ಸಾಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಪ್ರತಿಪಾದಿಸಿದ.

**ಸಾಪೇಕ್ಷವೆಚ್ಚ ಪ್ರಯೋಜನ ಪರಿಕಲ್ಪನೆ :**

ಆಂಗ್ಲ ಸಾಂಪ್ರದಾಯಿಕ ಪಂಥದ ಡೇವಿಡ್ ರಿಕಾರ್ಡೋ ಸಾಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಪರಿಚಯಿಸಿದ ಅರ್ಥ ವಿಜ್ಞಾನಿಯಾಗಿದ್ದಾನೆ. ಆ್ಯಡಂಸ್ಮಿತ್‌ನ ನಿರಪೇಕ್ಷ ವೆಚ್ಚ ಪ್ರಯೋಜನ ಸಿದ್ಧಾಂತವು ವ್ಯಾಪಾರಕ್ಕೆ ತಾರ್ಕಿಕ ಸಮರ್ಥನೆಯನ್ನು ನೀಡುವುದಿಲ್ಲ ವೆಂಬುದನ್ನು ಮನಗಂಡ ಡೇವಿಡ್ ರಿಕಾರ್ಡೋ ತುಲನಾತ್ಮಕ ವೆಚ್ಚ ಸಿದ್ಧಾಂತವನ್ನು ಪ್ರತಿಪಾದಿಸಿದ. ರಿಕಾರ್ಡೋನ ಸಿದ್ಧಾಂತದ ಪ್ರಕಾರ ತುಲನಾತ್ಮಕ ವೆಚ್ಚ ಪ್ರಯೋಜನಗಳು ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ತಳಹದಿ ಒದಗಿಸುತ್ತದೆ.

**ವಿವರಣೆ** : ತುಲನಾತ್ಮಕ ವೆಚ್ಚದ ಸಿದ್ಧಾಂತವನ್ನು ಹೀಗೆ ವಿವರಿಸಬಹುದು: "ವ್ಯಾಪಾರವು ಮುಕ್ತವಾಗಿದ್ದರೆ, ದೀರ್ಘಾವಧಿಯಲ್ಲಿ, ಪ್ರತಿಯೊಂದು ದೇಶವು ತನಗೆ ತುಲನಾತ್ಮಕವಾಗಿ ಪ್ರಯೋಜನವಿರುವ ಸರಕುಗಳ ಉತ್ಪಾದನೆಯಲ್ಲಿ ವೈಶಿಷ್ಟ್ಯತೆಯನ್ನು ಪಡೆದು ಅವನ್ನು ನಿರ್ಯಾತ ಮಾಡುತ್ತದೆ. ತನಗೆ ತುಲನಾತ್ಮಕವಾಗಿ ಪ್ರಯೋಜನವಿಲ್ಲದ ಸರಕುಗಳನ್ನು ವಿದೇಶಗಳಿಂದ ಆಯಾತ ಮಾಡಿಕೊಳ್ಳುತ್ತದೆ. ವ್ಯಾಪಾರದಲ್ಲಿ ಪಾಲ್ಗೊಳುವ ರಾಷ್ಟ್ರಗಳು ವೈಶಿಷ್ಟ್ಯತೆಯ ಪ್ರಯೋಜನವನ್ನು ಪರಸ್ಪರ ಪಡೆದುಕೊಳುತ್ತವೆ."

ಆಡಂಸ್ಮಿತ್‌ನು ನಿರಪೇಕ್ಷ ವೆಚ್ಚ ಪ್ರಯೋಜನವು ವ್ಯಾಪಾರಕ್ಕೆ ಆಧಾರವೆಂದು ಭಾವಿಸಿದ್ದ. ಆದರೆ ಡೇವಿಡ್ ರಿಕಾರ್ಡೋನ ಪ್ರಕಾರ ಸಾಪೇಕ್ಷ ವೆಚ್ಚ ಪ್ರಯೋಜನವು ವ್ಯಾಪಾರಕ್ಕೆ ಆಧಾರವೇ ಹೊರತು ನಿರಪೇಕ್ಷ ವೆಚ್ಚ ಪ್ರಯೋಜನವಲ್ಲ. ತುಲನಾತ್ಮಕ ಪ್ರಯೋಜನ ಪರಿಕಲ್ಪನೆಯ ಪ್ರಕಾರ ಉತ್ಪಾದನಾವೆಚ್ಚದ ತುಲನಾತ್ಮಕ ಪ್ರಯೋಜನವು ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಕಾರಣವಾಗಿರುತ್ತದೆ.

ರಿಕಾರ್ಡೋನ ತುಲನಾತ್ಮಕ ಪ್ರಯೋಜನ ಪರಿಕಲ್ಪನೆಯು ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಸಂಬಂಧಿಸಿದ ಮೂರು ಮೂಲಭೂತ ಪ್ರಶ್ನೆಗಳಿಗೆ ಉತ್ತರ ನೀಡುತ್ತದೆ.

ಪ್ರಶ್ನೆ ೧. ವ್ಯಾಪಾರ ಏಕೆ ಉಂಟಾಗುತ್ತದೆ? ಅಥವಾ ವ್ಯಾಪಾರಕ್ಕೆ ಕಾರಣವೇನು? ಡೇವಿಡ್ ರಿಕಾರ್ಡೋನ ಪ್ರಕಾರ ಉತ್ಪಾದನಾ ವೆಚ್ಚದ ತುಲನಾತ್ಮಕ ವ್ಯತ್ಯಾಸವು ವ್ಯಾಪಾರಕ್ಕೆ ಕಾರಣವಾಗಿರುತ್ತದೆ.

ಪ್ರಶ್ನೆ ೨. ರಾಷ್ಟ್ರಗಳು ವೈಶಿಷ್ಟ್ಯತೆಯನ್ನು ಹೇಗೆ ಪಡೆಯುತ್ತವೆ? ತುಲನಾತ್ಮಕ ವೆಚ್ಚ ಪ್ರಯೋಜನಗಳು ಉತ್ಪನ್ನ ವೈಶಿಷ್ಟ್ಯತೆಗೆ ಕಾರಣವಾಗಿವೆ.

ಪ್ರಶ್ನೆ ೩. ಆಯಾತ - ನಿರ್ಯಾತಗಳಿಗೆ ಆಧಾರವೇನು? ತುಲನಾತ್ಮಕ ವೆಚ್ಚದ ಪ್ರಯೋಜನವಿಲ್ಲದ ಸರಕುಗಳನ್ನು ಆಮದು ಮಾಡಿಕೊಳ್ಳಲಾಗುತ್ತದೆ. ತುಲನಾತ್ಮಕ ವೆಚ್ಚದ ಪ್ರಯೋಜನಗಳಿರುವ ಸರಕುಗಳನ್ನು ನಿರ್ಯಾತ ಮಾಡಲಾಗುತ್ತದೆ. ಪರಸ್ಪರಾವಲಂಬಿ ಬೇಡಿಕೆಯು ವ್ಯಾಪಾರದ ಕರಾರುಗಳನ್ನು ನಿರ್ಧರಿಸುತ್ತದೆ.

**ಕಲ್ಪನೆಗಳು** : ತುಲನಾತ್ಮಕ ವೆಚ್ಚ ಪ್ರಯೋಜನ ಪರಿಕಲ್ಪನೆಯು ಈ ಕೆಳಗಿನ ಕಲ್ಪನೆಗಳನ್ನು ಆಧರಿಸಿದೆ :

೧. ಎರಡು ರಾಷ್ಟ್ರಗಳು ಮತ್ತು ಎರಡು ಸರಕುಗಳು ಅಸ್ತಿತ್ವದಲ್ಲಿರುತ್ತವೆ.

೨. ಪರಿಪೂರ್ಣ ಪೈಪೋಟಿಯು ಅಸ್ತಿತ್ವದಲ್ಲಿರುತ್ತದೆ.

೩. ಉತ್ಪಾದನಾ ವೆಚ್ಚವೆಂದರೆ ಶ್ರಮವೆಚ್ಚ ಮಾತ್ರವಾಗಿರುತ್ತದೆ.

೪. ಉತ್ಪಾದನಾ ವೆಚ್ಚವು ಸ್ಥಿರದರದಲ್ಲಿ ಬದಲಾಗುತ್ತದೆ.

೫. ಸ್ಥಿತ್ಯಂತರಗಳಿಲ್ಲದೆ ಆರ್ಥಿಕತೆಯು ಸ್ಥಿರವಾಗಿರುತ್ತದೆ.

೬. ಸಾಗಾಟ ವೆಚ್ಚವು ಬೆಲೆಯಲ್ಲಿ ಸೇರಿರುವುದಿಲ್ಲ.

೭. ಮುಕ್ತವ್ಯಾಪಾರ ಅಸ್ತಿತ್ವದಲ್ಲಿರುತ್ತದೆ.

**ಪ್ರತಿಪಾದನೆ :** ತುಲನಾತ್ಮಕ ಪ್ರಯೋಜನ ಪರಿಕಲ್ಪನೆಯನ್ನು ರಿಕಾರ್ಡೋ ತನ್ನ ಜಗತ್ಪ್ರಸಿದ್ಧ ಎರಡು ದೇಶ - ಎರಡು ಸರಕು ಮಾದರಿಯ ಮೂಲಕ ಪ್ರತಿಪಾದಿಸಿದ್ದಾನೆ. ಅವನು ತನ್ನ ಮಾದರಿಯಲ್ಲಿ ಉಲ್ಲೇಖಿಸಿರುವ ಎರಡು ದೇಶಗಳು ಇಂಗ್ಲೆಂಡು ಮತ್ತು ಪೋರ್ಚುಗಲ್ಲು, ಎರಡು ಸರಕುಗಳು ಬಟ್ಟೆ ಮತ್ತು ದ್ರಾಕ್ಷಾರಸ. ರಿಕಾರ್ಡೋನ ಮಾದರಿ ಹೀಗಿದೆ.

**ಕೋಷ್ಟಕ ೮.೩**

**ರಿಕಾರ್ಡೋನ ತುಲನಾತ್ಮಕ ವೆಚ್ಚದ ಮಾದರಿ**

| ದೇಶ | ಒಂದು ಯುನಿಟ್ಟು ಉತ್ಪಾದನೆಗೆ ಬೇಕಾಗುವ ಶ್ರಮ ಪ್ರಮಾಣ | | ದ್ರಾಕ್ಷಾರಸ ಮತ್ತು ಬಟ್ಟೆಯ ನಡುವಣ ವಿನಿಮಯ ದರ |
|---|---|---|---|
| | ಬಟ್ಟೆ | ದ್ರಾಕ್ಷಾರಸ | (ಯುನಿಟ್ಟು) |
| ಇಂಗ್ಲೆಂಡು | ೧೦೦ | ೧೨೦ | ೧ ದ್ರಾಕ್ಷಾರಸ : ೧.೨ ಬಟ್ಟೆ |
| ಪೋರ್ಚುಗಲ್ಲು | ೯೦ | ೮೦ | ೧ ದ್ರಾಕ್ಷಾರಸ : ೦.೮೮ ಬಟ್ಟೆ |

ರಿಕಾರ್ಡೋನ ಉದಾಹರಣೆಯನ್ನು ಹೀಗೆ ವಿಸ್ತರಿಸಬಹುದು :

೧. ೮೦ ಕಾರ್ಮಿಕರು ಪೋರ್ಚುಗಲ್ಲಿನಲ್ಲಿ ಒಂದು ಯುನಿಟ್ಟು ದ್ರಾಕ್ಷಾರಸ ಉತ್ಪಾದಿಸುತ್ತಾರೆ. ಒಂದು ಯುನಿಟ್ಟು ಬಟ್ಟೆ ಉತ್ಪಾದಿಸಲು ಪೋರ್ಚುಗಲ್ಲಿನಲ್ಲಿ ೯೦ ಯುನಿಟ್ಟಿನ ಶ್ರಮ ಬೇಕಾಗುತ್ತದೆ. ಪೋರ್ಚುಗಲ್ಲು ಒಟ್ಟು ೧೭೦ ಯುನಿಟ್ಟು ಶ್ರಮ ಬಳಸಿ ಒಂದು ಯುನಿಟ್ಟು ದ್ರಾಕ್ಷಾರಸ ಮತ್ತು ಒಂದು ಯುನಿಟ್ಟು ಬಟ್ಟೆ ಉತ್ಪಾದಿಸುತ್ತದೆ. ಪೋರ್ಚುಗಲ್ಲಿನಲ್ಲಿ ೧ ಯುನಿಟ್ಟು ದ್ರಾಕ್ಷಾರಸವು ೧.೨ ಯುನಿಟ್ಟು ಬಟ್ಟೆಗೆ ವಿನಿಮಯಗೊಳ್ಳುತ್ತದೆ.

೨. ಇಂಗ್ಲಂಡಿನಲ್ಲಿ ೧೨೦ ಯುನಿಟ್ಟು ಶ್ರಮವು ಒಂದು ಯುನಿಟ್ಟು ದ್ರಾಕ್ಷಾರಸವನ್ನು ಉತ್ಪಾದಿಸುತ್ತದೆ. ಒಂದು ಯುನಿಟ್ಟು ಬಟ್ಟೆ ಉತ್ಪಾದಿಸಲು ೧೦೦ ಯುನಿಟ್ಟು ಶ್ರಮ ಬೇಕಾಗುತ್ತದೆ. ಇಂಗ್ಲೆಂಡು ಒಟ್ಟು ೨೨೦ ಯುನಿಟ್ಟು ಶ್ರಮ ಬಳಸಿ ಒಂದು ಯುನಿಟ್ಟು ದ್ರಾಕ್ಷಾರಸ ಮತ್ತು ಒಂದು ಯುನಿಟ್ಟು ಬಟ್ಟೆ ಉತ್ಪಾದಿಸುತ್ತದೆ. ಇಂಗ್ಲೆಂಡಿನಲ್ಲಿ ೧

ಯುನಿಟ್ಟು ದ್ರಾಕ್ಷಾರಸವು ೦.೮೮ ಯುನಿಟ್ಟು ಬಟ್ಟೆಗೆ ವಿನಿಮಯಗೊಳ್ಳುತ್ತದೆ.

೩. ಪೋರ್ಚಗಲ್ಲಿಗೆ ದ್ರಾಕ್ಷರಸ ಮತ್ತು ಬಟ್ಟೆಯ ಉತ್ಪಾದನೆಯಲ್ಲಿ ನಿರಪೇಕ್ಷ ವೆಚ್ಚ ಪ್ರಯೋಜನವಿದೆ. ಆಡಂಸ್ಮಿತ್‌ನ ಅಭಿಪ್ರಾಯವನ್ನು ಮನ್ನಿಸುವುದಾದರೆ ದ್ರಾಕ್ಷಾರಸ ಮತ್ತು ಬಟ್ಟೆ ಎರಡನ್ನೂ ಪೋರ್ಚಗಲ್ಲೇ ಉತ್ಪಾದಿಸಬೇಕಾಗುತ್ತದೆ. ಆಗ ಇಂಗ್ಲೆಂಡು ಏನನ್ನು ಉತ್ಪಾದಿಸಬೇಕಾಗುವುದು ಎಂಬ ಪ್ರಶ್ನೆ ಹುಟ್ಟುತ್ತದೆ.

೪. ಸಾಪೇಕ್ಷ ವೆಚ್ಚ ಪ್ರಯೋಜನದ ಆಧಾರದಲ್ಲಿ ಪೋರ್ಚಗಲ್ಲು ದ್ರಾಕ್ಷಾರಸ ಮಾತ್ರ ಉತ್ಪಾದನೆ ಮಾಡುತ್ತದೆ. ಬಟ್ಟೆಯ ಉತ್ಪಾದನೆಯನ್ನು ಇಂಗ್ಲೆಡಿಗೆ ಬಿಟ್ಟು ಕೊಡುತ್ತದೆ. ಇಂಗ್ಲೆಂಡು ದ್ರಾಕ್ಷಾರಸದ ಉತ್ಪಾದನೆಯ ತಂಟೆಗೆ ಹೋಗದೆ ಬಟ್ಟೆಯನ್ನು ಮಾತ್ರ ಉತ್ಪಾದಿಸುತ್ತದೆ. ಇದು ವೈಶಿಷ್ಟ್ಯತೆಗೆ ಎಡೆಮಾಡಿಕೊಡುತ್ತದೆ. ಪೋರ್ಚಗಲ್ಲು ೧೬೦ ಯುನಿಟ್ಟು ಶ್ರಮ ಬಳಸಿ ಎರಡು ಯುನಿಟ್ಟು ದ್ರಾಕ್ಷಾರಸ ಉತ್ಪಾದಿಸುತ್ತದೆ. ಇಂಗ್ಲೆಂಡು ೨೦೦ ಯುನಿಟ್ಟು ಶ್ರಮ ಬಳಸಿ ಎರಡು ಯುನಿಟ್ಟು ಬಟ್ಟೆ ಉತ್ಪಾದಿಸುತ್ತದೆ.

೫. ಪೋರ್ಚಗಲ್ಲು ಇಂಗ್ಲೆಂಡಿಗೆ ದ್ರಾಕ್ಷಾರಸವನ್ನು ನಿರ್ಯಾತ ಮಾಡುತ್ತದೆ. ಇಂಗ್ಲೆಂಡಿನಿಂದ ಬಟ್ಟೆಯನ್ನು ಆಯಾತ ಮಾಡಿಕೊಳ್ಳುತ್ತದೆ. ೧ ಯುನಿಟ್ಟು ದ್ರಾಕ್ಷಾರಸಕ್ಕೆ ೦.೮೮ ಯುನಿಟ್ಟು ಬಟ್ಟೆಗಿಂತ ಈಗ ಅದು ಹೆಚ್ಚು ಬಟ್ಟೆ ಪಡೆದರೆ ಪೋರ್ಚಗಲ್ಲಿಗೆ ಲಾಭವಾಗುತ್ತದೆ.

೬. ಇಂಗ್ಲೆಂಡು ಪೋರ್ಚಗಲ್ಲಿಗೆ ಬಟ್ಟೆಯನ್ನು ನಿರ್ಯಾತ ಮಾಡುತ್ತದೆ. ಪೋರ್ಚಗಲ್ಲಿನಿಂದ ದ್ರಾಕ್ಷಾರಸವನ್ನು ಆಯಾತ ಮಾಡಿಕೊಳ್ಳುತ್ತದೆ. ೧ ಯುನಿಟ್ಟು ದ್ರಾಕ್ಷಾರಸಕ್ಕೆ ಇಂಗ್ಲೆಡು ಈಗ ೧.೨೨ ಯುನಿಟ್ಟು ಬಟ್ಟೆಗಿಂತ ಕಡಿಮೆ ಕೊಡಬೇಕಾಗಿ ಬಂದರೆ ಇಂಗ್ಲೆಂಡಿಗೆ ಲಾಭವಾಗುತ್ತದೆ. ದ್ರಾಕ್ಷಾರಸ ಮತ್ತು ಬಟ್ಟೆಯ ನಡುವಣ ವಿನಿಮಯ ದರವು ಪರಸ್ಪರಾವಲಂಬಿ ಬೇಡಿಕೆಯನ್ನು ಅವಲಂಬಿಸಿಕೊಂಡಿರುತ್ತದೆ.

೭. ಉತ್ಪನ್ನ ವೈಶಿಷ್ಟ್ಯದಿಂದ ಎರಡು ದೇಶಗಳಿಗೂ ಲಾಭವಿದೆ. ಉತ್ಪನ್ನ ವೈಶಿಷ್ಟ್ಯವಿಲ್ಲದಿದ್ದಾಗ ಪೋರ್ಚಗಲ್ಲು ಒಂದು ಯುನಿಟ್ಟು ದ್ರಾಕ್ಷಾರಸ ಮತ್ತು ಒಂದು ಯುನಿಟ್ಟು ಬಟ್ಟೆ ಉತ್ಪಾದನೆಗೆ ಒಟ್ಟು ೧೭೦ ಯುನಿಟ್ಟು ಶ್ರಮ ಬಳಸುತ್ತಿತ್ತು. ಈಗ ಅದು ಎರಡು ಯುನಿಟ್ಟು ದ್ರಾಕ್ಷಾರಸ ಮಾತ್ರ ಉತ್ಪಾದಿಸುತ್ತದೆ. ಅದಕ್ಕೆ ೧೬೦ ಯುನಿಟ್ಟು ಶ್ರಮ ಬಳಸುತ್ತದೆ. ಉತ್ಪನ್ನ ವೈಶಿಷ್ಟ್ಯದಿಂದಾಗಿ ಪೋರ್ಚಗಲ್ಲಿಗೆ ೧೦ ಯುನಿಟ್ಟು ಶ್ರಮ ಉಳಿತಾಯವಾಗುತ್ತದೆ.

೮. ಉತ್ಪನ್ನ ವೈಶಿಷ್ಟ್ಯವಿಲ್ಲದಿದ್ದಾಗ ಇಂಗ್ಲೆಂಡು ಒಂದು ಯುನಿಟ್ಟು ಬಟ್ಟೆ ಮತ್ತು ಒಂದು ಯುನಿಟ್ಟು ದ್ರಾಕ್ಷಾರಸ ಉತ್ಪಾದನೆಗೆ ಒಟ್ಟು ೨೨೦ ಯುನಿಟ್ಟು ಶ್ರಮ ಬಳಸುತ್ತಿತ್ತು. ಈಗ ೨೦೦ ಯುನಿಟ್ಟು ಶ್ರಮ ಬಳಸಿ ಎರಡು ಯುನಿಟ್ಟು ಬಟ್ಟೆ ಉತ್ಪಾದಿಸುತ್ತದೆ. ಆದುದರಿಂದ ಇಂಗ್ಲೆಂಡಿಗೆ ೨೦ ಯುನಿಟ್ಟು ಶ್ರಮ ಉಳಿತಾಯವಾಗುತ್ತದೆ. ಹೀಗೆ ಉತ್ಪನ್ನ ವೈಶಿಷ್ಟ್ಯದಿಂದ ಅಥವಾ ವ್ಯಾಪಾರದಿಂದ ಎರಡೂ ದೇಶಗಳಿಗೆ

ಪ್ರಯೋಜನ ಲಭ್ಯವಾಗುತ್ತದೆ.

**ದೋಷಗಳು :** ತುಲನಾತ್ಮಕ ಪ್ರಯೋಜನ ಸಿದ್ಧಾಂತವು ಈ ಕೆಳಗಿನ ಕಾರಣಗಳಿಗಾಗಿ ಟೀಕಿಸಲ್ಪಟ್ಟಿದೆ :

೧. ಅದೊಂದು ಸರಳವಾದ ಎರಡು ಸರಕು - ಎರಡು ದೇಶ ಮಾದರಿಯಾಗಿದೆ. ಅಂತಾರಾಷ್ಟ್ರೀಯ ವ್ಯಾಪಾರವು ಅನೇಕ ಸರಕುಗಳು ಮತ್ತು ದೇಶಗಳ ಒಳಗೊಂಡಿರುತ್ತದೆ.

೨. ಅದು ಪರಿಪೂರ್ಣ ಪೈಪೋಟಿಯನ್ನು ಕಲ್ಪಿಸಿಕೊಳ್ಳುತ್ತದೆ. ಪರಿಪೂರ್ಣ ಪೈಪೋಟಿಯು ಒಂದು ಆದರ್ಶವೇ ಹೊರತು ವಾಸ್ತವವಲ್ಲ.

೩. ಅದು ಶ್ರಮ ವೆಚ್ಚವನ್ನು ಮಾತ್ರ ಪರಿಗಣಿಸುತ್ತದೆ. ಇತರ ಉತ್ಪಾದನಾ ವೆಚ್ಚಗಳನ್ನು ಅವಗಣಿಸುತ್ತದೆ

೪. ಸಾಗಾಟ ವೆಚ್ಚವು ಮಾರಾಟ ಬೆಲೆಯಲ್ಲಿ ಸೇರಿರುತ್ತದೆ.

೫. ಆರ್ಥಿಕತೆಯಲ್ಲಿ ಸದಾ ಸ್ಥಿತ್ಯಂತರಗಳು ಸಂಭವಿಸುತ್ತಿರುತ್ತವೆ.

ತುಲನಾತ್ಮಕ ಪ್ರಯೋಜನ ಪರಿಕಲ್ಪನೆಯ ಕಲ್ಪನೆಗಳು ಟೀಕೆಗೊಳಗಾಗಿವೆ. ಆದರೆ ವ್ಯಾಪಾರದ ತಳಹದಿಯಾಗಿ ತುಲನಾತ್ಮಕ ಪ್ರಯೋಜನ ಪರಿಕಲ್ಪನೆಯು ಈಗಲೂ ತನ್ನ ಮಹತ್ವ ಉಳಿಸಿಕೊಂಡಿದೆ.

### ೮.೧.೩. ವ್ಯಾಪಾರದ ಕರಾರುಗಳು

**ಅರ್ಥವಿವರಣೆ :** ಸರಕು ಮತ್ತು ಸೇವೆಗಳ ಅಂತಾರಾಷ್ಟ್ರೀಯ ವಿನಿಮಯವನ್ನು ಅಂತಾರಾಷ್ಟ್ರೀಯ ವ್ಯಾಪಾರವೆಂದು ಕರೆಯಲಾಗುತ್ತದೆ. ದೇಶವೊಂದರ ನಿರ್ಯಾತವು ಅದರ ಆಯಾತದೊಡನೆ ವಿನಿಮಯಗೊಳ್ಳುವ ದರಗಳನ್ನು ವ್ಯಾಪಾರದ ಕರಾರುಗಳು ಎಂದು ಕರೆಯಲಾಗುತ್ತದೆ. ವ್ಯಾಪಾರದ ಕರಾರುಗಳನ್ನು ಆಯಾತಗಳ ಮತ್ತು ನಿರ್ಯಾತಗಳ ಬೆಲೆಗಳು ನಿರ್ಧರಿಸುತ್ತವೆ. ವ್ಯಾಪಾರದ ಕರಾರುಗಳು ದೇಶವೊಂದರ ನಿರ್ಯಾತ ಬೆಲೆಗಳನ್ನು ಮತ್ತು ಆಯಾತ ಬೆಲೆಗಳನ್ನು ಸೂಚಿಸುತ್ತವೆ. ನಿರ್ಯಾತದ ಬೆಲೆಗಳು ಆಯಾತದ ಬೆಲೆಗಳಿಗಿಂತ ಅಧಿಕವಾಗಿದ್ದರೆ ಅದು ಅನುಕೂಲಕರ ವ್ಯಾಪಾರದ ಕರಾರುಗಳು ಎನಿಸುತ್ತದೆ. ಆಯಾತದ ಬೆಲೆಗಳು ನಿರ್ಯಾತದ ಬೆಲೆಗಳಿಗಿಂತ ಅಧಿಕವಾಗಿದ್ದರೆ ಅದನ್ನು ಪ್ರತಿಕೂಲಕರ ವ್ಯಾಪಾರದ ಕರಾರುಗಳು ಎಂದು ಪರಿಗಣಿಸಲಾಗುತ್ತದೆ.

ವ್ಯಾಪಾರದ ಕರಾರುಗಳು ಆಯಾತ ಮತ್ತು ನಿರ್ಯಾತಗಳ ವಿನಿಮಯ ದರಗಳನ್ನು ಸೂಚಿಸುತ್ತದೆ. ಅವುಗಳನ್ನು ಅಂತಾರಾಷ್ಟ್ರೀಯ ವ್ಯಾಪಾರದ ಸೂತ್ರಗಳು ಎಂದು ಕರೆಯಲಾಗುತ್ತದೆ. ವ್ಯಾಪಾರದ ಕರಾರುಗಳು ಆಯಾತ ಮತ್ತು ನಿರ್ಯಾತಗಳ ನಡುವಣ ಸಂಬಂಧವನ್ನು ತಿಳಿಸುತ್ತವೆ. ಅಂತಾರಾಷ್ಟ್ರೀಯ ವ್ಯಾಪಾರದ ಒಟ್ಟು ಪ್ರಯೋಜನಗಳು ದೇಶಗಳ ನಡುವೆ ಹೇಗೆ ವಿತರಣೆಯಾಗುತ್ತವೆ ಎನ್ನುವುದನ್ನು ತಿಳಿಯಲು ವ್ಯಾಪಾರದ ಕರಾರುಗಳು ನೆರವಾಗುತ್ತವೆ. ನೀತಿನಿರೂಪಕರು ಅತ್ಯಧಿಕವಾಗಿ ಬಳಸುವುದರಿಂದ ಈ

ಪರಿಕಲ್ಪನೆಗೆ ಅಂತಾರಾಷ್ಟ್ರೀಯ ವ್ಯಾಪಾರ ರಂಗದಲ್ಲಿ ಬಹಳ ಮಹತ್ವ ಲಭ್ಯವಾಗಿದೆ.

ಡಾ. ಆಲ್‌ಫ್ರೆಡ್ ಮಾರ್ಷಲ್ ೧೯೨೩ರಲ್ಲಿ ಪ್ರಕಟವಾದ, "ಮನಿ, ಕ್ರೆಡಿಟ ಎಂಡ್ ಕಾಮರ್ಸ್" ಎಂಬ ಕೃತಿಯಲ್ಲಿ ಈ ಪರಿಕಲ್ಪನೆಯನ್ನು ಮೊಟ್ಟಮೊದಲ ಬಾರಿಗೆ ಬಳಸಿದ. ಆತ ವ್ಯಾಪಾರದ ಕರಾರುಗಳಿಗೆ ಬದಲಾಗಿ 'ವಿನಿಮಯ ದರ'ವೆಂಬ ಪದಪ್ರಯೋಗ ಮಾಡಿದ್ದಾನೆ. ಮಾರ್ಷಲನ ಶಿಷ್ಯನಾದ ಪ್ರೊ.ಎ.ಸಿ. ಪಿಗೋ ವ್ಯಾಪಾರದ ಕರಾರುಗಳು ಪರಿಕಲ್ಪನೆಯನ್ನು 'ನೈಜ ವಿನಿಮಯ ದರ' ಎಂದು ಕರೆದಿದ್ದಾನೆ. ಅಮೆರಿಕನ್ ಅರ್ಥ ವಿಜ್ಞಾನಿ ಟಾಸಿಗ್ ಸಾಟಿ ವ್ಯಾಪಾರದ ಕರಾರುಗಳು ಎಂಬ ಪರಿಕಲ್ಪನೆಯನ್ನು ಅಂತಾರಾಷ್ಟ್ರೀಯ ವ್ಯಾಪಾರ ವಿಶ್ಲೇಷಣೆಯಲ್ಲಿ ಜನಪ್ರಿಯಗೊಳಿಸಿದ್ದಾನೆ.

ವ್ಯಾಪಾರದ ಕರಾರುಗಳನ್ನು ಬೆನ್‌ಹ್ಯಾಂ ಹೀಗೆ ವ್ಯಾಖ್ಯಾನಿಸಿದ್ದಾನೆ: "ರಾಷ್ಟ್ರವೊಂದರ ವ್ಯಾಪಾರದ ಕರಾರುಗಳೆಂದರೆ ಜಾಗತಿಕ ಬೆಲೆಗಳ ಎರಡು ಗುಂಪುಗಳ ನಡುವಣ ಸಂಬಂಧವಾಗಿರುತ್ತದೆ. ರಾಷ್ಟ್ರವೊಂದು ನಿರ್ಯಾತ ಮಾಡುವ ವಿವಿಧ ಸರಕುಗಳ ಬೆಲೆಗಳು ಮತ್ತು ಆಯಾತ ಮಾಡಿಕೊಳ್ಳುವ ವಿವಿಧ ಸರಕುಗಳ ಬೆಲೆಗಳ ಅನುಪಾತವೇ ವ್ಯಾಪಾರ ಕರಾರುಗಳು".

ವ್ಯಾಪಾರದ ಕರಾರುಗಳಿಗೆ ಸಂಬಂಧಿಸಿದ ಅನೇಕ ಪರಿಕಲ್ಪನೆಗಳು ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಬಳಕೆಯಾಗುತ್ತಿವೆ.

೧೯೬೩ರಲ್ಲಿ ಗೆರಾಲ್ಡ್ ಎಂ. ಮೀಯೆರ್, "ಇಂಟರ್ ನ್ಯಾಶನಲ್ ಟ್ರೇಡ್ ಏಂಡ ಡೆವಲಪ್‌ಮೆಂಟ್" (ಅಂತರಾಷ್ಟ್ರೀಯ ವ್ಯಾಪಾರ ಮತ್ತು ಅಭಿವೃದ್ಧಿ) ಎಂಬ ಕೃತಿಯನ್ನು ಪ್ರಕಟಿಸಿದ. ಈ ಕೃತಿಯಲ್ಲಿ ಆತ

೧. ನಿವ್ವಳ ಸಾಟಿ ವ್ಯಾಪಾರದ ಕರಾರುಗಳು,
೨. ಒಟ್ಟು ಸಾಟಿ ವ್ಯಾಪಾರದ ಕರಾರುಗಳು ಮತ್ತು
೩. ಆದಾಯ ವ್ಯಾಪಾರದ ಕರಾರುಗಳೆಂದು ವ್ಯಾಪಾರದ ಕರಾರುಗಳನ್ನು ಸ್ಥೂಲವಾಗಿ ಮೂರು ಗುಂಪುಗಳಾಗಿ ವರ್ಗೀಕರಿಸಿದ್ದಾನೆ.

ನಿವ್ವಳ ಸಾಟಿ ವ್ಯಾಪಾರದ ಕರಾರುಗಳನ್ನು ಸರಕು ವ್ಯಾಪಾರದ ಕರಾರುಗಳು ಎಂದು ಕರೆಯಲಾಗುತ್ತದೆ.

### ಸರಕು ವ್ಯಾಪಾರದ ಕರಾರುಗಳು

ಸರಕು ವ್ಯಾಪಾರದ ಕರಾರುಗಳೆಂದರೆ ನಿರ್ಯಾತ ಮತ್ತು ಆಯಾತ ಬೆಲೆಗಳ ನಡುವಣ ಅನುಪಾತವಾಗಿರುತ್ತದೆ. ಸರಕು ವ್ಯಾಪಾರದ ಕರಾರುಗಳು ಎಂಬ ಪದವನ್ನು ಮೊದಲು ಬಳಸಿದ್ದು ಜಾಕೋಬ್ ವೈನರ್ ಎಂಬ ಅರ್ಥಶಾಸ್ತ್ರಜ್ಞ. ೧೯೨೭ರಲ್ಲಿ ಇಂಟರ್‌ನ್ಯಾಷನಲ್ ಟ್ರೇಡ್ [ಅಂತರಾಷ್ಟ್ರೀಯ ವ್ಯಾಪಾರ] ಎಂಬ ಕೃತಿಯಲ್ಲಿ ಟಾಸಿಗ್ ನಿವ್ವಳ ಸಾಟಿ ವ್ಯಾಪಾರದ ಕರಾರುಗಳು ಎಂಬ ಪರಿಕಲ್ಪನೆಯನ್ನು ಬಳಸಿದ. ಅದನ್ನು ಆಯಾತ ಸಕರುಗಳ

ಮತ್ತು ನಿರ್ಯಾತ ಸರಕಗಳ ಬೆಲೆಗಳ ನಡುವಣ ಅನುಪಾತ ಎಂದು ವ್ಯಾಖ್ಯಾನಿಸಿದ. ಜಾಕೋಬ್ ವೈನರನು ನಿವ್ವಳ ಸಾಟಿ ವ್ಯಾಪಾರದ ಕರಾರುಗಳ ಪರಿಕಲ್ಪನೆಗೆ ಸರಕು ವ್ಯಾಪಾರದ ಕರಾರುಗಳು ಎಂಬ ಹೆಸರನ್ನು ಇರಿಸಿದ.

ಸರಕು ವ್ಯಾಪಾರದ ಕರಾರುಗಳನ್ನು [$T_c$] ಕಂಡು ಹಿಡಿಯಬೇಕಾದರೆ ನಿರ್ಯಾತಗಳ ಬೆಲೆಗಳನ್ನು[$P_x$] ಆಯಾತಗಳ ಬೆಲೆಗಳಿಂದ [$P_m$] ಭಾಗಿಸಬೇಕು.

$$T_c = \frac{P_x}{P_m} = \frac{\text{ನಿರ್ಯಾತಗಳ ಬೆಲೆಗಳು}}{\text{ಆಯಾತಗಳ ಬೆಲೆಗಳು}}$$

ಪ್ರಸಕ್ತ ವರ್ಷದ ವ್ಯಾಪಾರದ ಕರಾರುಗಳನ್ನು ಈ ಹಿಂದಿನ ವರ್ಷಗಳ ವ್ಯಾಪಾರದ ಕರಾರುಗಳೊಡನೆ ತುಲನೆ ಮಾಡಬೇಕಾದರೆ ಬೆಲೆಯ ಸೂಚ್ಯಂಕವನ್ನು ಬಳಸಬೇಕು. ಆಗ ಬಳಸಬೇಕಾದ ಸೂತ್ರ ಹೀಗಿರುತ್ತದೆ.

$$T_C = \frac{P_{x1}}{P_{m1}} \div \frac{P_{xo}}{P_{mo}} = \frac{\text{ಪ್ರಸಕ್ತ ನಿರ್ಯಾತ ಬೆಲೆ}}{\text{ಪ್ರಸಕ್ತ ಆಯಾತಬೆಲೆ}} : \frac{\text{ಮೂಲ ನಿರ್ಯಾತ ಬೆಲೆ}}{\text{ಮೂಲ ಆಯಾತ ಬೆಲೆ}}$$

ಮೂಲ ವರ್ಷದ ಆಯಾತ ಬೆಲೆಗಳನ್ನು ೧೦೦ ಮತ್ತು ನಿರ್ಯಾತ ಬೆಲೆಗಳನ್ನು ೧೦೦ ಎಂದು ಪರಿಗಣಿಸಲಾಗುತ್ತದೆ. ಆದುದರಿಂದ ಮೂಲ ವರ್ಷದ ವ್ಯಾಪಾರದ ಕರಾರುಗಳು ಹೀಗಿರುತ್ತದೆ.

$$T_c = \frac{P_{xo}}{P_{mo}} = \frac{೧೦೦}{೧೦೦} = ೧$$

ಮೂಲ ವರ್ಷದ ವ್ಯಾಪಾರದ ಕರಾರುಗಳು ಯಾವಾಗಲೂ ೧೦೦ ಆಗಿರುತ್ತದೆ. ಪ್ರಸಕ್ತ ವರ್ಷದ ವ್ಯಾಪಾರದ ಕರಾರುಗಳನ್ನು ಮೂಲ ವರ್ಷದ ವ್ಯಾಪಾರದ ಕರಾರುಗಳೊಡನೆ ತುಲನೆ ಮಾಡಲು ಬಳಸುವ ಸೂತ್ರ ಹೀಗಿರುತ್ತದೆ.

$$Tc = \frac{P_{x1}}{P_{m1}} \times \frac{P_{mo}}{P_{xo}} = \frac{\text{ಪ್ರಸಕ್ತ ನಿರ್ಯಾತ ಬೆಲೆ ಸೂಚ್ಯಂಕ}}{\text{ಪ್ರಸಕ್ತ ಆಯಾತ ಬೆಲೆ ಸೂಚ್ಯಂಕ}} \times \frac{\text{ಮೂಲ ಆಯಾತ ಬೆಲೆಸೂಚ್ಯಂಕ}}{\text{ಮೂಲ ನಿರ್ಯಾತ ಬೆಲೆ ಸೂಚ್ಯಂಕ}}$$

$$= \frac{P_{x1}}{P_{m1}} \times ೧೦೦ = \frac{\text{ಪ್ರಸಕ್ತ ನಿರ್ಯಾತ ಬೆಲೆ ಸೂಚ್ಯಂಕ}}{\text{ಪ್ರಸಕ್ತ ಆಯಾತ ಬೆಲೆ ಸೂಚ್ಯಂಕ}} \times ೧೦೦$$

ಪ್ರಸಕ್ತ ವ್ಯಾಪಾರದ ಕರಾರುಗಳ ಸೂಚ್ಯಂಕ ೧೦೦ಕ್ಕಿಂತ ಅಧಿಕವಾಗಿದ್ದರೆ ಅನುಕೂಲಕರವೆಂದು ಮತ್ತು ಸೂಚ್ಯಂಕ ೧೦೦ಕ್ಕಿಂತ ಕಡಿಮೆಯಿದ್ದರೆ ಪ್ರತಿಕೂಲಕರವೆಂದು ತಿಳಿದು ಕೊಳ್ಳಲಾಗುತ್ತದೆ.

ಭಾರತದ ಪ್ರಸಕ್ತ ನಿರ್ಯಾತ ಸೂಚ್ಯಂಕವು ೧೮೦ ಮತ್ತು ಆಯಾತ ಸೂಚ್ಯಂಕವು

೧೫೦ ಆಗಿರುತ್ತದೆಂದು ಭಾವಿಸುವಾ.

$$\frac{P_{x೧}}{P_{m೧}} \times ೧೦೦ = \frac{೧೮೦}{೧೫೦} \times ೧೦೦ = ೧೨೦$$

ಇದು ಅನುಕೂಲಕರ ವ್ಯಾಪಾರದ ಕರಾರುಗಳನ್ನು ಸೂಚಿಸುತ್ತದೆ. ಏಕೆಂದರೆ ಸೂಚ್ಯಂಕವು ೧೦೦ಕ್ಕಿಂತ ಅಧಿಕವಾಗಿದೆ.

ಅಮೇರಿಕಾದ ಪ್ರಸಕ್ತ ನಿರ್ಯಾತ ಸೂಚ್ಯಂಕವು ೧೫೦ ಮತ್ತು ಆಯಾತ ಸೂಚ್ಯಂಕವು ೨೦೦ ಆಗಿರುತ್ತದೆಂದು ಭಾವಿಸುವಾ.

$$T_c = \frac{P_{x೧}}{P_{m೧}} \times ೧೦೦ = \frac{೧೫೦}{೨೦೦} \times ೧೦೦ = ೭೫$$

ಇದು ಪ್ರತಿಕೂಲಕರ ವ್ಯಾಪಾರದ ಕರಾರುಗಳನ್ನು ಸೂಚಿಸುತ್ತದೆ. ಏಕೆಂದರೆ ಸೂಚ್ಯಂಕವು ೧೦೦ಕ್ಕಿಂತ ಕಡಿಮೆಯಾಗಿದೆ.

ಸರಕು ವ್ಯಾಪಾರದ ಕರಾರುಗಳ ಪರಿಕಲ್ಪನೆಯ ಮಿತಿಗಳಿವು:

(i) ಅದು ಬೆಲೆಯ ಬದಲಾವಣೆಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳುತ್ತದೆ. ಗುಣಮಟ್ಟ, ಪ್ರಮಾಣ ಇತ್ಯಾದಿಗಳಲ್ಲಿನ ಬದಲಾವಣೆಗಳನ್ನು ಪರಿಗಣಿಸುವುದಿಲ್ಲ.

(ii) ಅದು ಬೆಲೆಯ ಬದಲಾವಣೆಗಳನ್ನು ತೋರಿಸುತ್ತದೆ. ಬೆಲೆ ಬದಲಾವಣೆಗಳಿಗೆ ಕಾರಣವೇನೆಂದು ತಿಳಿಸುವುದಿಲ್ಲ.

(iii) ಅದು ಪಾವತಿಶೇಷಗಳ ವರ್ತನೆಯ ಬಗ್ಗೆ ಏನನ್ನೂ ತಿಳಿಸುವುದಿಲ್ಲ.

(iv) ಅದು ರಾಷ್ಟ್ರದ ಉತ್ಪಾದಕ ದಕ್ಷತೆಯನ್ನು ಪರಿಗಣಿಸುವುದಿಲ್ಲ.

(v) ಅದು ರಾಷ್ಟ್ರದ ಆಯಾತ ಸಾಮರ್ಥ್ಯವನ್ನು ಪ್ರತಿಬಿಂಬಿಸುವುದಿಲ್ಲ.

ಈ ಮಿತಿಗಳನ್ನು ಪ್ರೊ. ಟಾಸಿಗ್ ಒಟ್ಟು ಸಾಟಿ ವ್ಯಾಪಾರದ ಕರಾರುಗಳು ಪರಿಕಲ್ಪನೆಯನ್ನು ಹುಟ್ಟು ಹಾಕಲು ಕಾರಣಗಳಾಗಿವೆ.

**ಒಟ್ಟು ಸಾಟಿ ವ್ಯಾಪಾರದ ಕರಾರುಗಳು :** ನಿರ್ಯಾತ ಸರಕುಗಳ ಪ್ರಮಾಣ ಮತ್ತು ಆಯಾತ ಸರಕುಗಳ ಪ್ರಮಾಣಗಳ ನಡುವಿನ ವಿನಿಮಯ ದರ ಅಥವಾ ಅನುಪಾತವನ್ನು ಒಟ್ಟು ಸಾಟಿ ವ್ಯಾಪಾರದ ಕರಾರುಗಳು ಎಂದು ಕರೆಯಲಾಗುತ್ತದೆ.

ನಿವ್ವಳ ವ್ಯಾಪಾರದ ಕರಾರುಗಳು ಆಯಾತ ಮತ್ತು ನಿರ್ಯಾತಗಳ ಬೆಲೆಗಳನ್ನು ಪರಿಗಣಿಸುತ್ತದೆ. ಒಟ್ಟು ವ್ಯಾಪಾರದ ಕರಾರುಗಳು ಆಯಾತ ಮತ್ತು ನಿರ್ಯಾತಗಳ ಪ್ರಮಾಣವನ್ನು ಅಥವಾ ಗಾತ್ರವನ್ನು ಪರಿಗಣಿಸುತ್ತದೆ. ಒಟ್ಟು ವ್ಯಾಪಾರದ ಕರಾರುಗಳನ್ನು ಕಂಡುಹಿಡಿಯಲು ಬಳಸುವ ಸೂತ್ರವಿದು.

$$T_q = \frac{Q_x}{Q_m} = \frac{\text{ನಿರ್ಯಾತ ಪ್ರಮಾಣ}}{\text{ಆಯಾತ ಪ್ರಮಾಣ}}$$

ಮೂಲ ವರ್ಷದ ಒಟ್ಟು ವ್ಯಾಪಾರದ ಕರಾರುಗಳೊಡನೆ ಹೋಲಿಸಿ ಪ್ರಸಕ್ತ ವರ್ಷದ ಒಟ್ಟು ವ್ಯಾಪಾರದ ಕರಾರುಗಳನ್ನು ಕಂಡುಹಿಡಿಯಲು ಬಳಸುವ ಸೂತ್ರವಿದು.

$$T_q = \frac{Q_{x\text{೧}}}{Q_{m\text{೧}}} \times \text{೧೦೦} = \frac{\text{ಪ್ರಸಕ್ತ ನಿರ್ಯಾತ ಪ್ರಮಾಣ ಸೂಚ್ಯಂಕ}}{\text{ಪ್ರಸಕ್ತ ಆಯಾತ ಪ್ರಮಾಣ ಸೂಚ್ಯಂಕ}} \times \text{೧೦೦}$$

ಪಾಕಿಸ್ತಾನದ ಪ್ರಸಕ್ತ ನಿರ್ಯಾತ ಪ್ರಮಾಣ ಸೂಚ್ಯಂಕವು ೨೪೦ ಮತ್ತು ಆಯಾತ ಪ್ರಮಾಣ ಸ್ಯೂಚ್ಯಂಕವು ೨೦೦ ಎಂದು ಭಾವಿಸೋಣ.

$$T_q = \frac{Q_{x\text{೧}}}{Q_{m\text{೧}}} \times \text{೧೦೦} = \frac{\text{೨೪೦}}{\text{೨೦೦}} \times \text{೧೦೦} = \text{೧೨೦}$$

ಇದು ಅನುಕೂಲಕರ ಪರಿಸ್ಥಿತಿಯಾಗಿರುತ್ತದೆ. ಏಕೆಂದರೆ ಒಟ್ಟು ವ್ಯಾಪಾರದ ಕರಾರುಗಳ ಸೂಚ್ಯಂಕ ೧೦೦ಕ್ಕಿಂತ ಅಧಿಕವಾಗಿದೆ.

ಚೀನಾದ ಪ್ರಸಕ್ತ ನಿರ್ಯಾತ ಪ್ರಮಾಣ ಸೂಚ್ಯಂಕವು ೩೦೦ ಮತ್ತು ಆಯಾತ ಪ್ರಮಾಣ ಸೂಚ್ಯಂಕವು ೪೫೦ ಎಂದು ಭಾವಿಸೋಣ.

$$T_q = \frac{Q_{x1}}{Q_{m1}} \times \text{೧೦೦} = \frac{\text{೩೦೦}}{\text{೪೫೦}} \times \text{೧೦೦} = \text{೭೫}$$

ಇದು ಪ್ರತಿಕೂಲಕರ ಪರಿಸ್ಥಿತಿಯಾಗಿರುತ್ತದೆ. ಏಕೆಂದರೆ ಒಟ್ಟು ವ್ಯಾಪಾರದ ಕರಾರುಗಳ ಸೂಚ್ಯಂಕವು ೧೦೦ ಕ್ಕಿಂತ ಕಡಿಮೆಯಾಗಿದೆ.

ಒಟ್ಟು ವ್ಯಾಪಾರದ ಕರಾರುಗಳ ಪರಿಕಲ್ಪನೆಯು ಕೂಡಾ ದೋಷಪೂರಿತವಾಗಿದೆ.ಇದು ಆಯಾತ - ನಿರ್ಯಾತ ಸೂಚ್ಯಂಕಗಳಲ್ಲಿ ಸರಕುಗಳೊಡನೆ ಬಂಡವಾಳ ಪಾವತಿಗಳನ್ನು ಮತ್ತು ಬಂಡವಾಳ ಸ್ವೀಕೃತಿಗಳನ್ನು ಸೇರಿಸುತ್ತದೆ. ಕೃಷಿಯ ಉತ್ಪನ್ನ ಮತ್ತು ಕೈಗಾರಿಕೋತ್ಪನ್ನಗಳೊಡನೆ ಹಣದ ಪಾವತಿ ಮತ್ತು ಸ್ವೀಕೃತಿಗಳನ್ನು ಒಟ್ಟಿಗೆ ಸೇರಿಸಿ ಒಂದೇ ಸೂಚ್ಯಂಕವನ್ನು ಬಳಸುವುದು ಸಮರ್ಪಕವೆನಿಸುವುದಿಲ್ಲ. ಆದುದರಿಂದ ಈ ಪರಿಕಲ್ಪನೆಗೆ ಬದಲಿಯಾಗಿ ಅರ್ಥಶಾಸ್ತ್ರಜ್ಞರು ಆದಾಯ ವ್ಯಾಪಾರ ಕರಾರುಗಳ ಪರಿಕಲ್ಪನೆಯನ್ನು ಅಭಿವೃದ್ಧಿಪಡಿಸಿದ್ದಾರೆ.

## ಆದಾಯ ವ್ಯಾಪಾರದ ಕರಾರುಗಳು

ಅರ್ಥವಿಜ್ಞಾನಿ ಜಿ.ಎಸ್.ಡೋರೇನ್ಸ್ ಸರಕು ವ್ಯಾಪಾರದ ಕರಾರುಗಳ ಪರಿಕಲ್ಪನೆಯನ್ನು ಪರಿಷ್ಕರಿಸಿ ಆದಾಯ ವ್ಯಾಪಾರದ ಕರಾರುಗಳನ್ನು ಪ್ರಸ್ತುತ ಪಡಿಸಿದನು. ಸ್ಟಾಹ್ಲ್ ಎಂಬ ಅರ್ಥಶಾಸ್ತ್ರಜ್ಞ ಆದಾಯ ವ್ಯಾಪಾರದ ಕರಾರುಗಳ ಪರಿಕಲ್ಪನೆಯನ್ನು ಮತ್ತಷ್ಟು ಜನಪ್ರಿಯಗೊಳಿಸಿದರು.

ಆದಾಯ ವ್ಯಾಪಾರದ ಕರಾರುಗಳ ಪರಿಕಲ್ಪನೆಯು ನಿರ್ಯಾತಗಳ ಪ್ರಮಾ[illegible]ತ್ತು ಬೆಲೆಗಳನ್ನು ಹಾಗೂ ಆಯಾತಗಳ ಪ್ರಮಾಣ ಮತ್ತು ಬೆಲೆಗಳನ್ನುಏಕಕಾಲದಲ್ಲಿ ಗಣನೆಗೆ

ತೆಗೆದುಕೊಳ್ಳುತ್ತದೆ. ನಿರ್ಯಾತಗಳ ಪ್ರಮಾಣ ಮತ್ತು ಬೆಲೆ ಹಾಗೂ ಆಯಾತಗಳ ಪ್ರಮಾಣ ಮತ್ತು ಬೆಲೆಗಳ ನಡುವಣ ಅನುಪಾತವನ್ನು ಆದಾಯ ವ್ಯಾಪಾರದ ಕರಾರುಗಳೆಂದು ಕರೆಯಲಾಗುತ್ತದೆ. ನಿವ್ವಳ ವ್ಯಾಪಾರದ ಕರಾರುಗಳು ಮತ್ತು ನಿರ್ಯಾತ ಪ್ರಮಾಣ ಒಟ್ಟು ಸೇರಿದರೆ ಆದಾಯ ವ್ಯಾಪಾರದ ಕರಾರುಗಳು ಒಂದು ದೇಶದ ನಿರ್ಯಾತ ಬದಲಾವಣೆಗಳಿಗೆ ಸಂಬಂಧಿಸಿದಂತೆ ಆ ದೇಶದ ಆಯಾತ ಬದಲಾವಣೆಗಳ ಸಾಮರ್ಥ್ಯವನ್ನು ತೋರಿಸುತ್ತದೆ.

ಜಿ.ಎಸ್. ಡೊರೇನ್ಸ್ ಆದಾಯ ವ್ಯಾಪಾರದ ಕರಾರುಗಳನ್ನು ಕಂಡು ಹಿಡಿಯಲು ಈ ಕೆಳಗಿನ ಸೂತ್ರ ಬಳಸಿದ್ದಾನೆ.

$$T_y = \frac{P_x Q_x}{P_m} = \frac{\text{ನಿರ್ಯಾತ ಬೆಲೆ x ನಿರ್ಯಾತ ಪ್ರಮಾಣ}}{\text{ಆಯಾತ ಬೆಲೆ}}$$

ಆದಾಯ ವ್ಯಾಪಾರದ ಕರಾರುಗಳನ್ನು ಆಯಾತ ಸಾಮರ್ಥ್ಯವೆಂದು ವರ್ಣಿಸಲಾಗುತ್ತದೆ. ಏಕೆಂದರೆ ಆಯಾತ ಪ್ರಮಾಣವು $P_xQ_x$ ನಿಂದ ನಿರ್ಧಾರವಾಗುತ್ತದೆ.

ಆದಾಯ ವ್ಯಾಪಾರದ ಕರಾರುಗಳ ೧೦೦ಕ್ಕಿಂತ ಹೆಚ್ಚಾದರೆ ಸುಧಾರಣೆಯೆಂದೂ ೧೦೦ಕ್ಕಿಂತ ಕಡಿಮೆಯಾದರೆ ಹಿಂದುಳಿಕೆಯೆಂದೂ ಪರಿಗಣಿಸಲಾಗುತ್ತದೆ.

ಭಾರತದ ನಿರ್ಯಾತ ಬೆಲೆ ಸೂಚ್ಯಂಕ ($P_x$) ೧೨೦, ನಿರ್ಯಾತ ಪ್ರಮಾಣ ಸೂಚ್ಯಂಕ ೧೫೦ ಮತ್ತು ಆಯಾತ ಬೆಲೆ ಸೂಚ್ಯಂಕ [$P_m$] ೧೦೦ ಎಂದು ಭಾವಿಸೋಣ.

$$T_y = \frac{P_xQ_x}{P_m} = \frac{\text{೧೨೦ x ೧೫೦}}{\text{೧೦೦}} = \text{೧೮೦}$$

ಇದು ಭಾರತದ ಆದಾಯ ವ್ಯಾಪಾರದ ಕರಾರುಗಳಲ್ಲಿ ಶೇ.೮೦ರಷ್ಟು ಸುಧಾರಣೆಯನ್ನು ತೋರಿಸುತ್ತದೆ.

ನೇಪಾಳದ ನಿರ್ಯಾತ ಬೆಲೆ ಸೂಚ್ಯಂಕ ೮೦, ನಿರ್ಯಾತ ಪ್ರಮಾಣ ಸೂಚ್ಯಂಕ ೧೦೦ ಮತ್ತು ಆಯಾತ ಬೆಲೆ ಸೂಚ್ಯಂಕ ೧೦೦ ಎಂದು ಭಾವಿಸೋಣ

$$T_y = \frac{P_xQ_x}{P_m} = \frac{\text{೮೦ x ೧೦೦}}{\text{೧೦೦}} = \text{೮೦}$$

ಇದು ನೇಪಾಳದ ವ್ಯಾಪಾರದ ಕರಾರುಗಳಲ್ಲಿ ಶೇ.೨೦ರಷ್ಟು ಹಿಂದುಳಿಕೆಯಾದುದನ್ನು ತೋರಿಸುತ್ತದೆ.

ಸರಕು ವ್ಯಾಪಾರದ ಕರಾರುಗಳನ್ನು ಕಂಡುಹಿಡಿಯಲು ಬಳಸಿದ ಸರಕು ವ್ಯಾಪಾರದ ಸೂತ್ರವನ್ನೇ ಅರ್ಥವಿಜ್ಞಾನಿ ಎ.ಎಚ್. ಇಮ್ಲಾ ಆದಾಯ ವ್ಯಾಪಾರದ ಕರಾರುಗಳನ್ನು ಕಂಡುಹಿಡಿಯಲು ಬಳಸಿದ್ದಾನೆ. ಅವನ ಸೂತ್ರ ಹೀಗಿದೆ:

$$T_y = \frac{P_x}{P_m} \text{ x ೧೦೦} = \frac{\text{ನಿರ್ಯಾತ ಬೆಲೆ ಸೂಚ್ಯಂಕ}}{\text{ಆಯಾತ ಬೆಲೆ ಸೂಚ್ಯಂಕ}} \text{ x ೧೦೦}$$

ಈ ಸೂತ್ರದ ಮೂಲಕ ದೊರಕುವ ಫಲಿತಾಂಶವನ್ನು ಇಮ್ಲಾ ವ್ಯಾಪಾರ ಸೂಚ್ಯಂಕ ದಿಂದ ನಿರ್ಯಾತ ಗಳಿಕೆಗಳು ಎಂದು ಕರೆದಿದ್ದಾನೆ.

ಆದಾಯ ವ್ಯಾಪಾರದ ಕರಾರುಗಳ ಹೆಚ್ಚಳವು ದೇಶವೊಂದು ತನ್ನ ನಿರ್ಯಾತಕ್ಕೆ ಬದಲಿಯಾಗಿ ಹೆಚ್ಚು ಆಯಾತ ಮಾಡಿಕೊಳ್ಳಬಹುದು ಎನ್ನುವುದನ್ನು ಸೂಚಿಸುತ್ತದೆ. ದೇಶವೊಂದರ ಆದಾಯ ವ್ಯಾಪಾರದ ಕರಾರುಗಳು ಹೆಚ್ಚಾದಾಗ ಅದರ ಸರಕು ವ್ಯಾಪಾರದ ಕರಾರುಗಳು ಕಡಿಮೆಯಾಗಬಹುದು. ಉದಾ: ಆಯಾತ ಬೆಲೆಗಳು ಸ್ಥಿರವಾಗಿರುವಾಗ ನಿರ್ಯಾತ ಬೆಲೆಗಳು ಕಡಿಮೆಯಾದರೆ ನಿರ್ಯಾತ ಪ್ರಮಾಣ ಹೆಚ್ಚಾಗುತ್ತದೆ. ಆಗ ಆದಾಯ ವ್ಯಾಪಾರದ ಕರಾರುಗಳು ಸುಧಾರಣೆಯಾಗುತ್ತವೆ. ಸರಕು ವ್ಯಾಪಾರದ ಕರಾರುಗಳು ಕುಸಿಯುವ ಸಾಧ್ಯತೆಗಳಿವೆ.

ಆದಾಯ ವ್ಯಾಪಾರದ ಕರಾರುಗಳು ಆಯಾತ ಸಾಮರ್ಥ್ಯದ ಸೂಚಕಗಳಾಗಿವೆ. ಇತರೆ ವಿಷಯಗಳಲ್ಲಿ ಸ್ಥಿರತೆಯಿರುವಾಗ ಒಂದು ದೇಶದ ಆಯಾತ ಸಾಮರ್ಥ್ಯ ಹೆಚ್ಚಾಗಬೇಕಾದರೆ-

(i) ನಿರ್ಯಾತಗಳ ಬೆಲೆ [$P_x$] ಹೆಚ್ಚಾಗಬೇಕು ಅಥವಾ

(ii) ಆಯಾತಗಳ ಬೆಲೆ [$P_m$] ಕಡಿಮೆಯಾಗಬೇಕು ಅಥವಾ

(iii) ನಿರ್ಯಾತ ಪ್ರಮಾಣ [$Q_x$] ಕಡಿಮೆಯಾಗಬೇಕು.

ಆದಾಯ ವ್ಯಾಪಾರದ ಕರಾರುಗಳ ಪರಿಕಲ್ಪನೆಯನ್ನು ಅರ್ಥಿಕಾಭಿವೃದ್ಧಿಯ ನೈಜ ಸೂಚಕವೆಂದು ಪರಿಗಣಿಸಲಾಗುತ್ತದೆ. ಅದು ಆಯಾತ ಮತ್ತು ನಿರ್ಯಾತಗಳ ಬೆಲೆಗಳನ್ನು ಮತ್ತು ನಿರ್ಯಾತ ಪ್ರಮಾಣವನ್ನು ಗಣನೆಗೆ ತೆಗೆದುಕೊಳ್ಳುವುದು ಇದಕ್ಕೆ ಕಾರಣವಾಗಿರುತ್ತದೆ.

ಆದಾಯ ವ್ಯಾಪಾರದ ಕರಾರುಗಳ ಪರಿಕಲ್ಪನೆ ಎರಡು ಕಾರಣಗಳಿಂದಾಗಿ ಟೀಕೆಗೊಳಗಾಗಿದೆ.

(i) ಅದು ಅಂತಾರಾಷ್ಟ್ರೀಯ ವ್ಯಾಪಾರದ ಪ್ರಯೋಜನದ ಲಾಭ ಅಥವಾ ಹಾನಿ ಯನ್ನು ನಿಖರವಾಗಿ ಮಾಪನ ಮಾಡುವುದಿಲ್ಲ.

(ii) ನಿರ್ಯಾತ ಹೆಚ್ಚಾದಾಗ ಆಯಾತ ಸಾಮರ್ಥ್ಯ ಹೆಚ್ಚಾಗುತ್ತದೆ. ನಿರ್ಯಾತ ಹೆಚ್ಚಳವು ದೇಶೀಯ ಸಂಪನ್ಮೂಲಗಳು ವಿದೇಶಿ ಬಳಕೆಗೆ ಉಪಯೋಗವಾಗುವುದನ್ನು ಸೂಚಿಸುತ್ತದೆ.

ಆಂತರಿಕ ಅಭಿವೃದ್ಧಿಯಾಗದೆ ನಿರ್ಯಾತ ವೃದ್ಧಿಯಾದರೆ ಅದು ಕಲ್ಯಾಣ ಸೂಚಕವೆನಿಸುವುದಿಲ್ಲ.

ಆದುದರಿಂದ ಪ್ರೊ|| ಹ್ಯಾಬರ್ಲರ್ ಆದಾಯ ವ್ಯಾಪಾರದ ಕರಾರುಗಳನ್ನು ಸಮರ್ಪಕವಾದ ಅಭಿವೃದ್ಧಿ ಸೂಚಕವೆಂದು ಪರಿಗಣಿಸುವುದಿಲ್ಲ. ವ್ಯಾಪಾರದ ಗಳಿಕೆಗಳನ್ನು ನಿಷ್ಕರ್ಷೆ ಮಾಡುವ ಸಾಮರ್ಥ್ಯ ಆದಾಯ ವ್ಯಾಪಾರದ ಕರಾರುಗಳಲ್ಲವೆನ್ನುವುದು ಅವನ ಅಭಿಪ್ರಾಯವಾಗಿದೆ.

## ೮.೧.೪. ವ್ಯಾಪಾರ ನೀತಿಗಳು

ವ್ಯಾಪಾರಕ್ಕೆ ಸಂಬಂಧಿಸಿದ ಸರಕಾರದ ಧೋರಣೆಯನ್ನು ವ್ಯಾಪಾರನೀತಿ ಅಥವಾ ವಾಣಿಜ್ಯನೀತಿ ಎಂದು ಕರೆಯಲಾಗುತ್ತದೆ. ವ್ಯಾಪಾರದ ನೀತಿಗಳು ವ್ಯಾಪಾರದ ರೂಪುರೇಷೆಗಳನ್ನು ನಿರ್ಧರಿಸುತ್ತವೆ. ವ್ಯಾಪಾರದ ವಿಧಿ-ವಿಧಾನಗಳ ಚೌಕಟ್ಟನ್ನು ವ್ಯಾಪಾರ ನೀತಿ ಎಂದು ಕರೆಯಲಾಗುತ್ತದೆ. ವ್ಯಾಪಾರ ನೀತಿಗಳನ್ನು ಸ್ಥೂಲವಾಗಿ ಮುಕ್ತ ವ್ಯಾಪಾರನೀತಿ ಮತ್ತು ರಕ್ಷಣಾತ್ಮಕ ವ್ಯಾಪಾರ ನೀತಿ ಎಂದು ವರ್ಗೀಕರಿಸಲಾಗುತ್ತದೆ.

### ಮುಕ್ತ ವ್ಯಾಪಾರ ನೀತಿ

ವ್ಯಾಪಾರದ ಮೇಲೆ ಸರಕಾರವು ಯಾವುದೇ ನಿರ್ಬಂಧ ವಿಧಿಸದಿದ್ದರೆ ಅದನ್ನು ಮುಕ್ತ ವ್ಯಾಪಾರ ನೀತಿ ಎಂದು ಕರೆಯಲಾಗುತ್ತದೆ. ಮುಕ್ತ ವ್ಯಾಪಾರವನ್ನು ಕೃಷಿ ಪಂಥೀಯರು ಮತ್ತು ಆಡಂಸ್ಮಿತ್ ಬಲವಾಗಿ ಸಮರ್ಥಿಸಿದರು. ಆಡಂಸ್ಮಿತ್‌ನನ್ನು ಮುಕ್ತವ್ಯಾಪಾರದ ಅಧ್ವರ್ಯನೆಂದು ಕರೆಯಲಾಗುತ್ತದೆ. ಆಡಂಸ್ಮಿತ್‌ನ ಪ್ರಕಾರ ಮುಕ್ತವ್ಯಾಪಾರವು "ದೇಶಿಯ ಮತ್ತು ವಿದೇಶೀಯ ಸರಕುಗಳ ನಡುವೆ ಯಾವುದೇ ವ್ಯತ್ಯಾಸ ಕಲ್ಪಿಸದಿರುವ ವ್ಯಾಪಾರ ನೀತಿಯಾಗಿರುತ್ತದೆ."

### ಮುಕ್ತ ವ್ಯಾಪಾರದ ಪ್ರಯೋಜನಗಳು

ಮುಕ್ತವ್ಯಾಪಾರದ ಪ್ರಯೋಜನಗಳಿವು :

೧. **ಉತ್ಪಾದನೆಯ ಹೆಚ್ಚಳ :** ಮುಕ್ತ ವ್ಯಾಪಾರವು ಉತ್ಪಾದಕರಿಗೆ ಗರಿಷ್ಠ ಸ್ವಾತಂತ್ರ್ಯ ನೀಡುತ್ತದೆ. ಆದುದರಿಂದ ಉತ್ಪಾದನೆ ಹೆಚ್ಚಾಗುತ್ತದೆ.

೨. **ಬೆಲೆಗಳ ಸಮಾನತೆ :** ಮುಕ್ತ ವ್ಯಾಪಾರವು ಸರಕು ಮತ್ತು ಸೇವೆಗಳು ಮುಕ್ತ ಸಂಚಾರಕ್ಕೆ ಕಾರಣವಾಗುತ್ತದೆ. ಇದರಿಂದಾಗಿ ಬೆಲೆಗಳ ಸಮಾನತೆ ಸಾಧಿತವಾಗುತ್ತದೆ.

೩. **ಸಂಪನ್ಮೂಲಗಳ ಗರಿಷ್ಠ ಉಪಯೋಗ :** ಮುಕ್ತ ವ್ಯಾಪಾರದಲ್ಲಿ ಆಮದು ಮತ್ತು ರಫ್ತುಗಳು ನಿರ್ಬಂಧ ರಹಿತವಾಗಿರುತ್ತವೆ. ಹಾಗಾಗಿ ಸಂಪನ್ಮೂಲಗಳ ಗರಿಷ್ಠ ಉಪಯೋಗವಾಗುತ್ತದೆ.

೪. **ಅನುಭೋಗಿಗೆ ಪ್ರಯೋಜನ :** ಮುಕ್ತ ವ್ಯಾಪಾರವು ಮುಕ್ತ ಪೈಪೋಟಿಗೆ ಅವಕಾಶ ಕಲ್ಪಿಸಿಕೊಡುತ್ತದೆ. ಪರಿಣಾಮವಾಗಿ ಅನುಭೋಗಿಗೆ ಕಡಿಮೆ ಬೆಲೆಗಳಲ್ಲಿ ಉತ್ತಮ ಗುಣಮಟ್ಟದ ಸರಕುಗಳು ಲಭ್ಯವಾಗುತ್ತವೆ.

೫. **ಮಾರುಕಟ್ಟೆಗಳ ವಿಸ್ತರಣೆ :** ಮುಕ್ತ ವ್ಯಾಪಾರವು ಶ್ರಮ ವಿಭಜನೆ ಮತ್ತು ವೈಶಿಷ್ಟ್ಯಗಳಿಗೆ ಪೂರ್ಣಾವಕಾಶ ನೀಡುತ್ತದೆ. ಇದರಿಂದಾಗಿ ಮಾರುಕಟ್ಟೆಗಳು ವಿಸ್ತಾರಗೊಳ್ಳುತ್ತವೆ.

೬. **ತಾಂತ್ರಿಕ ಪ್ರಗತಿ :** ಮುಕ್ತ ವ್ಯಾಪಾರವು ಏಕಸ್ವಾಮ್ಯವನ್ನು ನಿರ್ನಾಮ ಮಾಡಿ ತಾಂತ್ರಿಕ ಪ್ರಗತಿಗೆ ಎಡೆ ಮಾಡಿಕೊಡುತ್ತದೆ. ಪರಿಣಾಮವಾಗಿ ಉತ್ಪಾದನೆ ಅಧಿಕವಾಗುತ್ತವೆ.

೭. **ಆರ್ಥಿಕ ಸಹಕಾರ :** ಮುಕ್ತ ವ್ಯಾಪಾರವು ದೇಶಗಳ ನಡುವಿನ ಅವಲಂಬನೆಯನ್ನು ಹೆಚ್ಚಿಸುತ್ತದೆ. ಆರ್ಥಿಕ ಸಹಕಾರಕ್ಕೆ ಎಡೆ ಮಾಡಿಕೊಡುತ್ತದೆ.

೮. **ಕಳ್ಳ ಸಾಗಾಟಕ್ಕೆ ಅಂತ್ಯ :** ಮುಕ್ತ ವ್ಯಾಪಾರದಲ್ಲಿ ಬೆಲೆಗಳು ಒಂದೇ ರೀತಿಯಿರುವುದರಿಂದ ಕಳ್ಳ ಸಾಗಾಟವಿರುವುದಿಲ್ಲ. ಕಪ್ಪುಹಣ ಸೃಷ್ಟಿಯಾಗುವುದಿಲ್ಲ.

೯. **ಆರ್ಥಿಕಾಭಿವೃದ್ಧಿ :** ಮುಕ್ತ ವ್ಯಾಪಾರವು ಆರ್ಥಿಕಾಭಿವೃದ್ಧಿಗೆ ವಿಪುಲಾವಕಾಶ ಕಲ್ಪಿಸಿಕೊಡುತ್ತದೆ. ನಿರ್ಬಂಧರಹಿತ ಬಂಡವಾಳ, ತಂತ್ರಜ್ಞಾನ ಮತ್ತು ಯಂತ್ರೋಪಕರಣಗಳ ಸುಲಭ ಚಲನೆಯು ಆರ್ಥಿಕಾಭಿವೃದ್ಧಿಗೆ ಕಾರಣವಾಗುತ್ತದೆ.

## ಮುಕ್ತ ವ್ಯಾಪಾರದ ದೋಷಗಳು

ಮುಕ್ತ ವ್ಯಾಪಾರದ ದೋಷಗಳು ಇವು :

೧. **ಸ್ವದೇಶಿ ಕೈಗಾರಿಕೆಗಳ ನಾಶ :** ಮುಕ್ತವ್ಯಾಪಾರವು ಮುಕ್ತ ಪೈಪೋಟಿಗೆ ಎಡೆಮಾಡಿಕೊಡುತ್ತದೆ. ಮುಕ್ತ ಪೈಪೋಟಿಯಿಂದ ದುರ್ಬಲ ಸ್ವದೇಶೀ ಕೈಗಾರಿಕೆಗಳು ನಾಶವಾಗುತ್ತವೆ.

೨. **ಪಾರ್ಶ್ವ ಅಭಿವೃದ್ಧಿ :** ಮುಕ್ತವ್ಯಾಪಾರವು ಆರ್ಥಿಕತೆಯ ಭಾಗಶಃ ಅಭಿವೃದ್ಧಿ ಸಾಧಿಸುತ್ತದೆ. ಪೂರ್ಣ ಅಭಿವೃದ್ಧಿ ಸಾಧಿಸಲು ಮುಕ್ತ ವ್ಯಾಪಾರ ನೀತಿಯು ಸಮರ್ಥವಾಗಿರುವುದಿಲ್ಲ.

೩. **ಅತಿಯಾದ ಅವಲಂಬನೆ :** ಮುಕ್ತವ್ಯಾಪಾರವು ದೇಶಗಳ ಪರಸ್ಪರ ಅವಲಂಬನೆಯನ್ನು ಹೆಚ್ಚಿಸುತ್ತದೆ. ದೇಶವೊಂದು ಪೂರ್ಣ ಸ್ವಾವಲಂಬಿಯಾಗುವ ಅವಕಾಶವನ್ನು ತಪ್ಪಿಸುತ್ತದೆ.

೪. **ಆರಂಭಿಕ ರಕ್ಷಣೆ ಇಲ್ಲ :** ಕೈಗಾರಿಕೆಗಳ ಆರಂಭಿಕ ಹಂತದಲ್ಲಿ ಅವುಗಳಿಗೆ ರಕ್ಷಣೆ ಬೇಕಾಗುತ್ತದೆ. ಮುಕ್ತ ವ್ಯಾಪಾರ ನೀತಿಯಲ್ಲಿ ಅದಕ್ಕೆ ಅವಕಾಶಗಳಿಲ್ಲ.

೫. **ಶೋಷಣೆ :** ಮುಕ್ತ ವ್ಯಾಪಾರ ನೀತಿಯಲ್ಲಿ ಸಂಪನ್ನ ದೇಶಗಳು ಹೆಚ್ಚು ಪ್ರಯೋಜನಗಳನ್ನು ಪಡೆದುಕೊಳ್ಳುತ್ತವೆ. ಅವು ಹಿಂದುಳಿದ ದೇಶಗಳನ್ನು ಶೋಷಿಸಿ ಅಭಿವೃದ್ಧಿ ಹೊಂದುತ್ತವೆ. ಶೋಷಣೆಯಿಂದಾಗಿ ಹಿಂದುಳಿದ ದೇಶಗಳು ಇನ್ನಷ್ಟು ಹಿಂದುಳಿಯುತ್ತವೆ.

೬. **ದೇಶೀಯ ಬಂಡವಾಳ ಸಂಚಯನವಿಲ್ಲ :** ಮುಕ್ತ ವ್ಯಾಪಾರ ನೀತಿಯು ಬಂಡವಾಳದ ಮುಕ್ತ ಚಲನೆಗೆ ಅವಕಾಶ ಕಲ್ಪಿಸಿಕೊಡುತ್ತದೆ. ಇದರಿಂದಾಗಿ ದೇಶೀಯವಾಗಿ ಬಂಡವಾಳ ಸಂಚಯನವಾಗುವುದಿಲ್ಲ.

೭. **ನಿರುದ್ಯೋಗ :** ಮುಕ್ತ ವ್ಯಾಪಾರ ನೀತಿಯಿಂದಾಗಿ ದೇಶೀಯ ಕೈಗಾರಿಕೆಗಳು ವಿನಾಶ ಹೊಂದುತ್ತವೆ. ಪರಿಣಾಮವಾಗಿ ನಿರುದ್ಯೋಗ ಪ್ರಮಾಣ ಹೆಚ್ಚಾಗುತ್ತಾ ಹೋಗುತ್ತದೆ.

೮. **ಏಕಸ್ವಾಮ್ಯ :** ಮುಕ್ತ ವ್ಯಾಪಾರ ನೀತಿಯಲ್ಲಿ ಮುಕ್ತ ಪೈಪೋಟಿ ಇರುವುದರಿಂದ ಉತ್ಪಾದಕರಿಗೆ ಹೆಚ್ಚು ಲಾಭ ಸಿಗುವುದಿಲ್ಲ. ಆಗ ಅವರು ಏಕಸ್ವಾಮ್ಯದ ಸಂಸ್ಥೆಗಳನ್ನು ರಚಿಸಿಕೊಂಡು ಅನುಭೋಗಿಗಳನ್ನು ಸುಲಿಯುತ್ತಾರೆ.

## ರಕ್ಷಣಾತ್ಮಕ ನೀತಿ

ದೇಶೀಯ ಮತ್ತು ವಿದೇಶೀಯ ಸರಕುಗಳ ನಡುವೆ ವ್ಯತ್ಯಾಸ ಕಲ್ಪಿಸಿ ವಿದೇಶೀ ಸರಕುಗಳ ಮೇಲೆ ನಿರ್ಬಂಧ ವಿಧಿಸುವುದಕ್ಕೆ ರಕ್ಷಣಾತ್ಮಕ ನೀತಿ ಎಂದು ಹೆಸರು. ಆಮದುಗಳ ಮೇಲೆ ಸುಂಕ ಹೇರಿಕೆ, ಆಮದು ಪ್ರಮಾಣಗಳ ಮಿತಿ ನಿಗದಿಗೊಳಿಸುವುದು ಮತ್ತು ದೇಶೀಯ ಉತ್ಪನ್ನಗಳಿಗೆ ಸಬ್ಸಿಡಿ ನೀಡುವುದು ರಕ್ಷಣಾತ್ಮಕ ನೀತಿಯಾಗಿರುತ್ತದೆ.

ಅಲೆಕ್ಸಾಂಡರ್ ಹ್ಯಾಮಿಲ್ಟನ್, ಹೆನ್ರಿ ಕ್ಯಾರಿ, ಫ್ರೆಡೆರಿಕ್ ಲಿಸ್ಟ್ ಮುಂತಾದವರು ರಕ್ಷಣಾತ್ಮಕ ನೀತಿಯ ಪ್ರಮುಖ ಪ್ರತಿಪಾದಕರಾಗಿದ್ದಾರೆ.

### ರಕ್ಷಣಾತ್ಮಕ ನೀತಿಯ ಪ್ರಯೋಜನಗಳು

ರಕ್ಷಣಾತ್ಮಕ ವ್ಯಾಪಾರ ನೀತಿಯ ಪ್ರಮುಖ ಪ್ರಯೋಜನಗಳಿವು

೧. **ಶೈಶವಾವಸ್ಥೆಯ ಕೈಗಾರಿಕೆಗಳ ಉಳಿವು :** ಶೈಶವಾವಸ್ಥೆಯಲ್ಲಿ ಅಥವಾ ಆರಂಭಿಕ ಹಂತದಲ್ಲಿ ಕೈಗಾರಿಕೆಗಳು ವಿದೇಶೀ ಪೈಪೋಟಿಯನ್ನು ಎದುರಿಸುವ ಸಾಮರ್ಥ್ಯ ಹೊಂದಿರುವುದಿಲ್ಲ. ರಕ್ಷಣಾತ್ಮಕ ನೀತಿಯು ಅವುಗಳನ್ನು ಬದುಕಿಸುತ್ತದೆ. ಶಿಶುವನ್ನು ಪೋಷಿಸು, ಮಗುವನ್ನು ರಕ್ಷಿಸು ಮತ್ತು ಪ್ರೌಢನನ್ನು ಸ್ವತಂತ್ರಗೊಳಿಸು ಎಂದು ಹೇಳುವ ಮೂಲಕ ಫ್ರೆಡೆರಿಕ್ ಲಿಸ್ಟ್ ರಕ್ಷಣಾತ್ಮಕ ನೀತಿಯನ್ನು ಸಮರ್ಥಿಸಿದ್ದಾನೆ.

೨. **ಎಳೆಯ ಆರ್ಥಿಕತೆಗಳ ಅಭಿವೃದ್ಧಿ :** ಕೃಷಿ ಪ್ರಧಾನ ಆರ್ಥಿಕತೆಗಳನ್ನು ಎಳೆಯ ಆರ್ಥಿಕತೆಗಳೆಂದು ಕರೆಯಲಾಗುತ್ತದೆ. ಅರ್ಥಶಾಸ್ತ್ರಜ್ಞ ಮೊನೆಲೆಸ್ಕೇನ್ ಪ್ರಕಾರ ರಕ್ಷಣಾತ್ಮಕ ನೀತಿಯು ಎಳೆಯ ಆರ್ಥಿಕತೆಯ ಅಭಿವೃದ್ಧಿಗೆ ಕಾರಣವಾಗುತ್ತದೆ.

೩. **ವ್ಯಾಪಾರ ಕರಾರುಗಳನ್ನು ಸರಿಪಡಿಸುತ್ತದೆ :** ಹಿಂದುಳಿದ ದೇಶಗಳು ಪ್ರತಿಕೂಲಕರ ವ್ಯಾಪಾರದ ಕರಾರುಗಳ ಸಮಸ್ಯೆಯಿಂದ ಬಳಲುತ್ತವೆ. ರಾವುಲ್ ಪ್ರೆಬಿಶ್‌ನ ಪ್ರಕಾರ ರಕ್ಷಣಾತ್ಮಕ ನೀತಿಯು ಹಿಂದುಳಿದ ದೇಶಗಳ ವ್ಯಾಪಾರ ಕರಾರುಗಳ ಸಮಸ್ಯೆಯನ್ನು ಸರಿಪಡಿಸುತ್ತದೆ.

೪. **ಬಂಡವಾಳ ಸಂಚಯನ :** ರಕ್ಷಣಾತ್ಮಕ ನೀತಿಯು ಬಂಡವಾಳದ ಮುಕ್ತ ಚಲನೆಯನ್ನು ನಿರ್ಬಂಧಿಸುತ್ತದೆ. ಪರಿಣಾಮವಾಗಿ ದೇಶೀಯವಾಗಿ ಬಂಡವಾಳ ಸಂಚಯನ ವಾಗುತ್ತದೆ.

೫. **ಸಂತುಲಿತ ಅಭಿವೃದ್ಧಿ :** ರಕ್ಷಣಾತ್ಮಕ ನೀತಿಯು ಆರ್ಥಿಕತೆಯ ಎಲ್ಲಾ ಕ್ಷೇತ್ರಗಳಿಗೆ ಸಮಾನ ಮಹತ್ವ ನೀಡುತ್ತದೆ. ಇದು ಆರ್ಥಿಕತೆಯ ಸಂತುಲಿತ ಅಭಿವೃದ್ಧಿ ಸಾಧಿಸುತ್ತದೆ.

೬. **ಸ್ವಾವಲಂಬನೆ:** ರಕ್ಷಣಾತ್ಮಕ ನೀತಿಯು ಅವಲಂಬನೆಯನ್ನು ಕಡಿಮೆ ಮಾಡುತ್ತದೆ. ದೇಶಗಳು ಸ್ವಾವಲಂಬನೆ ಸಾಧಿಸಲು ನೆರವಾಗುತ್ತದೆ.

೭. **ಕೈಗಾರಿಕೀಕರಣ :** ರಕ್ಷಣಾತ್ಮಕ ನೀತಿಯು ದೇಶೀಯ ಕೈಗಾರಿಕೆಗಳಿಗೆ ರಕ್ಷಣೆ ಒದಗಿಸುತ್ತದೆ. ಹಿಂದುಳಿದ ಆರ್ಥಿಕತೆಗಳ ಕೈಗಾರಿಕೀಕರಣವನ್ನು ಸಾಧಿಸುತ್ತದೆ.

**೮. ರಕ್ಷಣಾ ಕೈಗಾರಿಕೆಗಳ ರಹಸ್ಯ ಕಾಪಾಡುವುದು :** ದೇಶದ ರಕ್ಷಣಾ ಸಲಕರಣೆಗಳ ಉದ್ದಿಮೆಗಳು ಸರಕಾರದಿಂದ ಸಂರಕ್ಷಿತವಾಗಿರಬೇಕು. ಇಲ್ಲದಿದ್ದರೆ ರಕ್ಷಣಾರಹಸ್ಯ ಸೋರಿಹೋಗಿ ದೇಶದ ಅಭದ್ರತೆಗೆ ಕಾರಣವಾಗುತ್ತದೆ.

**೯. ಸಂಪನ್ಮೂಲಗಳ ಸಂರಕ್ಷಣೆ :** ರಕ್ಷಣಾತ್ಮಕ ನೀತಿಯಿಂದ ಸಂಪನ್ಮೂಲಗಳು ಸದುಪಯೋಗವಾಗುತ್ತವೆ. ಅವು ಅಗತ್ಯ ಆಧರಿತ ಉತ್ಪಾದನೆಗೆ ಬಳಕೆಯಾಗಿ ಸಂಪನ್ಮೂಲಗಳ ಕಾಪಿಡಲ್ಪಡುತ್ತದೆ.

**೧೦. ಬೊಕ್ಕಸಕ್ಕೆ ಆದಾಯ:** ರಕ್ಷಣಾತ್ಮಕ ನೀತಿಯಿಂದ ಆಮದು ಸುಂಕದ ರೂಪದಲ್ಲಿ ದೇಶದ ಬೊಕ್ಕಸಕ್ಕೆ ಸಾಕಷ್ಟು ಆದಾಯ ಹರಿದು ಬರುತ್ತದೆ.

**೧೧. ಉದ್ಯೋಗ ಸೃಷ್ಟಿ:** ರಕ್ಷಣಾತ್ಮಕ ನೀತಿಯಿಂದಾಗಿ ಕೈಗಾರೀಕರಣವಾಗುತ್ತದೆ. ದೇಶದಲ್ಲಿ ಅನೇಕ ಉದ್ಯೋಗಗಳ ಸೃಷ್ಟಿಯಾಗುತ್ತದೆ.

**೧೨. ಪಾವತಿ ಶೇಷ ಸಮಸ್ಯೆಗೆ ಪರಿಹಾರ:** ಮುಕ್ತ ವ್ಯಾಪಾರನೀತಿಯಲ್ಲಿ ಹಿಂದುಳಿದ ದೇಶಗಳು ಪಾವತಿ ಶೇಷ ಅಸಮತೋಲನ ಸಮಸ್ಯೆಯಿಂದ ಬಳಲುತ್ತವೆ. ರಕ್ಷಣಾತ್ಮಕ ನೀತಿ ದೇಶಕ್ಕೆ ಸಾಕಷ್ಟು ಆದಾಯ ತಂದುಕೊಟ್ಟು ಪಾವತಿ ಶೇಷ ಸಮಸ್ಯೆಯನ್ನು ಪರಿಹರಿಸುತ್ತದೆ.

**೧೩. ದೇಶೀಯತೆಯ ಪ್ರಜ್ಞೆ :** ರಕ್ಷಣಾತ್ಮಕ ನೀತಿಯು ವಿದೇಶೀ ಸರಕುಗಳ ಬೆಲೆಗಳನ್ನು ಹೆಚ್ಚಿಸುತ್ತದೆ. ಅನಿವಾರ್ಯವಾಗಿ ಜನರು ದೇಶೀಯ ಉತ್ಪನ್ನಗಳನ್ನು ಬಳಸಬೇಕಾಗುತ್ತದೆ. ರಕ್ಷಣಾತ್ಮಕ ನೀತಿಯು ದೇಶೀಯತೆಯ ಪ್ರಜ್ಞೆಯನ್ನು ಹುಟ್ಟುಹಾಕುತ್ತದೆ.

**೧೪. ವೈವಿಧ್ಯಮಯ ಕೈಗಾರಿಕೆಗಳ ಅಭಿವೃದ್ಧಿ :** ರಕ್ಷಣಾತ್ಮಕ ನೀತಿಯಿಂದಾಗಿ ದೇಶೀಯ ಆವಿಷ್ಕಾರಿಗಳಿಗೆ ನೈತಿಕ ಬೆಂಬಲ ದೊರೆಯುತ್ತದೆ. ದೇಶದಲ್ಲಿ ವೈವಿಧ್ಯಮಯ ಕೈಗಾರಿಕೆಗಳು ಅಭಿವೃದ್ಧಿ ಹೊಂದುತ್ತದೆ.

**೧೫. ಅನುಭೋಗ ವೃದ್ಧಿ :** ರಕ್ಷಣಾ ನೀತಿಯಲ್ಲಿ ದೇಶೀಯ ಉತ್ಪನ್ನಗಳಿಗೆ ಸಬ್ಸಿಡಿ ದೊರೆತು ಅವುಗಳ ಬೆಲೆ ಕಡಿಮೆಯಾಗುತ್ತದೆ. ಇದು ಬಡವರ ಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸಿ ಅನುಭೋಗ ವೃದ್ಧಿಗೆ ಕಾರಣವಾಗುತ್ತದೆ.

## ರಕ್ಷಣಾತ್ಮಕ ನೀತಿಯ ದೋಷಗಳು

ರಕ್ಷಣಾತ್ಮಕ ನೀತಿಯ ಪ್ರಮುಖ ದೋಷಗಳಿವು :

**೧. ಭೌಗೋಳಿಕ ಶ್ರಮವಿಭಜನೆಯ ಪ್ರಯೋಜನ ಪಡೆಯಲಾಗುವುದಿಲ್ಲ :** ರಕ್ಷಣಾತ್ಮಕ ನೀತಿಯಲ್ಲಿ ದೇಶವೊಂದು ಎಲ್ಲಾ ವಿಧದ ಸರಕುಗಳನ್ನು ಉತ್ಪಾದಿಸಲು ಯತ್ನಿಸುತ್ತದೆ. ಹಾಗಾಗಿ ಭೌಗೋಳಿಕ ಶ್ರಮ ವಿಭಜನೆಯ ಪ್ರಯೋಜನ ಪಡೆಯಲು ಸಾಧ್ಯವಾಗುವುದಿಲ್ಲ.

**೨. ಅದಕ್ಷ ಕೈಗಾರಿಕೆಗಳಿಗೆ ಉತ್ತೇಜನ :** ರಕ್ಷಣಾ ನೀತಿಯು ಅದಕ್ಷ ಕೈಗಾರಿಕೆಗಳಿಗೆ ಉತ್ತೇಜನ ನೀಡುತ್ತದೆ. ಇದು ಅನುಭೋಗಿಗಳ ಹಿತಾಸಕ್ತಿಗೆ ಮಾರಕವಾಗುತ್ತದೆ.

೩. **ಗ್ರಾಹಕರಿಗೆ ತೊಂದರೆ :** ಮುಕ್ತವ್ಯಾಪಾರ ನೀತಿಯಲ್ಲಿ ಅನುಭೋಗಿಗಳಿಗೆ ಉತ್ತಮ ಗುಣಮಟ್ಟದ ಸರಕುಗಳು ಕಡಿಮೆ ಬೆಲೆಗೆ ದೊರೆಯುತ್ತದೆ. ಆದರೆ ರಕ್ಷಣಾ ನೀತಿಯಿಂದಾಗಿ ಕಳಪೆ ಗುಣಮಟ್ಟದ ಸರಕುಗಳನ್ನು ಹೆಚ್ಚು ಬೆಲೆಗೆ ಕೊಳ್ಳಬೇಕಾದ ಪರಿಸ್ಥಿತಿ ಉಂಟಾಗಬಹುದು.

೪. **ದುರುಪಯೋಗ :** ದೇಶೀಯ ಕೈಗಾರಿಕೆಗಳಲ್ಲಿ ಸಾಕಷ್ಟು ಸಾಮರ್ಥ್ಯವಿರುವವು ಇರುತ್ತವೆ. ಅಂತಹ ಕೈಗಾರಿಕೆಗಳಿಗೆ ಸಬ್ಸಿಡಿ ನೀಡುವುದು ದೇಶದ ಆದಾಯದ ದುರುಪ ಯೋಗವೆನಿಸುತ್ತದೆ.

೫. **ರಕ್ಷಣೆ ಶಾಶ್ವತವಾಗಬಹುದು :** ರಕ್ಷಣಾ ನೀತಿಯನ್ನು ಒಂದು ತಾತ್ಕಾಲಿಕ ಕ್ರಮವನ್ನಾಗಿ ಅಂಗೀಕರಿಸಬೇಕೇ ಹೊರತು ಶಾಶ್ವತ ಕ್ರಮವನ್ನಾಗಿಯಲ್ಲ. ಆದರೆ ಒಮ್ಮೆ ರಕ್ಷಣೆ ಪಡೆದ ಕೈಕಾರಿಕೆಗಳು ಅದನ್ನು ತಮ್ಮ ಹಕ್ಕಿನಂತೆ ಬಳಸಿಕೊಳ್ಳುತ್ತವೆ.

೬. **ದಕ್ಷತೆ ಕುಗ್ಗುತ್ತದೆ :** ರಕ್ಷಣಾ ನೀತಿಯಿಂದಾಗಿ ದೇಶೀಯ ಕೈಗಾರಿಕೆಗಳ ಸಾಮರ್ಥ್ಯ ಕುಗ್ಗುತ್ತದೆ. ದಕ್ಷತೆ ಕಡಿಮೆಯಾಗಿ ಅವು ವಿದೇಶೀ ಪೈಪೋಟಿಯನ್ನು ಎದುರಿಸುವ ಶಕ್ತಿಯನ್ನು ಶಾಶ್ವತವಾಗಿ ಕಳಕೊಳ್ಳುತ್ತವೆ.

೭. **ಆದಾಯದ ವಿಷಮ ವಿತರಣೆ :** ರಕ್ಷಣಾತ್ಮಕ ನೀತಿಯಿಂದಾಗಿ ಆದಾಯವು ಗ್ರಾಹಕರಿಂದ ಉತ್ಪಾದಕರತ್ತ ಪ್ರವಹಿಸುತ್ತದೆ. ದೇಶದಲ್ಲಿ ಆದಾಯದ ವಿಷಮ ವಿತರಣೆಯಾಗುತ್ತದೆ.

೮. **ರಫ್ತು ಕುಸಿತ :** ರಕ್ಷಣಾತ್ಮಕ ನೀತಿಯಿಂದಾಗ ದೇಶವೊಂದರ ರಫ್ತಿನ ಮೇಲೆ ಇತರ ದೇಶಗಳು ಸುಂಕ ವಿಧಿಸುತ್ತವೆ. ಆಗ ನಿರ್ಯಾತ ಕುಸಿಯುತ್ತದೆ.

೯. **ಸಂಘರ್ಷಗಳು:** ರಕ್ಷಣಾತ್ಮಕ ಸುಂಕ ಹೇರಿಕೆಯು ದೇಶಗಳ ನಡುವೆ ತಿಕ್ಕಾಟಕ್ಕೆ ಕಾರಣವಾಗುತ್ತದೆ. ದೇಶಗಳ ನಡುವಣ ಸಂಬಂಧ ಹದಗೆಡುತ್ತದೆ.

೧೦. **ಭ್ರಷ್ಟಾಚಾರ :** ರಕ್ಷಣೆಯ ಪ್ರಯೋಜನಕ್ಕಾಗಿ ಕೈಗಾರಿಕೆಗಳು ವಾಮಮಾರ್ಗ ಹಿಡಿಯುತ್ತವೆ. ಇದು ಭ್ರಷ್ಟಾಚಾರಕ್ಕೆ ಎಡೆ ಮಾಡಿಕೊಡುತ್ತದೆ.

## ಮುಕ್ತ ವ್ಯಾಪಾರ ನೀತಿ ಮತ್ತು ರಕ್ಷಣಾತ್ಮಕ ವ್ಯಾಪಾರ ನೀತಿಯ ನಡುವಣ ವ್ಯತ್ಯಾಸಗಳು

ಮುಕ್ತ ಮತ್ತು ರಕ್ಷಣಾತ್ಮಕ ವ್ಯಾಪಾರ ನೀತಿಗಳ ನಡುವಣ ಪ್ರಮುಖ ವ್ಯತ್ಯಾಸಗಳು ಇವು.

೧. ನಿರ್ಬಂಧಗಳು : ಮುಕ್ತ ವ್ಯಾಪಾರ ನೀತಿಯು ಸರಕು ಮತ್ತು ಸೇವೆಗಳ ನಿಯಮದ ಮೇಲೆ ಅನೇಕ ನಿರ್ಬಂಧಗಳನ್ನು ವಿಧಿಸುವುದಿಲ್ಲ. ರಕ್ಷಣಾತ್ಮಕ ವ್ಯಾಪಾರ ನೀತಿಯು ಸರಕು ಮತ್ತು ಸೇವೆಗಳ ವಿನಿಮಯದ ಮೇಲೆ ಅನೇಕ ನಿರ್ಬಂಧಗಳನ್ನು ವಿಧಿಸುತ್ತದೆ.

೨.ಹಸ್ತಕ್ಷೇಪ : ಮುಕ್ತ ವ್ಯಾಪಾರ ನೀತಿಯು ಸರಕಾರದ ಹಸ್ತಕ್ಷೇಪವಿಲ್ಲದ ನೀತಿ

ಯಾಗಿರುತ್ತದೆ. ಅದನ್ನು ಲೇಸೆಫೇರ್ ನೀತಿ ಎಂದು ಕರೆಯಲಾಗುತ್ತದೆ. ಲೇಸೆಫೇರ್ ನೀತಿಯೆಂದರೆ ಬಾಹ್ಯ ಶಕ್ತಿಗಳ ಹಸ್ತಕ್ಷೇಪವಿಲ್ಲದ ಸಹಜ ನೀತಿ ಎಂದರ್ಥ. ರಕ್ಷಣಾತ್ಮಕ ನೀತಿಯು ಸರಕಾರದ ಹಸ್ತಕ್ಷೇಪವುಳ್ಳ ನೀತಿಯಾಗಿರುತ್ತದೆ.

೩. **ಮುಕ್ತತೆ :** ಮುಕ್ತ ವ್ಯಾಪಾರ ನೀತಿಯು ಸರಕು ಮತ್ತು ಸೇವೆಗಳ ಮುಕ್ತ ವಿನಿಮಯಕ್ಕೆ ಅವಕಾಶ ಕಲ್ಪಿಸಿಕೊಡುತ್ತದೆ. ರಕ್ಷಣಾತ್ಮಕ ನೀತಿಯು ಸರಕು ಮತ್ತು ಸೇವೆಗಳ ವಿನಿಮಯದ ಮೇಲೆ ಕೆಲವು ನಿರ್ಬಂಧಗಳನ್ನು ಹೇರುತ್ತದೆ.

೪. **ಪರಿಕರಗಳು :** ಮುಕ್ತ ವ್ಯಾಪಾರ ನೀತಿಯಲ್ಲಿ ಆಮದು ಸುಂಕ, ಕೋಟಾ ವ್ಯವಸ್ಥೆ, ಸಬ್ಸಿಡಿಗಳಂತಹ ಪರಿಕರಗಳು ಬಳಕೆಯಾಗವುದಿಲ್ಲ. ರಕ್ಷಣಾತ್ಮಕ ವ್ಯಾಪಾರ ನೀತಿಯಲ್ಲಿ ಆಮದು ಸುಂಕ ಮತ್ತು ಪ್ರಮಾಣ ನಿರ್ಬಂಧಗಳ ಮೂಲಕ ಆಮದು ವ್ಯಾಪಾರವನ್ನು ನಿರ್ಬಂಧಿಸಲಾಗುತ್ತದೆ. ಸಬ್ಸಿಡಿಗಳ ಮೂಲಕ ರಫ್ತು ವ್ಯಾಪಾರವನ್ನು ಉತ್ತೇಜಿಸಲಾಗುತ್ತದೆ.

೫. **ಸಂಪನ್ಮೂಲಗಳ ಬಳಕೆ :** ಮುಕ್ತ ವ್ಯಾಪಾರ ನೀತಿಯಲ್ಲಿ ಸಂಪನ್ಮೂಲಗಳ ಬಳಕೆಯ ಮೇಲೆ ಯಾವುದೇ ನಿರ್ಬಂಧವಿರುವುದಿಲ್ಲ. ಆದುದರಿಂದ ಸಂಪನ್ಮೂಲಗಳ ಬಳಕೆಗೆ ವಿಪುಲಾವಕಾಶವಿದೆ. ರಕ್ಷಣಾತ್ಮಕ ವ್ಯಾಪಾರ ನೀತಿಯಲ್ಲಿ ಸಂಪನ್ಮೂಲಗಳ ಗರಿಷ್ಠ ಬಳಕೆಯಾಗದಿರಬಹುದು. ಸಂಪನ್ಮೂಲಗಳ ಬಳಕೆಯ ಮೇಲೆ ಸರಕಾರ ನಿರ್ಬಂಧ ಹೇರಬಹುದು.

೬. **ಉತ್ಪಾದನೆಯ ಪ್ರಮಾಣ :** ಮುಕ್ತವ್ಯಾಪಾರ ನೀತಿಯಲ್ಲಿ ಉತ್ಪಾದನೆ ಅಧಿಕ ವಾಗಿರುತ್ತದೆ. ಸ್ವಹಿತವೆಂಬ ಕಾಣದ ಕೈಯಿಂದ ಪ್ರೇರಿತರಾಗುವ ಉತ್ಪಾದಕರು ಗರಿಷ್ಠ ಉತ್ಪಾದನೆಗೆ ಕಾರಣರಾಗುತ್ತಾರೆ. ರಕ್ಷಣಾತ್ಮಕ ನೀತಿಯಲ್ಲಿ ಸರಕಾರವು ಉತ್ಪಾದನೆಯ ಮಿತಿಯನ್ನು ನಿರ್ಧರಿಸುತ್ತದೆ ಅಥವಾ ಉತ್ಪಾದನೆಯನ್ನು ನಿರ್ಬಂಧಿಸುತ್ತದೆ. ಆದುದರಿಂದ ಉತ್ಪಾದನೆಯ ಪ್ರಮಾಣ ಕಡಿಮೆಯಾಗುತ್ತದೆ.

೭. **ಬೆಲೆಗಳು :** ಮುಕ್ತ ವ್ಯಾಪಾರ ನೀತಿಯಲ್ಲಿ ಬೆಲೆಗಳ ಸಮಾನತೆ ಸಾಧಿತವಾಗುತ್ತದೆ. ಅಗ್ಗದ ಪ್ರದೇಶಗಳಿಂದ ತುಟ್ಟಿಯ ಪ್ರದೇಶಗಳಿಗೆ ಸರಕುಗಳು ಮುಕ್ತವಾಗಿ ಚಲಿಸುವುದು ಇದಕ್ಕೆ ಕಾರಣವಾಗಿರುತ್ತದೆ. ರಕ್ಷಣಾತ್ಮಕ ನೀತಿಯಲ್ಲಿ ಬೆಲೆಗಳ ಸಮಾನತೆ ಸಾಧಿತ ವಾಗುವುದಿಲ್ಲ. ಸುಂಕ ಹೇರಿಕೆ ಮತ್ತು ಸಬ್ಸಿಡಿ ನೀಡಿಕೆ ಇದಕ್ಕೆ ಕಾರಣವಾಗಿರುತ್ತದೆ.

೮. **ಅನುಭೋಗಿಯ ಮಿಗುತೆ :** ಮುಕ್ತ ವ್ಯಾಪಾರವು ಮುಕ್ತ ಪೈಪೋಟಿಗೆ ಅವಕಾಶ ನೀಡುವುದರಿಂದ ಬೆಲೆಗಳು ಕಡಿಮೆಯಿರುತ್ತವೆ. ಹಾಗಾಗಿ ಅನುಭೋಗಿ ಮಿಗುತೆ ಅಧಿಕ ವಾಗಿರುತ್ತದೆ. ರಕ್ಷಣಾತ್ಮಕ ನೀತಿಯಲ್ಲಿ ಸುಂಕ ಹೇರಿಕೆಯಿಂದಾಗಿ ಆಯಾತ ಸರಕುಗಳ ಬೆಲೆ ಅಧಿಕವಾಗಿರುತ್ತದೆ. ಸಬ್ಸಿಡಿ ನೀಡಿದರೆ ದೇಶೀಯ ಸರಕುಗಳು ಕಡಿಮೆ ಬೆಲೆಗೆ ಲಭ್ಯವಾಗುತ್ತದೆ.

೯. **ದೇಶೀಯ ಕೈಗಾರಿಕಾ ರಂಗ :** ಮುಕ್ತ ವ್ಯಾಪಾರವು ದೇಶೀಯ ಕೈಗಾರಿಕಾ ರಂಗದ ಬೆಳವಣಿಗೆಗೆ ಮಾರಕವಾಗಿರುತ್ತದೆ. ಸಣ್ಣ ಕೈಗಾರಿಕೆಗಳು ವಿದೇಶೀ ಪೈಪೋಟಿ ಎದುರಿಸಲಾಗದೆ

ನಾಶವಾಗಿ ಹೋಗುತ್ತವೆ. ರಕ್ಷಣಾತ್ಮಕ ನೀತಿಯು ದೇಶೀಯ ಕೈಗಾರಿಕಾರಂಗವನ್ನು ಅಭಿವೃದ್ಧಿಪಡಿಸುತ್ತದೆ. ಸಣ್ಣ ಕೈಗಾರಿಕೆಗಳ ಬೆಳವಣಿಗೆಗೆ ಕಾರಣವಾಗುತ್ತದೆ.

೧೦. **ಶೈಶವಾವಸ್ಥೆಯ ಕೈಗಾರಿಕೆಗಳು :** ಬೆಳವಣಿಗೆಯ ಆರಂಭಿಕ ಹಂತದಲ್ಲಿರುವ ಕೈಗಾರಿಕೆಗಳು ವಿದೇಶೀ ಪೈಪೋಟಿಯಿಂದ ನಾಶವಾಗದಂತೆ ತಡೆಗಟ್ಟಲು ಮುಕ್ತವ್ಯಾಪಾರ ನೀತಿಯಿಂದ ಸಾಧ್ಯವಾಗುವುದಿಲ್ಲ. ರಕ್ಷಣಾತ್ಮಕ ನೀತಿಯು ಶೈಶವಾವಸ್ಥೆಯ ಕೈಗಾರಿಕೆಗಳಿಗೆ ರಕ್ಷಣೆ ನೀಡಿ ಅವುಗಳನ್ನು ಬೆಳೆಸುತ್ತದೆ. ಫ್ರೆಡೆರಿಕ್ ಲಿಸ್ಟ್ "ಶಿಶುವನ್ನು ಪೋಷಿಸು, ಮಗವನ್ನು ರಕ್ಷಿಸು ಮತ್ತು ಪ್ರೌಢರನ್ನು ಸ್ವತಂತ್ರಗೊಳಿಸು" ಎಂದು ಆರಂಭಿಕ ಹಂತದಲ್ಲಿ ಕೈಗಾರಿಗೆಗಳಿಗೆ ರಕ್ಷಣೆಯ ಅಗತ್ಯವನ್ನು ಪ್ರತಿಪಾದಿಸಿದ್ದಾನೆ.

೧೧. **ಸ್ವಾವಲಂಬನೆ :** ಮುಕ್ತ ವ್ಯಾಪಾರವೆಂದರೆ ಸರಕುಗಳ ಮುಕ್ತ ಓಡಾಟವೆಂದರ್ಥ. ಮುಕ್ತ ವ್ಯಾಪಾರ ನೀತಿಯಲ್ಲಿ ಮುಂದುವರಿದ ದೇಶಗಳ ಸರಕು ಹಿಂದುಳಿದ ದೇಶಗಳಲ್ಲಿ ಮುಕ್ತವಾಗಿ ಸಂಚರಿಸುತ್ತವೆ. ಹಿಂದುಳಿದ ದೇಶಗಳ ಸ್ವಾವಲಂಬನೆಯೆಂಬುದು ಕನಸು ಮಾತ್ರವಾಗಿ ಬಿಡುತ್ತದೆ. ರಕ್ಷಣಾತ್ಮಕ ನೀತಿಯು ಹಿಂದುಳಿದ ದೇಶಗಳ ಸ್ವಾವಲಂಬನೆಗೆ ಬುನಾದಿಯೊದಗಿಸುತ್ತದೆ.

೧೨. **ದಕ್ಷತೆ :** ಮುಕ್ತ ವ್ಯಾಪಾರ ನೀತಿಯಲ್ಲಿ ಮುಕ್ತ ಪೈಪೋಟಿ ಇರುವುರಿಂದ ದಕ್ಷತೆ ಅಧಿಕವಾಗಿರುತ್ತದೆ. ರಕ್ಷಣಾತ್ಮಕ ಸುಂಕ, ಸಬ್ಸಿಡಿ ಇತ್ಯಾದಿಗಳಿಂದಾಗಿ ರಕ್ಷಣಾತ್ಮಕ ನೀತಿಯಲ್ಲಿ ದಕ್ಷತೆ ಕಡಿಮೆಯಾಗಿರುತ್ತದೆ.

೧೩. **ಉದ್ಯೋಗ ಸೃಷ್ಟಿ :** ಮುಕ್ತವ್ಯಾಪಾರ ನೀತಿಯು ಹೆಚ್ಚು ಉದ್ಯೋಗಗಳನ್ನು ಸೃಷ್ಟಿಸಲಾರದು. ದೇಶೀಯ ಕೈಗಾರಿಕೆಗಳು ಬೆಳೆಯಲು ಅವಕಾಶವಿಲ್ಲದಿರುವುದು ಇದಕ್ಕೆ ಕಾರಣ. ರಕ್ಷಣಾತ್ಮಕ ನೀತಿಯು ದೇಶೀಯ ಕೈಗಾರಿಕೆಗಳ ಬೆಳವಣಿಗೆಗೆ ಅವಕಾಶ ಕಲ್ಪಿಸಿಕೊಡುತ್ತದೆ. ಉದ್ಯೋಗಗಳನ್ನು ಸೃಷ್ಟಿಸುತ್ತದೆ.

೧೪. **ವೈವಿಧ್ಯತೆ :** ಮುಕ್ತ ವ್ಯಾಪಾರ ನೀತಿಯಲ್ಲಿ ಬೇಡಿಕೆಯಾಧರಿತ ಉತ್ಪಾದನೆಯಾಗುತ್ತದೆ. ಆದುದರಿಂದ ಹೆಚ್ಚು ಬೇಡಿಕೆಯಿರುವ ಉತ್ಪನ್ನಗಳು ಮಾತ್ರ ಉತ್ಪಾದನೆಯಾಗುತ್ತವೆ. ರಕ್ಷಣಾತ್ಮಕ ವ್ಯಾಪಾರ ನೀತಿಯು ಅಗತ್ಯದ ಸರಕುಗಳ ಉತ್ಪಾದನೆಗೂ ಮಹತ್ವ ನೀಡುತ್ತದೆ. ಹಾಗಾಗಿ ವೈವಿಧ್ಯಮಯ ಉತ್ಪನ್ನಗಳ ಉತ್ಪಾದನೆಯಾಗುತ್ತದೆ.

೧೫. **ಭ್ರಷ್ಟಾಚಾರ :** ಮುಕ್ತ ವ್ಯಾಪಾರ ನೀತಿಯಲ್ಲಿ ಸರಕಾರದ ಹಸ್ತಕ್ಷೇಪವಿಲ್ಲದ ಕಾರಣ ಭ್ರಷ್ಟಾಚಾರ ಮುಕ್ತ ವ್ಯವಸ್ಥೆ ಅಸ್ತಿತ್ವದಲ್ಲಿರುತ್ತದೆ. ರಕ್ಷಣಾತ್ಮಕ ನೀತಿಯಲ್ಲಿ ಸುಂಕ ತಪ್ಪಿಸಲು ಮತ್ತು ಸಬ್ಸಿಡಿ ದಕ್ಕಿಸಿಕೊಳ್ಳಲು ಉದ್ಯಮಿಗಳು ಅಧಿಕಾರಿಗಳಿಗೆ ಲಂಚ-ರುಷುವತ್ತುಗಳನ್ನು ನೀಡುತ್ತಾರೆ. ಆದುದರಿಂದ ರಕ್ಷಣಾತ್ಮಕ ನೀತಿಯು ಭ್ರಷ್ಟಾಚಾರಮಯವಾಗಿರುತ್ತದೆ.

೧೬. **ಸಂಪನ್ಮೂಲಗಳ ಹರಿವು :** ಮುಕ್ತ ವ್ಯಾಪಾರ ನೀತಿಯು ಬಡರಾಷ್ಟ್ರಗಳ ಸಂಪನ್ಮೂಲಗಳು ಮುಂದುವರಿದ ರಾಷ್ಟ್ರಗಳಿಗೆ ಹರಿದು ಹೋಗುವಂತೆ ಮಾಡುತ್ತದೆ.

ರಕ್ಷಣಾತ್ಮಕ ನೀತಿಯು ಬಡರಾಷ್ಟ್ರಗಳ ಸಂಪನ್ಮೂಲಗಳು ಬಡರಾಷ್ಟ್ರಗಳ ಅಭಿವೃದ್ಧಿಗೆ ಬಳಕೆಯಾಗುವಂತೆ ಮಾಡುತ್ತದೆ.

೧೭. **ಸಾಮಾಜಿಕ ನ್ಯಾಯ :** ಮುಕ್ತ ವ್ಯಾಪಾರ ನೀತಿಯು ಬಡವರನ್ನು ಮತ್ತು ಶ್ರೀಮಂತರನ್ನು ಸಮಾನವಾಗಿ ಪರಿಗಣಿಸುತ್ತದೆ. ರಕ್ಷಣಾತ್ಮಕ ನೀತಿಯು ಬಡವರಿಗೆ ಸಹಾಯಧನ ನೀಡುವುದನ್ನು ಸಮರ್ಥಿಸುತ್ತದೆ. ಸಾಮಾಜಿಕ ನ್ಯಾಯವನ್ನು ಪ್ರತಿಪಾದಿಸುವ ರಕ್ಷಣಾತ್ಮಕ ನೀತಿಯನ್ನು ಜನಪರ ನೀತಿಯೆಂದು ಪರಿಗಣಿಸಲಾಗುತ್ತದೆ.

## ರಕ್ಷಣಾತ್ಮಕ ನೀತಿಯ ಪರಿಕರಗಳು

ದೇಶೀಯ ಮತ್ತು ವಿದೇಶೀ ಕೈಗಾರಿಕೆಗಳ ಅಥವಾ ಸರಕುಗಳನ್ನು ಸಮಾನವಾಗಿ ಕಾಣುವ ನೀತಿಯು ಮುಕ್ತವ್ಯಾಪಾರ ನೀತಿಯಾಗಿರುತ್ತದೆ. ದೇಶೀಯ ಮತ್ತು ವಿದೇಶೀ ಕೈಗಾರಿಕೆಗಳ ಅಥವಾ ಸರಕುಗಳ ನಡುವೆ ತಾರತಮ್ಯ ಮಾಡುವ ನೀತಿಯು ರಕ್ಷಣಾತ್ಮಕ ನೀತಿಯಾಗಿರುತ್ತದೆ.

ರಕ್ಷಣಾತ್ಮಕ ನೀತಿಯ ಪ್ರಮುಖ ಪರಿಕರಗಳು ಇವು ಮೂರು:

೧. **ರಕ್ಷಣಾ ಸುಂಕ :** ಆಯಾತಗಳ ಮೇಲೆ ಹೇರುವ ಸುಂಕಗಳಿಗೆ ರಕ್ಷಣಾತ್ಮಕ ಸುಂಕಗಳೆಂದು ಹೆಸರು. ರಕ್ಷಣಾತ್ಮಕ ಸುಂಕಗಳಿಗೆ ದೇಶೀಯ ಕೈಗಾರಿಕೆಗಳನ್ನು ರಕ್ಷಿಸುವ ಮತ್ತು ಸರಕಾರದ ಆದಾಯವನ್ನು ಹೆಚ್ಚಿಸುವ ಉದ್ದೇಶವಿರುತ್ತದೆ.

೨. **ಪ್ರಮಾಣ ನಿಯಂತ್ರಣ :** ಆಯಾತ ಪ್ರಮಾಣದ ಮೇಲೆ ವಿಧಿಸುವ ನಿರ್ಬಂಧವನ್ನು ಪ್ರಮಾಣ ನಿಯಂತ್ರಣ ಪದ್ಧತಿ ಎಂದು ಕರೆಯಲಾಗುತ್ತದೆ. ಈ ವ್ಯವಸ್ಥೆಯಲ್ಲಿ ಆಯಾತ ಪ್ರಮಾಣದ ಮೇಲೆ ಮಿತಿ ಹೇರಲಾಗುತ್ತದೆ. ಒಂದು ನಿರ್ದಿಷ್ಟ ಮಿತಿಗಿಂತ ಹೆಚ್ಚು ಆಯಾತ ಮಾಡಿಕೊಳ್ಳಲು ಅನುಮತಿ ನಿರಾಕರಿಸಲಾಗುತ್ತದೆ. ಸ್ವಾವಲಂಬನೆ ಸಾಧಿಸಲು, ದೇಶೀಯ ಕೈಗಾರಿಕೆಗಳನ್ನು ಪ್ರೋತ್ಸಾಹಿಸಲು, ಬೆಲೆಗಳಲ್ಲಿ ಸ್ಥಿರತೆ ಸಾಧಿಸಲು ಮತ್ತು ಚೌಕಾಶಿಯ ಪ್ರಯೋಜನ ಪಡೆಯಲು ಪ್ರಮಾಣ ನಿಯಂತ್ರಣ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲಾಗುತ್ತದೆ.

೩. **ಸಹಾಯಧನ :** ದೇಶೀಯ ಕೈಗಾರಿಕೆಗಳ ಉತ್ಪಾದನಾ ವೆಚ್ಚ ಇಳಿಸಲು ಮತ್ತು ಅನುಭೋಗಿಗಳ ಕೊಳ್ಳುವ ಸಾಮರ್ಥ್ಯ ಹೆಚ್ಚಿಸಲು ಸರಕಾರ ನೀಡುವ ಆರ್ಥಿಕ ನೆರವನ್ನು ಸಹಾಯಧನ ಎಂದು ಕರೆಯಲಾಗುತ್ತದೆ. ಸಹಾಯಧನವು ದೇಶೀಯ ಉತ್ಪನ್ನಗಳ ಬೆಲೆಗಳನ್ನು ಇಳಿಸುತ್ತವೆ. ದೇಶೀಯ ಉತ್ಪನ್ನಗಳ ಬೇಡಿಕೆಯನ್ನು ಹೆಚ್ಚಿಸುತ್ತದೆ.

ಹಿಂದುಳಿದ ಆರ್ಥಿಕತೆಗಳು ರಕ್ಷಣಾ ನೀತಿಯ ಹೊರತಾಗಿ ಅಭಿವೃದ್ಧಿ ಸಾಧಿಸಲಾರವು. ಆದರೆ ಇತ್ತೀಚೆಗೆ ಮುಕ್ತವ್ಯಾಪಾರನೀತಿ ಹೆಚ್ಚು ಜನಪ್ರಿಯವಾಗುತ್ತಿದೆ. ಅಂತಾರಾಷ್ಟ್ರೀಯ ಹಣಕಾಸು ನಿಧಿ ಮತ್ತು ವಿಶ್ವಬ್ಯಾಂಕು ಮುಕ್ತ ವ್ಯಾಪಾರ ನೀತಿಯನ್ನು ಬಲವಾಗಿ ಸಮರ್ಥಿಸುತ್ತವೆ. ಅಂತಾರಾಷ್ಟ್ರೀಯ ವ್ಯಾಪಾರವನ್ನು ರಕ್ಷಣಾತ್ಮಕ ನೀತಿಯಿಂದ ಮುಕ್ತಗೊಳಿಸುವ ಉದ್ದೇಶದಿಂದ ೧೯೯೫ರಲ್ಲಿ ವಿಶ್ವವ್ಯಾಪಾರ ಸಂಘಟನೆಯನ್ನು ಹುಟ್ಟು ಹಾಕಲಾಗಿದೆ.

## ೮.೨. ವಿದೇಶಿ ವಿನಿಮಯ

ವಿಶ್ವದ ಪ್ರತಿಯೊಂದು ದೇಶವು ತನ್ನದೇ ಆದ ವಿಶಿಷ್ಟ ವಿನಿಮಯ ಮಾಧ್ಯಮವನ್ನು ಹೊಂದಿರುತ್ತದೆ. ಭಾರತದ ರೂಪಾಯಿ, ಬಾಂಗ್ಲಾದೇಶದ ಟಾಕ್ಕಾ, ಕುವೈಟಿನ ದೀನಾರ್, ಅಮೇರಿಕಾದ ಡಾಲರ್, ಇಂಗ್ಲೇಂಡಿನ ಪೌಂಡು, ಯುರೋಪಿಯನ್ ಒಕ್ಕೂಟದ ಯುರೋ, ಜಪಾನಿನ ಯೆನ್, ರಶಿಯಾದ ರೂಬಲ್ ಹೀಗೆ ವಿವಿಧ ಹೆಸರಿನ ವಿನಿಮಯದ ಮಾಧ್ಯಮಗಳನ್ನು ನಾವು ಉಲ್ಲೇಖಿಸಬಹುದು. ಅಂತಾರಾಷ್ಟ್ರೀಯ ವ್ಯಾಪಾರ ಸಂದರ್ಭದಲ್ಲಿ ದೇಶದ ವಿನಿಮಯ ಮಾಧ್ಯಮವನ್ನು ಪರಿವರ್ತಿಸಿಕೊಳ್ಳಬೇಕಾಗುತ್ತದೆ. ಉದಾ:ನಾವು ಕುವೈಟಿನಿಂದ ತೈಲ ತರಿಸಿಕೊಳ್ಳುವುದಾದರೆ ಭಾರತದ ರೂಪಾಯಿಯನ್ನು ಕುವೈಟು ದೀನಾರುಗಳಾಗಿ ಪರಿವರ್ತಿಸಿಕೊಳ್ಳಬೇಕು.

ವಿದೇಶಿ ವಿನಿಮಯವಿಲ್ಲದೆ ಅಂತಾರಾಷ್ಟ್ರೀಯ ವ್ಯಾಪಾರ ನಡೆಯುವುದಿಲ್ಲ.

### ವಿದೇಶಿ ವಿನಿಮಯದ ಅರ್ಥವಿವರಣೆ

ವಿದೇಶಿ ವಿನಿಮಯವೆಂದರೇನು? ವಿದೇಶಿ ವಿನಿಮಯವನ್ನು ಎರಡು ರೀತಿಗಳಲ್ಲಿ ಅರ್ಥೈಸಲಾಗುತ್ತದೆ.

**i) ಸೀಮಿತ ಅರ್ಥದಲ್ಲಿ:** ಸೀಮಿತ ಅರ್ಥದಲ್ಲಿ ವಿದೇಶಿ ವಿನಿಮಯವೆಂದರೆ ವಿದೇಶಿ ಹಣದ ಬೇಡಿಕೆ ಮತ್ತು ಪೂರೈಕೆ ಎಂದರ್ಥ. ವಿದೇಶಿ ವಿನಿಮಯವನ್ನು ಒಂದು ದೇಶದ ಕರೆನ್ಸಿ ಹಣವು ಇನ್ನೊಂದು ದೇಶದ ಕರೆನ್ಸಿ ಹಣದೊಡನೆ ವಿನಿಮಯವಾಗುವ ದರವೆಂದು ಕೂಡಾ ವ್ಯಾಖ್ಯಾನಿಸಲಾಗುತ್ತದೆ.

**ii) ವಿಶಾಲಾರ್ಥದಲ್ಲಿ:** ವಿಶಾಲಾರ್ಥದಲ್ಲಿ ವಿದೇಶಿ ವಿನಿಮಯವು ವಿದೇಶಿ ವಿನಿಮಯ ಮಾರುಕಟ್ಟೆ, ವಿದೇಶಿ ವಿನಿಮಯ ದರ ಮತ್ತು ವಿದೇಶಿ ವಿನಿಮಯ ನಿಧಿ ಇವು ಮೂರನ್ನು ಒಳಗೊಂಡಿರುತ್ತದೆ. ವಿಶಾಲಾರ್ಥದಲ್ಲಿ ವಿದೇಶಿ ವಿನಿಮಯವು ದೇಶಗಳ ಋಣ ನಿರ್ವಹಣೆಯ ಸಮಸ್ತ ವ್ಯವಹಾರವನ್ನು ಪ್ರತಿನಿಧಿಸುತ್ತದೆ.

ವಿದೇಶಿ ವಿನಿಮಯವೆಂದರೇನೆಂದು ತಮ್ಮದೇ ವಾಕ್ಯಗಳಲ್ಲಿ ವಿವರಿಸಲು ಅರ್ಥಶಾಸ್ತ್ರಜ್ಞರು ಪ್ರಯತ್ನಿಸಿದ್ದಾರೆ.

ಎಸ್.ಇ. ಥಾಮಸ್‌ನ ಪ್ರಕಾರ "ವಿಶ್ವದ ಜನರು ತಮ್ಮ ನಡುವಣ ಋಣ ಪರಿಹಾರಕ್ಕೆ ಬಳಸುವ ತತ್ವಗಳನ್ನು ನಿರ್ಧರಿಸುವ ಅರ್ಥವಿಜ್ಞಾನದ ಒಂದು ಭಾಗವೇ ವಿದೇಶಿ ವಿನಿಮಯ."

ವಿಥರ್ಸ್‌ನ ವ್ಯಾಖ್ಯೆ ಹೀಗಿದೆ: "ವಿದೇಶಿ ವಿನಿಮಯವು ಎರಡು ದೇಶಗಳ ನಡುವಣ ಅಂತಾರಾಷ್ಟ್ರೀಯ ಸಾಲವನ್ನು ಇತ್ಯರ್ಥ ಮಾಡುವ ಒಂದು ತಂತ್ರವಾಗಿದೆ."

ಚೌಪ್‌ಮನ್ ಅಭಿಪ್ರಾಯದಂತೆ, "ಅಂತಾರಾಷ್ಟ್ರೀಯ ವ್ಯಾಪಾರದ ಪಾವತಿಗಳು ಪರಿಣಾಮಗೊಳ್ಳುವ ಒಂದು ಯಾಂತ್ರಿಕ ಕ್ರಿಯೆಯನ್ನು ವಿದೇಶಿ ವಿನಿಮಯ ಎನ್ನಲಾಗುತ್ತದೆ".

ವಿದೇಶಿ ವಿನಿಮಯವು ದೇಶಗಳ ಅಂತಾರಾಷ್ಟ್ರೀಯ ಋಣ ಪರಿಹಾರದ ವಿಧಾನ, ಸಾಧನ ಮತ್ತು ಸಲಕರಣೆಗಳನ್ನು ಒಳಗೊಂಡಿರುತ್ತದೆ. ವಿದೇಶಿ ಕರೆನ್ಸಿಯನ್ನು ಕೊಳ್ಳುವ ಮತ್ತು ಮಾರುವ ಸ್ಥಳವನ್ನು ವಿದೇಶಿ ವಿನಿಮಯ ಮಾರುಕಟ್ಟೆ ಎಂದು ಕರೆಯಲಾಗುತ್ತದೆ.

ವಿದೇಶಿ ಕರೆನ್ಸಿವನ್ನು ಕೊಳ್ಳುವ ಮತ್ತು ಮಾರುವ ಹಣಕಾಸು ಸಂಸ್ಥೆಗಳನ್ನು ವಿನಿಮಯ ಬ್ಯಾಂಕುಗಳು (exchange banks) ಎಂದು ಕರೆಯಲಾಗುತ್ತದೆ.

ವಿಶಾಲಾರ್ಥದಲ್ಲಿ ವಿದೇಶಿ ವಿನಿಮಯವು ಸಮಸ್ತ ವಿದೇಶಿ ಪಾವತಿಗಳನ್ನು ಒಳಗೊಂಡಿರುತ್ತದೆ. ವಿದೇಶಿ ಪಾವತಿಯ ವಿವಿಧ ರೂಪಗಳು ಇವು (i) ಚಿನ್ನ (ii) ಕರೆನ್ಸಿ ಹಣ (iii) ಸೈಟ್, ಮತ್ತು ವ್ಯಾಪಾರದ ಡ್ರಾಫ್ಟುಗಳು (iv) ಹುಂಡಿಗಳು (v) ಖಾಸಗಿ ಚೆಕ್ಕುಗಳು (iv) ಪ್ರವಾಸಿಗರ ಉದ್ದರಿ ಪತ್ರಗಳು (vii) ಪ್ರವಾಸಿಗರ ಚೆಕ್ಕುಗಳು (vii) ಅಂತರಾಷ್ಟ್ರೀಯ ಮನಿಯಾರ್ಡರ್ (viii) ಉದ್ದರಿ ಕಾರ್ಡುಗಳು (ix) ವಿದ್ಯುನ್ಮಾನಗಳ ಮೂಲಕ ವರ್ಗಾವಣೆ - ಇತ್ಯಾದಿ.

### ವಿದೇಶಿ ವಿನಿಮಯ ದರ

ವಿದೇಶಿ ವಿನಿಮಯ ದರವು ಕರೆನ್ಸಿ ಹಣಗಳ ನಡುವಣೆ ವಿನಿಮಯ ದರವಾಗಿರುತ್ತದೆ. ವಿದೇಶಿ ಹಣಕ್ಕೆ ಕೊಡಬೇಕಾದ ಸ್ವದೇಶಿ ಹಣರೂಪಿ ಬೆಲೆಯನ್ನು ವಿದೇಶಿ ವಿನಿಮಯ ದರವೆಂದು ಕರೆಯಲಾಗುತ್ತದೆ. ಒಂದು ಯುರೋದ ವಿನಿಮಯ ದರ ೫೦ ರೂಪಾಯಿಗಳು ಎಂದು ಭಾವಿಸುವಾ. ಅಂದರೆ ಯುರೋಪಿನ ಒಂದು ಯುರೋ ಭಾರತದ ರೂ ೫೦ರಷ್ಟು ಬೆಲೆಯನ್ನು ಹೊಂದಿರುತ್ತದೆಂದು ನಡುವೆ ಸಂಬಂಧ ಕಲ್ಪಿಸುವ ಸೇತುವೆಯಾಗಿದೆ.

ವಿನಿಮಯ ದರವು ದೇಶೀಯ ಹಣದ ವಿನಿಮಯ ಮೌಲ್ಯವನ್ನು ನಿರ್ಧರಿಸುವುದು ಮಾತ್ರವಲ್ಲದೆ ದೇಶೀಯ ಸರಕುಗಳ ಮತ್ತು ಸೇವೆಗಳ ಬೆಲೆಗಳನ್ನು ವಿದೇಶಿ ಹಣಕ್ಕೆ ಪರಿವರ್ತಿಸುತ್ತದೆ.

ವಿದೇಶಿ ವಿನಿಮಯ ದರದಲ್ಲಿ ಎರಡು ಮೌಲ್ಯಗಳಿರುತ್ತವೆ. (i) ಕೊಳ್ಳುವುದರ ಮತ್ತು (ii) ಮಾರುವ ದರ. ವಿನಿಮಯ ಬ್ಯಾಂಕುಗಳು ಅಥವಾ ದಲ್ಲಾಳಿಗಳು ವಿದೇಶಿ ಕರೆನ್ಸಿ ಹಣಕ್ಕೆ ನೀಡುವ ಬೆಲೆಯು ಕೊಳ್ಳುವ ದರ ಎಂದು ಕರೆಸಿಕೊಳ್ಳುತ್ತದೆ. ವಿನಿಮಯ ಬ್ಯಾಂಕುಗಳು ಮತ್ತು ದಲ್ಲಾಳಿಗಳು ವಿದೇಶಿ ಹಣವನ್ನು ಮಾರಾಟ ಮಾಡುವ ಬೆಲೆಯು ಮಾರವ ದರವೆಂದು ಕರೆಯಲ್ಪಡುತ್ತದೆ. ವಿದೇಶಿ ವಿನಿಮಯದ ಕೊಳ್ಳುವ ದರವು ಮಾರುವ ದರಕ್ಕಿಂತ ಕಡಿಮೆಯಿರುತ್ತದೆ.

ಉದಾಹರಣೆಗೆ ಅಮೇರಿಕಾದಲ್ಲಿರುವ ಭಾರತೀಯನೊಬ್ಬ ತನ್ನ ಹುಟ್ಟೂರಾದ ಹಾಸನದ ಗಂಡಸಿಗೆ ಭೇಟಿ ಕೊಡುತ್ತಾನೆ ಎಂದು ಭಾವಿಸುವಾ. ಅವನು ತಾನು ತಂದ ಅಮೇರಿಕಾದ ಡಾಲರುಗಳನ್ನು ಹಾಸನದ ಸ್ಟೇಟ್ ಬ್ಯಾಂಕಿಗೆ ಮಾರಾಟಮಾಡುತ್ತಾನೆ. ಸ್ಟೇಟು ಬ್ಯಾಂಕು ಒಂದು ಡಾಲರಿಗೆ ೪೫ ರೂಪಾಯಿಗಳಂತೆ ಆತನಿಗೆ ನೀಡುತ್ತದೆ. ಈಗ ಕೊಳ್ಳುವ ದರ ೧ ಡಾಲರ್ = ರೂಪಾಯಿ ೪೫.

ಅವನು ಬೇಲೂರು, ಹಳೆಬೀಡು, ಶ್ರವಣಬೆಳಗೊಳ, ಗೊರೂರು ಅಣೆಕಟ್ಟು, ಇಸ್ರೋ ಸಂಸ್ಥೆ ಇತ್ಯಾದಿಗಳಿಗೆ ಭೇಟಿಯಿತ್ತು ಆರಾಮವಾಗಿ ರಜೆ ಕಳೆದು ಅಮೆರಿಕಾಕ್ಕೆ ವಾಪಾಸಾಗುತ್ತಾನೆ. ಈಗ ಅವನಿಗೆ ಅಮೇರಿಕನ್ ಡಾಲರುಗಳು ಬೇಕಾಗುತ್ತದೆ. ಹಾಸನದ ಸ್ಟೇಟ್ ಬ್ಯಾಂಕಿಗೆ ಬಂದು ಭಾರತದ ರೂಪಾಯಿಗಳನ್ನು ನೀಡಿ ಆತ ಅಮೇರಿಕಾದ ಡಾಲರುಗಳನ್ನು ಕೊಳ್ಳುತ್ತಾನೆ. ಸ್ಟೇಟು ಬ್ಯಾಂಕು ೧ ಡಾಲರನ್ನು ರೂ ೪೬ ರಂತೆ ಅವನಿಗೆ ಮಾರಾಟ ಮಾಡುತ್ತದೆ. ಈಗ ಮಾರುವ ದರವು ೧ ಡಾಲುರು = ರೂಪಾಯಿ ೪೬ ಆಗಿರುತ್ತದೆ.

**ವಿನಿಮಯ ದರ ನಿರ್ಧಾರ :** ವಿನಿಮಯ ದರವು ಕರೆನ್ಸಿಗಳ ಬೆಲೆಯಾಗಿರುತ್ತದೆ. ಎಲ್ಲಾ ಸರಕುಗಳ ಮತ್ತು ಸೇವೆಗಳ ಬೆಲೆಗಳು ಮುಕ್ತ ಮಾರುಕಟ್ಟೆಯಲ್ಲಿ ಬೇಡಿಕೆ ಮತ್ತು ಪೂರೈಕೆಗಳಿಂದ ನಿರ್ಧಾರವಾಗುತ್ತದೆ. ವಿನಿಮಯ ದರವು ವಿದೇಶಿ ವಿನಿಮಯ ಬೇಡಿಕೆ ಮತ್ತು ಪೂರೈಕೆಗಳಿಂದ ನಿರ್ಧಾರವಾಗುತ್ತದೆ.

ವಿದೇಶಿ ವಿನಿಮಯದ ಬೇಡಿಕೆಯು ಒಟ್ಟು ಆಯಾತ ಪ್ರಮಾಣ, ಬಂಡವಾಳದ ಹೊರ ಹರಿವು ಮತ್ತು ಒಟ್ಟು ವಿದೇಶಿ ಪಾವತಿಗಳಿಂದ ನಿರ್ಧರಿಸಲ್ಪಡುತ್ತದೆ. ವಿನಿಮಯ ದರಕ್ಕೂ ಬೇಡಿಕೆಗೂ ನಡುವೆ ವಿಲೋಮ ಸಂಬಂಧವಿದೆ. ವಿನಿಮಯ ದರ ಹೆಚ್ಚಾದಾಗ ಬೇಡಿಕೆ ಕಡಿಮೆಯಾಗುತ್ತದೆ. ವಿನಿಮಯದರ ಕಡಿಮೆಯಾದರೆ ಬೇಡಿಕೆ ದರ ಹೆಚ್ಚಾಗುತ್ತದೆ. ಹಾಗಾಗಿ ವಿದೇಶಿ ವಿನಿಮಯದ ಬೇಡಿಕೆ ರೇಖೆಯು ಎಡದಿಂದ ಬಲಕ್ಕೆ ಕೆಳಮುಖ ಪ್ರಯಾಣ ಮಾಡುತ್ತದೆ.

ವಿದೇಶಿ ವಿನಿಮಯದ ಪೂರೈಕೆಯು ಒಟ್ಟು ನಿರ್ಯಾತ ಪ್ರಮಾಣ, ಬಂಡಾವಳದ ಒಳಹರಿವು ಮತ್ತು ಒಟ್ಟು ವಿದೇಶಿ ಸ್ವೀಕೃತಿಗಳಿಂದ ನಿರ್ಧರಿಸಲ್ಪಡುತ್ತದೆ. ವಿನಿಮಯ ದರಕ್ಕೂ ಪೂರೈಕೆಗೂ ನಡುವೆ ಅನುಲೋಮ ಸಂಬಂಧವಿದೆ. ವಿನಿಮಯ ದರ ಹೆಚ್ಚಾದಾಗ ಪೂರೈಕೆ ಹೆಚ್ಚಾಗುತ್ತದೆ. ವಿನಿಮಯದರ ಕಡಿಮೆಯಾದಾಗ ಪೂರೈಕೆ ಕಡಿಮೆಯಾಗುತ್ತದೆ. ಹಾಗಾಗಿ ವಿದೇಶಿ ವಿನಿಮಯದ ಪೂರೈಕೆ ರೇಖೆಯು ಎಡದಿಂದ ಬಲಕ್ಕೆ, ಮೇಲ್ಮುಖ ಪ್ರಯಾಣ ಮಾಡುತ್ತದೆ.

ಬೇಡಿಕೆ ಮತ್ತು ಪೂರೈಕೆಗಳು ಒಟ್ಟಾಗಿ ವಿನಿಮಯದರನ್ನು ಹೀಗೆ ನಿರ್ಧರಿಸುತ್ತವೆ:

ಚಿತ್ರ ೮.೧. ವಿದೇಶಿ ವಿನಿಮಯ ದರ ನಿರ್ಧಾರವಾಗುವ ವಿಧಾನವನ್ನು ತೋರಿಸುತ್ತದೆ. SS ವಿದೇಶಿ ವಿನಿಮಯದ ಪೂರೈಕೆಯನ್ನು ಮತ್ತು DD ವಿದೇಶಿ ವಿನಿಮಯದ ಬೇಡಿಕೆಯನ್ನು ಪ್ರತಿನಿಧಿಸುವ ರೇಖೆಗಳಾಗಿವೆ. ಬಿಂಧು E ಯಲ್ಲಿ ಅವೆರಡು ಸಂಗಮಿಸುವುದರಿಂದ ಅದು ಸಮತೋಲನ ಬಿಂಧುವಾಗಿರುತ್ತದೆ. OR ಸಮತೋಲನ ವಿನಿಮಯ ದರವಾಗಿರುತ್ತದೆ. OM ವಿದೇಶಿ ವಿನಿಮಯದ ಒಟ್ಟು ಪ್ರಮಾಣವಾಗಿರುತ್ತದೆ.




ಚಿತ್ರ ೮.೧. ವಿದೇಶಿ ವಿನಿಮಯದ ದರ ನಿರ್ಧಾರ

ವಿನಿಮಯ ದರ $OR_2$ ಗೆ ಏರಿಕೆಯಾಗುತ್ತದೆಂದು ಭಾವಿಸುವಾ. ಆಗ ಬೇಡಿಕೆ $OM_1$ ಗೆ ಕಡಿಮೆಯಾಗುತ್ತದೆ. ಆದರೆ ಪೂರೈಕೆ $OM_2$ ಗೆ ವಿಸ್ತರಿಸುತ್ತದೆ. $M_1$ $M_2$, ಗಳ ನಡುವಣ ಅಂತರವನ್ನು ಹೆಚ್ಚುವರಿ ಪೂರೈಕೆ ಎಂದು ಕರೆಯಲಾಗುತ್ತದೆ. ಬಾಹ್ಯ ಹಸ್ತಕ್ಷೇಪಗಳಿಲ್ಲದಿದ್ದರೆ ಪೂರೈಕೆದಾರರು ಪೈಪೋಟಿ ನಡೆಸಿ ವಿನಿಮಯ ದರವನ್ನು ಇಳಿಸುತ್ತಾರೆ. ಅಂತಿಮವಾಗಿ ವಿನಿಮಯ ದರವು OR ನಲ್ಲಿ ನೆಲೆಗೊಳ್ಳುತ್ತದೆ.

ವಿನಿಮಯ ದರವು $OR_1$ ಗೆ ಕುಸಿದರೆ ಏನಾಗುತ್ತದೆ? ಆಗ ಬೇಡಿಕೆ $OM_2$ ಗೆ ವಿಸ್ತರಿಸಲ್ಪಡುತ್ತದೆ. ಪೂರೈಕೆ $OM_1$ ಗೆ ಕಡಿಮೆಯಾಗುತ್ತದೆ. ಈಗ $M_1$ $M_2$ ಗಳ ನಡುವಣ ಅಂತರವನ್ನು ಹೆಚ್ಚುವರಿ ಬೇಡಿಕೆ ಎಂದು ಕರೆಯಲಾಗುತ್ತದೆ. ಬಾಹ್ಯ ಹಸ್ತಕ್ಷೇಪಗಳಿಲ್ಲದಿದ್ದರೆ ಬೇಡಿಕೆದಾರರು ಪೈಪೋಟಿ ನಡೆಸಿ ವಿನಿಮಯದರವನ್ನು ಏರಿಸುತ್ತಾರೆ. ಅಂತಿಮವಾಗಿ ವಿನಿಮಯದರವು OR ನಲ್ಲಿ ನೆಲೆಗೊಳ್ಳುತ್ತದೆ.

## ಸ್ಥಿರ ವಿನಿಮಯ ದರ

ಒಂದು ಯುನಿಟ್ಟು ಕರೆನ್ಸಿ ಹಣವನ್ನು ಕೊಳ್ಳುವಾಗ ಅಥವಾ ಮಾರುವಾಗ ಬಳಕೆಯಾಗುವ ಇನ್ನೊಂದು ಕರೆನ್ಸಿ ಹಣದ ಯುನಿಟ್ಟುಗಳ ಸಂಖ್ಯೆಯನ್ನು ವಿನಿಮಯ ದರವೆಂದು ಕರೆಯಲಾಗುತ್ತದೆ. ವಿನಿಮಯ ದರ ನಿರ್ಧಾರಕ್ಕೆ ಸಂಬಂಧಿಸಿದಂತೆ ಸ್ಥಿರ ಮತ್ತು ತೇಲುವ ವಿನಿಮಯದರವೆಂಬ ಪರಿಕಲ್ಪನೆಗಳು ಬಳಕೆಯಾಗುತ್ತವೆ.

ದೇಶೀಯ ಮತ್ತು ವಿದೇಶೀಯ ಕರೆನ್ಸಿಗಳ ನಡುವಣ ಸಮಾನತೆಯನ್ನು ಆಡಳಿತಾತ್ಮಕವಾಗಿ ನಿರ್ಧರಿಸಿದರೆ ಅದು ಸ್ಥಿರವಿನಿಮಯ ದರವೆಂದು ಕರೆಯಲ್ಪಡುತ್ತದೆ. ಸ್ಥಿರ ವಿನಿಮಯ ದರವು ಸರಕಾರದಿಂದ ನಿರ್ಧರಿಸಲ್ಪಡುತ್ತದೆ. ಅದು ಮಾರುಕಟ್ಟೆ ಶಕ್ತಿಗಳ

ಪ್ರಭಾವಕ್ಕೆ ಒಳಗಾಗದ ವಿನಿಮಯ ದರವಾಗಿರುತ್ತದೆ.

**ಪ್ರಯೋಜನಗಳು** : ಸ್ಥಿರ ವಿನಿಮಯ ದರವನ್ನು ಅನೇಕ ವಾದಗಳ ಮೂಲಕ ಸಮರ್ಥಿಸಲಾಗುತ್ತದೆ. ಸ್ಥಿರ ವಿನಿಮಯದರದ ಪರ ವಾದಗಳು ಅದರ ಒಳಿತುಗಳನ್ನು ಅಥವಾ ಪ್ರಯೋಜನಗಳನ್ನು ತಿಳಿಸುತ್ತವೆ. ಸ್ಥಿರ ವಿನಿಮಯ ದರದ ಅಳವಡಿಕೆಗೆ ಅವು ಕಾರಣಗಳನ್ನು ಸೂಚಿಸುತ್ತವೆ. ಸ್ಥಿರ ವಿನಿಮಯದರದ ಪರ ವಾದಗಳು ಇವು:

**೧. ಆರ್ಥಿಕಾಭಿವೃದ್ಧಿ** : ಸ್ಥಿರ ವಿನಿಮಯದ ದರವು ಯೋಜಿತ ಆರ್ಥಿಕಾಭಿವೃದ್ಧಿಗೆ ಪೂರಕವಾಗಿರುತ್ತದೆ. ಅಸ್ಥಿರ ವಿನಿಮಯ ದರವು ವಿದೇಶೀ ಬಂಡವಾಳದ ಒಳಹರಿವನ್ನು ನಿರುತ್ತೇಜಿಸುತ್ತದೆ.

**೨. ವಿದೇಶಿ ವ್ಯಾಪಾರಾಭಿವೃದ್ಧಿ** : ಸ್ಥಿರ ವಿನಿಮಯದ ದರವು ವಿದೇಶಿ ವ್ಯಾಪಾರಭಿವೃದ್ಧಿಗೆ ನೆರವಾಗುತ್ತದೆ. ಸ್ಥಿರ ವಿನಿಮಯ ದರ ವ್ಯವಸ್ಥೆಯಿರುವಾಗ ಆಯಾತದಾರರಿಗೆ ತಾವೆಷ್ಟು ಪಾವತಿಸಬೇಕು ಮತ್ತು ನಿರ್ಯಾತದಾರರಿಗೆ ತಮಗೆಷ್ಟು ಸಿಗುತ್ತದೆ ಎನ್ನುವುದು ಖಚಿತ ವಾಗಿ ತಿಳಿದಿರುತ್ತದೆ. ಅಸ್ಥಿರ ವಿನಿಮಯದರ ವ್ಯವಸ್ಥೆಯಲ್ಲಿ ಪಾವತಿ ಮತ್ತು ಸ್ವೀಕೃತಿಗೆ ಸಂಬಂಧಿಸಿದಂತೆ ಗೊಂದಲಗಳು ತುಂಬಿಕೊಂಡಿರುತ್ತದೆ.

**೩. ಸಾಲ ವ್ಯವಹಾರಗಳಿಗೆ ಪೂರಕ** : ಸ್ಥಿರ ವಿನಿಮಯ ದರವು ಅನಿರ್ಬಂಧಿತ ಅಂತಾರಾಷ್ಟ್ರೀಯ ಸಾಲ ವ್ಯವಹಾರಗಳಿಗೆ ಪೂರಕವಾಗಿರುತ್ತದೆ. ಅಸ್ಥಿರ ವಿನಿಮಯ ದರವು ಸಾಲದಾರರ ಮತ್ತು ಸಾಲಗಾರರಲ್ಲಿ ಅನಿಶ್ಚಿತತೆಯನ್ನು ಮೂಡಿಸಿ ಅಂತಾರಾಷ್ಟ್ರೀಯ ಬಂಡವಾಳ ಚಲನೆಯನ್ನು ನಿರುತ್ತೇಜಿಸುತ್ತದೆ.

**೪. ಅಂತರಿಕ ಸ್ಥಿರತೆ** : ಸ್ಥಿರ ವಿನಿಮಯ ದರವು ಆಂತರಿಕ ಸ್ಥಿರತೆ ಸಾಧಿಸಲು ನೆರವಾಗು ತ್ತದೆ. ವಿದೇಶಿ ವ್ಯಾಪಾರವು ಪ್ರಬಲ ಪಾತ್ರ ನಿರ್ವಹಿಸುವ ಸಣ್ಣ ಆರ್ಥಿಕತೆಗಳನ್ನು ಸ್ಥಿರ ವಿನಿಮಯ ದರವು ಸಂರಕ್ಷಿಸುತ್ತದೆ. ಅಂತಹ ದೇಶಗಳು ಅಸ್ಥಿರ ವಿನಿಮಯ ದರ ವ್ಯವಸ್ಥೆಯನ್ನು ಅಳವಡಿಸಿಕೊಂಡರೆ ಛಿದ್ರ ಛಿದ್ರವಾಗಿ ಹೋಗುವ ಸಂಭವವಿದೆ.

**೫. ಕರೆನ್ಸಿ ಬ್ಲಾಕುಗಳ ಯಶಸ್ಸು** : ಕರೆನ್ಸಿ ಬ್ಲಾಕುಗಳ ಯಶಸ್ಸು ಸ್ಥಿರ ವಿನಿಮಯ ದರವನ್ನು ಅವಲಂಬಿಸಿಕೊಂಡಿರುತ್ತದೆ. ಒಂದೇ ಕರೆನ್ಸಿಯನ್ನು ಅಳವಡಿಸಿ ಕೊಂಡಿರುವ ದೇಶಗಳನ್ನು ಒಟ್ಟಾಗಿ ಕರೆನ್ಸಿ ಬ್ಲಾಕುಗಳೆಂದು ಕರೆಯಲಾಗುತ್ತದೆ. ಯೂರೋ ಬ್ಲಾಕು, ಡಾಲರ್ ಬ್ಲಾಕ್, ಸ್ಟರ್ಲಿಂಗ್ ಬ್ಲಾಕು ಇತ್ಯಾದಿಗಳು ಕರೆನ್ಸಿ ಬ್ಲಾಕುಗಳಿಗೆ ಉದಾರಹರಣೆ ಗಳಾಗಿವೆ. ಕರೆನ್ಸಿ ಬ್ಲಾಕುಗಳಲ್ಲಿನ ದೇಶಗಳಲ್ಲಿ ಸ್ಥಿರ ವಿನಿಮಯ ದರ ಇದ್ದರೆ ವ್ಯವಹಾರ ಗಳು ಸುಲಲಿತವಾಗಿ ಸಾಗುತ್ತದೆ. ಅಸ್ಥಿರ ವಿನಿಮಯ ದರವು ಅವುಗಳ ನಡುವೆ ಮನಸ್ತಾಪಕ್ಕೆ ಕಾರಣವಾಗುತ್ತದೆ. ಅದು ಪರಿಹರಿಸಲಾಗದ ಅನೇಕ ಗಂಭೀರ ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ.

**೬. ಸಟ್ಟಾವ್ಯಾಪಾರದ ಅಪಾಯಗಳಿಗೆ ಪರಿಹಾರ** : ಸ್ಥಿರ ವಿನಿಮಯ ದರವು ಸಟ್ಟಾ ವ್ಯಾಪಾರದ ಅಪಾಯಗಳಿಗೆ ಪರಿಹಾರವನ್ನೊದಗಿಸುತ್ತದೆ. ಸ್ಥಿರ ವಿನಿಮಯ ದರದಲ್ಲಿ

ಊಹಾಪೋಹೆಗಳಿಗೆ ಅವಕಾಶವಿರುವುದಿಲ್ಲ. ಅಸ್ಥಿರ ವಿನಿಮಯದರ ವ್ಯವಸ್ಥೆಯಲ್ಲಿ ಊಹಾಪೋಹಗಳಿಗೆ ಅವಕಾಶವಿರುತ್ತದೆ. ಹಾಗಾಗಿ ಅದು ಅನೇಕ ಅಪಾಯಗಳನ್ನು ಸೃಷ್ಟಿಸುತ್ತದೆ.

**ಅ. ಉತ್ತೇಜನ :** ಸ್ಥಿರ ವಿನಿಮಯ ದರ ವ್ಯವಸ್ಥೆಯು ಆರ್ಥಿಕ ಚಟುವಟಿಕೆಗಳಿಗೆ ಉತ್ತೇಜನಕಾರಿಯಾಗಿರುತ್ತದೆ. ಅದು ಹೂಡಿಕೆಯನ್ನು ಹೆಚ್ಚಿಸಿ, ಉದ್ಯೋಗಗಳನ್ನು ನಿರ್ಮಿಸಿ ಆದಾಯವನ್ನು ಹೆಚ್ಚಿಸಿ ಆರ್ಥಿಕತೆಯಲ್ಲಿ ಆಹ್ಲಾದಕರ ಅನುಭವಗಳನ್ನು ಉಂಟುಮಾಡುತ್ತದೆ. ಅಸ್ಥಿರ ವಿನಿಮಯದರವು ಅನಿಶ್ಚಿತತೆಗಳನ್ನು ಸೃಷ್ಟಿಸಿ ಆರ್ಥಿಕ ಚಟುವಟಿಕೆಗಳನ್ನು ನಿರುತ್ತೇಜಿಸುತ್ತದೆ.

**ಆ. ವ್ಯಾಪಾರ ಒಪ್ಪಂದಗಳಿಗೆ ಸಹಕಾರಿ :** ಸ್ಥಿರ ವಿನಿಮಯದರವು ಬಹುಪಕ್ಷೀಯ ವ್ಯಾಪಾರ ಒಪ್ಪಂದಗಳಿಗೆ ಸಹಕಾರಿಯಾಗಿದೆ. ಅಸ್ಥಿರ ವಿನಿಮಯ ದರವು ಬಹುಪಕ್ಷಿಯ ವ್ಯಾಪಾರ ಒಪ್ಪಂದಗಳನ್ನು ಸುಲಭವಾಗಿ ಮಾಡಿಕೊಳ್ಳಲು ಸಹಕರಿಸುವುದಿಲ್ಲ.

**ಇ. ಸಂಕೀರ್ಣ ಸಮಸ್ಯೆಗಳಿಗೆ ಪರಿಹಾರ:** ಬೃಹತ್ ಮತ್ತು ವ್ಯಾಪಕ ಆರ್ಥಿಕತೆಗಳು ಅನೇಕ ಸಂಕೀರ್ಣ ಆರ್ಥಿಕ ಸಮಸ್ಯೆಗಳಲ್ಲಿ ನರಳುತ್ತಿರುತ್ತವೆ. ಸ್ಥಿರ ವಿನಿಮಯ ದರವು ಸಂಕೀರ್ಣ ಸಮಸ್ಯೆಗಳಿಗೆ ಪರಿಹಾರವೊದಗಿಸುತ್ತದೆ. ಅಸ್ಥಿರ ವಿನಿಮಯ ದರವು ಸಂಕೀರ್ಣ ಸಮಸ್ಯೆಗಳನ್ನು ಮತ್ತುಷ್ಟು ಸಂಕೀರ್ಣಗೊಳಿಸುತ್ತವೆ.

**ಈ. ದೀರ್ಘಾವಧಿ ಹೂಡಿಕೆಗೆ ಉತ್ತೇಜನ:** ಸ್ಥಿರ ವಿನಿಮಯ ದರ ವ್ಯವಸ್ಥೆಯು ದೀರ್ಘಾವದಿ ಹೂಡಿಕೆಗಳನ್ನು ಉತ್ತೇಜಿಸುತ್ತದೆ. ಅಸ್ಥಿರ ವಿನಿಮಯ ದರ ವ್ಯವಸ್ಥೆಯು ದೀರ್ಘಾವಧಿ ಹೂಡಿಕೆಗಳನ್ನು ಉತ್ತೇಜಿಸುವುದಿಲ್ಲ.

**ಮಿತಿಗಳು :** ಸ್ಥಿರ ವಿನಿಮಯ ದರದ ತೊಂದರೆಗಳು ಅಥವಾ ಮಿತಿಗಳು ಈ ಕೆಳಗಿನಂತಿವೆ. ಇವನ್ನು ಸ್ಥಿರ ವಿನಿಮಯದರದ ವಿರುದ್ಧ ವಾದಗಳೆಂದು ಪರಿಗಣಿಸಲಾಗುತ್ತದೆ.

**ಅ. ಪಾವತಿ ಶೇಷ ಸಮಸ್ಯೆಗಳು :** ಸ್ಥಿರ ವಿನಿಮಯ ದರ ವ್ಯವಸ್ಥೆಯಲ್ಲಿ ಪಾವತಿ ಶೇಷವನ್ನು ದೇಶೀಯ ಬೆಲೆಗಳು ಮತ್ತು ಆದಾಯ ಸರಿದೂಗಿಸಬೇಕಾಗುತ್ತದೆ. ಪಾವತಿ ಶೇಷವು ದೇಶವೊಂದರ ಆಯಾತ ಮೌಲ್ಯ ಮತ್ತು ನಿರ್ಯಾತ ಮೌಲ್ಯವನ್ನು ಪ್ರತಿನಿಧಿಸುತ್ತದೆ. ಪಾವತಿಶೇಷ ಸಮಸ್ಯೆ ಕಾಣಿಸಿಕೊಂಡಾಗ ಅದನ್ನು ಸರಿಪಡಿಸಲು ದೇಶದ ಹಣದ ಮೌಲ್ಯೋನ್ನತಿ ಅಥವಾ ಅಪಮೌಲ್ಯ ಮಾಡಬೇಕಾಗುತ್ತದೆ. ಇದು ದೇಶಗಳ ಆರ್ಥಿಕ ಸಾರ್ವಭೌಮತೆಗೆ ಧಕ್ಕೆಯುಂಟು ಮಾಡುತ್ತದೆ.

**ಆ. ಸ್ಥಿರತೆ ಶಾಶ್ವತವಲ್ಲ :** ಜಗತ್ತು ಚಲನಾತ್ಮಕವಾದುದು. ಆದುದರಿಂದ ವಿನಿಮಯ ದರವನ್ನು ಶಾಶ್ವತವಾಗಿ ಸ್ಥಿರವಾಗಿರಿಸಿಕೊಳ್ಳಲು ಸಾಧ್ಯವಿಲ್ಲ. ದೇಶಗಳ ಆರ್ಥಿಕ ನೀತಿಗಳು ವಿಭಿನ್ನವಾಗಿರುವುದರಿಂದ ಉತ್ಪಾದನಾ ವೆಚ್ಚ ಮತ್ತು ಬೆಲೆ ಸಂಬಂಧಗಳು ಯಾವಾಗಲೂ ಒಂದೇ ರೀತಿ ಇರುವುದಿಲ್ಲ. ಹಾಗಾಗಿ ಸ್ಥಿರ ವಿನಿಮಯ ದರವು ದೇಶಗಳ ಕರೆನ್ಸಿಗಳ ನಡುವಣ ನೈಜವಾದ ವೆಚ್ಚ ಮತ್ತು ಬೆಲೆ ಸಂಬಂಧವನ್ನು ಪ್ರತಿಫಲಿಸುವುದಿಲ್ಲ.

೩. **ಆಂತರಿಕ ಸಮಸ್ಯೆಗಳು :** ದೇಶವೊಂದು ವಿನಿಮಯದರವನ್ನು ಸ್ಥಿರವಾಗಿಡಲು ತನ್ನ ಹಿತಾಸಕ್ತಿಗಳನ್ನು ಬಲಿಗೊಡುವ ಪ್ರಮೇಯ ಬರಬಹುದು. ಸ್ಥಿರತೆಗಾಗಿ ಹಣದುಬ್ಬರವನ್ನು ತಡೆಗಟ್ಟಲು ಅದು ಅನೇಕ ಪ್ರಬಲ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಅಂತಹ ಕ್ರಮಗಳಿಂದ ದೇಶೀಯ ಅನುಭೋಗಿಗಳು ಮತ್ತು ಉತ್ಪಾದಕರು ತೊಂದರೆಗಳಿಗೆ ಈಡಾಗುತ್ತಾರೆ.

## ತೇಲುವ ವಿನಿಮಯ ದರ

ತೇಲುವ ವಿನಿಮಯ ದರವು ಮಾರುಕಟ್ಟೆಯಲ್ಲಿ ಮುಕ್ತ ಬೇಡಿಕೆ ಮತ್ತು ಪೂರೈಕೆಗಳ ಶಕ್ತಿಗಳಿಂದ ನಿರ್ಧಾರವಾಗುವ ವಿನಿಮಯದರವಾಗಿರುತ್ತದೆ. ತೇಲುವ ವಿನಿಮಯ ದರವು ಅಸ್ಥಿರ ವಿನಿಮಯ ದರವಾಗಿರುತ್ತದೆ. ದೇಶೀಯ ಮತ್ತು ವಿದೇಶೀಯ ಕರೆನ್ಸಿಗಳ ಸಮಾನತೆಯನ್ನು ಬೇಡಿಕೆ ಮತ್ತು ಪೂರೈಕೆಗಳು ನಿರ್ಧರಿಸಿದರೆ ಅದು ತೇಲುವ ವಿನಿಮಯ ದರ ಎಂದು ಕರೆಸಿಕೊಳ್ಳುತ್ತದೆ.

**ಪ್ರಯೋಜನಗಳು :** ತೇಲುವ ವಿನಿಮಯ ದರದ ಪ್ರಯೋಜನಗಳು ಇವು:

೧. **ನಷ್ಟದಿಂದ ರಕ್ಷಣೆ :** ತೇಲುವ ವಿನಿಮಯ ದರವು ದೇಶಗಳನ್ನು ನಷ್ಟದಿಂದ ರಕ್ಷಿಸುತ್ತದೆ. ಅದು ಬದಲಾವಣೆಗಳಿಗೆ ಆಸ್ಪದ ನೀಡುವುದು ಇದಕ್ಕೆ ಕಾರಣವಾಗಿರುತ್ತದೆ.

೨. **ಸ್ವಾಭಾವಿಕ ವಿನಿಮಯ ದರ :** ಸ್ಥಿರ ವಿನಿಮಯ ದರವು ಅಸ್ವಾಭಾವಿಕವಾದುದು. ಆದರೆ ತೇಲುವ ವಿನಿಮಯ ದರವು ಸಹಜವಾದುದು. ಏಕೆಂದರೆ ಅದು ಬೇಡಿಕೆ ಮತ್ತು ಪೂರೈಕೆಗಳ ಸಹಜ ಅಂತರ್‌ಕ್ರಿಯೆಯಿಂದ ನಿರ್ಧಾರವಾಗುವ ಸಮತೋಲನವಾಗಿರುತ್ತವೆ.

೩. **ಸ್ವಯಂ ನಿರ್ವಹಣೆ :** ತೇಲುವ ವಿನಿಮಯದ ದರವು ಮುಕ್ತವಾಗಿ ನಿರ್ಧಾರ ವಾಗುತ್ತದೆ. ಅದು ಸ್ವಯಂ ನಿರ್ವಹಣಾ ವ್ಯವಸ್ಥೆಯಿಂದ ಪಾವತಿಶೇಷ ಅಸಮತೋಲನವನ್ನು ಸರಿಪಡಿಸುತ್ತದೆ.

೪. **ಆಘಾತಗಳಿಂದ ರಕ್ಷಣೆ :** ತೇಲುವ ವಿನಿಮಯದರವು ದೇಶೀಯ ಆರ್ಥಿಕತೆಯನ್ನು ವಿದೇಶಿ ಆಘಾತಗಳಿಂದ ರಕ್ಷಿಸುತ್ತದೆ. ಆದುದರಿಂದ ತೇಲುವ ವಿನಿಮಯದರವನ್ನು ಆಘಾತ ರಕ್ಷಕ ಎಂದು ಕರೆಯಲಾಗುತ್ತದೆ.

೫. **ತೊಂದರೆ ಸೃಷ್ಟಿಸುವುದಿಲ್ಲ :** ತೇಲುವ ವಿನಿಮಯದರವು ಕರೆನ್ಸಿ ಬ್ಯಾಂಕುಗಳ ಕಾರ್ಯ ನಿರ್ವಹಣೆಗೆ ತೊಂದರೆಗಳನ್ನು ಉಂಟು ಮಾಡಿದ ನಿದರ್ಶನಗಳಿಲ್ಲ. ಆದುದರಿಂದ ತೇಲುವ ವಿನಿಮಯ ದರವು ಸಮಸ್ಯೆಗಳನ್ನು ಸೃಷ್ಟಿಸುವುದಿಲ್ಲ.

೬. **ಸರಳ :** ತೇಲುವ ವಿನಿಮಯ ದರವು ಅತ್ಯಂತ ಸರಳವಾಗಿ ನಿರ್ಧಾರವಾಗುತ್ತದೆ. ಏಕೆಂದರೆ ಅದು ಯಾವುದೇ ಬಾಹ್ಯ ನಿಯಂತ್ರಣಗಳಿಲ್ಲದೆ ಬೇಡಿಕೆ ಮತ್ತು ಪೂರೈಕೆಗಳಿಂದ ನಿರ್ಧರಿಸಲ್ಪಡುತ್ತದೆ.

೭. **ಸಂಗ್ರಹದ ಅಗತ್ಯವಿಲ್ಲ :** ತೇಲುವ ವಿನಿಮಯ ದರದಲ್ಲಿ ವಿದೇಶಿ ವಿನಿಮಯ

ಸಂಗ್ರಹಿಸಿ ಇಟ್ಟುಕೊಳ್ಳಬೇಕಾದ ಅಗತ್ಯವಿಲ್ಲ. ವಿನಿಮಯ ದರ ಬದಲಾಗುತ್ತಿರುವುದರಿಂದ, ಸಂಗ್ರಹ ಇರಿಸಿಕೊಳ್ಳುವವರಿಗೆ ಯಾವುದೇ ಲಾಭವಿರುವುದಿಲ್ಲ.

**ಮಿತಿಗಳು :** ತೇಲುವ ವಿನಿಮಯದ ದರದ ದೋಷಗಳು ಇವು

**ಅ. ಆಂತರಿಕ ಅಸ್ಥಿರತೆ :** ತೇಲುವ ವಿನಿಮಯ ದರವು ಆಂತರಿಕ ಅಸ್ಥಿರತೆಯನ್ನುಂಟು ಮಾಡುತ್ತದೆ. ವಿನಿಮಯ ದರವು ಆಗಾಗ ಬದಲಾಗುತ್ತಿರುವುದು ಇದಕ್ಕೆ ಕಾರಣವಾಗಿರುತ್ತದೆ.

**ಆ. ಸಟ್ಟಾ ವ್ಯಾಪಾರಕ್ಕೆ ಉತ್ತೇಜನ :** ತೇಲುವ ವಿನಿಮಯ ದರವು ಅಸ್ಥಿರ ವಿನಿಮಯ ದರವಾಗಿರುತ್ತದೆ. ವಿನಿಮಯ ದರದ ಅಸ್ಥಿರತೆಯು ಉಹಾಪೋಹಗಳಿಗೆ ಆಸ್ಪದ ನೀಡುತ್ತದೆ. ಸಟ್ಟಾ ವ್ಯಾಪಾರಕ್ಕೆ ಉತ್ತೇಜನ ನೀಡಿ ಇನ್ನಷ್ಟು ಅಸ್ಥಿರತೆಗೆ ಕಾರಣವಾಗುತ್ತದೆ.

**ಇ. ಬಂಡವಾಳದ ಚಾಲನೆ :** ತೇಲುವ ವಿನಿಮಯ ದರ ವ್ಯವಸ್ಥೆಯಲ್ಲಿ ವಿನಿಮಯ ದರ ಕಡಿಮೆಯಿರುವುದರಿಂದ ಬಂಡವಾಳವು ವಿನಿಮಯ ದರ ಹೆಚ್ಚು ಇರುವಲ್ಲಿಗೆ ಪ್ರವಹಿಸುತ್ತಿರುತ್ತದೆ. ಇದರಿಂದಾಗಿ ಆರ್ಥಿಕ ಅಸ್ಥಿರತೆ ಉಂಟಾಗುತ್ತದೆ.

**ಈ. ಹೂಡಿಕೆಗೆ ಅಡ್ಡಿ:** ತೇಲುವ ವಿನಿಮಯ ದರ ವ್ಯವಸ್ಥೆಯು ದೀರ್ಘಕಾಲಿಕ ಹೂಡಿಕೆಯ ಹೆಚ್ಚಳಕ್ಕೆ ಅಡ್ಡಿಯಾಗಿರುತ್ತದೆ. ತೇಲುವ ವಿನಿಮಯ ದರ ವ್ಯವಸ್ಥೆ ಸೃಷ್ಟಿಸುವ ಆಂತರಿಕ ಅಸ್ಥಿರತೆ ಇದಕ್ಕೆ ಕಾರಣವಾಗಿರುತ್ತದೆ.

**ಉ. ಅನಿವಾರ್ಯವಲ್ಲ:** ದೇಶವೊಂದು ಸ್ವಾಭಾವಿಕ ವಿನಿಮಯ ದರವನ್ನು ತಲುಪಲು ತೇಲುವ ವಿನಿಮಯ ದರ ವ್ಯವಸ್ಥೆಯನ್ನು ಅನುಸರಿಸಬೇಕಾಗಿಲ್ಲ. ದೀರ್ಘಾವಧಿಯಲ್ಲಿ ಸ್ಥಿರವಾದ ವಿನಿಮಯ ದರವು ಸ್ವಾಭಾವಿಕ ವಿನಿಮಯ ದರ ಆಗಬಲ್ಲದು. ಅಲ್ಲದೆ ತೇಲುವ ವಿನಿಮಯ ದರವು ಅನೇಕ ಸಮಸ್ಯೆಗಳನ್ನು ಸೃಷ್ಟಿಸುತ್ತದೆ.

ಸದಾ ಸ್ಥಿರವಾಗಿರುವ ಅಥವಾ ಸದಾ ತೇಲುತ್ತಿರುವ ವಿನಿಮಯ ದರಗಳು ದೇಶದ ಹಿತಾಸಕ್ತಿಗಳನ್ನು ಕಾಪಾಡಲಾರವು. ಕೆಲವು ಮಿತಿಗಳೊಳಗೆ ವಿನಿಮಯ ದರಗಳನ್ನು ಬದಲಾಯಿಸಲು ಅವಕಾಶ ಮಾಡಿ ಕೊಡುವುದು ಅಭಿವೃದ್ಧಿಯ ದೃಷ್ಟಿಯಿಂದ ಉತ್ತಮ ಕ್ರಮವಾಗಿರುತ್ತದೆ.

## ಯುರೋ ಪರಿಕಲ್ಪನೆ

ಯುರೋ ಎಂಬುದು ಐರೋಪ್ಯ ಒಕ್ಕೂಟದ ಸಾರ್ವತ್ರಿಕ ಕರೆನ್ಸಿ ಹಣವಾಗಿದೆ. ಅದನ್ನು ೧೯೯೯ರ ಜನವರಿ ಒಂದರಂದು ಅನುಷ್ಠಾನಕ್ಕೆ ತರಲಾಯಿತು. ೨೦೦೨ರ ಜನವರಿ ಒಂದರಿಂದ ಅದು ಐರೋಪ್ಯ ಒಕ್ಕೂಟದ ಸದಸ್ಯ ರಾಷ್ಟ್ರಗಳ ಅಧಿಕೃತ ಚಲಾವಣಾ ಮಾಧ್ಯಮವಾಗಿ ಕಾರ್ಯವೆಸಗುತ್ತಿದೆ.

ಐರೋಪ್ಯ ಒಕ್ಕೂಟವು ಹನ್ನೆರಡು ರಾಷ್ಟ್ರಗಳ ಒಂದು ಆರ್ಥಿಕ ಒಕ್ಕೂಟವಾಗಿದೆ. ೧೯೫೭ರ ಏಪ್ರಿಲ್‌ನಲ್ಲಿ ಆರು ರಾಷ್ಟ್ರಗಳು ಸೇರಿ ಐರೋಪ್ಯ ಸಾಮಾನ್ಯ ಮಾರುಕಟ್ಟೆ ಯೊಂದನ್ನು ರೂಪಿಸಿಕೊಂಡವು. ೧೯೭೩ ರಲ್ಲಿ ಮೂರು ಹೊಸ ರಾಷ್ಟ್ರಗಳು ಸೇರಿ

ಐರೋಪ್ಯ ಆರ್ಥಿಕ ಸಮುದಾಯ ರೂಪುಗೊಂಡಿತು. ಈಗ ಫ್ರಾನ್ಸ್, ಬೆಲ್ಜಿಯಂ, ಹಾಲೆಂಡ್, ಲಕ್ಸೆಂಬರ್ಗ್, ಜರ್ಮನಿ, ಇಟಲಿ, ಇಂಗ್ಲೆಂಡ್, ಐರ್ಲ್ಯಾಂಡ್, ಡೆನ್ಮಾರ್ಕ್, ಗ್ರೀಸ್, ಸ್ಪೈನ್, ಸ್ವೀಡನ್, ಫಿನ್‌ಲ್ಯಾಂಡ್ ಮತ್ತು ಪೋರ್ಚುಗಲ್ಲು - ಐರೋಪ್ಯ ಒಕ್ಕೂಟದ ಪ್ರಮುಖ ಸದಸ್ಯ ರಾಷ್ಟ್ರಗಳಾಗಿವೆ. ೨೦೦೪ರ ಮೇ ೧ ರಂದು ೧೦ ರಾಷ್ಟ್ರಗಳು ಐರೋಪ್ಯ ಒಕ್ಕೂಟದ ಸದಸ್ಯ ರಾಷ್ಟ್ರಗಳಾಗಿವೆ. ಈಗ ಐರೋಪ್ಯ ಒಕ್ಕೂಟದ ಸದಸ್ಯ ರಾಷ್ಟ್ರಗಳ ಒಟ್ಟು ಸಂಖ್ಯೆ ೨೫. ಹೊಸದಾಗಿ ಸದಸ್ಯರಾದ ರಾಷ್ಟ್ರಗಳಿವು: ಪೋಲ್ಯಾಂಡ್, ಹಂಗೇರಿ, ಜೆಕ್ ಗಣರಾಜ್ಯ, ಸ್ಲೋವೇನಿಯಾ, ಲಿಥುವೇನಿಯಾ, ಲ್ಯಾಟ್ವಿಯ, ಎಸ್ಟೋನಿಯಾ, ಸೈಪ್ರಸ್ ಮತ್ತು ಮಾಲ್ಟ. ಆಫ್ರಿಕಾದ ೧೮ ದೇಶಗಳು ಅದರ ಸಹ ಸದಸ್ಯ ರಾಷ್ಟ್ರಗಳಾಗಿವೆ. ಒಕ್ಕೂಟದ ಪ್ರಧಾನ ಕಛೇರಿ ಬೆಲ್ಜಿಯಮ್ಮಿನ ರಾಜಧಾನಿ ಬ್ರಸೆಲ್ಸ್‌ನಲ್ಲಿದೆ.

ಐರೋಪ್ಯ ಒಕ್ಕೂಟದ ಸದಸ್ಯರಾಷ್ಟ್ರಗಳು ಬೇರೆ ಬೇರೆ ಕರೆನ್ಸಿ ಹಣವನ್ನು ಹೊಂದಿದ್ದವು. ಫ್ರಾನ್ಸ್ ಫ್ರಾಂಕುನ್ನು, ಇಂಗ್ಲೆಂಡು ಪೌಂಡು ಸ್ಟರ್ಲಿಂಗನ್ನು, ಜರ್ಮನಿ ಡ್ಯುಷ್ ಮಾರ್ಕನ್ನು, ಇಟಲಿ ಲ್ಯೀರಾವನ್ನು, ಸ್ಪೈನ್ ಪೆಸ್ಟನ್ನು, ಹಾಲೆಂಡು ಗಿಲ್ಡರನ್ನು, ಬೆಲ್ಜಿಯಂ ಬೆಲ್ಜಿಯನ್ ಫ್ರಾಂಕನ್ನು, ಆಸ್ಟ್ರಿಯಾ ಶಿಲ್ಲಿಂಗನ್ನು, ಫಿನ್ಲಂಡ್ ಫಿನ್ನಿಷ್ ಮಾರ್ಕನ್ನು, ಪೋರ್ಚುಗಲ್ಲು ಎಸ್‌ಕ್ಯೂಡೋವನ್ನು ಮತ್ತು ಐರ್ಲ್ಯಾಂಡ್ ಪಂಟ್ ಅನ್ನು ವಿನಿಮಯ ಮಾಧ್ಯಮವಾಗಿ ಬಳಸುತ್ತಿದ್ದವು. ಈಗ ಯುರೋ ಒಂದು ಸಾಮಾನ್ಯ ವಿನಿಮಯ ಮಾಧ್ಯಮವಾಗಿದೆ. ಬಹು ಪ್ರಖ್ಯಾತವಾಗಿದ್ದ ಲೀರಾ, ಡ್ಯುಷ್‌ಮಾರ್ಕ್, ಫ್ರಾಂಕ್‌ನಂತಹ ಕರೆನ್ಸಿಗಳು ಇತಿಹಾಸದ ಪುಟಗಳನ್ನು ಸೇರಿವೆ. ಆದರೆ ಜಗಮೊಂಡ ಇಂಗ್ಲೆಂಡು ಮಾತ್ರ ಇನ್ನೂ ಪೌಂಡು ಸ್ಟರ್ಲಿಂಗನ್ನು ವಿನಿಮಯ ಮಾಧ್ಯಮಾವಾಗಿ ಉಳಿಸಿಕೊಂಡಿದೆ.

**ಪ್ರಯೋಜನಗಳು :** ಯುರೋದ ಪ್ರಯೋಜನಗಳು ಇವು :

**(i) ಆರ್ಥಿಕ ಸುಭದ್ರತೆ :** ಯುರೋ ಐರೋಪ್ಯ ಒಕ್ಕೂಟದ ಸದಸ್ಯ ರಾಷ್ಟ್ರಗಳಲ್ಲಿ ಆರ್ಥಿಕ ಸುಭದ್ರತೆಯನ್ನು ಉಂಟುಮಾಡಿದೆ.

**(ii) ಅಪವ್ಯಯಗಳಿಲ್ಲ :** ಯುರೋದಿಂದಾಗಿ ಕರೆನ್ಸಿಯ ಪರಿವರ್ತನೆಯ ಕಾಲ ದಲ್ಲಾಗುತ್ತಿದ್ದ ಅಪವ್ಯಯಗಳು ತಪ್ಪಿಹೋಗಿದೆ.

**(iii) ಬೆಲೆಗಳ ಏಕರೂಪತೆ :** ರಾಷ್ಟ್ರಗಳಲ್ಲಿ ಬೆಲೆಗಳ ಏಕರೂಪತೆ ಉಂಟಾಗಿದೆ. ಇದರಿಂದಾಗಿ ಪೈಪೋಟಿ ಅಧಿಕವಾಗಿ, ಉತ್ತಮ ಗುಣಮಟ್ಟದ ಸರಕುಗಳು ಸೃಷ್ಟಿಯಾಗುತ್ತಿದೆ.

**(iv) ಬಂಡವಾಳ ಸಂಚಯನ :** ಯುರೋಪು ಬಂಡವಾಳ ಸಂಚಯನಕ್ಕೆ ಉತ್ತೇಜನ ನೀಡುತ್ತಿದೆ. ಪರಿಣಾಮವಾಗಿ ಐರೋಪ್ಯ ಒಕ್ಕೂಟದ ಸದಸ್ಯರಾಷ್ಟ್ರಗಳಲ್ಲಿ ಹೂಡಿಕೆ ಹೆಚ್ಚಾಗಿ ಉದ್ಯೋಗಗಳು ಸೃಷ್ಟಿಯಾಗುತ್ತಲಿವೆ.

**(v) ನಿರ್ಯಾತ ಹೆಚ್ಚಳ :** ಯುರೋ ಐರೋಪ್ಯ ಒಕ್ಕೂಟದ ಸದಸ್ಯ ರಾಷ್ಟ್ರಗಳ ನಿರ್ಯಾತ ಸಾಮಾರ್ಥ್ಯವನ್ನು ಹೆಚ್ಚಿಸಿದೆ. ಏಕ ಕರೆನ್ಸಿ ಉಂಟುಮಾಡಿರುವ ಆರ್ಥಿಕ

ಸುಭದ್ರತೆ ಇದಕ್ಕೆ ಕಾರಣವಾಗಿದೆ.

(vi) **ಹಿಂದುಳಿದ ದೇಶಗಳಿಗೆ ಪ್ರಯೋಜನ :** ಯುರೋದಿಂದಾಗಿ ಒಕ್ಕೂಟಕ್ಕೆ ಸರಕು ಮತ್ತು ಸೇವೆಗಳನ್ನು ನಿರ್ಯಾತ ಮಾಡುವ ಹಿಂದುಳಿದ ದೇಶಗಳಿಗೂ ಪ್ರಯೋಜನವಿದೆ. ಏಕರೂಪ ಕರೆನ್ಸಿಯಿಂದಾಗಿ ಹಿಂದುಳಿದ ದೇಶಗಳ ನಿರ್ಯಾತ ವಹಿವಾಟಿನ ವೆಚ್ಚ ಕಡಿಮೆಯಾಗಿ ಆಯಾತ ಸಾಮರ್ಥ್ಯ ವೃದ್ಧಿಸಿದೆ.

ಯುರೋವು ಈಗ ವಿಶ್ವದ ಬಲಾಢ್ಯ ಕರೆನ್ಸಿಗಳಲ್ಲಿ ಒಂದೆನಿಸಿದೆ. ಅದು ಇನ್ನೂ ಕೆಲವೆ ಸಮಯದಲ್ಲಿ ಡಾಲರಿಗಿಂತಲೂ ಜನಪ್ರಿಯವಾಗಲಿದೆ. ಅಲ್ಲದೆ ಅದು ಇಡೀ ವಿಶ್ವಕ್ಕೆ ಏಕ ಕರೆನ್ಸಿಯೊಂದರ ಅಗತ್ಯವಿದೆಯೆನ್ನುವ ಚಿಂತನೆಯನ್ನು ಹುಟ್ಟು ಹಾಕಿದೆ.

## ೮.೩. ಅಂತಾರಾಷ್ಟ್ರೀಯ ಹಣಕಾಸು ನಿಧಿ (ಐ.ಎಂ.ಎಫ್)

ಅಂತಾರಾಷ್ಟ್ರೀಯ ಹಣಕಾಸು ನಿಧಿಯನ್ನು ಮತ್ತು ವಿಶ್ವ ಬ್ಯಾಂಕನ್ನು ಬ್ರೆಟನ್ ವೂಡ್ಸ್ ಅವಳಿಗಳೆಂದು ಕರೆಯಲಾಗುತ್ತದೆ. ಪ್ರಥಮ ವಿಶ್ವ ಸಮರ (೧೯೧೪-೧೮), ಮಹಾ ಆರ್ಥಿಕ ಮುಗ್ಗಟ್ಟು (೧೯೨೯-೧೯೩೪) ಮತ್ತು ದ್ವಿತೀಯ ವಿಶ್ವಸಮರ (೧೯೩೯-೪೫) ಉಂಟು ಮಾಡಿದ ಆರ್ಥಿಕ ಸಂಕಷ್ಟಗಳನ್ನು ಪರಿಹರಿಸಲು ವಿಶ್ವ ಮಟ್ಟದ ಹಣಕಾಸು ಸಂಸ್ಥೆಗಳು ಅಗತ್ಯವೆನಿಸಿದವು. ೧೯೪೪ ರ ಜುಲೈ ೧ ರಿಂದ ಜುಲೈ ೨೨ ರವರೆಗೆ ಅಮೆರಿಕಾದ ನ್ಯೂ ಹ್ಯಾಂಪ್‌ಶೆಯರಿನ ಬ್ರೆಟನ್‌ವೂಡ್ಸ್‌ನಲ್ಲಿ ವಿಶ್ವ ಹಣಕಾಸು ಸಮಾವೇಶ ವೊಂದು ಜರುಗಿತು. ಅದರ ಫಲಶ್ರುತಿಯಾಗಿ ಅಲ್ಪಾವಧಿ ಆರ್ಥಿಕ ನೆರವು ನೀಡಿಕೆಯ ಉದ್ದೇಶದಿಂದ ಅಂತಾರಾಷ್ಟ್ರೀಯ ಹಣಕಾಸು ನಿಧಿಯನ್ನು ಮತ್ತು ದೀರ್ಘಾವಧಿ ಆರ್ಥಿಕ ನೆರವು ನೀಡಿಕೆಗಾಗಿ ವಿಶ್ವಬ್ಯಾಂಕನ್ನು ಹುಟ್ಟು ಹಾಕಲಾಯಿತು.

ಅಂತಾರಾಷ್ಟ್ರೀಯ ಹಣಕಾಸು ನಿಧಿಯು ೧೯೪೬ರಲ್ಲಿ ರಚನೆಯಾಗಿ ೧೯೪೭ ಮಾರ್ಚ್ ನಿಂದ ಕಾರ್ಯಾರಂಭ ಮಾಡಿತು. ೧೪೮ ಸದಸ್ಯ ಬಲ ಹೊಂದಿರುವ ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಮುಖ್ಯ ಕಾರ್ಯಾಲಯ ಅಮೇರಿಕಾದ ವಾಷಿಂಗ್ಟನ್ ಡಿ.ಸಿ.ಯಲ್ಲಿದೆ.

### ನಿಧಿಯ ಉದ್ದೇಶಗಳು

ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಮುಖ್ಯ ಉದ್ದೇಶಗಳು ಇವು :

**೧. ಆರ್ಥಿಕ ಸಹಕಾರ ಮತ್ತು ಸೌಹಾರ್ದತೆ :** ಶಾಶ್ವತವಾದ ಅಂತಾರಾಷ್ಟ್ರೀಯ ಸಂಸ್ಥೆ ಯೊಂದರ ಮೂಲಕ ಅಂತಾರಾಷ್ಟ್ರೀಯ ವಿತ್ತೀಯ ಸಹಕಾರ ಮತ್ತು ಸೌಹಾರ್ದತೆಗಳನ್ನು ಸಾಧಿಸುವುದು ನಿಧಿಯ ಮುಖ್ಯ ಉದ್ದೇಶವಾಗಿರುತ್ತದೆ. ಅದು ಅಂತಾರಾಷ್ಟ್ರೀಯ ಹಣಕಾಸಿನ ಸಮಸ್ಯೆಗಳನ್ನು ಸಲಹೆ, ಸಹಕಾರ, ಅರಿವು ಮತ್ತು ವಿಚಾರ ವಿನಿಮಯಗಳ ಮೂಲಕ ಪರಿಹರಿಸುವ ಉದ್ದೇಶ ಹೊಂದಿದೆ.

**೨. ವಿನಿಮಯ ದರಗಳ ಸ್ಥಿರತೆ :** ಸದಸ್ಯ ದೇಶಗಳ ನಡುವಿನ ವಿನಿಮಯ ದರಗಳ ನಡುವಿನ ಪೈಪೋಟಿಯನ್ನು ನಿಲ್ಲಿಸಿ, ವಿನಿಯಮ ದರದಲ್ಲಿ ಸ್ಥಿರತೆ ಸ್ಥಾಪಿಸುವುದು ನಿಧಿಯ ಇನ್ನೊಂದು ಉದ್ದೇಶವಾಗಿರುತ್ತದೆ. ಸ್ಥಿರ ವಿನಿಯಮದರವು ಹಣದ ಪರಿವರ್ತನೀಯತೆ ಯನ್ನು ಸರಳ ಮತ್ತು ಸುಲಭಗೊಳಿಸುತ್ತದೆಂದು ನಿಧಿಯು ಭಾವಿಸುತ್ತದೆ.

**೩. ವಿನಿಮಯ ನಿರ್ಬಂಧಗಳ ನಿವಾರಣೆ :** ನಿಧಿಯು ಮುಕ್ತ ವ್ಯಾಪಾರವನ್ನು ಎತ್ತಿ ಹಿಡಿಯುತ್ತದೆ. ಅದಕ್ಕೆ ಅಡ್ಡಿಯಾಗುವ ಎಲ್ಲ ರೀತಿಗಳ ವಿನಿಮಯ ನಿರ್ಬಂಧಗಳನ್ನು ನಿವಾರಿಸುವುದು ನಿಧಿಯ ಉದ್ದೇಶವಾಗಿರುತ್ತದೆ.

**೪. ಬಹುಪಕ್ಷೀಯ ವ್ಯವಸ್ಥೆಯ ನಿರ್ಮಾಣ :** ಬಹು ಪಕ್ಷೀಯ ವ್ಯಾಪಾರ ಮತ್ತು ಪಾವತಿಗಳ ವ್ಯವಸ್ಥೆಯೊಂದನ್ನು ರೂಪಿಸುವುದು ನಿಧಿಯ ಉದ್ದೇಶವಾಗಿರುತ್ತದೆ. ಅಂತಹ ವ್ಯವಸ್ಥೆಯೊಂದು ಅಂತಾರಾಷ್ಟ್ರೀಯ ವ್ಯಾಪಾರವನ್ನು ಮುಕ್ತಗೊಳಿಸುತ್ತದೆ. ಅಥವಾ

ನಿರ್ಬಂಧ ರಹಿತವನ್ನಾಗಿಸುತ್ತದೆಂದು ನಿಧಿಯು ಭಾವಿಸುತ್ತದೆ.

**೫. ಬಹುಪಕ್ಷೀಯ ಪರಿವರ್ತನೆಯ ವ್ಯವಸ್ಥೆ ನಿರ್ಮಾಣ :** ಅಂತಾರಾಷ್ಟ್ರೀಯ ವ್ಯಾಪಾರವು ಸರಳವಾಗಿರಲು ಎಲ್ಲಾ ಕರೆನ್ಸಿಗಳನ್ನು ಒಂದೆಡೆಯಲ್ಲಿ ಸುಲಭವಾಗಿ ಪರಿವರ್ತಿಸಲು ಸಾಧ್ಯವಾಗಬೇಕು. ವಿಶ್ವದ ಎಲ್ಲಾ ದೇಶಗಳ ಕರೆನ್ಸಿಗಳ ಬಹುಪಕ್ಷೀಯ ಪರಿವರ್ತನಾ ವ್ಯವಸ್ಥೆಯೊಂದನ್ನು ನಿರ್ಮಿಸುವುದು ನಿಧಿಯ ಉದ್ದೇಶವಾಗಿರುತ್ತದೆ.

**೬. ಪಾವತಿ ಶೇಷ ಅಸಮತೋಲನ ನಿವಾರಣೆ :** ಸದಸ್ಯ ರಾಷ್ಟ್ರಗಳ ಪಾವತಿ ಶೇಷ ಅಸಮತೋಲನ ನಿವಾರಣೆಯು ನಿಧಿಯ ಪ್ರಮುಖ ಉದ್ದೇಶಗಳಲ್ಲಿ ಒಂದು. ಅದಕ್ಕಾಗಿ ನಿಧಿಯು ವಿದೇಶಿ ವಿನಿಮಯವನ್ನು ಕೊಳ್ಳುವ ಮತ್ತು ಅಗತ್ಯವಿರುವ ದೇಶಗಳಿಗೆ ಮಾರುವ ಕಾರ್ಯವನ್ನು ಮಾಡುತ್ತದೆ.

**೭. ಸಂತುಲಿತ ಬೆಳವಣಿಗೆಗೆ ಉತ್ತೇಜನ :** ಸದಸ್ಯ ದೇಶಗಳ ಸಂತುಲಿತ ಆರ್ಥಿಕ ಬೆಳವಣಿಗೆಗೆ ಉತ್ತೇಜನ ಮತ್ತು ಸಹಾಯ ನೀಡುವುದು ನಿಧಿಯ ಉದ್ದೇಶವಾಗಿರುತ್ತದೆ. ಹಿಂದುಳಿದ ದೇಶಗಳ ಆರ್ಥಿಕಾಭಿವೃದ್ಧಿಗೆ ಮತ್ತು ಉದ್ಯೋಗ ನಿರ್ಮಾಣ ಯೋಜನೆಗಳಿಗೆ ನಿಧಿಯು ನೆರವು ನೀಡುತ್ತದೆ.

**೮. ಹೂಡಿಕೆಯ ಹೆಚ್ಚಳ :** ವಿದೇಶಿ ಬಂಡವಾಳದ ಮೂಲಕ ಸದಸ್ಯರಾಷ್ಟ್ರಗಳ ಆರ್ಥಿಕಾಭಿವೃದ್ಧಿ ಸಾಧಿಸುವುದು ನಿಧಿಯ ಮತ್ತೊಂದು ಉದ್ದೇಶವಾಗಿರುತ್ತದೆ. ಅದಕ್ಕಾಗಿ ಶ್ರೀಮಂತ ದೇಶಗಳು ಬಡರಾಷ್ಟ್ರಗಳಲ್ಲಿ ಬಂಡವಾಳ ಹೂಡುವಂತೆ ನಿಧಿಯು ಉತ್ತೇಜಿಸುತ್ತದೆ.

## ನಿಧಿಯ ಸಂಘಟನೆ

ನಿಧಿಯ ಉದ್ದೇಶಗಳಲ್ಲಿ ನಂಬಿಕೆಯಿರುವ ಮತ್ತು ನಿಯಮಗಳನ್ನು ಗೌರವಿಸುವ ದೇಶಗಳು ಅದರ ಸದಸ್ಯತ್ವ ಸ್ವೀಕರಿಸಬಹುದು. ನಿಧಿಯು ವಿಶ್ವ ಸಂಸ್ಥೆಯೊಡನೆ ಸಂಬಂಧ ಹೊಂದಿರುವ ಸ್ವಾಯತ್ತ ಸಂಘಟನೆಯಾಗಿದೆ.

ಸದಸ್ಯ ರಾಷ್ಟ್ರಗಳ ದೇಣಿಗೆಯಿಂದ ನಿಧಿಗೆ ಹಣಕಾಸು ಬರುತ್ತದೆ. ಸದಸ್ಯ ರಾಷ್ಟ್ರಗಳ ದೇಣಿಗೆಯನ್ನು ಕೋಟಾ ರೂಪದಲ್ಲಿ ನಿಗದಿ ಪಡಿಸಲಾಗುತ್ತದೆ. ದೇಶಗಳ ಆದಾಯ ಮತ್ತು ಅಂತಾರಾಷ್ಟ್ರೀಯ ಸ್ಥಾನಮಾನಗಳನ್ನು ಪರಿಗಣಿಸಿ ಅವುಗಳ ಸದಸ್ಯತ್ವ ಕೋಟಾ ನಿರ್ಧಾರವಾಗುತ್ತದೆ. ಕೋಟಾವನ್ನು ಈ ಕೆಳಗಿನಂತೆ ನಿರ್ಧರಿಸಲಾಗುತ್ತದೆ.

i) ರಾಷ್ಟ್ರೀಯ ಆದಾಯದ ಶೇಕಡಾ ೨

ii) ಚಿನ್ನ ಮತ್ತು ಡಾಲರ್ ನಿಧಿಗಳ ಶೇಕಡಾ ೫

iii) ಸರಾಸರಿ ವಾರ್ಷಿಕ ನಿರ್ಯಾತಗಳ ಶೇಕಡಾ ೧೦

iv) ವಾರ್ಷಿಕ ನಿರ್ಯಾತಗಳಲ್ಲಿ ಶೇ. ೧೦ ರಷ್ಟು ಗರಿಷ್ಠ ಬದಲಾವಣೆ.

ಸಂದರ್ಭಗಳಿಗನುಗುಣವಾಗಿ ಇವುಗಳ ಕೋಟಾದ ಮೊಬಲಗನ್ನು ಬದಲಾಯಿಸುತ್ತವೆ.

ಸದಸ್ಯತ್ವ ಕೋಟಾದ ಶೇ. ೨೫ ಚಿನ್ನದ ರೂಪದಲ್ಲಿ ಮತ್ತು ಶೇ. ೭೫ ಆಯಾ ದೇಶಗಳ ಕರೆನ್ಸಿಯ ರೂಪದಲ್ಲಿ ಆಯಾ ದೇಶಗಳ ಕೇಂದ್ರ ಬ್ಯಾಂಕುಗಳಲ್ಲಿ ಇಟ್ಟಿರಬೇಕು. ಹಾಗಾಗಿ ನಿಧಿಯ ಸುಪರ್ದಿಯಲ್ಲಿ ಸಾಕಷ್ಟು ಚಿನ್ನ ಸಂಗ್ರಹ ಮತ್ತು ವಿದೇಶಿ ವಿನಿಮಯ ಸಂಗ್ರಹವಿರುತ್ತದೆ. ಕೋಟಾವನ್ನು ಐದು ವರ್ಷಗಳಿಗೊಮ್ಮೆ ಮರುನಿಗದಿಗೊಳಿಸಲಾಗುತ್ತದೆ.

**ನಿಧಿಯ ಸಂಘಟನೆಯ ಸ್ವರೂಪ** : ನಿಧಿಯ ಉನ್ನತಾಧಿಕಾರವು ಗವರ್ನರುಗಳ ಮಂಡಳಿಯ ಕೈಯಲ್ಲಿರುತ್ತದೆ. ಗವರ್ನರುಗಳ ಮಂಡಳಿಯಲ್ಲಿ ಪ್ರತಿಯೊಂದು ಸದಸ್ಯದೇಶದ ಒಬ್ಬ ಗವರ್ನರ್ ಮತ್ತು ಒಬ್ಬ ಬದಲಿ ಗವರ್ನರ್ ಇರುತ್ತಾರೆ. ಗವರ್ನರನ ಗೈರು ಹಾಜರಾತಿಯಲ್ಲಿ ಬದಲಿ ಗವರ್ನರ್‌ನು ಕಾರ್ಯ ನಿರ್ವಹಿಸುತ್ತಾನೆ. ನಿಧಿಯ ಸಾರ್ವತ್ರಿಕ ನೀತಿ ನಿಯಮಾವಳಿಗಳನ್ನು ಗವರ್ನರುಗಳ ಮಂಡಳಿಯು ರೂಪಿಸುತ್ತದೆ.

ಗವರ್ನರುಗಳ ಮಂಡಳಿಯು ರೂಪಿಸಿದ ನೀತಿ ನಿಯಮಾವಳಿಗಳನ್ನು ನಿರ್ದೇಶಕರ ಮಂಡಳಿಯು ಅನುಷ್ಠಾನಕ್ಕೆ ತರುತ್ತದೆ. ನಿಧಿಯ ಆಡಳಿತ ಜವಾಬ್ದಾರಿ ನಿರ್ದೇಶಕರ ಮಂಡಳಿಯ ಮೇಲಿರುತ್ತದೆ. ನಿರ್ದೇಶಕರಲ್ಲೊಬ್ಬನ್ನು ಮುಖ್ಯ ಕಾರ್ಯ ನಿರ್ವಾಹಕನನ್ನಾಗಿ ನೇಮಕ ಮಾಡಲಾಗುತ್ತದೆ. ಆತನೂ ಒಳಗೊಂಡಂತೆ ನಿರ್ದೇಶಕರ ಮಂಡಳಿಯ ಒಟ್ಟು ಸದಸ್ಯರ ಸಂಖ್ಯೆ ೨೨ ಆಗಿರುತ್ತದೆ. ನಿಧಿಯ ಮುಖ್ಯ ಕಾರ್ಯಾಲಯವು ಅತ್ಯಧಿಕ ಕೋಟಾ ಹೊಂದಿದ ಸದಸ್ಯ ದೇಶದಲ್ಲಿರಬೇಕು. ಹಾಗಾಗಿ ಅದು ಅಮೇರಿಕಾದ ವಾಷಿಂಗ್ಟನ್ ಡಿ.ಸಿ. ಯಲ್ಲಿದೆ. ಆಯಾ ಸದಸ್ಯ ದೇಶಗಳ ಕೋಟಾಗಳಿಗನುಗುಣವಾಗಿ ಮತದಾನದ ಹಕ್ಕು ಲಭ್ಯವಾಗುತ್ತದೆ.

## ನಿಧಿಯ ಕಾರ್ಯಗಳು

ವಿಶ್ವ ಹಣಕಾಸು ನಿಧಿಯ ಪ್ರಮುಖ ಕಾರ್ಯಗಳಿವು

**೧. ಅಲ್ಪಾವಧಿ ಸಾಲ ಪೂರೈಕೆ :** ನಿಧಿಯು ಅಲ್ಪಾವಧಿ ಸಾಲ ಪೂರೈಕೆಯ ಸಂಸ್ಥೆಯಾಗಿ ಕಾರ್ಯವೆಸಗುತ್ತದೆ. ನಿಧಿಯ ಸಾಲ ವ್ಯವಹಾರಗಳು ತಾಂತ್ರಿಕವಾಗಿ ಕರೆನ್ಸಿಯ ಮಾರಾಟದ ರೂಪವನ್ನು ತಾಳುತ್ತವೆ. ವಿದೇಶಿ ವಿನಿಮಯದ ಅಗತ್ಯವಿರುವ ದೇಶಗಳು ತಮ್ಮ ಹಣವನ್ನು ನೀಡಿ ತಮಗೆ ಬೇಕಾದ ವಿದೇಶಿ ಹಣವನ್ನು ಪಡೆದುಕೊಳ್ಳಬಹುದು. ಪ್ರತಿ ಯೊಂದು ಸದಸ್ಯ ದೇಶವು ಶೇ. ೨೫ರಷ್ಟು ಕೋಟಾವನ್ನು ಚಿನ್ನದ ರೂಪದಲ್ಲಿಡ ಬೇಕಾಗಿರುತ್ತದೆ. ಅಷ್ಟು ಮೊತ್ತದ ಹಣವನ್ನು ಅವು ಸುಲಭವಾಗಿ ಸಾಲ ರೂಪದಲ್ಲಿ ಪಡೆಯುವ ಹಕ್ಕನ್ನು ಹೊಂದಿರುತ್ತದೆ. ಹೆಚ್ಚು ಸಾಲದ ಅಗತ್ಯವಿದ್ದರೆ ಸದಸ್ಯ ದೇಶಗಳು ಕೆಲವು ವಿಧಿ ವಿಧಾನಗಳನ್ನು ಅನುಷ್ಠಾನಕ್ಕೆ ತರಬೇಕಾಗುತ್ತದೆ. ಸಾಲವನ್ನು ಸದಸ್ಯ ದೇಶಗಳು ಮೂರರಿಂದ ಐದು ವರ್ಷದೊಳಗೆ ಮರುಪಾವತಿ ಮಾಡಬೇಕಾಗುತ್ತದೆ.

**೨. ವಿನಿಮಯ ದರ ನಿರ್ಧಾರ :** ನಿಧಿಯ ಸಂವಿಧಾನದ ಪ್ರಕಾರ ಪ್ರತಿಯೊಂದು ಸದಸ್ಯ ದೇಶವು ತನ್ನ ಹಣದ ಸಮಮೌಲ್ಯವನ್ನು ಚಿನ್ನದ ಅಥವಾ ಅಮೆರಿಕಾದ ಡಾಲರು

ರೂಪದಲ್ಲಿ ಘೋಷಿಸಬೇಕು. ಮೂಲಭೂತ ಪಾವತಿಶೇಷ ಅಸಮತೋಲನ ನಿವಾರಣೆಗಾಗಿ ಸಮಮೌಲ್ಯದಲ್ಲಿ ಶೇ. ೨.೨೫ರಷ್ಟು ಬದಲಾವಣೆಗಳನ್ನು ನಿಧಿಗೆ ತಿಳಿಸಿ ಮಾಡಬಹುದಾಗಿದೆ. ಬೇರೆಯಾವುದೆ ಕಾರಣಗಳಿಗಾಗಿ ಸಮಮೌಲ್ಯ ಬದಲಾವಣೆಗೆ ನಿಧಿಯು ಸಮ್ಮತಿಸುವುದಿಲ್ಲ. ನಿಧಿಯ ಒಪ್ಪಿಗೆ ಇಲ್ಲದೆ ಹಣದ ಮೌಲ್ಯಚ್ಛೇದನ ಮಾಡುವಂತಿಲ್ಲ. ಸಮಮೌಲ್ಯವು ನಿಗದಿಯಾದರೆ ವಿನಿಮಯದರ ನಿರ್ಧಾರ ಮಾಡುವುದು ತುಂಬಾ ಸುಲಭ. ಹೀಗೆ ನಿಧಿಯು ಸದಸ್ಯ ದೇಶಗಳು ವಿನಿಮಯ ದರ ನಿರ್ಧರಿಸಲು ಸಹಕರಿಸುತ್ತದೆ. ನಿಧಿಯ ನಿಯಮದ ಪ್ರಕಾರ ಸದಸ್ಯ ದೇಶಗಳು ಬಹುವಿನಿಮಯ ದರ ವ್ಯವಸ್ಥೆಯನ್ನು ಅನುಸರಿಸುವಂತಿಲ್ಲ. ಏಕ ವಿನಿಮಯ ದರ ವ್ಯವಸ್ಥೆ ಅನುಷ್ಠಾನ ದಲ್ಲಿರುವಂತೆ ನಿಧಿಯು ನೋಡಿಕೊಳ್ಳುತ್ತದೆ. ಚಿನ್ನದ ಪ್ರಮಿತಿಯಲ್ಲಿದ್ದ ವಿನಿಮಯ ಸ್ಥಿರತೆಯನ್ನು ಸಾಧಿಸುವುದು ನಿಧಿಯ ಉದ್ದೇಶ ವಾಗಿರುತ್ತದೆ.

**೩. ಪಾವತಿಶೇಷ ಸಮಸ್ಯೆ ನಿವಾರಣೆ :** ಸದಸ್ಯ ದೇಶಗಳ ಪಾವತಿಶೇಷ ಸಮಸ್ಯೆಗಳನ್ನು ನಿವಾರಿಸಿ ಸಮತೋಲನ ಕಾಯ್ದು ಕೊಳ್ಳುವಂತೆ ನೋಡಿಕೊಳ್ಳುವುದು ನಿಧಿಯ ಅತ್ಯಂತ ಪ್ರಮುಖ ಕಾರ್ಯಗಳಲ್ಲೊಂದಾಗಿದೆ. ಪಾವತಿಶೇಷ ಸಮತೋಲನ ಕಾಯ್ದುಕೊಳ್ಳಲು ಅಗತ್ಯವಿರುವ ಹಣವನ್ನು ನಿಧಿಯು ಒದಗಿಸಿಕೊಡುತ್ತದೆ. ಈ ಕಾರಣಕ್ಕಾಗಿ ವಿನಿಮಯ ದರದಲ್ಲಿ ಸ್ಥಿರತೆ ಉಳಿಸಲು ನಿಧಿಯು ಪ್ರಯತ್ನಿಸುತ್ತದೆ. ಅನಿವಾರ್ಯ ಸಂದರ್ಭಗಳಲ್ಲಿ ವಿದೇಶಿ ವಿನಮಯ ದರದಲ್ಲಿ ಗರಿಷ್ಠ ಶೇ೧೦ ರಷ್ಟು ಬದಲಾವಣೆಗಳಿಗೆ ನಿಧಿಯು ಅನುಮತಿ ನೀಡುತ್ತದೆ. ಆದರೆ ಸ್ಥಿರ ವಿನಮಯ ದರದ ಅಗತ್ಯವನ್ನು ಸದಸ್ಯ ರಾಷ್ಟ್ರಗಳಿಗೆ ತಿಳಿಸಿ, ವಿನಿಮಯ ದರ ಸ್ಥಿರತೆ ಕಾಯ್ದುಕೊಳ್ಳಲು ಎಲ್ಲಾ ಪ್ರಯತ್ನಗಳನ್ನು ಮಾಡುತ್ತದೆ.

**೪. ದ್ರವ್ಯತೆಯ ಸಮಸ್ಯೆ ನಿವಾರಣೆ :** ಅಂತಾರಾಷ್ಟ್ರೀಯವಾಗಿ ಹೆಚ್ಚು ಬೇಡಿಕೆಯುಳ್ಳ ಪೌಂಡು, ಡಾಲರು, ಯುರೋ, ಯೆನ್-ಇತ್ಯಾದಿ ಕರೆನ್ಸಿಗಳ ಕೊರತೆಯನ್ನು ಅಂತಾರಾಷ್ಟ್ರೀಯ ದ್ರವ್ಯತೆಯ ಸಮಸ್ಯೆಯೆಂದು ಕರೆಯಲಾಗುತ್ತದೆ. ಕೆಲವು ಕರೆನ್ಸಿಗಳ ಬೇಡಿಕೆಯ ಹೆಚ್ಚಳ ಮತ್ತು ಸಂಗ್ರಹ ಪ್ರವೃತ್ತಿಯ ಆಧಿಕ್ಯ ಅಂತಾರಾಷ್ಟ್ರೀಯ ದ್ರವ್ಯತೆಯ ಸಮಸ್ಯೆಗೆ ಕಾರಣ ವಾಗಿರುತ್ತದೆ. ಕರೆನ್ಸಿಗಳನ್ನು ಕೊರತೆ ಕರೆನ್ಸಿಗಳೆಂದು ಕರೆಯುವ ಹಕ್ಕು ನಿಧಿಗಿರುತ್ತದೆ. ಕೊರತೆ ಕರೆನ್ಸಿಯನ್ನು ನಿಧಿಯು ಪೂರೈಕೆ ಮಾಡಬೇಕಾಗುತ್ತದೆ. ಅದಕ್ಕಾಗಿ ನಿಧಿಯು ಕೊರತೆ ಕರೆನ್ಸಿಯ ಪಡಿತರ ವ್ಯವಸ್ಥೆ ಮಾಡಬಹುದು ಅಥವಾ ಕೊರತೆ ಕರೆನ್ಸಿಯ ಮರು ಮೌಲ್ಯಮಾಪನಕ್ಕೆ ಆದೇಶ ನೀಡಬಹುದು. ಆಗ ಕರೆನ್ಸಿಯ ಕೊರತೆ ಸಮಸ್ಯೆ ನಿವಾರಣೆಯಾಗುತ್ತದೆ.

**೫. ವಿನಿಮಯ ನಿಯಂತ್ರಣ ನಿವಾರಣೆ :** ನಿಧಿಯು ಅಂತಾರಾಷ್ಟ್ರೀಯ ವ್ಯಾಪಾರವನ್ನು ನಿರ್ಬಂಧರಹಿತವಾಗಿಸುವ ಜವಾಬ್ದಾರಿ ಹೊಂದಿರುತ್ತದೆ. ಸದಸ್ಯ ದೇಶಗಳು ವ್ಯಾಪಾರ ಮತ್ತು ವಿನಿಮಯ ನಿಯಂತ್ರಣ ಹೇರಕೊಡದೆಂದು ನಿಧಿಯು ಆಗ್ರಹ ಪಡಿಸುತ್ತದೆ. ವ್ಯಾಪಾರದ ಮತ್ತು ವಿನಿಮಯ ದರದ ಏರಿಳಿತಗಳಿಗೆ ವ್ಯಾಪಾರ ಮತ್ತು ವಿನಿಮಯ

ನಿರ್ಬಂಧಗಳೆ ಕಾರಣವೆಂದು ನಿಧಿಯು ಭಾವಿಸುತ್ತದೆ. ಹಾಗಾಗಿ ನಿಧಿಯು ಎಲ್ಲಾ ರೀತಿಯ ವ್ಯಾಪಾರ ಮತ್ತು ವಿನಿಮಯ ನಿರ್ಬಂಧಗಳನ್ನು ತೊಡೆದು ಹಾಕಲು ಯತ್ನಿಸುತ್ತದೆ.

೬. **ತಾಂತ್ರಿಕ ಸಹಾಯ :** ಸದಸ್ಯ ದೇಶಗಳಿಗೆ ತಾಂತ್ರಿಕ ನೆರವು ನೀಡುವುದು ನಿಧಿಯ ಇನ್ನೊಂದು ಕಾರ್ಯವಾಗಿರುತ್ತದೆ. ನಿಧಿಯು ಎರಡು ರೀತಿಗಳಲ್ಲಿ ತಾಂತ್ರಿಕ ಸಹಾಯ ನೀಡುತ್ತದೆ.

(i) ನಿಧಿಯು ತನ್ನಲ್ಲಿರುವ ವಿಶೇಷ ತಜ್ಞರ ಮತ್ತು ಪರಿಣಿತರ ಸೇವೆಗಳು ತನ್ನ ಸದಸ್ಯ ದೇಶಗಳಿಗೆ ಲಭ್ಯವಾಗುವಂತೆ ಮಾಡುತ್ತದೆ.

(ii) ನಿಧಿಯು ಬೇರೆ ಕಡೆಗಳಿಂದ ತಜ್ಞರನ್ನು ಕರೆಸಿ ಸದಸ್ಯ ದೇಶಗಳ ಸಮಸ್ಯೆಗಳ ನಿವಾರಣೆಗೆ ಸಹಕರಿಸುತ್ತದೆ.

ಅಂತಾರಾಷ್ಟ್ರೀಯ ಹಣಕಾಸು ನಿಧಿಯು (i) ಕೇಂದ್ರೀಯ ಬ್ಯಾಂಕ್ ಸೇವೆಗಳ ವಿಭಾಗ ಮತ್ತು (ii) ಖಜಾನೆ ವ್ಯವಹಾರಗಳ ವಿಭಾಗಗಳನ್ನು ಹೊಂದಿದೆ. ಮೊದಲನೆಯದು ಸದಸ್ಯ ದೇಶಗಳ ಕೇಂದ್ರ ಬ್ಯಾಂಕಿನ ಕಾರ್ಯ ನಿರ್ವಹಣೆಗೆ ಸಹಾಯ ಮಾಡುತ್ತದೆ. ಎರಡನೆಯದು ಸದಸ್ಯ ದೇಶಗಳ ಖಜಾನೆ ವ್ಯವಹಾರಗಳಲ್ಲಿ ಸಹಕರಿಸುತ್ತದೆ.

ನಿಧಿಯು ಕರೆನ್ಸಿಗಳನ್ನು ಕೊಳ್ಳುವ ಮತ್ತು ಮಾರುವ ಕೆಲಸ ಮಾಡುತ್ತದೆ. ಅಂತಾರಾಷ್ಟ್ರೀಯ ಹಣಕಾಸು ನಿಧಿಯನ್ನು ಚಿನ್ನದ ಮತ್ತು ವಿದೇಶಿ ವಿನಿಮಯದ ಜಲಾಶಯವೆಂದು ಕರೆಯಲಾಗುತ್ತದೆ. ನಿಧಿಗೆ ಕೇಂದ್ರ ಬ್ಯಾಂಕುಗಳ ಬ್ಯಾಂಕು ಎಂಬ ಹೆಸರಿದೆ. ಕೇಂದ್ರ ಬ್ಯಾಂಕುಗಳು ವಾಣಿಜ್ಯ ಬ್ಯಾಂಕುಗಳ ಮೀಸಲು ನಗದು ಹಣವನ್ನು ತಮ್ಮಲ್ಲಿಟ್ಟುಕೊಂಡು ತುರ್ತುಪರಿಸ್ಥಿತಿಯಲ್ಲಿ ವಾಣಿಜ್ಯ ಬ್ಯಾಂಕುಗಳಿಗೆ ಸಹಾಯ ಮಾಡುತ್ತವೆ. ಅದೇ ರೀತಿಯಲ್ಲಿ ನಿಧಿಯು ಕೇಂದ್ರ ಬ್ಯಾಂಕುಗಳಿಂದ ಸಂಪನ್ಮೂಲಗಳನ್ನು ಸಂಗ್ರಹಿಸುತ್ತದೆ. ಕೇಂದ್ರ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳ ಉದರಿ ನೀತಿಯನ್ನು ನಿಯಂತ್ರಿಸುವ ಅಧಿಕಾರ ಹೊಂದಿವೆ. ಆದರೆ ನಿಧಿಗೆ ಸದಸ್ಯ ದೇಶಗಳ ಆರ್ಥಿಕ ಅಥವಾ ವಿತ್ತೀಯ ನೀತಿಗಳನ್ನು ನಿಯಂತ್ರಿಸುವ ಅಧಿಕಾರವಿರುವುದಿಲ್ಲ. ಅಂತಾರಾಷ್ಟ್ರೀಯ ಹಣಕಾಸು ನಿಧಿಯು ವಿನಿಮಯ ದರಗಳ ವ್ಯವಸ್ಥಿತ ಹೊಂದಾಣಿಕೆಯ ಮೂಲಕ ಬಹುಪಾವತಿಯ ವ್ಯವಸ್ಥೆಯನ್ನು ಉಳಿಸಿಕೊಳ್ಳಲು ಯತ್ನಿಸುತ್ತದೆ.

**'ವಿಶೇಷ ಪಡೆಯುವ ಹಕ್ಕು'**

ಅಂತಾರಾಷ್ಟ್ರೀಯ ದ್ರವ್ಯತೆಯ ಸಮಸ್ಯೆಯು ಅಂತಾರಾಷ್ಟ್ರೀಯ ಹಣಕಾಸು ನಿಧಿಯನ್ನು ಕಾಡುತ್ತಿದೆ. ಕರೆನ್ಸಿಗಳ ಬೇಡಿಕೆಯು ಪೂರೈಕೆಗಿಂದ ಹೆಚ್ಚಾದಾಗ ಉಂಟಾಗುವ ಸಮಸ್ಯೆಯನ್ನು ಅಂತಾರಾಷ್ಟ್ರೀಯ ದ್ರವ್ಯತೆಯ ಸಮಸ್ಯೆಯೆಂದು ಕರೆಯಲಾಗುತ್ತದೆ. ಈ ಸಮಸ್ಯೆಯ ಪರಿಹಾರಕ್ಕಾಗಿ ನಿಧಿಯು ಅನೇಕ ಕ್ರಮಗಳನ್ನು ಕೈಗೊಂಡಿದೆ. 'ವಿಶೇಷ ಪಡೆಯುವ ಹಕ್ಕಿ'ನ ಅನುಷ್ಠಾನ ಅವುಗಳಲ್ಲಿ ಒಂದು.

ಅಂತಾರಾಷ್ಟ್ರೀಯ ದ್ರವ್ಯತೆಯ ಸಮಸ್ಯೆ ಈ ಕೆಳಗಿನ ಕಾರಣಗಳಿಂದಾಗಿ ಉದ್ಭವಿಸಿದೆ:

i) ಅಂತಾರಾಷ್ಟ್ರೀಯ ವ್ಯಾಪಾರದ ಹೆಚ್ಚಳದಿಂದ ಚಿನ್ನ ಮತ್ತು ವಿದೇಶಿ ವಿನಿಮಯಗಳ ಬೇಡಿಕೆ ಹೆಚ್ಚಾದದ್ದು.

ii) ಚಿನ್ನದ ಜಾಗತಿಕ ಉತ್ಪಾದನೆ ಕಡಿಮೆಯಾದದ್ದು.

iii) ಅಮೇರಿಕನ್ ಡಾಲರು ಮತ್ತು ಇಂಗ್ಲೀಷ್ ಪೌಂಡಿನ ಮೇಲಣ ಅವಲಂಬನೆ ಅಧಿಕವಾದದ್ದು.

iv) ಬಡ ರಾಷ್ಟ್ರಗಳ ಅಭಿವೃದ್ಧಿಗಾಗಿ ವಿದೇಶಿ ವಿನಿಮಯದ ಬೇಡಿಕೆ ಹೆಚ್ಚಾದದ್ದು.

ಅಂತಾರಾಷ್ಟ್ರೀಯ ದ್ರವ್ಯತೆ ಸಮಸ್ಯೆ ನಿವಾರಣೆಗೆ ಅಂತಾರಾಷ್ಟ್ರೀಯ ಹಣಕಾಸು ನಿಧಿ ಕಂಡುಕೊಂಡ ಪರಿಹಾರ ಕ್ರಮಗಳಲ್ಲಿ 'ವಿಶೇಷ ಪಡೆಯುವ ಹಕ್ಕು' ಅತ್ಯಂತ ಪ್ರಮುಖವಾದದ್ದು ಮತ್ತು ಪ್ರಭಾವಶಾಲಿಯಾದುದು. ಇದು ಅಮೇರಿಕಾ, ಜರ್ಮನಿ, ಫ್ರಾನ್ಸ್, ಬ್ರಿಟನ್, ಕೆನಡಾ, ಇಟಲಿ, ಜಪಾನ್ ಮತ್ತು ಸ್ವೀಡನ್‌ಗಳು ಸೂಚಿಸಿದ ಕ್ರಮವಾಗಿದೆ. ನಿಧಿಯ ಸದಸ್ಯ ದೇಶಗಳು ಅಗತ್ಯಬಿದ್ದಾಗ ಅಗತ್ಯವಿರುವ ಕರೆನ್ಸಿಯನ್ನು ಪಡೆಯಲು ಅವಕಾಶ ಮಾಡಿಕೊಡುವ ಈ ವ್ಯವಸ್ಥೆಯನ್ನು ವಿಶೇಷ ಪಡೆಯುವ ಹಕ್ಕುಗಳು ಎಂದು ಕರೆಯಲಾಯಿತು. ಈ ಹಕ್ಕುಗಳ ಅನ್ವಯ ಸದಸ್ಯ ದೇಶಗಳಿಗೆ ಲಭ್ಯವಾಗುವ ವಿದೇಶಿ ಹಣ ಪ್ರಮಾಣವನ್ನು ಸೂಚಿಸಲು ಎಸ್.ಡಿ.ಆರ್. ಯೂನಿಟ್ಟುಗಳನ್ನು ಬಳಸಲಾಯಿತು.

೧೯೬೯ ರ ಜುಲೈ ೨೮ ರಂದು ಎಸ್.ಡಿ. ಆರ್. ನಿಧಿಯನ್ನು ನಿರ್ಮಿಸಲಾಯಿತು. ಆಗ ಒಂದು ಡಾಲರಿನ ಸುವರ್ಣ ಸಮ ಮೌಲ್ಯವನ್ನು ಎಸ್.ಡಿ. ಆರ್. ಮೌಲ್ಯವೆಂದು ನಿರ್ಧರಿಸಲಾಯಿತು. (೧ ಎಸ್.ಡಿ.ಆರ್. = ೦.೮೮೮೬೭೧ ಗ್ರಾಮ್ ಉತ್ತಮ ಚಿನ್ನ).

ಎಸ್.ಡಿ.ಆರ್. ಯೋಜನೆ ೧೯೭೦ ರ ಜನವರಿ ೧ ರಿಂದ ಅನುಷ್ಠಾನಕ್ಕೆ ಬಂತು. ಎಸ್.ಡಿ.ಆರ್.ಗಳನ್ನು ಕೇಂದ್ರ ಬ್ಯಾಂಕುಗಳ ನಡುವಣ ಅಂತಾರಾಷ್ಟ್ರೀಯ ಋಣಗಳನ್ನು ತೀರಿಸುವ ಸಾಧನಗಳೆಂದು ಪರಿಗಣಿಸಲಾಗುತ್ತದೆ. ಅವುಗಳಿಗೆ ಕಾಗದದ ಚಿನ್ನವೆಂಬ ಹೆಸರು ಕೂಡಾ ಇದೆ. ಎಸ್.ಡಿ.ಆರ್.ಗಳ ನಿರ್ವಹಣೆಗಾಗಿ ಎಸ್.ಡಿ.ಆರ್. ಖಾತೆಯೊಂದನ್ನು ತೆರೆಯಲಾಯಿತು.

**ಕಾರ್ಯ ನಿರ್ವಹಣೆ :** ಎಸ್.ಡಿ.ಆರ್. ಒಂದು ವಿಶೇಷ ಹಣ ಪಡೆಯುವ ಹಕ್ಕನ್ನು ಸದಸ್ಯ ದೇಶಗಳಿಗೆ ನೀಡುವ ಯೋಜನೆಯಾಗಿರುತ್ತದೆ. ಈ ಯೋಜನೆಯಲ್ಲಿ ಪಾಲ್ಗೊಳ್ಳ ಬಯಸುವ ದೇಶಗಳಿಗೆ ಪ್ರತಿ ಜನವರಿ ತಿಂಗಳಲ್ಲಿ ನಿರ್ದಿಷ್ಟ ಸಂಖ್ಯೆಯ ಎಸ್.ಡಿ.ಆರ್.ಗಳನ್ನು ನೀಡಲಾಗುತ್ತದೆ. ಆರಂಭದಲ್ಲಿ ಸದಸ್ಯ ದೇಶಗಳ ಕೋಟಾಗಳ ಆಧಾರದಲ್ಲಿ ಎಸ್.ಡಿ.ಆರ್. ಗಳನ್ನು ನೀಡಲಾಗುತ್ತಿತ್ತು. ಈಗ ಕ್ರಮ ಬದಲಾಗಿದೆ. ಎಸ್.ಡಿ.ಆರ್. ಬೇಕಾಗಿರುವ ಸದಸ್ಯ ದೇಶಗಳು ತಮ್ಮ ಬೇಡಿಕೆಯನ್ನು ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಪ್ರಧಾನ ಆಡಳಿತ ನಿರ್ದೇಶಕನಿಗೆ ಸಲ್ಲಿಸಬೇಕು. ಆತ ತನ್ನ ಸೂಚನೆಯೊಡನೆ ಈ ಬೇಡಿಕೆಯನ್ನು

ಗವರ್ನರರ ಮಂಡಳಿಯ ಮುಂದಿಡುತ್ತಾನೆ. ಯಾವ ದೇಶಕ್ಕೆ ಎಷ್ಟು ಎಸ್.ಡಿ.ಆರ್.ಗಳನ್ನು ನೀಡಬೇಕೆಂಬುದನ್ನು ಗವರ್ನರರ ಮಂಡಳಿ ನಿರ್ಧರಿಸುತ್ತದೆ. ಎಸ್.ಡಿ.ಆರ್.ನಲ್ಲಿ ಪಾಲ್ಗೊಳ್ಳುವ ಸದಸ್ಯದೇಶಗಳು ಅಂತರಾಷ್ಟ್ರೀಯ ಹಣಕಾಸು ನಿಧಿ ಸೂಚಿಸಿದಾಗ, ಎಸ್.ಡಿ.ಆರ್.ಗೆ ಬದಲಾಗಿ ಇನ್ನೊಂದು ದೇಶಕ್ಕೆ ತನ್ನ ಕರೆನ್ಸಿ ಹಣವನ್ನು ಕೊಡಬೇಕಾಗುತ್ತದೆ.

ಉದ್ದೇಶಗಳು : ಎಸ್.ಡಿ.ಆರ್. ನಾಲ್ಕು ಉದ್ದೇಶಗಳಿಗೆ ಬಳಕೆಯಾಗುತ್ತದೆ.

**i) ವರ್ಗಾವಣೆ :** ಸದಸ್ಯ ದೇಶವೊಂದು ಇನ್ನೊಂದು ಸದಸ್ಯ ದೇಶಕ್ಕೆ ತನ್ನಲ್ಲಿರುವ ಎಸ್.ಡಿ.ಆರ್. ಗಳನ್ನು ವರ್ಗಾಯಿಸಿ ಸಮಾನ ಮೊತ್ತದ ಕರೆನ್ಸಿ ಹಣವನ್ನು ಪಡೆಯಬಹುದು. ಇದು ತಕ್ಷಣದ ವ್ಯವಹಾರವಾಗಿರುತ್ತದೆ.

**ii) ಮುಂದಣ ವ್ಯವಹಾರ :** ಸದಸ್ಯ ದೇಶವೊಂದು ಇನ್ನೊಂದು ಸದಸ್ಯ ದೇಶದ ನಿದಿಷ್ಟ ಮೊತ್ತದ ಕರೆನ್ಸಿಗೆ ಬದಲಾಗಿ, ಭವಿಷ್ಯದ ಯಾವುದಾದರೊಂದು ನಿಗದಿತ ದಿನ, ನಿದಿಷ್ಟ ಪ್ರಮಾಣದ ಎಸ್.ಡಿ.ಆರ್. ವಿನಿಮಯ ಮಾಡಿಕೊಳ್ಳಬಹುದು.

**iii) ಸಾಲ ವ್ಯವಹಾರ :** ಎಸ್.ಡಿ.ಆರ್. ಗಳನ್ನು ಸಾಲದ ಅಸಲು ಮತ್ತು ಬಡ್ಡಿ ಪಾವತಿಗೆ ಬಳಸಬಹುದು.

**iv) ಇತರ ವ್ಯವಹಾರಗಳು :** ಎಸ್.ಡಿ.ಆರ್.ಗಳನ್ನು ಇತರ ವ್ಯವಹಾರಗಳಲ್ಲೂ ಬಳಸಬಹುದು. ಮುಖ್ಯವಾಗಿ ಋಣಗಳ ಇತ್ಯರ್ಥಕ್ಕೆ, ಸಾಲಗಳ ಜಾಮೀನಿಗೆ ಮತ್ತು ದೇಣಿಗೆ ನೀಡಲು ಕೂಡಾ ಎಸ್.ಡಿ.ಆರ್. ಬಳಕೆಯಾಗುತ್ತದೆ.

ವಿಶ್ವದ ಪ್ರಮುಖ ರಾಷ್ಟ್ರಗಳಿಂದ ಕೂಡಿರುವ ಇಪ್ಪತ್ತರ ಸಮಿತಿಯು ಚಿನ್ನದ ಸ್ಥಾನದಲ್ಲಿ ಎಸ್.ಡಿ.ಆರ್‌ಗಳನ್ನು ಅಂತಾರಾಷ್ಟ್ರೀಯ ಮೂಲ ಮೌಲ್ಯ ಘಟಕವಾಗಿ ಬಳಸಲು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸಿನಂತೆ ಈಗ ಎಸ್.ಡಿ.ಆರ್.ಗಳನ್ನು ಅಂತಾರಾಷ್ಟ್ರೀಯ ಮೂಲ ಮೌಲ್ಯ ಘಟಕವಾಗಿ ಬಳಸಲಾಗುತ್ತದೆ. ಅಮೇರಿಕಾ, ಜರ್ಮನಿ, ಫ್ರಾನ್ಸ್, ಜಪಾನ್ ಮತ್ತು ಇಂಗ್ಲೆಂಡುಗಳ ಕರೆನ್ಸಿ ಹಣದ ಸರಾಸರಿ ಮೌಲ್ಯವನ್ನು ಅವಲಂಬಿಸಿ ಎಸ್.ಡಿ. ಆರ್.ನ ಮೌಲ್ಯ ನಿರ್ಧಾರವಾಗುತ್ತದೆ. ಐದು ವರ್ಷಗಳಿಗೊಮ್ಮೆ ಎಸ್.ಡಿ.ಆರ್.ಗಳ ಮೌಲ್ಯ ನಿರ್ಣಯಿಸಲಾಗುತ್ತದೆ. ಈ ಎಸ್.ಡಿ.ಆರ್. ಅಂತಾರಾಷ್ಟ್ರೀಯ ಆರ್ಥಿಕ ವ್ಯವಹಾರಗಳಲ್ಲಿ ಅತ್ಯಂತ ಪ್ರಮುಖ ಪಾತ್ರ ನಿರ್ವಹಿಸುತ್ತದೆ.

## ೮.೪. ವಿಶ್ವಬ್ಯಾಂಕು (ಐ.ಬಿ.ಆರ್.ಡಿ)

ವಿಶ್ವಬ್ಯಾಂಕಿನ ಮೂಲ ಹೆಸರು ಪುನಾರಚನೆ ಮತ್ತು ಅಭಿವೃದ್ಧಿಗಾಗಿರುವ ಅಂತಾರಾಷ್ಟ್ರೀಯ ಬ್ಯಾಂಕು. ವಿಶ್ವ ಸಮರದಿಂದ ಛಿದ್ರವಾಗಿ ಹೋಗಿದ್ದ ಆರ್ಥಿಕತೆಗಳನ್ನು ಪುನಾರಚಿಸುವುದು ಅದರ ಮೂಲೋದ್ದೇಶ. ಅಂತಾರಾಷ್ಟ್ರೀಯ ಹಣಕಾಸು ನಿಧಿಯೊಂದಿಗೆ ಸ್ಥಾಪನೆಯಾಗಿ ಕಾರ್ಯಾರಂಭ ಮಾಡಿದ ವಿಶ್ವಬ್ಯಾಂಕನ್ನು ಬ್ರೆಟನ್‌ವುಡ್ಸ್ ಅವಳಿಗಳಲ್ಲೊಂದೆಂದು ಕರೆಯಲಾಗುತ್ತದೆ. ಅಂತಾರಾಷ್ಟ್ರೀಯ ಹಣಕಾಸು ನಿಧಿಯು ಮೂರರಿಂದ ಐದು ವರ್ಷಗಳವರೆಗಿನ ಅಲ್ಪಾವಧಿ ಸಾಲವನ್ನು ನೀಡುತ್ತದೆ. ವಿಶ್ವಬ್ಯಾಂಕು ೧೫ ರಿಂದ ೨೫ ವರ್ಷಗಳ ವರೆಗಿನ ದೀರ್ಘಾವಧಿ ಅಭಿವೃದ್ಧಿ ಸಾಲಗಳನ್ನು ನೀಡುತ್ತದೆ. ಅದು ವಿಶ್ವಸಂಸ್ಥೆಯ ಒಂದು ವಿಶೇಷ ಏಜೆನ್ಸಿಯಾಗಿ ಕೆಲಸ ನಿರ್ವಹಿಸುತ್ತಿದೆ. ೧೯೪೬ರ ಜೂನಿನಿಂದ ಕಾರ್ಯಾರಂಭ ಮಾಡಿದ ವಿಶ್ವಬ್ಯಾಂಕಿನ ಕೇಂದ್ರ ಕಛೇರಿ ಅಮೇರಿಕಾದ ವಾಷಿಂಗ್ಟನ್ ಡಿ.ಸಿ.ಯಲ್ಲಿದ್ದೆ. ವಿಶ್ವಬ್ಯಾಂಕಿನ ಉದ್ದೇಶಗಳು.

ವಿಶ್ವಬ್ಯಾಂಕಿನ ಮುಖ್ಯ ಉದ್ದೇಶಗಳು ಇವು :

**೧. ಪುನಾರಚನೆ ಮತ್ತು ಅಭಿವೃದ್ಧಿ :** ಉತ್ಪಾದಕ ಉದ್ದೇಶಗಳಿಗೆ ಹೂಡಿಕೆ ಬಂಡವಾಳ ಒದಗಿಸಿ, ಸದಸ್ಯದೇಶಗಳ ಆರ್ಥಿಕತೆಗಳನ್ನು ಪುನಾರಚಿಸುವುದು ಮತ್ತು ಅಭಿವೃದ್ಧಿ ಪಡಿಸುವುದು ವಿಶ್ವ ಬ್ಯಾಂಕಿನ ಪ್ರಧಾನ ಉದ್ದೇಶವಾಗಿದೆ. ಅಭಿವೃದ್ಧಿ ಉದ್ದೇಶಗಳಿಗಾಗಿ ಅದು ದೀರ್ಘಾವಧಿ ಸಾಲಗಳನ್ನು ನೀಡುತ್ತದೆ.

**೨. ಖಾಸಗಿ ಹೂಡಿಕೆಗೆ ಉತ್ತೇಜನ :** ಸದಸ್ಯ ದೇಶಗಳಲ್ಲಿ ಖಾಸಗಿ ವಿದೇಶಿ ಹೂಡಿಕೆಗಳನ್ನು ಉತ್ತೇಜಿಸುವುದು ವಿಶ್ವಬ್ಯಾಂಕಿನ ಇನ್ನೊಂದು ಉದ್ದೇಶವಾಗಿದೆ. ಖಾಸಗಿ ಬಂಡವಾಳ ಲಭ್ಯವಾಗದಿರುವಾಗ ವಿಶ್ವಬ್ಯಾಂಕು ತನ್ನ ಸ್ವಂತ ಬಂಡವಾಳವನ್ನು ಉತ್ಪಾದಕ ಉದ್ದೇಶಗಳಿಗೆ ಸಾಲವಾಗಿ ನೀಡುತ್ತದೆ.

**೩. ದೀರ್ಘಾವಧಿ ಸಂತುಲಿತ ಬೆಳವಣಿಗೆ :** ಅಂತಾರಾಷ್ಟ್ರೀಯ ವ್ಯಾಪಾರದ ದೀರ್ಘಾವಧಿ ಸಂತುಲಿತ ಬೆಳವಣಿಗೆ ಸಾಧಿಸುವುದು ಮತ್ತು ಪಾವತಿಶೇಷ ಸಮತೋಲನ ಕಾಯ್ದುಕೊಳ್ಳುವುದು ವಿಶ್ವಬ್ಯಾಂಕಿನ ಮತ್ತೊಂದು ಉದ್ದೇಶವಾಗಿದೆ. ಈ ಉದ್ದೇಶ ಸಾಧನೆಗಾಗಿ ವಿಶ್ವಬ್ಯಾಂಕು ಸದಸ್ಯ ದೇಶಗಳ ಉತ್ಪಾದಕ ಸಂಪನ್ಮೂಲಗಳ ಅಭಿವೃದ್ಧಿಗೆ ಅಂತಾರಾಷ್ಟ್ರೀಯ ಹೂಡಿಕೆಯನ್ನು ಉತ್ತೇಜಿಸುತ್ತದೆ.

**೪. ಹೂಡಿಕೆದಾರರಿಗೆ ರಕ್ಷಣೆ :** ಹಿಂದುಳಿದ ದೇಶಗಳ ಅಭಿವೃದ್ಧಿಗಾಗಿ ನೇರ ಸಾಲ ನೀಡುವುದು, ಅನಿವಾರ್ಯ ಪ್ರಸಂಗಗಳಲ್ಲಿ ಖಾಸಗಿ ವಿದೇಶೀ ಹೂಡಿಕೆದಾರರಿಗೆ ರಕ್ಷಕನಾಗಿ ಕಾರ್ಯನಿರ್ವಹಿಸುವುದು ವಿಶ್ವ ಬ್ಯಾಂಕಿನ ಉದ್ದೇಶವಾಗಿದೆ. ಅದಕ್ಕಾಗಿ ಜಾಮೀನುದಾರಿಕೆಯ ಪಾತ್ರ ನಿರ್ವಹಿಸುತ್ತದೆ.

**೫. ಜೀವನ ಮಟ್ಟದ ಹೆಚ್ಚಳ :** ಸದಸ್ಯ ದೇಶಗಳಲ್ಲಿ ಉತ್ಪಾದನೆಯನ್ನು ಹೆಚ್ಚಿಸಿ

ಜೀವನ ಮಟ್ಟವನ್ನು ಎತ್ತರಿಸಲು ನೆರವು ನೀಡುವುದು ವಿಶ್ವಬ್ಯಾಂಕಿನ ಪ್ರಧಾನ ಉದ್ದೇಶಗಳಲ್ಲಿ ಒಂದು. ಸಮರ ಆರ್ಥಿಕತೆಗಳನ್ನು ಶಾಂತಿ ಆರ್ಥಿಕತೆಗಳನ್ನಾಗಿ ಪರಿವರ್ತಿಸುವ ಘನ ಉದ್ದೇಶದಿಂದ ವಿಶ್ವಬ್ಯಾಂಕು ಜನ್ಮ ತಾಳಿದೆ.

ವಿಶ್ವಬ್ಯಾಂಕಿನ ಉದ್ದೇಶಗಳನ್ನು ಅದರ ಕಾರ್ಯಗಳೆಂದು ಉಲ್ಲೇಖಿಸಲಾಗುತ್ತದೆ. ಅದು ಒಂದು ಸಾಲ ನೀಡುವ ಬ್ಯಾಂಕೇ ಹೊರತು ಬಂಡವಾಳ ನೀಡುವ ಸಂಸ್ಥೆಯಲ್ಲ.

**ವಿಶ್ವಬ್ಯಾಂಕಿನ ಸಂಘಟನೆ**

ವಿಶ್ವಬ್ಯಾಂಕಿನ ಸಂಘಟನೆಯು ಗವರ್ನರರುಗಳ ಮಂಡಳಿ, ಕಾರ್ಯ ನಿರ್ವಾಹಕ ನಿರ್ದೇಶಕರುಗಳ ಮಂಡಳಿ, ಅಧ್ಯಕ್ಷ, ಸಲಹಾ ಸಮಿತಿ, ಸಾಲದ ಸಮಿತಿ ಮತ್ತು ಬ್ಯಾಂಕು ಸಿಬ್ಬಂದಿ ವರ್ಗ - ಇವುಗಳನ್ನು ಒಳಗೊಂಡಿರುತ್ತದೆ.

ವಿಶ್ವಬ್ಯಾಂಕಿನ ಗವರ್ನರರುಗಳ ಮಂಡಳಿ ನೀತಿ ನಿಯಮಾವಳಿಗಳನ್ನು ರೂಪಿಸುವ ಅತ್ಯುನ್ನತ ಅಂಗವಾಗಿರುತ್ತದೆ. ಅದು ಪ್ರತಿಯೊಂದು ಸದಸ್ಯ ದೇಶದಿಂದ ಒಬ್ಬ ಗವರ್ನರ್ ಮತ್ತು ಒಬ್ಬ ಪರ್ಯಾಯ ಗವರ್ನರುಗಳಿಂದ ಕೂಡಿರುತ್ತದೆ. ಸಾಮಾನ್ಯವಾಗಿ ಸದಸ್ಯ ದೇಶದ ವಿತ್ತ ಸಚಿವರು ಗವರ್ನರರಾಗಿರುತ್ತಾರೆ ಮತ್ತು ಕೇಂದ್ರ ಬ್ಯಾಂಕಿನ ಮುಖ್ಯಸ್ಥನು ಪರ್ಯಾಯ ಗವರ್ನರರಾಗಿರುತ್ತಾರೆ. ಗವರ್ನರರ ಮಂಡಳಿಯು ವರ್ಷಕ್ಕೊಮ್ಮೆ ಸಭೆ ಸೇರುತ್ತದೆ. ಅದು ಎಲ್ಲಾ ಪ್ರಮುಖ ತೀರ್ಮಾನಗಳನ್ನು ಕೈಗೊಳ್ಳುತ್ತದೆ.

ಗವರ್ನರರ ಮಂಡಳಿಯು ಕೈಗೊಂಡ ಎಲ್ಲಾ ತೀರ್ಮಾನಗಳನ್ನು ನಿರ್ವಾಹಕ ನಿರ್ದೇಶಕರುಗಳ ಮಂಡಳಿ ಕಾರ್ಯರೂಪಕ್ಕಿಳಿಸುತ್ತದೆ. ಮಂಡಳಿಯಲ್ಲಿ ಬ್ಯಾಂಕಿನ ಅಧ್ಯಕ್ಷನಲ್ಲದೆ ೨೧ ಸದಸ್ಯರಿರುತ್ತಾರೆ. ಮಂಡಳಿಯು ತಿಂಗಳಿಗೊಂದು ಸಲ ಸಭೆ ಸೇರುತ್ತದೆ. ಸದಸ್ಯ ದೇಶಗಳ ಪಾಲು ಬಂಡವಾಳಕ್ಕನುಗುಣವಾಗಿ ಮತದಾನದ ಹಕ್ಕು ಲಭ್ಯವಾಗುತ್ತದೆ.

ಬ್ಯಾಂಕಿನ ಅಧ್ಯಕ್ಷನನ್ನು ಕಾರ್ಯ ನಿರ್ವಾಹಕ ಮಂಡಳಿ ನೇಮಿಸುತ್ತದೆ. ಆತ ಬ್ಯಾಂಕಿನ ಮುಖ್ಯ ಆಡಳಿತಾಧಿಕಾರಿಯಾಗಿದ್ದು ಬ್ಯಾಂಕಿನ ದೈನಂದಿನ ವ್ಯವಹಾರಗಳಿಗೆ ಜವಾಬ್ದಾರನಾಗಿರುತ್ತಾನೆ. ಕಾರ್ಯನಿರ್ವಾಹಕ ಮಂಡಳಿಯು ಸಲಹಾ ಸಮಿತಿಯನ್ನು ಮತ್ತು ಸಾಲ ಸಮಿತಿಯನ್ನು ರೂಪಿಸುತ್ತದೆ. ಸಲಹಾ ಸಮಿತಿಯು ವಿವಿಧ ಕ್ಷೇತ್ರಗಳ ಏಳು ತಜ್ಞರನ್ನು ಹೊಂದಿರುತ್ತದೆ. ಸಾಲ ಸಮಿತಿಯೊಡನೆ ಸಮಾಲೋಚಿಸಿದ ಬಳಿಕ ವಿಶ್ವಬ್ಯಾಂಕು ಸದಸ್ಯ ದೇಶಗಳಿಗೆ ಸಾಲ ನೀಡುತ್ತದೆ.

ವಿಶ್ವ ಬ್ಯಾಂಕಿನ ನೀತಿ ನಿಯಮಾವಳಿಗಳನ್ನು ಒಪ್ಪಿಕೊಂಡು ಗೌರವಿಸುವ ಮತ್ತು ಬ್ಯಾಂಕಿನ ಸನ್ನಿಧಿಗೆ ಚಂದಾ ನೀಡುವ ಯಾವುದೇ ದೇಶ ಅದರ ಸದಸ್ಯನಾಗಬಹುದು. ಆರಂಭದಲ್ಲಿ ವಿಶ್ವಬ್ಯಾಂಕಿನ ಸದಸ್ಯತ್ವ ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಸದಸ್ಯರಿಗೆ ಮಾತ್ರ ಮೀಸಲಾಗಿತ್ತು. ಈಗ ಈ ನಿಯಮವನ್ನು ಸಡಿಲುಗೊಳಿಸಲಾಗಿದೆ. ಬ್ಯಾಂಕು

ಸನ್ನದಿನ ಆರನೇ ಪರಿಚ್ಛೇದಕ್ಕೆ ಅನುಗುಣವಾಗಿ ಯಾವುದೇ ಸಮಯದಲ್ಲಿ ಸದಸ್ಯತ್ವ ಹಿಂದಕ್ಕೆ ಪಡೆಯುವ ಹಕ್ಕು ದೇಶಗಳಿಗಿದೆ. ಸದಸ್ಯತ್ವದ ಮೊಬಲಗನ್ನು ನೀಡಲಾಗದ ದೇಶವನ್ನು ಸದಸ್ಯತ್ವದಿಂದ ತೆಗೆದು ಹಾಕುವ ಅಧಿಕಾರ ವಿಶ್ವ ಬ್ಯಾಂಕಿಗಿದೆ.

ಸದಸ್ಯ ದೇಶಗಳು ತಮ್ಮ ಚಂದಾ ಹಣವನ್ನು ಈ ಕೆಳಗಿನ ರೂಪಗಳಲ್ಲಿ ಪಾವತಿಸಬೇಕಾಗುತ್ತದೆ.

i) ಚಂದಾ ಹಣದ ಶೇ. ೨ ರಷ್ಟನ್ನು ಚಿನ್ನದ ರೂಪದಲ್ಲಿ ಅಥವಾ ಅಮೇರಿಕಾದ ಡಾಲರು ರೂಪದಲ್ಲಿ ಸಂದಾಯ ಮಾಡಬೇಕು. ಅದು ಸಾಲ ನೀಡಿಕೆಯ ಉದ್ದೇಶಕ್ಕೆ ಮುಕ್ತವಾಗಿ ದೊರೆಯುತ್ತದೆ.

ii) ಚಂದಾ ಹಣದ ಶೇ. ೧೮ ರಷ್ಟನ್ನು ಸದಸ್ಯದೇಶದ ಕರೆನ್ಸಿ ಹಣದ ರೂಪದಲ್ಲಿ ಪಾವತಿ ಮಾಡಬೇಕು. ಆ ದೇಶ ಒಪ್ಪಿದರೆ ಈ ಹಣವನ್ನು ಸಾಲ ನೀಡುವುದಕ್ಕೆ ಬಳಸಬಹುದಾಗಿದೆ.

iii) ಉಳಿದ ಶೇ. ೮೦ ರಷ್ಟು ಚಂದಾ ಹಣ ಆಯಾ ದೇಶಗಳಲ್ಲೇ ಇರುತ್ತದೆ. ಈ ಹಣವನ್ನು ಬೇಕೆಂದಾಗ ಪಡಕೊಳ್ಳುವ ಅಧಿಕಾರ ವಿಶ್ವ ಬ್ಯಾಂಕಿಗಿರುತ್ತದೆ.

## ವಿಶ್ವಬ್ಯಾಂಕಿನ ಕಾರ್ಯಗಳು

ವಿಶ್ವಬ್ಯಾಂಕಿನ ಕಾರ್ಯಗಳು ಅದರ ಉದ್ದೇಶಗಳಲ್ಲೇ ಅಡಕವಾಗಿದೆ. ವಿಶ್ವ ಬ್ಯಾಂಕಿನ ಪ್ರಮುಖ ಕಾರ್ಯಗಳು ಇವು :

**೧. ಸ್ವರೂಪ ಹೊಂದಾಣಿಕೆಯ ಸಾಲ ನೀಡಿಕೆ :** ವಿಶ್ವ ಬ್ಯಾಂಕು ತನ್ನ ಸದಸ್ಯ ದೇಶಗಳಿಗೆ ದೀರ್ಘಾವಧಿ ಸಾಲ ನೀಡುತ್ತದೆ. ಆರ್ಥಿಕತೆಯ ಪುನಾರಚನೆಗಾಗಿ ಮತ್ತು ಆರ್ಥಿಕಾಭಿವೃದ್ಧಿಯ ಉದ್ದೇಶದಿಂದ ವಿಶ್ವಬ್ಯಾಂಕು ಸ್ವರೂಪ ಹೊಂದಾಣಿಕೆಯ ಸಾಲಗಳನ್ನು ನೀಡುತ್ತದೆ.

**೨. ಕೃಷಿಗೆ ಸಹಾಯ :** ಹಿಂದುಳಿದ ದೇಶಗಳು ಕೃಷಿ ಪ್ರಧಾನ ಆರ್ಥಿಕತೆಗಳಾಗಿವೆ. ಹಿಂದುಳಿದ ದೇಶಗಳು ಮುಂದಕ್ಕೆ ಬರಬೇಕಾದರೆ ಕೃಷಿಯ ಅಭಿವೃದ್ಧಿ ಆಗ ಬೇಕಾಗುತ್ತದೆ. ಕೃಷಿಯ ಅಭಿವೃದ್ಧಿಯೊಂದಿಗೆ ನೀರಾವರಿಗೆ ವಿಶ್ವಬ್ಯಾಂಕು ಯಥೇಚ್ಛ ಸಾಲ ಒದಗಿಸುತ್ತದೆ. ಅಲ್ಲದೆ ಅದು ಮಾರುಕಟ್ಟೆ ಅಭಿವೃದ್ಧಿ, ಅರಣ್ಯ ನಿರ್ಮಾಣ, ಮಣ್ಣಿನ ಸಾರ ಸಂರಕ್ಷಣೆ ಇತ್ಯಾದಿ ಕೃಷಿಗೆ ಪೂರಕವಾಗಿರುವ ಯೋಜನೆಗಳಿಗೂ ಸಾಲ ನೀಡುತ್ತದೆ.

ಹಣಕಾಸಿನ ನೆರವು ಮಾತ್ರವಲ್ಲದೆ ವಿಶ್ವಬ್ಯಾಂಕು ಕೃಷಿಗೆ ಪೂರಕವಾಗಿ ಈ ಕೆಳಗಿನ ಕ್ರಮಗಳನ್ನು ಕೈಗೊಂಡಿದೆ.

i) ಕೃಷಿ ಶಿಕ್ಷಣ ನೀಡಿಕೆಗಾಗಿ ಕೃಷಿ ಕಾಲೇಜುಗಳ ಮತ್ತು ತರಬೇತಿ ಕೇಂದ್ರಗಳ ಸ್ಥಾಪನೆಗೆ ನೆರವು ನೀಡುವ ಯೋಜನೆಗಳು.

ii) ಹಳ್ಳಿಗಳಿಗೆ ಸಂಪರ್ಕವ್ಯವಸ್ಥೆ ಕಲ್ಪಿಸುವ ಯೋಜನೆಗಳು.

iii) ವಿದ್ಯುತ್ ಉತ್ಪಾದನೆ ಮತ್ತು ಗ್ರಾಮೀಣ ವಿದ್ಯುಧೀಕರಣ ಯೋಜನೆಗಳು.

ವಿಶ್ವಬ್ಯಾಂಕು ಈ ಯೋಜನೆಗಳಿಗೆ ಸಾಲ ನೀಡುತ್ತದೆ. ಅಗತ್ಯಬಿದ್ದರೆ ಸಲಹಾ ಸಹಾಯ ಒದಗಿಸುತ್ತದೆ.

೩. **ಕೈಗಾರಿಕೆಗಳಿಗೆ ಉತ್ತೇಜನ :** ಕೈಗಾರಿಕೀಕರಣವನ್ನು ಉತ್ತೇಜಿಸಿ ಸದಸ್ಯದೇಶಗಳ ಅಭಿವೃದ್ಧಿ ಸಾಧಿಸುವುದು ವಿಶ್ವಬ್ಯಾಂಕಿನ ಉದ್ದೇಶವಾಗಿರುತ್ತದೆ. ಅದು ಕೈಗಾರಿಕೆಗಳಿಗೆ ಹೀಗೆ ಉತ್ತೇಜನ ನೀಡುತ್ತದೆ.

i) ಕೈಗಾರಿಕೆಗಳಿಗೆ ಅದು ನೇರ ಸಾಲಗಳನ್ನು ನೀಡುತ್ತದೆ.

ii) ಕಬ್ಬಿಣ ಮತ್ತು ಉಕ್ಕು, ಸಿಮೆಂಟು, ಗಣಿಗಾರಿಕೆ, ಕಾಗದ, ರಸಗೊಬ್ಬರ ಇತ್ಯಾದಿ ಬೃಹತ್ ಉದ್ದಿಮೆಗಳ ಸ್ಥಾಪನೆಗೆ ಬೆಂಬಲ ನೀಡುತ್ತದೆ.

iii) ಕೃಷಿಯಾಭಿವೃದ್ಧಿಗೆ ಪೂರಕವಾಗಿ ರಸಗೊಬ್ಬರ ಕಾರ್ಖಾನೆಗಳ ಸ್ಥಾಪನೆಗೆ ಉತ್ತೇಜನೆ ಕೊಡುತ್ತದೆ.

iv) ಬಡದೇಶಗಳ ರಫ್ತು ಆಧಾರಿತ ಕೈಗಾರಿಕೆಗಳ ಮತ್ತು ಶ್ರಮ ಬಾಹುಳ್ಯದ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಯನ್ನು ಉತ್ತೇಜಿಸುತ್ತದೆ.

v) ಕೈಗಾರಿಕೆಗಳಿಗೆ ಸಾಲ ನೀಡುವ ಅಭಿವೃದ್ಧಿ ಬ್ಯಾಂಕುಗಳಿಗೆ ವಿಶ್ವ ಬ್ಯಾಂಕು ಸಾಲ ನೀಡುತ್ತದೆ.

೪. **ಶಕ್ತಿ ಯೋಜನೆಗಳಿಗೆ ನೆರವು :** ಕೃಷಿ ಮತ್ತು ಕೈಗಾರಿಕೆಗಳ ಅಭಿವೃದ್ಧಿಗೆ ವಿದ್ಯುತ್ತಿನ ಪೂರೈಕೆ ಅತ್ಯಗತ್ಯ. ಅದಕ್ಕಾಗಿ ವಿಶ್ವಬ್ಯಾಂಕು ಹಿಂದುಳಿದ ದೇಶಗಳ ಶಕ್ತಿ ಯೋಜನೆಗಳಿಗೆ ವಿಶೇಷ ಪ್ರಾಶಸ್ತ್ಯ ಮತ್ತು ಉತ್ತೇಜನೆ ನೀಡುತ್ತದೆ. ವಿದ್ಯುಚ್ಛಕ್ತಿಯ ವಿತರಣೆ ಮತ್ತು ಗ್ರಾಮೀಣ ಪ್ರದೇಶಗಳಿಗೆ ವಿದ್ಯುತ್ ಪೂರೈಕೆಯತ್ತ ಅದು ವಿಶೇಷ ಗಮನಹರಿಸಿದೆ.

೫. **ತಾಂತ್ರಿಕ ನೆರವು:** ಸದಸ್ಯದೇಶಗಳಿಗೆ ತಾಂತ್ರಿಕ ನೆರವು ನೀಡುವುದು ವಿಶ್ವಬ್ಯಾಂಕಿನ ಇನ್ನೊಂದು ಕಾರ್ಯವಾಗಿರುತ್ತದೆ. ಅದು ಸದಸ್ಯದೇಶಗಳ ಭೌತಿಕ ಸಂಪನ್ಮೂಲಗಳ ಸಮೀಕ್ಷೆ ನಡೆಸಲು ತಜ್ಞರನ್ನು ಕಳುಹಿಸಿಕೊಡುತ್ತದೆ. ಅಗತ್ಯವಿರುವ ಸದಸ್ಯ ದೇಶಗಳ ಅಧಿಕಾರಿಗಳಿಗೆ ಅಭಿವೃದ್ಧಿ ಯೋಜನೆಯ ತಯಾರಿ ಮತ್ತು ಅನುಷ್ಠಾನ ತರಬೇತಿ ನೀಡುತ್ತದೆ. ಈ ಕಾರಣಕ್ಕಾಗಿ ೧೯೫೬ರಲ್ಲಿ ಅದು ಆರ್ಥಿಕಾಭಿವೃದ್ಧಿ ಸಂಸ್ಥೆಯೊಂದನ್ನು ಸ್ಥಾಪಿಸಿದೆ.

೬. **ಇತರ ಕಾರ್ಯಗಳು :** ವಿಶ್ವಬ್ಯಾಂಕು ಇನ್ನೂ ಕೆಲವು ಕಾರ್ಯಗಳನ್ನು ಮಾಡುತ್ತದೆ. ಅವುಗಳಲ್ಲಿ ಮುಖ್ಯವಾದವುಗಳು

i) ಕುಡಿಯುವ ನೀರನ್ನು ಮತ್ತು ನೈರ್ಮಲೀಕರಣ ಸವಲತ್ತುಗಳನ್ನು ಒದಗಿಸುವುದು.

ii) ಕುಡಿಯುವ ನೀರು ಪೂರೈಕೆಯ ಯೋಜನೆಗಳಿಗೆ ಹಣಕಾಸು ನೆರವು ನೀಡಿಕೆ.

iii) ಗೃಹ ನಿರ್ಮಾಣ ಯೋಜನೆಗಳಿಗೆ ಹಣಕಾಸು ನೆರವು ನೀಡಿಕೆ.

iv) ಪರಿಸರ ಮಾಲಿನ್ಯದ ವಿರುದ್ಧದ ಹೋರಾಟಗಳಿಗೆ ಹಣಕಾಸು ನೆರವು ನೀಡಿಕೆ.

**ಸ್ವರೂಪ ಹೊಂದಾಣಿಕೆಯ ಸಾಲಗಳು :** ವಿಶ್ವಬ್ಯಾಂಕು ಒಂದು ಅಭಿವೃದ್ಧಿ ಬ್ಯಾಂಕಾಗಿದೆ. ಅದು ಹಿಂದುಳಿದ ದೇಶಗಳ ಆರ್ಥಿಕಾಭಿವೃದ್ಧಿ ಸಾಧಿಸಲು ಯತ್ನಿಸುತ್ತದೆ. ಅದಕ್ಕಾಗಿ ವಿಶ್ವಬ್ಯಾಂಕು ಸ್ವರೂಪ ಹೊಂದಾಣಿಕೆಯ ಸಾಲಗಳನ್ನು ನೀಡುತ್ತದೆ.

**ಉದ್ದೇಶಗಳು ಮತ್ತು ಪ್ರಯೋಜನಗಳು :** ಆರ್ಥಿಕತೆಗಳ ಹಿಂದುಳಿಕೆಗೆ ಸ್ವರೂಪ ಹೊಂದಾಣಿಕೆಯ ಕೊರತೆಯು ಕಾರಣವಾಗಿರುತ್ತದೆ. ಆರ್ಥಿಕತೆಯೊಂದರಲ್ಲಿ ಮೂರು ಪ್ರಮುಖ ವಲಯಗಳಿರುತ್ತವೆ. ಅವುಗಳನ್ನು ಪ್ರಥಮ, ದ್ವಿತೀಯ ಮತ್ತು ತೃತೀಯ ವಲಯಗಳೆಂದು ವಿಂಗಡಿಸಲಾಗುತ್ತದೆ. ಪ್ರಥಮ ವಲಯವು ಕೃಷಿ, ನೀರಾವರಿ, ಮೀನುಗಾರಿಕೆ ಇತ್ಯಾದಿಗಳನ್ನು, ದ್ವಿತೀಯ ವಲಯವು ಕೈಗಾರಿಕೆಗಳನ್ನು ಮತ್ತು ತೃತೀಯ ವಲಯವು ವ್ಯಾಪಾರ, ವಾಣಿಜ್ಯ, ಸಾರಿಗೆ-ಸಂಪರ್ಕ ಮತ್ತಿತರ ಸೇವೆಗಳನ್ನು ಒಳಗೊಂಡಿರುತ್ತದೆ.

ಹಿಂದುಳಿದ ಆರ್ಥಿಕತೆಗಳಲ್ಲಿ ಈ ಮೂರು ವಲಯಗಳ ಸ್ವರೂಪದಲ್ಲಿ ಅಥವಾ ರಚನಾ ವಿನ್ಯಾಸದಲ್ಲಿ ಅನೇಕ ದೋಷಗಳಿರುತ್ತದೆ. ಹಾಗಾಗಿ ಒಟ್ಟು ಉತ್ಪಾದನೆ ಮತ್ತು ಪ್ರತಿಫಲಗಳು ತೀರಾ ಕಡಿಮೆಯಾಗಿ ಬಿಡುತ್ತವೆ. ಆರ್ಥಿಕತೆಯ ರಚನಾ ವಿನ್ಯಾಸದಲ್ಲಿ ಹೊಂದಾಣಿಕೆಗಳನ್ನು ಮಾಡಿದರೆ ಮಾತ್ರ ಹಿಂದುಳಿದ ದೇಶಗಳ ಅಭಿವೃದ್ಧಿ ಸಾಧ್ಯ. ದೇಶಗಳ ಆಂತರಿಕ ಆರ್ಥಿಕ ರಚನಾ ವಿನ್ಯಾಸಗಳನ್ನು ಸರಿಹೊಂದಿಸಿ ಅಭಿವೃದ್ಧಿ ಸಾಧಿಸಲು ವಿಶ್ವಬ್ಯಾಂಕು ನೀಡುವ ಸಾಲಗಳಿಗೆ ಸ್ವರೂಪ ಹೊಂದಾಣಿಕೆಯ ಸಾಲಗಳೆಂದು ಹೆಸರು. ರಚನಾ ವಿನ್ಯಾಸದ ಹೊಂದಾಣಿಕೆಗಳಿಂದ ಸಿಗುವ ಪ್ರಯೋಜನಗಳಿವು :

i) ಉತ್ಪಾದನಾ ದಕ್ಷತೆ ಹೆಚ್ಚಾಗುತ್ತದೆ.

ii) ಒಟ್ಟು ಉತ್ಪಾದನೆ ಹೆಚ್ಚಾಗುತ್ತದೆ.

iii) ಉತ್ಪಾದನಾಂಗಗಳ ಪ್ರತಿಫಲ ಹೆಚ್ಚಾಗುತ್ತದೆ.

iv) ಆರ್ಥಿಕತೆಯ ಪೈಪೋಟಿ ಸಾಮರ್ಥ್ಯ ಅಧಿಕವಾಗುತ್ತದೆ.

v) ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಹಿಂದುಳಿದ ದೇಶಗಳ ಪಾಲು ಹೆಚ್ಚಾಗುತ್ತದೆ.

vi) ಪಾವತಿ ಶೇಷ ಸಮಸ್ಯೆ ನಿವಾರಣೆಯಾಗುತ್ತದೆ.

ಈ ಕಾರಣಗಳಿಂದ ವಿಶ್ವಬ್ಯಾಂಕು ಸ್ವರೂಪ ಹೊಂದಾಣಿಕೆಯ ಸಾಲಗಳನ್ನು ನೀಡುತ್ತದೆ. (i) ಆರಂಭದಲ್ಲಿ ಹಿಂದುಳಿದ ದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ನಿರ್ಮಿಸುವುದು (ii) ಆ ಬಳಿಕ ರಚನಾವಿನ್ಯಾಸ ಹೊಂದಾಣಿಕೆಗಳ ಮೂಲಕ ಅವುಗಳು ಅಭಿವೃದ್ಧಿ ಸಾಧಿಸುವುದು ಸ್ವರೂಪ ಹೊಂದಾಣಿಕೆಯ ಉದ್ದೇಶಗಳಾಗಿವೆ. ವಿಶ್ವಬ್ಯಾಂಕಿನ ರಚನಾ ಹೊಂದಾಣಿಕೆಯ ಸಾಲಗಳು ಈ ಕೆಳಗಿನ ರೂಪಗಳನ್ನು ತಾಳುತ್ತವೆ.

i) ಕೃಷಿಯ ಅಭಿವೃದ್ಧಿಯ ಯೋಜನೆಗಳಿಗೆ ಸಾಲ ನೀಡಿಕೆ.

ii) ನೀರಾವರಿ ಮತ್ತು ಕುಡಿಯುವ ನೀರು ಪೂರೈಕೆ ಯೋಜನೆಗಳ ಸಾಲ ನೀಡಿಕೆ.

iii) ಅರಣ್ಯ ನಿರ್ಮಾಣ ಮತ್ತು ಪರಿಸರ ಸಂರಕ್ಷಣಾ ಯೋಜನೆಗಳಿಗೆ ಸಾಲ ನೀಡಿಕೆ.

iv) ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ವಿದ್ಯುದೀಕರಣ ಯೋಜನೆಗಳಿಗೆ ಸಾಲ ನೀಡಿಕೆ.

v) ಗೃಹ ನಿರ್ಮಾಣ ಮತ್ತು ಪ್ರವಾಸೋದ್ಯಮ ಯೋಜನೆಗಳಿಗೆ ಸಾಲ ನೀಡಿಕೆ.

vi) ಶಿಕ್ಷಣ, ತರಬೇತಿ ಮತ್ತು ವಿಸ್ತರಣೆ ಯೋಜನೆಗಳಿಗೆ ಸಾಲ ನೀಡಿಕೆ.

vii) ಸಾರಿಗೆ - ಸಂಪರ್ಕ ಯೋಜನೆಗಳಿಗೆ ಸಾಲ ನೀಡಿಕೆ.

ಸ್ವರೂಪ ಹೊಂದಾಣಿಕೆಗಾಗಿ ವಿಶ್ವಬ್ಯಾಂಕು ೧೫ ರಿಂದ ೨೫ ವರ್ಷಗಳ ವರೆಗಿನ ದೀರ್ಘಾವಧಿ ಸಾಲಗಳನ್ನು ನೀಡುತ್ತದೆ. ಯೋಜನೆಗಳ ಪ್ರಗತಿಯ ವರದಿ ತರಿಸಿಕೊಳ್ಳುತ್ತಿರುತ್ತದೆ. ತಜ್ಞರ ತಂಡವನ್ನು ಕಳುಹಿಸಿ ಸಮೀಕ್ಷೆ ನಡೆಸುತ್ತಿರುತ್ತದೆ. ಸದಸ್ಯ ದೇಶಗಳು ಅಭಿವೃದ್ಧಿಯ ಹೊರತಾದ ಇತರ ಕಾರ್ಯಕ್ರಮಗಳಿಗೆ ಸಾಲಗಳನ್ನು ಬಳಸಿದರೆ ತಕ್ಷಣ ಕ್ರಮಕೈಗೊಳ್ಳುವ ಅಧಿಕಾರ ವಿಶ್ವಬ್ಯಾಂಕಿಗಿದೆ.

**ಸಾಲದ ವಿಧಗಳು :** ವಿಶ್ವ ಬ್ಯಾಂಕು ಸದಸ್ಯ ದೇಶಗಳಿಗೆ ಮೂರು ರೀತಿಗಳಲ್ಲಿ ಸಾಲ ನೀಡುತ್ತದೆ.

**೧. ಸ್ವಂತ ನಿಧಿಯಿಂದ ಸಾಲ ನೀಡುವುದು :** ವಿಶ್ವ ಬ್ಯಾಂಕಿನಲ್ಲಿ ಸದಸ್ಯ ದೇಶಗಳ ಠೇವಣಿ ಸಂಚಯನವಾಗಿರುತ್ತದೆ. ಇವುಗಳು ಬ್ಯಾಂಕಿನ ನಿಧಿಗಳಾಗಿರುತ್ತವೆ. ವಿಶ್ವ ಬ್ಯಾಂಕು ಇವನ್ನು ಸಾಲ ನೀಡಿಕೆಗೆ ಬಳಸುತ್ತದೆ. ಸಾಲಕ್ಕೆ ಬೇಡಿಕೆ ಸಲ್ಲಿಸಿದ ದೇಶದ ಕರೆನ್ಸಿಯ ರೂಪದಲ್ಲಿ ಸಾಲ ನೀಡಲಾಗುತ್ತದೆ. ಇತರ ಕರೆನ್ಸಿ ರೂಪದಲ್ಲಿ ಸಾಲ ನೀಡಬೇಕಾದರೆ ಆ ಕರೆನ್ಸಿ ವಿನಿಯಮ ಮಾಧ್ಯಮವಾಗಿರುವ ದೇಶದ ಅನುಮತಿಯನ್ನು ವಿಶ್ವಬ್ಯಾಂಕು ಪಡೆದುಕೊಳ್ಳಬೇಕಾಗುತ್ತದೆ.

**೨. ಇತರ ದೇಶಗಳಿಂದ ಸಾಲ ಪಡೆದು ಸಾಲ ನೀಡುವುದು :** ವಿಶ್ವ ಬ್ಯಾಂಕಿನಲ್ಲಿ ಸಾಕಷ್ಟು ಹಣ ಇಲ್ಲದಿರುವಾಗ ಅದು ಇತರ ದೇಶಗಳಿಂದ ಸಾಲ ಪಡೆದುಕೊಳ್ಳುತ್ತದೆ. ತಾನು ಪಡೆದ ಸಾಲಗಳಿಗೆ ವಿಶ್ವಬ್ಯಾಂಕು ಬಡ್ಡಿ ನೀಡುತ್ತದೆ. ಅಗತ್ಯವಿರುವ ದೇಶಗಳಿಗೆ, ಹಾಗೆ ಪಡೆದ ಹಣದಿಂದ ಸಾಲ ನೀಡುತ್ತದೆ.

**೩. ಖಾತ್ರಿ ಅಥವಾ ಜಾಮೀನು ಸಾಲ :** ಸದಸ್ಯ ದೇಶಗಳ ಸಾಲಗಳಿಗೆ ತಾನು ಖಾತ್ರಿಯಾಗಿ ಅಥವಾ ಜಾಮೀನುದಾರನಾಗಿ ನಿಂತು ಅಗತ್ಯವಿರುವ ದೇಶಗಳಿಗೆ ವಿಶ್ವಬ್ಯಾಂಕು ಸಾಲ ಒದಗಿಸುತ್ತದೆ. ಖಾತ್ರಿ ಅಥವಾ ಜಾಮಿನು ನಿಲ್ಲುವ ಮೊದಲು ಸಾಲ ಪಡೆಯುವ ಮತ್ತು ಸಾಲ ನೀಡುವ ದೇಶಗಳ ಪರವಾಗಿ ವಿಶ್ವಬ್ಯಾಂಕು ನಿರ್ದೇಶಕ ಮಂಡಳಿಯಿಂದ ಪರವಾನಗಿ ಪಡೆದುಕೊಳ್ಳಬೇಕಾಗುತ್ತದೆ.

ತಾನು ಸಾಲಗಳಿಗೆ ಖಾತ್ರಿ ನಿಲ್ಲುವ ಮೊದಲು ಮೂರು ವಿಷಯಗಳನ್ನು ಪರಿಗಣಿಸುತ್ತದೆ.

i. ಸಾಲ ಪಡೆಯುವ ದೇಶದ ಮರು ಪಾವತಿ ಸಾಮರ್ಥ್ಯ

ii. ಸಾಲದ ಉದ್ದೇಶಗಳ ವಿಶ್ವಾಸಾರ್ಹತೆ ಅಥವಾ ಸಾಧುತ್ವ

iii. ಸಾಲ ಪಡೆಯುವ ದೇಶದ ಸಾಲ ಬಳಕೆಯ ಸಾಮರ್ಥ್ಯ.

**ಸಾಲ ನೀಡಿಕೆಯ ತತ್ವಗಳು** : ಸ್ವರೂಪ ಹೊಂದಾಣಿಕೆಯ ಉದ್ದೇಶದಿಂದ ವಿಶ್ವಬ್ಯಾಂಕು ಅಭಿವೃದ್ಧಿ ಸಾಲಗಳನ್ನು ನೀಡುತ್ತದೆ. ವಿಶ್ವ ಬ್ಯಾಂಕಿನ ಸಾಲಗಳು ತತ್ವಾಧರಿತ ಸಾಲಗಳಾಗಿರುತ್ತದೆ. ಸಾಲ ನೀಡುವಾಗ ಮತ್ತು ನೀಡಿದ ಬಳಿಕ ಅದು ಈ ಕೆಳಗಿನ ತತ್ವಗಳಿಗೆ ಅಥವಾ ನಿಯಮಗಳಿಗೆ ಬದ್ಧವಾಗಿರುತ್ತವೆ.

i. ಸಾಲ ಪಡೆಯುವ ಸದಸ್ಯ ದೇಶಗಳ ಮರು ಪಾವತಿ ಸಾಮರ್ಥ್ಯಕ್ಕೆ ವಿಶ್ವ ಬ್ಯಾಂಕು ಪ್ರಥಮ ಆದ್ಯತೆ ನೀಡುತ್ತದೆ.

ii. ಅತ್ಯಂತ ಪ್ರಮುಖವಾದ, ಆರ್ಥಿಕವಾಗಿ ಮತ್ತು ತಾಂತ್ರಿಕವಾಗಿ ಸುಯೋಗ್ಯವಾದ ಯೋಜನೆಗಳಿಗೆ ಮಾತ್ರ ವಿಶ್ವ ಬ್ಯಾಂಕು ಸಾಲ ನೀಡುತ್ತದೆ.

iii. ಸದಸ್ಯ ದೇಶಗಳ ಯೋಜನಾ ವೆಚ್ಚಕ್ಕೆ ವಿದೇಶಿ ವಿನಿಮಯದ ಅಗತ್ಯವಿದ್ದಾಗ ವಿಶ್ವಬ್ಯಾಂಕು ಸಾಲ ಒದಗಿಸುತ್ತದೆ.

iv. ವಿಶ್ವಬ್ಯಾಂಕು ಸಾಲ ನೀಡುವ ಯೋಜನೆಗಳಿಗೆ ಬೇಕಾಗುವ ಸರಕುಗಳನ್ನು, ಯಂತ್ರೋಪಕರಣಗಳನ್ನು ಮತ್ತಿತರ ಸಾಮಾಗ್ರಿಗಳನ್ನು ಅತ್ಯಂತ ಅಗ್ಗದ ಮಾರು ಕಟ್ಟೆಯಿಂದ ಕೊಳ್ಳ ಬೇಕಾಗುತ್ತದೆ.

v. ಯೋಜನೆ ಮುಗಿದು ಸಾಲ ಪೂರ್ತಿಯಾಗಿ ಮರುಪಾವತಿಯಾಗುವವರೆಗೆ ಸಾಲ ಪಡೆದ ಸದಸ್ಯ ದೇಶಗಳೊಡನೆ ವಿಶ್ವಬ್ಯಾಂಕು ಅತ್ಯಂತ ನಿಕಟ ಸಂಪರ್ಕ ಇಟ್ಟುಕೊಳ್ಳುತ್ತದೆ.

**ಸಾಲ ನೀಡಿಕೆಯ ಹಂತಗಳು** : ವಿಶ್ವ ಬ್ಯಾಂಕಿನ ಸಾಲ ನೀಡಿಕೆಯು ನಾಲ್ಕು ಹಂತಗಳ ಒಂದು ಪ್ರಕ್ರಿಯೆಯಾಗಿರುತ್ತದೆ.

**೧. ಅಧ್ಯಯನ** : ಮೊದಲನೆಯ ಹಂತದಲ್ಲಿ ಸಾಲದ ಅಗತ್ಯದ ಬಗ್ಗೆ ವಿವರಣಾತ್ಮಕ ಚರ್ಚೆ ಮತ್ತು ಆರಂಭಿಕ ಅಧ್ಯಯನ ನಡೆಯುತ್ತದೆ. ಸಾಲಕ್ಕೆ ಬೇಡಿಕೆ ಸಲ್ಲಿಸಿದ ದೇಶಕ್ಕೆ ಮರು ಪಾವತಿ ಸಾಮರ್ಥ್ಯವಿರುವುದು ಖಚಿತವಾದರೆ ಮಾತ್ರ ವಿಶ್ವ ಬ್ಯಾಂಕು ಮುಂದಿನ ಹೆಜ್ಜೆ ಇರುಸುತ್ತದೆ. ಮರು ಪಾವತಿ ಸಾಮರ್ಥ್ಯವಿರುವುದು ಖಚಿತವಾದ ಬಳಿಕ ತಜ್ಞರ ತಂಡವೊಂದನ್ನು ಕಳುಹಿಸಿಕೊಡಲಾಗುತ್ತದೆ. ಸಾಲಕ್ಕೆ ಬೇಡಿಕೆ ಸಲ್ಲಿಸಿದ ದೇಶಕ್ಕೆ ಸಾಲದ ಸಮರ್ಪಕ ಉಪಯೋಗ ಸಾಮರ್ಥ್ಯ ಇದೆಯೇ ಇಲ್ಲವೇ ಎಂಬ ಬಗ್ಗೆ ತಜ್ಞರ ತಂಡ ಅಧ್ಯಯನ ನಡೆಸಿ ವಿಶ್ವ ಬ್ಯಾಂಕಿಗೆ ವರದಿ ಒಪ್ಪಿಸುತ್ತದೆ.

**೨. ಪರಿಶೀಲನೆ** : ತಜ್ಞರ ವರದಿಯ ಆಧಾರದಲ್ಲಿ ವಿಶ್ವಬ್ಯಾಂಕು ತಾನು ಸಾಲ ನೀಡಬೇಕಾಗಿರುವ ಯೋಜನೆಗಳ ಪರಿಶೀಲನೆ ನಡೆಸುತ್ತದೆ. ಇದು ಎರಡನೆಯ ಹಂತವಾಗಿರುತ್ತದೆ. ನಿರ್ದಿಷ್ಟ ಯೋಜನೆಗಳ ವಿಶ್ವಾಸಾರ್ಹತೆ ಅಥವಾ ಸಾಧುತ್ವವನ್ನು ಅರಿಯಲು ಯೋಜನೆಗಳ ಆರ್ಥಿಕ, ತಾಂತ್ರಿಕ ಮತ್ತು ಆಡಳಿತಾತ್ಮಕ ಅಂಶಗಳನ್ನು ವ್ಯಾಪಕವಾಗಿ ಪರಿಶೀಲಿಸಲಾಗುತ್ತದೆ.

**೩. ಮಾತುಕತೆ** : ಮೂರನೆಯ ಹಂತದಲ್ಲಿ ಸಾಲದ ಕರಾರುಗಳ ಮಾತುಕತೆ

ನಡೆಯುತ್ತದೆ. ಈ ಹಂತದಲ್ಲಿ ಸಾಲದ ಮೊತ್ತ, ಬಡ್ಡಿಯದರ, ಸಾಲದ ಅವಧಿ, ಸಾಲದ ಸುರಕ್ಷಿತ ವಾಪಾಸಾತಿ ಇತ್ಯಾದಿಗಳ ಬಗ್ಗೆ ನಿಷ್ಕರ್ಷೆಯಾಗುತ್ತದೆ ಮತ್ತು ಸಾಲ ನೀಡಲಾಗುತ್ತದೆ.

೪. **ಮೇಲ್ವಿಚಾರಣೆ :** ನೀಡಿದ ಸಾಲದ ಮೇಲ್ವಿಚಾರಣೆ ನಾಲ್ಕನೆಯ ಮತ್ತು ಅಂತಿಮ ಹಂತವಾಗಿರುತ್ತದೆ. ಸಾಲ ನೀಡಿದ ಬಳಿಕ ವಿಶ್ವಬ್ಯಾಂಕಿನ ಪ್ರತಿನಿಧಿಗಳು ಸಾಲ ಪಡೆದ ದೇಶಗಳನ್ನು ಸಂದರ್ಶಿಸುತ್ತಾರೆ. ಸಾಲ ಪಡೆದ ಉದ್ದೇಶಕ್ಕೆ ಅದನ್ನು ಬಳಸಲಾಗಿದೆಯೆ ಎಂಬ ಪರಿಶೀಲನೆ ನಡೆಸುತ್ತಾರೆ. ಯೋಜನೆಯ ಪ್ರಗತಿಯ ಬಗ್ಗೆ ವಿಶ್ವಬ್ಯಾಂಕು ಆಗಾಗ ವರದಿ ತರಿಸಿಕೊಳ್ಳುತ್ತದೆ. ಸಾಲ ವಾಪಾಸಾಗುವವರೆಗೂ ಸಾಲ ಪಡೆದ ಸದಸ್ಯ ದೇಶಗಳೊಡನೆ ನಿಕಟ ಬಾಂಧವ್ಯ ಹೊಂದಿರುತ್ತದೆ.

ಭಾರತವೂ ಸೇರಿದಂತೆ ಅನೇಕ ಹಿಂದುಳಿದ ದೇಶಗಳ ಆರ್ಥಿಕಾಭಿವೃದ್ಧಿಯಲ್ಲಿ ಅಂತಾರಾಷ್ಟ್ರೀಯ ಹಣಕಾಸು ನಿಧಿ ಮತ್ತು ವಿಶ್ವ ಬ್ಯಾಂಕು ಮಹತ್ತರ ಪಾತ್ರ ವಹಿಸುತ್ತಿವೆ. ಆದರೆ ಇವೆರಡು ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಗಳನ್ನು ಜಗತ್ತಿನ ದೊಡ್ಡಣ್ಣ ತಾನೆಂದು ಭ್ರಮಿಸಿರುವ ಅಮೇರಿಕಾ ತನ್ನ ಹಿತಾಸಕ್ತಿಗಳಿಗಾಗಿ ದುರ್ಬಳಕೆ ಮಾಡುತ್ತಿದೆ. ಈ ಕಾರಣಕ್ಕಾಗಿ ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಮತ್ತು ವಿಶ್ವಬ್ಯಾಂಕಿನ ಕಾರ್ಯವೈಖರಿ ಟೀಕೆಗೊಳಗಾಗಿದೆ.

## ೮.೫. ಸಾರಾಂಶ

೧. ಸರಕು ಮತ್ತು ಸೇವೆಗಳ ವಿನಿಮಯವನ್ನು ವ್ಯಾಪಾರ ಎಂದು ಕರೆಯಲಾಗುತ್ತದೆ. ದೇಶದೊಳಗಿನ ವ್ಯಾಪಾರ ದೇಶೀಯ ವ್ಯಾಪಾರವಾದರೆ ದೇಶಗಳ ನಡುವಿನ ವ್ಯಾಪಾರವು ಅಂತಾರಾಷ್ಟ್ರೀಯ ವ್ಯಾಪಾರವಾಗಿರುತ್ತದೆ. ಇವೆರಡರ ನಡುವಣ ವ್ಯತ್ಯಾಸಗಳನ್ನು ಕೆಳಗೆ ತೋರಿಸಲಾಗಿದೆ.

### ದೇಶೀಯ ವ್ಯಾಪಾರ

i) ನಿರ್ದಿಷ್ಟ ಭೌಗೋಳಿಕ ಗಡಿಗಳ ನಡುವೆ ನಡೆಯುತ್ತದೆ.

ii) ಒಂದು ಸಮುದಾಯದ ನಡುವಣ ವ್ಯಾಪಾರವಾಗಿರುತ್ತದೆ.

iii) ಒಂದು ರಾಜಕೀಯ ಘಟಕದೊಳಗಿನ ವ್ಯಾಪಾರವಾಗಿರುತ್ತದೆ.

iv) ಒಂದು ರೀತಿಯ ಆರ್ಥಿಕ ನೀತಿಗಳು ಮತ್ತು ಕಾನೂನುಗಳಿರುತ್ತವೆ.

v) ಒಂದೇ ಕರೆನ್ಸಿ ಹಣ ಅಸ್ತಿತ್ವದಲ್ಲಿರುತ್ತದೆ.

vi) ನಿರ್ಬಂಧಗಳಿರುವುದಿಲ್ಲ.

vii) ಉತ್ಪಾದನಾಂಗಗಳು ಮುಕ್ತವಾಗಿ ಚಲಿಸುತ್ತವೆ.

viii) ಸಾಮರ್ಥ್ಯದಲ್ಲಿ ಹೆಚ್ಚು ವ್ಯತ್ಯಾಸಗಳಿರುವುದಿಲ್ಲ

ix) ಅಪಾಯಗಳು ತೀರಾ ಕಡಿಮೆ.

### ಅಂತಾರಾಷ್ಟ್ರೀಯ ವ್ಯಾಪಾರ

i) ಭೌಗೋಳಿಕ ಗಡಿಗಳಿರುವುದಿಲ್ಲ.

ii) ವಿಭಿನ್ನ ಸಮುದಾಯಗಳ ನಡುವೆ ನಡೆಯುವ ವ್ಯಾಪಾರವಾಗಿರುತ್ತದೆ.

iii) ಅನೇಕ ರಾಜಕೀಯ ಘಟಕಗಳ ನಡುವಣ ವ್ಯಾಪಾರವಾಗಿರುತ್ತದೆ.

iv) ವಿಭಿನ್ನ ಆರ್ಥಿಕ ನೀತಿಗಳು ಮತ್ತು ಕಾನೂನುಗಳಿರುತ್ತವೆ.

v) ಅನೇಕ ಕರೆನ್ಸಿ ಹಣಗಳು ಅಸ್ತಿತ್ವದಲ್ಲಿರುತ್ತದೆ.

vi) ನಿರ್ಬಂಧಗಳಿರುತ್ತವೆ.

vii) ಉತ್ಪಾದನಾಂಗಗಳು ಮುಕ್ತವಾಗಿ ಚಲಿಸುವುದಿಲ್ಲ

viii) ಸಾಮರ್ಥ್ಯದಲ್ಲಿ ತುಂಬಾ ವ್ಯತ್ಯಾಸಗಳಿರುತ್ತದೆ.

ix) ತುಂಬಾ ಅಪಾಯಗಳಿರುತ್ತದೆ.

೨. ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಶ್ರಮವಿಭಜನೆಯಿಂದ ಸಾಧಿತವಾಗುವ ವೈಶಿಷ್ಟ ಕಾರಣವಾಗಿರುತ್ತದೆಂದು ಆಡಂ ಸ್ಮಿತ್ ಮತ್ತು ರಿಕಾರ್ಡೋ ಭಾವಿಸುತ್ತಾರೆ.

**ವ್ಯಾಪಾರಕ್ಕೆ ಕಾರಣ (ತಳಹದಿ)**

| ಆಡಂಸ್ಮಿತ್ ಪ್ರಕಾರ ನಿರಪೇಕ್ಷವೆಚ್ಚ ಪ್ರಯೋಜನವೇ ಕಾರಣ | ರಿಕಾರ್ಡೋ ಪ್ರಕಾರ ಸಾಪೇಕ್ಷ ವೆಚ್ಚ ಪ್ರಯೋಜನವೇ ಕಾರಣ |
|---|---|



ದೋಷಗಳು :

i) ಅತಿ ಸರಳತೆ

ii) ಶ್ರಮವೆಚ್ಚಕ್ಕೆ ಮಹತ್ವ

iii) ಪರಿಪೂರ್ಣ ಪೈಪೋಟಿಯ ಕಲ್ಪನೆ.

೪. ವ್ಯಾಪಾರದ ಕರಾರುಗಳು ಆಯಾತ ಮೌಲ್ಯ ಮತ್ತು ನಿರ್ಯಾತ ಮೌಲ್ಯಗಳ ನಡುವಣ ಅನುಪಾತವಾಗಿರುತ್ತದೆ.

**ವ್ಯಾಪಾರದ ಕರಾರುಗಳು**

| ಸರಕು ವ್ಯಾ.ಕ. | ಒಟ್ಟು ಸಾಟಿ ವ್ಯಾ.ಕ. | ಆದಾಯ ವ್ಯಾ.ಕ. |
|---|---|---|
| $Tc = \frac{Px}{pm}$ | $Tg = \frac{Qx}{qm}$ | $T_Y = \frac{PxQx}{pm}$ |

೫ ನಿರ್ಬಂಧ ರಹಿತ, ಸರಕಾರಿ ಹಸ್ತಕ್ಷೇಪ ರಹಿತ ವ್ಯಾಪಾರವು ಮುಕ್ತ ವ್ಯಾಪಾರವಾಗಿರುತ್ತದೆ. ನಿರ್ಬಂಧಿತ, ಸರಕಾರಿ ಹಸ್ತಕ್ಷೇಪದ ವ್ಯಾಪಾರವು ರಕ್ಷಣಾತ್ಮಕ ವ್ಯಾಪಾರವಾಗಿರುತ್ತದೆ. ಇವುಗಳ ನಡುವಿನ ವ್ಯತ್ಯಾಸಗಳು ಹೀಗಿವೆ.

| ಮುಕ್ತ ವ್ಯಾಪಾರ | ರಕ್ಷಣಾತ್ಮಕ ವ್ಯಾಪಾರ |
|---|---|
| i) ನಿರ್ಬಂಧಗಳಿಲ್ಲ | i) ನಿರ್ಬಂಧಗಳಿರುತ್ತದೆ. |
| ii) ಸರಕಾರ ಹಸ್ತಕ್ಷೇಪ ಮಾಡುವುದಿಲ್ಲ | ii) ಸರಕಾರ ಹಸ್ತಕ್ಷೇಪ ಮಾಡುತ್ತದೆ |
| iii) ಮುಕ್ತ ವಿನಿಮಯ ಕ್ರಿಯೆ | iii) ನಿರ್ಬಂಧಿತ ವಿನಿಮಯ ಕ್ರಿಯೆ |
| iv) ಸುಂಕ, ಕೋಟಾ, ಸಬ್ಸಿಡಿಗಳಿಲ್ಲ | iv) ಸುಂಕ, ಕೋಟಾ, ಸಬ್ಸಿಡಿಗಳಿರುತ್ತವೆ |
| v) ಸಂಪನ್ಮೂಲಗಳ ಮುಕ್ತ ಬಳಕೆ | v) ಸಂಪನ್ಮೂಲಗಳ ನಿರ್ಬಂಧಿತ ಬಳಕೆ |
| vi) ಉತ್ಪಾದನೆ ಅಧಿಕವಾಗಿರುತ್ತದೆ. | vi) ಉತ್ಪಾದನೆ ಕಡಿಮೆ ಇರುತ್ತದೆ. |
| vii) ಬೆಲೆಗಳ ಸಮಾನತೆ ಇರುತ್ತದೆ | vii) ಬೆಲೆಗಳ ಸಮಾನತೆ ಇರುವುದಿಲ್ಲ |

| | |
|---|---|
| viii) ಅನುಭೋಗಿಯ ಮಿಗುತೆ ಅಧಿಕವಾಗಿರುತ್ತದೆ. | viii) ಅನುಭೋಗಿಯ ಮಿಗುತೆ ಕಡಿಮೆಯಿರುತ್ತದೆ. |
| ix) ದೇಶೀಯ ಕೈಗಾರಿಕೆಗಳಿಗೆ ಮಾರಕ | ix) ದೇಶೀಯ ಕೈಗಾರಿಕೆಗಳಿಗೆ ಪೂರಕ |
| x) ಶೈಶವಾವಸ್ಥೆಯ ಕೈಗಾರಿಕೆಗಳ ಅಳಿವು | x) ಶೈಶವಾವಸ್ಥೆಯ ಕೈಗಾರಿಕೆಗಳ ಉಳಿವು |
| xi) ಹಿಂದುಳಿದ ದೇಶಗಳ ಪರಾವಲಂಬನೆ ಅಧಿಕವಾಗುತ್ತದೆ. | xi) ಹಿಂದುಳಿದ ದೇಶಗಳ ಸ್ವಾವಲಂಬನೆಗೆ ಅವಕಾಶ ಕಲ್ಪಿಸಿಕೊಡುತ್ತದೆ. |
| xii) ಅಧಿಕ ದಕ್ಷತೆ | xii) ಕಡಿಮೆ ದಕ್ಷತೆ |
| viii) ಉದ್ಯೋಗ ಸೃಷ್ಟಿಯಾಗದು | xiii) ಉದ್ಯೋಗಗಳು ಸೃಷ್ಟಿಯಾಗುತ್ತದೆ. |
| xiv) ಬೇಡಿಕೆಯಾಧರಿತ ಉತ್ಪಾದನೆ | xiv) ಅಗತ್ಯಾಧರಿತ ಉತ್ಪಾದನೆ |
| xv) ಭ್ರಷ್ಟಾಚಾರಕ್ಕೆ ಅವಕಾಶವಿಲ್ಲ | xv) ಭ್ರಷ್ಟಾಚಾರಕ್ಕೆ ಅವಕಾಶವಿರುತ್ತದೆ. |
| xvi) ಸಂಪನ್ಮೂಲಗಳ ಮುಕ್ತ ಹರಿವು | xvi) ಸಂಪನ್ಮೂಲಗಳ ನಿರ್ಬಂಧಿತ ಹರಿವು |
| xvii) ಸಾಮಾಜಿಕ ನ್ಯಾಯ ಸಾಧಿತವಾಗುವುದಿಲ್ಲ. | xvii) ಸಾಮಾಜಿಕ ನ್ಯಾಯ ಸಾಧಿತವಾಗುತ್ತದೆ. |

೫. ವಿದೇಶಿ ಹಣದ ಬೇಡಿಕೆ ಮತ್ತು ಪೂರೈಕೆಯನ್ನು ವಿದೇಶಿ ವಿನಿಮಯವೆಂದು ಕರೆಯಲಾಗುತ್ತದೆ. ವಿದೇಶಿ ಹಣಗಳ ವಿನಿಮಯದರವು ಬೇಡಿಕೆ ಮತ್ತು ಪೂರೈಕೆಗಳಿಂದ ನಿರ್ಧಾರವಾಗುತ್ತದೆ. ಸ್ಥಿರ ವಿನಿಮಯ ದರವು ಆಡಳಿತಾತ್ಮಕವಾಗಿ ನಿರ್ಧಾರವಾದರೆ ತೇಲುವ ವಿನಿಮಯ ದರವು ಬೇಡಿಕೆ ಮತ್ತು ಪೂರೈಕೆಯ ಶಕ್ತಿಗಳಿಂದ ನಿರ್ಧಾರವಾಗುತ್ತದೆ.

**ಸ್ಥಿರ ವಿನಿಮಯದರ**



| **ಒಳಿತುಗಳು** | **ದೋಷಗಳು** |
|---|---|
|  |  |
| i) ಆರ್ಥಿಕಾಭಿವೃದ್ಧಿ | i) ಪಾವತಿಶೇಷ ಸಮಸ್ಯೆಗಳಿರುವಾಗ ಆರ್ಥಿಕ ಸಾರ್ವಭೌಮತೆಗೆ ಧಕ್ಕೆ |
| ii) ವ್ಯಾಪಾರಾಭಿವೃದ್ಧಿ ಕೃತಿಮವಾದುದು | ii) ವಿನಿಮಯ ದರ ಸ್ಥಿರತೆಯು ಪ್ರತಿಗಾಮಿಯಾಗಿರುತ್ತದೆ. |
| iii) ಸಾಲ ವ್ಯವಹಾರಗಳಿಗೆ ಉತ್ತೇಜನ | iii) ದೇಶೀಯ ಹಿತಾಸಕ್ತಿಗಳನ್ನು ಬಲಿಗೊಡುತ್ತದೆ. |

iv) ಆಂತರಿಕ ಸ್ಥಿರತೆ

v) ಕರೆನ್ಸಿ ಬ್ಯಾಂಕುಗಳ ಯಶಸ್ಸಿಗೆ ಪೂರಕ

vi) ಸಟ್ಟಾವ್ಯಾಪಾರಕ್ಕೆ ನಿರುತ್ತೇಜನ

vii) ಆರ್ಥಿಕ ಚಟುವಟಿಕೆಗಳಿಗೆ ಉತ್ತೇಜನ

viii) ವ್ಯಾಪಾರ ಒಪ್ಪಂದಗಳಿಗೆ ಸಹಕಾರಿ.

ix) ಸಂಕೀರ್ಣ ಸಮಸ್ಯೆಗಳಿಗೆ ಪರಿಹಾರ

x) ದೀರ್ಘಾವಧಿ ಹೂಡಿಕೆಗೆ ಉತ್ತೇಜನ

೬. ತೇಲುವ ವಿನಿಮಯ ದರವು ಮಾರುಕಟ್ಟೆ ಶಕ್ತಿಗಳಿಂದ ನಿರ್ಧಾರವಾಗುತ್ತದೆ.




೭. ಯುರೋ ಎಂಬುದು ಐರೋಪ್ಯ ಒಕ್ಕೂಟದ ಸಾರ್ವತ್ರಿಕ ಹಣವಾಗಿದೆ.



೮. ಅಂತಾರಾಷ್ಟ್ರೀಯ ಹಣಕಾಸು ನಿಧಿ ಮತ್ತು ವಿಶ್ವಬ್ಯಾಂಕು ಬ್ರೆಟನ್‌ವುಡ್ಸ್ ಅವಳಿಗಳಾಗಿವೆ. ಅವು ಏಕಕಾಲದಲ್ಲಿ ಕಾರ್ಯಾರಂಭ ಮಾಡಿದವು. ನಿಧಿಯು ಅಲ್ಪಾವಧಿ ಸಾಲಗಳನ್ನು ಮತ್ತು ಬ್ಯಾಂಕು ದೀರ್ಘಾವಧಿ ಸಾಲಗಳನ್ನು ನೀಡುತ್ತದೆ.

**ಉದ್ದೇಶಗಳು**

| **ಅಂತಾರಾಷ್ಟ್ರೀಯ ಹಣಕಾಸು ನಿಧಿ** | **ವಿಶ್ವ ಬ್ಯಾಂಕು** |
|---|---|
| i) ಆರ್ಥಿಕ ಸಹಕಾರ ಮತ್ತು ಸೌಹಾರ್ದತೆ | i) ಪುನಾರಚನೆ ಮತ್ತು ಅಭಿವೃದ್ಧಿ |
| ii) ವಿನಿಮಯದರ ಸ್ಥಿರತೆ | ii) ಖಾಸಗಿ ಹೂಡಿಕೆಗೆ ಉತ್ತೇಜನ |
| iii) ವಿನಿಮಯ ನಿರ್ಬಂಧ ನಿವಾರಣೆ | iii) ದೀರ್ಘಾವಧಿ ಸಂತುಲಿತ ಬೆಳವಣಿಗೆ |
| iv) ಬಹುಪಕ್ಷೀಯ ವ್ಯವಸ್ಥೆಯ ನಿರ್ಮಾಣ | iv) ಹೂಡಿಕೆದಾರರಿಗೆ ರಕ್ಷಣೆ |
| v) ಬಹುಪಕ್ಷೀಯ ಪರಿವರ್ತನೆ | v) ಜೀವನ ಮಟ್ಟದ ಹೆಚ್ಚಳ |
| vi) ಪಾವತಿಶೇಷ ಅಸಮತೋಲನ ನಿವಾರಣೆ | |
| vii) ಸಂತುಲಿತ ಬೆಳವಣಿಗೆಗೆ ಉತ್ತೇಜನ | |
| viii) ಹೂಡಿಕೆಯ ಹೆಚ್ಚಳ | |

**೯. ಬ್ರೆಟನ್‌ವುಡ್ಸ್ ಅವಳಿಗಳ ಸಂಘಟನೆ**

**ಸಂಘಟನೆ**

| ಅಂತಾರಾಷ್ಟ್ರೀಯ ಹಣಕಾಸು ನಿಧಿ | ವಿಶ್ವಬ್ಯಾಂಕು |
|---|---|
| ↓ ಗವರ್ನರರ ಮಂಡಳಿ | ↓ ಗವರ್ನರರ ಮಂಡಳಿ |
| ↓ ಆಡಳಿತ ನಿರ್ದೇಶಕ | ↓ ಅಧ್ಯಕ್ಷ |
| ↓ ನಿರ್ದೇಶಕರ ಮಂಡಳಿ | ↓ ನಿರ್ದೇಶಕರ ಮಂಡಳಿ |
| | ↓ ಸಲಹಾ ಸಮಿತಿ, ಸಾಲ ಸಮಿತಿ |

೧೦. ಬ್ರೆಟನ್‌ವುಡ್ಸ್ ಅವಳಿಗಳ ಕಾರ್ಯಗಳು

| ಅಂತಾರಾಷ್ಟ್ರೀಯ ಹಣಕಾಸು ನಿಧಿ | ವಿಶ್ವ ಬ್ಯಾಂಕು |
| --- | --- |
| ೧) ಅಲ್ಪಾವಧಿ ಸಾಲ ಪೂರೈಕೆ | ೧) ದೀರ್ಘಾವಧಿ ಸಾಲ ಪೂರೈಕೆ |
| ೨) ವಿನಿಮಯ ದರ ನಿರ್ಧಾರ | ೨) ಸ್ವರೂಪ ಹೊಂದಾಣಿಕೆಯ ಸಾಲ ನೀಡಿಕೆ |
| ೩) ಪಾವತಿಶೇಷ ಸಮಸ್ಯೆ ನಿವಾರಣೆ | ೩) ಕೃಷಿಗೆ ಸಾಲ ನೀಡಿಕೆ |
| ೪) ದ್ರವ್ಯತೆಯ ಸಮಸ್ಯೆ ನಿವಾರಣೆ | ೪) ಕೈಗಾರಿಕೆಗಳಿಗೆ ಸಾಲ ನೀಡಿಕೆ |
| ೫) ವಿನಿಮಯ ನಿಯಂತ್ರಣ ನಿವಾರಣೆ | ೫) ಮೂಲಭೂತ ಸೌಲಭ್ಯ ನಿರ್ಮಾಣಕ್ಕೆ ಸಾಲ ನೀಡಿಕೆ |
| ೬) ತಾಂತ್ರಿಕ ಸಹಾಯ | ೬) ತಾಂತ್ರಿಕ ನೆರವು. |

## ೮.೬. ಪಾರಿಭಾಷಿಕ ಕೋಶ

Absolute cost advantage = ಗರಿಷ್ಟ ವೆಚ್ಚ ಪ್ರಯೋಜನ / ವ್ಯಾಪಾರದ ತಳಹದಿಯನ್ನು ವಿಶ್ಲೇಷಿಸಲು ಆಡಂಸ್ಮಿತ್ ಬಳಸಿದ ಸಿದ್ಧಾಂತ.

Balanced development = ಸಂತುಲಿತ ಅಭಿವೃದ್ಧಿ / ಆರ್ಥಿಕತೆಯ ಎಲ್ಲಾ ವಲಯಗಳ ಒಂದೇ ದರದ ಅಭಿವೃದ್ಧಿ.

Balance of payments = ಪಾವತಿಶೇಷ : ದೇಶವೊಂದು ಜಗತ್ತಿನ ಇತರ ದೇಶಗಳೊಡನೆ ಇರಿಸಿಕೊಳ್ಳುವ ಆರ್ಥಿಕ ವ್ಯವಹಾರಗಳ ವ್ಯವಸ್ಥಿತ ದಾಖಲೆ.

Central Bank = ಕೇಂದ್ರ ಬ್ಯಾಂಕು / ಸರಕಾರದ ಆರ್ಥಿಕ ವ್ಯವಹಾರಗಳನ್ನು ನಡೆಸುವ, ವಿತ್ತೀಯ ನೀತಿಯನ್ನು ಅನುಷ್ಠಾನಕ್ಕೆ ತರುವ ಮತ್ತು ಸಮಸ್ತ ಬ್ಯಾಂಕಿಂಗ್ ಚಟುವಟಿಕೆಗಳನ್ನು ನಿಯಂತ್ರಿಸುವ ಅಧಿಕಾರ ಹೊಂದಿರುವ ಬ್ಯಾಂಕು.

Commodity Terms of Trade (CTOT) : ಸರಕು ವ್ಯಾಪಾರ ಕರಾರುಗಳು / ನಿರ್ಯಾತ ಮತ್ತು ಆಯಾತ ಬೆಲೆಗಳ ನಡುವಣ ಅನುಪಾತ.

Comparative cost advantage = ತುಲನಾತ್ಮಕ ವೆಚ್ಚ ಪ್ರಯೋಜನ / ವ್ಯಾಪಾರದ ತಳಹದಿಯನ್ನು ವಿಶ್ಲೇಷಿಸಲು ಡೇವಿಡ್ ರಿಕಾರ್ಡೋ ಬಳಸಿದ ಸಿದ್ಧಾಂತ.

Currency = ಕರೆನ್ಸಿ ಹಣ / ದೇಶವೊಂದರ ವಿನಿಮಯ ಮಾಧ್ಯಮ.

Division of Labour = ಶ್ರಮ ವಿಭಜನೆ / ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟ ಕೆಲಸದಲ್ಲಿ ನೈಪುಣ್ಯ ಪಡೆಯುವಂತೆ ಒಂದು ಕೆಲಸವನ್ನು ವಿವಿಧ ಹಂತಗಳಾಗಿ ವಿಭಜಿಸಿ ಅನೇಕರಿಗೆ ಹಂಚುವುದು.

Domestic trade = ದೇಶೀಯ ವ್ಯಾಪಾರ / ಒಂದು ದೇಶದ ಗಡಿಗಳೊಳಗೆ ನಡೆಯುವ ವ್ಯಾಪಾರ.

Euro - ಯುರೋ / ಐರೋಪ್ಯ ಒಕ್ಕೂಟವು ಅನುಷ್ಠಾನಕ್ಕೆ ತಂದಿರುವ ವಿನಿಮಯ ಮಾಧ್ಯಮ ಅಥವಾ ಏಕರೂಪದ ಕರೆನ್ಸಿ.

Exchange banks = ವಿನಿಮಯ ಬ್ಯಾಂಕುಗಳು / ವಿದೇಶೀ ವಿನಿಮಯವನ್ನು ಮಾರುವ ಮತ್ತು ಕೊಳ್ಳುವ ಹಣಕಾಸು ಸಂಸ್ಥೆಗಳು.

Exports = ನಿರ್ಯಾತಗಳು / ದೇಶವೊಂದು ಇತರ ದೇಶಗಳಿಗೆ ಮಾರಾಟ ಮಾಡುವ ಸರಕುಗಳು ಮತ್ತು ಸೇವೆಗಳು.

Foreign exchange = ವಿದೇಶೀ ವಿನಿಮಯ / ಇತರ ದೇಶಗಳ ಕರೆನ್ಸಿ ಹಣ.

Foreign exchange market = ವಿದೇಶೀ ವಿನಮಯ ಮಾರುಕಟ್ಟೆ / ವಿದೇಶೀ ಹಣ ಮಾರಲ್ಪಡುವ ಮತ್ತು ಕೊಳ್ಳಲ್ಪಡುವ ಸ್ಥಳ.

Foreign exchange rate = ವಿದೇಶೀ ವಿನಿಮಯದರ / ದೇಶಗಳ ಕರೆನ್ಸಿಗಳ ನಡುವಣ

ವಿನಿಮಯ ಮೌಲ್ಯ.

Foreign trade = ವಿದೇಶೀ ವ್ಯಾಪಾರ / ದೇಶಗಳ ನಡುವೆ ನಡೆಯುವ ವ್ಯಾಪಾರ.

Gold standard = ಸುವರ್ಣ ಪ್ರಮಿತಿ/ ಹಣದ ಆಂತರಿಕ ಪೂರೈಕೆ ಮತ್ತು ಬಾಹ್ಯ ಪಾವತಿಗಳಿಗೆ ಚಿನ್ನದ ಬಳಕೆಯಾಗುತ್ತಿದ್ದ ಒಂದು ವ್ಯವಸ್ಥೆ.

Gross Barter Terms of Trade (GBTOT) = ಒಟ್ಟು ಸಾಟಿ ವ್ಯಾಪಾರದ ಕರಾರುಗಳು / ನಿರ್ಯಾತ ಸರಕುಗಳ ಪ್ರಮಾಣ ಮತ್ತು ಆಯಾತ ಸರಕುಗಳ ಪ್ರಮಾಣದ ನಡುವಿನ ಅನುಪಾತ.

Imports = ಆಯಾತಗಳು / ದೇಶವೊಂದು ಇತರ ದೇಶಗಳಿಂದ ಖರೀದಿಸುವ ಸರಕುಗಳು ಮತ್ತು ಸೇವೆಗಳು.

Import tariffs = ಆಯಾತ ಸುಂಕಗಳು / ದೇಶವೊಂದು ಇತರ ದೇಶಗಳಿಂದ ತರುವ ಸರಕು ಮತ್ತು ಸೇವೆಗಳ ಮೇಲೆ ವಿಧಿಸುವ ತೆರಿಗೆಗಳು.

Income Terms of Trade (ITOT) : ಆದಾಯ ವ್ಯಾಪಾರದ ಕರಾರುಗಳು = ನಿರ್ಯಾತ ಸ್ವೀಕೃತಿಗಳ ಮತ್ತು ಆಯಾತ ಪಾವತಿಗಳ ನಡುವಿನ ಅನುಪಾತ.

Internal trade = ಆಂತರಿಕ ವ್ಯಾಪರ / ದೇಶವೊಂದರ ಭೌಗೋಳಿಕ ಗಡಿಗಳೊಳಗೆ ನಡೆಯ್ಯುವ ವ್ಯಾಪಾರ.

International trade = ಅಂತಾರಾಷ್ಟ್ರೀಯ ವ್ಯಾಪಾರ / ರಾಷ್ಟ್ರಗಳ ನಡುವಣ ವ್ಯಾಪಾರ.

Mercantilism = ವಾಣಿಜ್ಯಪಂಥ / ಹದಿನಾರು ಮತ್ತು ಹದಿನೇಳನೆ ಶತಮಾನಗಳಲ್ಲಿ ಪ್ರಬಲವಾಗಿದ್ದ, ವ್ಯಾಪಾರಕ್ಕೆ ಮತ್ತು ಪ್ರಭುತ್ವದ ಪರಮಾಧಿಕಾರಕ್ಕೆ ಮಹತ್ವ ನೀಡಿದ್ದ ಅರ್ಥಪಂಥ.

Net Barter Terms of Trade (NBTOT) = ನಿವ್ವಳ ಸಾಟಿ ವ್ಯಾಪಾರದ ಕರಾರುಗಳು / ನಿರ್ಯಾತ ಮತ್ತು ಆಯಾತ ಮೌಲ್ಯಗಳ ನಡುವಣ ಅನುಪಾತ

Par value = ಸಮಮೌಲ್ಯ / ಕರೆನ್ಸಿಗಳ ಮೌಲ್ಯವನ್ನು ಸಾಮಾನ್ಯವಾಗಿ ಚಿನ್ನ ಅಥವಾ ಡಾಲರುಗಳ ರೂಪದಲ್ಲಿ ಪ್ರಸ್ತುತ ಪಡಿಸುವುದು.

Physiocracy = ಕೃಷಿ ಪಂಥ / ಹದಿನೆಂಟನೆಯ ಶತಮಾನದಲ್ಲಿ ಪ್ರಬಲವಾಗಿದ್ದ, ಕೃಷಿ ಮತ್ತು ಪ್ರಭುತ್ವದ ಹಸ್ತಕ್ಷೇಪ ರಾಹಿತ್ಯಕ್ಕೆ ಮಹತ್ವ ನೀಡಿದ್ದ ಅರ್ಥಪಂಥ.

Quotas = ಕೋಟಾಗಳು ಪ್ರಮಾಣ ನಿಯಂತ್ರಣ / ಸರಕುಗಳ ನಿರ್ಯಾತ ಪ್ರಮಾಣದ ಮೇಲೆ ವಿಧಿಸುವ ಮಿತಿಗಳು.

Special Drawing Rights (SDRs) = ವಿಶೇಷ ಪಡೆಯುವ ಹಕ್ಕುಗಳು / ಅಂತಾರಾಷ್ಟ್ರೀಯ ದ್ರವ್ಯತೆಯ ಸಮಸ್ಯೆ ಪರಿಹರಿಸಲು ಅಂತರಾಷ್ಟ್ರೀಯ ಹಣಕಾಸು ನಿಧಿ ಹಾಕಿಕೊಂಡಿರುವ ಒಂದು ಯೋಜನೆ.

Specialisation = ವೈಶಿಷ್ಟ್ಯ / ಶ್ರಮ ವಿಭಜನೆಯಿಂದ ಪಡೆದ ನೈಪುಣ್ಯ.

Structural Adjustment Loans(SALs) = ಸ್ವರೂಪ ಹೊಂದಾಣಿಕೆಯ ಸಾಲಗಳು/ ಆರ್ಥಿಕತೆಗಳ ರಚನಾ ವಿನ್ಯಾಸ ಸರಿಪಡಿಸಿ ಅಭಿವೃದ್ಧಿ ಸಾಧನೆಗೆ ವಿಶ್ವಬ್ಯಾಂಕು ನೀಡುವ ಸಾಲಗಳು.

Subsidies = ಸಬ್ಸಿಡಿಗಳು; ಸಹಾಯಧನ / ದೇಶೀಯ ಉತ್ಪನ್ನಗಳ ರಕ್ಷಣೆಗೆ ಸರಕಾರ ನೀಡುವ ಹಣರೂಪೀ ನೆರವು.

Tariffs = ಸುಂಕಗಳು / ಸರಕು ಮತ್ತು ಸೇವೆಗಳ ಆಯಾತದ ಮೇಲೆ ವಿಧಿಸಲಾಗುವ ತೆರಿಗೆಗಳು.

Terms of Trade (TOT) = ವ್ಯಾಪಾರದ ಕರಾರುಗಳು / ನಿರ್ಯಾತಗಳ ಮತ್ತು ಆಯಾತಗಳ ನಡುವಿನ ವಿನಿಮಯ ದರ.

Trade = ವ್ಯಾಪಾರ / ಸರಕು - ಸೇವೆಗಳ ವಿನಿಮಯ.

## ೮.೭. ಪ್ರಶ್ನೆಗಳು

I. ಈ ಕೆಳಗಿನ ಪ್ರಶ್ನೆಗಳಿಗೆ ತಲಾ ಒಂದು ವಾಕ್ಯದಲ್ಲಿ ಉತ್ತರಿಸಿ (೧ ಅಂಕ)

೧. ವ್ಯಾಪಾರವೆಂದರೇನು ?

೨. ಆಂತರಿಕ (ದೇಶೀಯ) ವ್ಯಾಪಾರ ಎಂದರೇನು ?

೩. ಅಂತಾರಾಷ್ಟ್ರೀಯ (ವಿದೇಶೀ) ವ್ಯಾಪಾರವೆಂದರೇನು ?

೪. ನಿರಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಯಾರು ಪರಿಚಯಿಸಿದರು?

೫. ಸಾಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಯಾರು ಪರಿಚಯಿಸಿದರು?

೬. ವ್ಯಾಪಾರದ ಕರಾರುಗಳೆಂದರೇನು ?

೭. ಸರಕು ವ್ಯಾಪಾರದ ಕರಾರುಗಳೆಂದರೇನು ?

೮. ಸರಕು ವ್ಯಾಪಾರದ ಕರಾರುಗಳನ್ನು ಕಂಡು ಹಿಡಿಯುವ ಸೂತ್ರ ಯಾವುದು?

೯. ಆದಾಯ ವ್ಯಾಪಾರದ ಕರಾರಗುಳೆಂದರೇನು ?

೧೦. ಆದಾಯ ವ್ಯಾಪಾರದ ಕರಾರುಗಳನ್ನು ಕಂಡು ಹಿಡಿಯುವ ಸೂತ್ರ ಯಾವುದು?

೧೧. ವ್ಯಾಪಾರ ನೀತಿಯೆಂದರೇನು ?

೧೨. ಮುಕ್ತ ವ್ಯಾಪಾರ ನೀತಿಯೆಂದರೇನು ?

೧೩. ರಕ್ಷಣಾತ್ಮಕ ವ್ಯಾಪಾರ ನೀತಿಯೆಂದರೇನು ?

೧೪. ರಕ್ಷಣಾತ್ಮಕ ನೀತಿಯ ಪರಿಕರಗಳು ಯಾವುವು ?

೧೫. ರಕ್ಷಣಾತ್ಮಕ ಸುಂಕವೆಂದರೇನು ?

೧೬. ಕೋಟಾಗಳು ಎಂದರೇನು ?

೧೭. ಸಬ್ಸಿಡಿಗಳೆಂದರೇನು ?

೧೮. ವಿದೇಶೀ ವಿನಿಮಯವೆಂದರೇನು ?

೧೯. ವಿದೇಶೀ ವಿನಿಮಯ ದರವೆಂದರೇನು ?

೨೦. ವಿದೇಶೀ ವಿನಿಮಯ ಮಾರುಕಟ್ಟೆ ಎಂದರೇನು ?

೨೧. ವಿದೇಶೀ ವಿನಿಮಯದರ ಹೇಗೆ ನಿರ್ಧಾರವಾಗುತ್ತದೆ ?

೨೨. ಸ್ಥಿರ ವಿನಿಮಯದರ ವೆಂದರೇನು ?

೨೩. ತೇಲುವ ವಿನಿಮಯದರ ವೆಂದರೇನು ?

೨೪. ಯುರೋ ಎಂದರೇನು ?

೨೫. IMF - ಇದನ್ನು ವಿಸ್ತರಿಸಿ.

೨೬. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಪ್ರಧಾನಕಾರ್ಯಾಲಯ ಎಲ್ಲಿದೆ ?

೨೭. SDRs - ಇದನ್ನು ವಿಸ್ತರಿಸಿ.

೨೮. ವಿಶೇಷ ಪಡೆಯುವ ಹಕ್ಕಗಳೆಂದರೇನು?

೨೯. ಕೇಂದ್ರ ಬ್ಯಾಂಕುಗಳ ಬ್ಯಾಂಕು ಯಾವುದು?

೩೦. IBRD - ಇದನ್ನು ವಿಸ್ತರಿಸಿ.

೩೧. ವಿಶ್ವ ಬ್ಯಾಂಕಿನ ಪ್ರಧಾನ ಕಾರ್ಯಾಲಯ ಎಲ್ಲಿದೆ ?

೩೨. ಸ್ವರೂಪ ಹೊಂದಾಣಿಕೆಯ ಸಾಲಗಳೆಂದರೇನು ?

**II. ಕೆಳಗಿನ ಪ್ರಶ್ನೆಗಳಿಗೆ ತಲಾ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ (೨ ಅಂಕಗಳು)**

೩೩. ನಿರಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ವ್ಯಾಖ್ಯಾನಿಸಿ.

೩೪. ಆಡಂಸ್ಮಿತ್ತನ ಪ್ರಕಾರ ವ್ಯಾಪಾರದ ತಳಹದಿ ಯಾವುದು ?

೩೫. ಸಾಪೇಕ್ಷ ವೆಚ್ಚ ಪುಯೋಜನ ಪರಿಕಲ್ಪನೆಯನ್ನು ವ್ಯಾಖ್ಯಾನಿಸಿ.

೩೬. ಡೇವಿಡ್ ರಿಕಾರ್ಡೋನ ಪ್ರಕಾರ ವ್ಯಾಪಾರದ ತಳಹದಿಯಾವುದು ?

೩೭. ವ್ಯಾಪಾರದ ಕರಾರುಗಳನ್ನು ವ್ಯಾಖ್ಯಾನಿಸಿ.

೩೮. ಸರಕು ವ್ಯಾಪಾರದ ಕರಾರುಗಳ ಅರ್ಥ ತಿಳಿಸಿ.

೩೯. $Tc = \frac{Px}{pm}$ ಈ ಸೂತ್ರವನ್ನು ವಿವರಿಸಿ.

೪೦. ಆದಾಯ ವ್ಯಾಪಾರದ ಕರಾರುಗಳ ಅರ್ಥ ತಿಳಿಸಿ.

೪೧. $Ty = \frac{P \times Qm}{pm}$ ಈ ಸೂತ್ರವನ್ನು ವಿವರಿಸಿ.

೪೨. ಮುಕ್ತ ವ್ಯಾಪಾರ ನೀತಿಯನ್ನು ವ್ಯಾಖ್ಯಾನಿಸಿ.

೪೩. ರಕ್ಷಣಾತ್ಮಕ ವ್ಯಾಪಾರ ನೀತಿಯನ್ನು ವ್ಯಾಖ್ಯಾನಿಸಿ.

೪೪. ರಕ್ಷಣಾತ್ಮಕ ನೀತಿಯ ಪರಿಕರಗಳು ಯಾವುವು ?

೪೫. ವಿದೇಶೀ ವಿನಿಮಯದ ಅರ್ಥ ವಿವರಿಸಿ.

೪೬. ವಿದೇಶೀ ವಿನಿಮಯ ದರದ ಅರ್ಥ ತಿಳಿಸಿ.

೪೭. ಸ್ಥಿರವಿನಿಮಯ ದರವು ತೇಲುವ ವಿನಿಮಯದರ ಕ್ಕಿಂತ ಹೇಗೆ ಭಿನ್ನವಾಗಿದೆ?

೪೮. ಯುರೋದ ನಾಲ್ಕು ಪ್ರಯೋಜನಗಳನ್ನು ತಿಳಿಸಿ.

೪೯. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ನಾಲ್ಕು ಉದ್ದೇಶಗಳನ್ನು ತಿಳಿಸಿ.

೫೦. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಸಂಘಟನೆಯ ಸ್ವರೂಪ ಹೇಗಿದೆ?

೫೧. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ನಾಲ್ಕು ಕಾರ್ಯಗಳನ್ನು ತಿಳಿಸಿ.

೫೨. ಎಸ್.ಡಿ. ಆರ್.ನ ಉದ್ದೇಶಗಳೇನು ?

೫೩. ವಿಶ್ವಬ್ಯಾಂಕಿನ ನಾಲ್ಕು ಉದ್ದೇಶಗಳನ್ನು ತಿಳಿಸಿ.

೫೪. ವಿಶ್ವಬ್ಯಾಂಕಿನ ಸಂಘಟನೆಯ ಸ್ವರೂಪ ಹೇಗಿರುತ್ತದೆ ?

೫೫. ವಿಶ್ವ ಬ್ಯಾಂಕಿನ ನಾಲ್ಕು ಕಾರ್ಯಗಳನ್ನು ತಿಳಿಸಿ.

೫೬. ವಿಶ್ವ ಬ್ಯಾಂಕು ಕೃಷಿಗೆ ಹೇಗೆ ಉತ್ತೇಜನ ನೀಡುತ್ತದೆ ?

೫೭. ವಿಶ್ವಬ್ಯಾಂಕು ಕೈಗಾರಿಕೆಗಳನ್ನು ಹೇಗೆ ಪ್ರೋತ್ಸಾಹಿಸುತ್ತದೆ ?

೫೮. ಆರ್ಥಿಕತೆಯ ರಚನಾ ವಿನ್ಯಾಸ ಹೊಂದಾಣಿಕೆಯಿಂದ ಸಿಗುವ ಪ್ರಯೋಜನಗಳೇನು?

೫೯. ವಿಶ್ವಬ್ಯಾಂಕಿನ ಸಾಲದ ವಿಧಗಳು ಯಾವುವು ?

೬೦. ವಿಶ್ವಬ್ಯಾಂಕಿನ ಸಾಲ ನೀಡಿಕೆಯ ನಾಲ್ಕು ಹಂತಗಳಾವುವು?

**III. ಕೆಳಗಿನ ಪ್ರಶ್ನೆಗಳಿಗೆ ೧೫ ವಾಕ್ಯಗಳಲ್ಲಿ ಉತ್ತರಿಸಿ (೨೫ ಅಂಕಗಳು)**

೬೧. ವ್ಯಾಪಾರವೆಂದರೇನು? ನಿರಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೬೨. ವ್ಯಾಪಾರದ ಅರ್ಥ ತಿಳಿಸಿ. ಸಾಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೬೩. ವ್ಯಾಪಾರದ ಕರಾರುಗಳೆಂದರೇನು ? ಸರಕು ವ್ಯಾಪಾರದ ಕರಾರುಗಳ ಮತ್ತು ಆದಾಯ ವ್ಯಾಪಾರದ ಕರಾರುಗಳ ಪರಿಕಲ್ಪನೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

೬೪. ಮುಕ್ತ ವ್ಯಾಪಾರ ನೀತಿ ಎಂದರೇನು? ಅದರ ಪ್ರಯೋಜನಗಳನ್ನು ಮತ್ತು ದೋಷಗಳನ್ನು ತಿಳಿಸಿ.

೬೫. ರಕ್ಷಣಾತ್ಮಕ ನೀತಿಯೆಂದರೇನು ? ಅದರ ಪ್ರಯೋಜನಗಳನ್ನು ಮತ್ತು ದೋಷಗಳನ್ನು ತಿಳಿಸಿ.

೬೬. ಮುಕ್ತ ಮತ್ತು ರಕ್ಷಣಾತ್ಮಕ ವ್ಯಾಪಾರ ನೀತಿಗಳೆಂದರೇನು? ಅವೆರಡರ ನಡುವಣ ವ್ಯತ್ಯಾಸಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

೬೭. ವಿದೇಶಿ ವಿನಿಮಯ ಮತ್ತು ವಿನಿಮಯದರ ವೆಂದರೇನು ? ವಿದೇಶೀ ವಿನಿಮಯದರ ಹೇಗೆ ನಿರ್ಧಾರವಾಗುತ್ತದೆ ?

೬೮. ಸ್ಥಿರ ವಿನಿಮಯ ದರವೆಂದರೇನು ? ಅದರ ಪ್ರಯೋಜನಗಳನ್ನು ಮತ್ತು ಮಿತಿಗಳನ್ನು ಸಂಕ್ಷಿಪ್ತವಾಗಿ ತಿಳಿಸಿ.

೬೯. ತೇಲುವ ವಿನಿಮಯದರವೆಂದರೇನು ? ಅದರಪ್ರಯೋಜನ ಮತ್ತು ಮಿತಿಗಳನ್ನು ಸಂಕ್ಷಿಪ್ತವಾಗಿ ತಿಳಿಸಿ.

೭೦. ಯುರೋ ಎಂದರೇನು ? ಅದರ ಪ್ರಯೋಜನಗಳನ್ನು ವಿವರಿಸಿ.

೭೧. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಉದ್ದೇಶಗಳನ್ನು, ಸಂಘಟನೆಯನ್ನು ಮತ್ತು ಕಾರ್ಯಗಳನ್ನು ಸಂಕ್ಷಿಪ್ತವಾಗಿ ತಿಳಿಸಿ.

೭೨. ವಿಶೇಷ ಪಡೆಯುವ ಹಕ್ಕುಗಳೆಂದರೇನು ? ಅವು ಹೇಗೆ ಕಾರ್ಯ ನಿರ್ವಹಿಸುತ್ತದೆ?

೭೩. ವಿಶ್ವ ಬ್ಯಾಂಕಿನ ಉದ್ದೇಶಗಳನ್ನು, ಸಂಘಟನೆಯನ್ನು ಮತ್ತು ಕಾರ್ಯಗಳನ್ನು ಸಂಕ್ಷಿಪ್ತವಾಗಿ ತಿಳಿಸಿ.

೭೪. ವಿಶ್ವ ಬ್ಯಾಂಕು ನೀಡುವ ಸ್ವರೂಪ ಹೊಂದಾಣಿಕೆ ಸಾಲಗಳ ಬಗ್ಗೆ ಲಘು ಟಿಪ್ಪಣಿ ಬರೆಯಿರಿ.

IV. ಕೆಳಗಿನ ಪ್ರಶ್ನೆಗಳಿಗೆ ತಲಾ ೪೦ ವಾಕ್ಯಗಳಲ್ಲಿ ಉತ್ತರಿಸಿ (೧೦ ಅಂಕಗಳು)

೨೫. ವ್ಯಾಪಾರದ ತಳಹದಿಯಾಗಿ ನಿರಪೇಕ್ಷ ಮತ್ತು ಸಾಪೇಕ್ಷ ವೆಚ್ಚ ಪ್ರಯೋಜನ ಪರಿಕಲ್ಪನೆಗಳನ್ನು ವಿವರಿಸಿ.

೨೬. ವ್ಯಾಪಾರದ ಕರಾರುಗಳ ಅರ್ಥ ತಿಳಿಸಿ. ಸರಕು ಮತ್ತು ಆದಾಯ ವ್ಯಾಪಾರದ ಕರಾರುಗಳ ಪರಿಕಲ್ಪನೆಗಳನ್ನು ವಿವರಿಸಿ.

೨೭. ಮುಕ್ತ ವ್ಯಾಪಾರನೀತಿಯ ಅರ್ಥವನ್ನು ತಿಳಿಸಿ, ಅದರ ಪ್ರಯೋಜನಗಳನ್ನು ಮತ್ತು ದೋಷಗಳನ್ನು ವಿವರಿಸಿ.

೨೮. ರಕ್ಷಣಾತ್ಮಕ ನೀತಿಯ ಅರ್ಥವನ್ನು ತಿಳಿಸಿ. ಅದರಪ್ರಯೋಜನಗಳನ್ನು ಮತ್ತು ದೋಷಗಳನ್ನು ವಿವರಿಸಿ.

೨೯. ಮುಕ್ತ ಮತ್ತು ರಕ್ಷಣಾತ್ಮಕ ವ್ಯಾಪಾರ ನೀತಿಗಳ ಅರ್ಥ ತಿಳಿಸಿ. ಅವೆರಡರ ನಡುವಣ ವ್ಯತ್ಯಾಸಗಳನ್ನು ವಿವರಿಸಿ.

೩೦. ವಿದೇಶಿ ವಿನಿಮಯದ ಅರ್ಥ ತಿಳಿಸಿ. ಸ್ಥಿರ ಮತ್ತು ತೇಲುವ ವಿನಿಮಯ ದರಗಳ ಪ್ರಯೋಜನಗಳನ್ನು ಮತ್ತು ಮಿತಿಗಳನ್ನು ವಿವರಿಸಿ.

೩೧. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಉದ್ದೇಶಗಳೇನು ? ಅದರ ಸಂಘಟನೆಯನ್ನು ಮತ್ತು ಕಾರ್ಯಗಳನ್ನು ವಿವರಿಸಿ.

೩೨. ವಿಶ್ವ ಬ್ಯಾಂಕಿನ ಉದ್ದೇಶಗಳೇನು? ಅದರ ಸಂಘಟನೆಯನ್ನು ಮತ್ತು ಕಾರ್ಯಗಳನ್ನು ವಿವರಿಸಿ.

**೩.೫. ಪ್ರಾಯೋಗಿಕ ಕಾರ್ಯ ಯೋಜನೆಗಳು ಮತ್ತು ನಿರೂಪಣಗಳು**

೩.೫.೧. ಡಾಲರು, ಯೆನ್ನು, ಯುರೋ ಮತ್ತು ರೂಪಾಯಿ ನಡುವಣ ದೈನಂದಿನ ವಿನಿಮಯ ದರಗಳ ಪ್ರವೃತ್ತಿಯ ಆಧಾರದಲ್ಲಿ ನಕ್ಷೆಯೊಂದನ್ನು ರಚಿಸುವುದು.

೩.೫.೨. ವೆಬ್ ಸೈಟ್‌ಗಳನ್ನು ಸಂದರ್ಶಿಸಿ ಅಂತಾರಾಷ್ಟ್ರೀಯ ಹಣಕಾಸು ನಿಧಿ ಮತ್ತು ವಿಶ್ವಬ್ಯಾಂಕಿನ ಸಾಧನೆಗಳ ಬಗ್ಗೆ ಪ್ರಬಂಧ ರಚಿಸುವುದು.

೩.೫.೩. ಐರೋಪ್ಯ ಒಕ್ಕೂಟದ ಬಗ್ಗೆ ಸಮಗ್ರ ಮಾಹಿತಿ ಸಂಗ್ರಹಿಸಿ ಪ್ರಬಂಧ ರಚಿಸುವುದು.

೩.೫.೪. ಯುರೋಪು ಖಂಡದ ನಕ್ಷೆ ಬಿಡಿಸಿ ಅದರಲ್ಲಿ ಐರೋಪ್ಯ ಒಕ್ಕೂಟದ ಸದಸ್ಯ ದೇಶಗಳನ್ನು ಗುರುತಿಸಿ.

# ಅನುಬಂಧಗಳು

## ಅನುಬಂಧ ೧

## ಪ್ರಾಯೋಗಿಕ ಅಧ್ಯಯನ ಯೋಜನೆಗಳು ಮತ್ತು ಹೊಣೆಗಳು

ಕರ್ನಾಟಕದ ಪದವಿಪೂರ್ವ ಶಿಕ್ಷಣ ಇಲಾಖೆಯು ೨೦೦೪-೦೫ನೆಯ ಸಾಲಿಗೆ ನಿಯಮಿಸಿರುವ ಅರ್ಥಶಾಸ್ತ್ರದ ಪಠ್ಯಕ್ರಮದಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಸೈದ್ಧಾಂತಿಕ ಭಾಗ ಅಥವಾ ತಾತ್ವಿಕ ಭಾಗ. ಎರಡನೆಯದು ಪ್ರಾಯೋಗಿಕ ಭಾಗ ಅಥವಾ ಎಂಪೆರಿಕಲ್ ಭಾಗ. ಸೈದ್ಧಾಂತಿಕ ಭಾಗಕ್ಕೆ ೯೦ ಅಂಕಗಳನ್ನು ಮತ್ತು ಪ್ರಾಯೋಗಿಕ ಭಾಗಕ್ಕೆ ೧೦ ಅಂಕಗಳನ್ನು ನಿಗದಿಪಡಿಸಲಾಗಿದೆ. ಹಿಂದಿನ ಪಠ್ಯಕ್ರಮದಲ್ಲಿ ಇಂತಹ ಪ್ರಾಯೋಗಿಕ ಭಾಗವಿರಲಿಲ್ಲ. ಪ್ರಾಯೋಗಿಕ ಭಾಗವನ್ನು ಅರ್ಥಶಾಸ್ತ್ರಕ್ಕೆ ನಿಯಮಿಸಿ ಪದವಿಪೂರ್ವ ಶಿಕ್ಷಣ ಇಲಾಖೆಯ ಕ್ರಮವು ಶ್ಲಾಘನೀಯವಾದುದಾಗಿದೆ. ಬೋಧನೆ ಮತ್ತು ಕಲಿಕೆಗೆ ಇದು ಹೊಸ ಆಯಾಮವೊಂದನ್ನು ನೀಡಿದೆ. ಕಲಾ ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ಭಾಗವನ್ನು ನಿಯಮಿಸಿರುವುದು ಕರ್ನಾಟಕಕ್ಕೆ ಸಂಬಂಧಿಸಿದಂತೆ ಅತ್ಯಂತ ವಿನೂತನ ಕ್ರಮವಾಗಿದೆ.

ಈ ಪ್ರಾಯೋಗಿಕ ಭಾಗವನ್ನು ವಿದ್ಯಾರ್ಥಿಗಳು ಹೇಗೆ ನಿರ್ವಹಿಸಬೇಕು ಮತ್ತು ಅಧ್ಯಾಪಕರಿಂದ ಯಾವ ಬಗೆಯ ನಿರ್ದೇಶಕ ಮತ್ತು ಮಾರ್ಗದರ್ಶನ ಪಡೆಯಬೇಕು ಎಂಬುದರ ಸ್ಥೂಲ ವಿವರಣೆಯನ್ನು ಇಲ್ಲಿ ನೀಡಲಾಗಿದೆ. ಪ್ರತಿ ಅಧ್ಯಾಯಕ್ಕೆ ಸಂಬಂಧಿಸಿದಂತೆ ಯಾವ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ಕೈಗೊಳ್ಳಬಹುದು ಎಂಬ ಒಂದು ಪಟ್ಟಿಯನ್ನು ಇಲ್ಲಿ ನೀಡಲಾಗಿದೆ. ಇದು ವಿದ್ಯಾರ್ಥಿ ಸಮುದಾಯಕ್ಕೆ ಉಪಯೋಗವಾಗುತ್ತದೆ ಎಂದು ನಂಬಲಾಗಿದೆ. ಇಲ್ಲಿ ನೀಡಿರುವ ಪಟ್ಟಿಯು ಅಂತಿಮವಾದುದೇನಲ್ಲ. ಇದೊಂದು ಸೂಚಿಫಲಕವೆಂದು ತಿಳಿದರೆ ಸಾಕು. ಸೃಜನಶೀಲವಾದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಬೇರೆ ರೀತಿಯಲ್ಲಿ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ರೂಪಿಸಿಕೊಳ್ಳಬಹುದು.

ಸೈದ್ಧಾಂತಿಕ/ತಾತ್ವಿಕವಾದ ಸಂಗತಿಗಳು ಮತ್ತು ಅವುಗಳನ್ನು ಕುರಿತ ಚರ್ಚೆ ಮೂಲತಃ ಅಮೂರ್ತವಾಗಿರುತ್ತವೆ. ಪ್ರತಿಯೊಂದು ಜ್ಞಾನಶಿಸ್ತುವಿನಲ್ಲಿ ಸಿದ್ಧಾಂತಗಳಿರುತ್ತವೆ, ನಿಯಮಗಳಿರುತ್ತವೆ, ತತ್ವಗಳಿರುತ್ತವೆ. ಈ ನಿಯಮ, ತತ್ವ ಸಿದ್ಧಾಂತಗಳು ಆಚರಣೆಯಲ್ಲಿ

ಹೇಗಿರುತ್ತವೆ ಎಂಬುದನ್ನು ತಿಳಿಯುವುದು ತುಂಬಾ ರೋಚಕವಾಗಿರುತ್ತದೆ. ಇಂತಹ ಕ್ರಮದಿಂದ ಅಮೂರ್ತವಾದ ತತ್ವ-ನಿಯಮ-ಸಿದ್ಧಾಂತಗಳನ್ನು ವಿದ್ಯಾರ್ಥಿಗಳು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು ಮತ್ತು ಮನನ ಮಾಡಿಕೊಳ್ಳಬಹುದು.

ಸಿದ್ಧಾಂತಗಳು ಆಚರಣೆಯಲ್ಲಿ ಯಾವ ಸ್ವರೂಪ ತಳೆಯುತ್ತವೆ ಎಂಬುದು ತುಂಬಾ ಕುತೂಹಲಕಾರಿಯಾದ ಸಂಗತಿಯಾಗಿದೆ. ಇಂತಹ ಕ್ರಮದಿಂದ ಸೈದ್ಧಾಂತಿಕತೆ ಹಾಗೂ ಪ್ರಾಯೋಗಿಕತೆಗಳು ನಡುವೆ ಅನುಸಂಧಾನ ಸಾಧ್ಯವಾಗುತ್ತದೆ. ಸಿದ್ಧಾಂತಗಳನ್ನು ಕುರಿತಂತೆ ವಿದ್ಯಾರ್ಥಿಗಳು ಯೋಚಿಸುವುದು-ಚಿಂತಿಸುವುದು ಇದರಿಂದ ಸಾಧ್ಯವಾಗುತ್ತದೆ. ಇದು ವಿದ್ಯಾರ್ಥಿಗಳಲ್ಲಿ ವಿಶ್ಲೇಷಣಾ ಕೌಶಲ್ಯವನ್ನು ಬೆಳೆಸುತ್ತದೆ. ಅರ್ಥಶಾಸ್ತ್ರದ ಪಠ್ಯಕ್ರಮದ ಮೂಲ ಉದ್ದೇಶ ಕೇವಲ ಜ್ಞಾನ ಸಂಪಾದನೆಯಷ್ಟೇ ಅಲ್ಲ. ಆರ್ಥಿಕ ಸಿದ್ಧಾಂತಗಳ ಅನ್ವಯಿಕ ಸ್ವರೂಪವನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ಎಲ್ಲ ಉದ್ದೇಶದಿಂದ ಪ್ರಾಯೋಗಿಕ ಯೋಜನೆ ಭಾಗವನ್ನು ಪಠ್ಯಕ್ರಮದಲ್ಲಿ ಸೇರಿಸಲಾಗಿದೆ. ಪ್ರಾಯೋಗಿಕ ಅಧ್ಯಯನ ಯೋಜನೆಯಲ್ಲಿ ಭಾಗವಹಿಸುವುದರಿಂದ ಅಧ್ಯಯನದಲ್ಲಿ ಒಂದು ಬಗೆಯ ಶಿಸ್ತು ಅಥವಾ ಕಟ್ಟುಪಾಡು ವಿದ್ಯಾರ್ಥಿಗಳಿಗೆ ಪ್ರಾಪ್ತವಾಗುತ್ತದೆ. ಈ ಬಗೆಯ ಕಾರ್ಯದಿಂದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಚರ್ಚೆ, ವಿಚಾರ ವಿನಿಮಯ ಅನಿವಾರ್ಯವಾಗುತ್ತದೆ. ಇಲ್ಲಿ ಅಧ್ಯಯನವು ಏಕಮುಖಿಯಾಗುವುದಿಲ್ಲ. ಇಲ್ಲಿ ವಿದ್ಯಾರ್ಥಿಗಳು ಕೇವಲ ಕೇಳುವ ಶ್ರೋತೃಗಳಲ್ಲ. ಕೇಳಿದ್ದನ್ನು, ತಿಳಿದುಕೊಂಡಿದ್ದನ್ನು ಪ್ರಮಾಣಿಸಿ ನೋಡುವ ಪ್ರಯೋಗಶೀಲರೂ ಹೌದು. ಪ್ರಾಯೋಗಿಕ ಯೋಜನೆಗಳಿಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಅಧ್ಯಯನ ವರದಿಯನ್ನು ಸಿದ್ಧಪಡಿಸಬೇಕಾಗುತ್ತದೆ. ಇದರಿಂದ ವಿದ್ಯಾರ್ಥಿಗಳಿಗೆ ಪ್ರಬಂಧ ಕಲೆಯನ್ನು ರೂಢಿಸಿಕೊಳ್ಳಲು ಅನುಕೂಲವಾಗುತ್ತದೆ.

ಪ್ರತಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಯಾವ ಯಾವ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ಕೈಗೊಳ್ಳಬಹುದು ಎಂಬುದರ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ. ಈಗಾಗಲೆ ಹೇಳಿರುವಂತೆ ಇದೊಂದು ಪ್ರಾಥಮಿಕವಾದಂತಹ ಮಾರ್ಗಸೂಚಿ. ಹೀಗೆ ಮಾಡಬೇಕು ಎನ್ನುವ ಕಡ್ಡಾಯ ಇಲ್ಲಿಲ್ಲ. ಪ್ರಾಯೋಗಿಕ ಅಧ್ಯಯನ ಯೋಜನೆ ಕುರಿತಂತೆ ಒಂದು ಸ್ಥೂಲ ಚಿತ್ರವನ್ನು ವಿದ್ಯಾರ್ಥಿಗಳಿಗೆ ನೀಡುವುದು ಇಲ್ಲಿನ ಉದ್ದೇಶವಾಗಿದೆ.

### ಯೋಜನೆಗಳು

ಪ್ರತಿ ಅಧ್ಯಾಯಕ್ಕೆ ಸಂಬಂಧಿಸಿದಂತೆ ಯೋಜನೆಗಳು, ಅದನ್ನು ಕೈಗೊಳ್ಳುವ ವಿಧಾನ, ಅನುಸರಿಸಬೇಕಾದ ಕ್ರಮಗಳ ವಿವರವನ್ನು ಇಲ್ಲಿ ನೀಡಲಾಗಿದೆ.

### ಅಧ್ಯಾಯ ಒಂದು

ಪಠ್ಯಕ್ರಮದಲ್ಲಿ ಸ್ಪಷ್ಟವಾಗಿ ತಿಳಿಸಿರುವಂತೆ ಇದೊಂದು ಪ್ರಾಸ್ತಾವಿಕ ಅಧ್ಯಾಯ.

ಆದ್ದರಿಂದ ಇಲ್ಲಿ ಪ್ರಾಯೋಗಿಕ ಅಧ್ಯಯನ ಯೋಜನೆಗಳಿಗೆ ಅವಕಾಶಗಳು ಕಡಿಮೆ. ಗಣಿತೀಯ ಸೂತ್ರಗಳನ್ನು ಅರ್ಥಶಾಸ್ತ್ರದ ನಿಯಮಗಳಿಗೆ ಅನ್ವಯಿಸುವ ವಿಧಾನ ಕುರಿತಂತೆ ಕೆಲವು ಸಂಗತಿಗಳನ್ನು ಇಲ್ಲಿ ಚರ್ಚಿಸಬಹುದು.

ಬೇಡಿಕೆ ಬಿಂಬಕ ಸೂತ್ರವನ್ನು ರಚಿಸುವುದು ಹೇಗೆ? ಉದಾಹರಣೆಗೆ ಬೇಡಿಕೆ ಬಿಂಬಕ ಸೂತ್ರದಲ್ಲಿನ ಚಲಗಳ ಸ್ವರೂಪ ಯಾವ ಬಗೆಯದು? ಬೇಡಿಕೆ ಬಿಂಬಕ ಸೂತ್ರದಲ್ಲಿ ಒಂದು ಸ್ಥಿರಾಂಕವಿದೆ. ಅದು ಯಾಕೆ ಸ್ಥಿರಾಂಕ? ಸ್ಥಿರಾಂಕ ಮೌಲ್ಯವನ್ನು ಹೇಗೆ ಕಂಡುಕೊಳ್ಳಬೇಕು? ಅವಲಂಬಿಚಲ ಹಾಗೂ ಸ್ವತಂತ್ರ ಚಲವೆಂದರೇನು? ಬೇಡಿಕೆ ಬಿಂಬಕದಲ್ಲಿ ಬೆಲೆಯು ಸ್ವತಂತ್ರ ಚಲವಾದರೆ ಬೇಡಿಕೆಯು ಅವಲಂಬಿಚಲವಾಗಿದೆ.

ಇದೇ ರೀತಿ ಪೂರೈಕೆ ಬಿಂಬಕದಲ್ಲೂ ಒಂದು ಸ್ಥಿರಾಂಕವಿರುತ್ತದೆ. ಅದು ಯಾಕೆ ಸ್ಥಿರಾಂಕ? ಅದನ್ನು ಕಂಡುಕೊಳ್ಳುವುದು ಹೇಗೆ? ಇಲ್ಲಿ ಸ್ವತಂತ್ರಚಲ ಮತ್ತು ಅವಲಂಬಿ ಚಲಗಳ ನಡುವಿನ ಸಂಬಂಧದ ಸ್ವರೂಪ ಯಾವ ಬಗೆಯಿದು?

ಇವುಗಳ ಬಗ್ಗೆ ಒಂದು ಅಧ್ಯಯನ ವರದಿ ಸಿದ್ಧಪಡಿಸಬಹುದು. ಮಾರುಕಟ್ಟೆ ಬೇಡಿಕೆ ಅನುಸೂಚಿಯನ್ನಿಟ್ಟುಕೊಂಡು ಬೇಡಿಕೆ ಬಿಂಬಕವನ್ನು ಕಂಡುಕೊಳ್ಳುವುದು ಹೇಗೆ ಎಂಬುದನ್ನು ತಿಳಿದುಕೊಳ್ಳಬಹುದು.

ಇಲ್ಲಿ ಒಂದು ಸಂಗತಿಯನ್ನು ವಿದ್ಯಾರ್ಥಿಗಳು ಎಚ್ಚರಿಕೆಯಿಂದ ಗಮನಿಸಬೇಕು. ಇಲ್ಲಿನ ಪಠ್ಯಕ್ರಮದಲ್ಲಿ ಸೇರಿಸಿರುವ ಗಣಿತಶಾಸ್ತ್ರದ ವಿವಿಧ ಸಂಗತಿಗಳನ್ನು ನೀವು ಈಗಾಗಲೆ ಪ್ರೌಢಶಾಲೆಯಲ್ಲಿ ಕಲಿತಿದ್ದೀರಿ. ಇದು ಹೊಸದೇನೂ ಅಲ್ಲ. ನೀವು ಪ್ರೌಢಶಾಲೆಯಲ್ಲಿ ಕಲಿತ ಗಣಿತಶಾಸ್ತ್ರದ ಮೂಲ ಸಂಗತಿಗಳನ್ನು ನೆನಪು ಮಾಡಿಕೊಂಡರೆ ಸಾಕು.

### ಅಧ್ಯಾಯ ಎರಡು

### ಮಾರುಕಟ್ಟೆ ಬೇಡಿಕೆ ಅನುಸೂಚಿ ರಚಿಸುವುದು.

ಪ್ರತಿಯೊಂದು ಊರಿನಲ್ಲಿ ಮಾರುಕಟ್ಟೆಯಿರುತ್ತದೆ. ಅಲ್ಲಿ ನೂರಾರು ಜನರು ಮಾರಾಟಗಾರರಿರುತ್ತಾರೆ ಮತ್ತು ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಕೊಂಡುಕೊಳ್ಳುವವರಿರುತ್ತಾರೆ. ನಿಮ್ಮ ತರಗತಿಯಲ್ಲಿ ೫೦ ವಿದ್ಯಾರ್ಥಿಗಳಿದ್ದರೆ ತಲಾ ೧೦ ವಿದ್ಯಾರ್ಥಿಗಳ ೫ ಗುಂಪು ಮಾಡಬಹುದು. ಪ್ರತಿಯೊಂದು ಗುಂಪಿಗೆ ಒಂದು ಸರಕನ್ನು ನಿಗದಿ ಪಡಿಸಬೇಕು. ಪ್ರತಿಯೊಂದು ವಿದ್ಯಾರ್ಥಿಗಳ ಗುಂಪು ತಮಗೆ ನಿಗದಿಯಾದ ಸರಕಿಗೆ ಸಂಬಂಧಿಸಿದ ೫೦ ಅನುಭೋಗಿಗಳನ್ನು ಆಯ್ಕೆ ಮಾಡಿಕೊಳ್ಳಲಿ. ಪ್ರತಿಯೊಬ್ಬ ಅನುಭೋಗಿಯನ್ನು ಸಂದರ್ಶಿಸಿ ಸಂಬಂಧಿಸಿದ ಸರಕು ಕುರಿತಂತೆ ಯಾವ ಬೆಲೆಗೆ ಎಷ್ಟು ಪ್ರಮಾಣ ಅವರು ಕೊಂಡುಕೊಳ್ಳುತ್ತಾರೆ ಎಂಬ ಮಾಹಿತಿ ಸಂಗ್ರಹಿಸಲಿ. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ವರ್ಗೀಕರಿಸಿ ಮಾರುಕಟ್ಟೆ ಬೇಡಿಕೆ ಅನುಸೂಚಿಯನ್ನು

ರಚಿಸಬೇಕು. ಹೀಗೆ ರಚಿಸಿದ ಮಾರುಕಟ್ಟೆ ಬೇಡಿಕೆ ಅನುಸೂಚಿಯು ತರಗತಿಯಲ್ಲಿ ಕಲಿತ ಬೇಡಿಕೆ ಅನುಸೂಚಿಗೆ ಅನುಗುಣವಾದೆಯೆ ಎಂಬುದನ್ನು ಪರೀಕ್ಷಿಸಿ ಅಧ್ಯಯನ ವರದಿಯನ್ನು ಸಿದ್ಧಪಡಿಸಬಹುದು.

**ಒಂದು ವಿಚಿತ್ರ ಸಂಗತಿ**

ಪಾದರಕ್ಷೆ ತಯಾರಿಸುವ ಪ್ರಸಿದ್ಧ ಉದ್ದಿಮೆಯೊಂದು ಪಾದರಕ್ಷೆಗಳ ಬೆಲೆಗಳನ್ನು ೩-೪ ಪಟ್ಟು ಕಡಿತ ಮಾಡಿ ವಿಶೇಷ ಮಾರಾಟವನ್ನು ವ್ಯವಸ್ಥೆ ಮಾಡಿದೆ. ಸುಮಾರು ರೂ. ೫೦೦ ರಂದ ರೂ.೬೦೦ ಬೆಲೆಯ ಪಾದರಕ್ಷೆಗಳು ಈಗ ರೂ. ೧೦ ರೂ. ೧೫ಂಕ್ಕೆ ದೊರೆಯುತ್ತದೆ. ಪಾದರಕ್ಷೆಗಳು ಸೋವಿಯಿದೆಯೆಂದು ಒಬ್ಬರು ಎಷ್ಟು ಜೊತೆ ಪಾದರಕ್ಷೆಕೊಂಡು ಕೊಳ್ಳಬಹುದು? ನೀವು ಎಷ್ಟು ಜೊತೆ ಪಾದರಕ್ಷೆ ಕೊಂಡುಕೊಳ್ಳುತ್ತೀರಿ? ಸೋವಿಯೆಂದು ಪ್ರತಿಯೊಬ್ಬರು ೫ ರಿಂದ ೧೦ ಜೊತೆ ಚಪ್ಪಲಿ ಖರೀದಿಸಲು ಸಾಧ್ಯವೆ? ಇದರ ಬಗ್ಗೆ ಚರ್ಚೆ ಮಾಡಿ.

**ಮಾರುಕಟ್ಟೆ ಪೂರೈಕೆ ಅನುಸೂಚಿ**

ಮಾರುಕಟ್ಟೆ ಬೇಡಿಕೆ ಅನುಸೂಚಿ ರಚಿಸಿದಂತೆ ಮಾರುಕಟ್ಟೆ ಪೂರೈಕೆ ಅನುಸೂಚಿಯನ್ನು ರಚಿಸಬಹುದು. ಇಲ್ಲಿ ಅನುಭೋಗಿಗಳನ್ನು ಸಂದರ್ಶಿಸುವುದಕ್ಕೆ ಪ್ರತಿಯಾಗಿ ಮಾರಾಟಗಾರರನ್ನು ಅಥವಾ ಉತ್ಪಾದಕರನ್ನು ಸಂದರ್ಶಿಸಬೇಕಾಗುತ್ತದೆ. ಯಾವ ಬೆಲೆಗೆ ಎಷ್ಟು ಪ್ರಮಾಣದಲ್ಲಿ ಸರಕನ್ನು ಮಾರಾಟಗಾರರು ಮಾರಾಟಕ್ಕೆ ಪೂರೈಕೆ ಮಾಡುತ್ತಾರೆ ಎಂಬುದರ ಬಗ್ಗೆ ಮಾಹಿತಿ ಸಂಗ್ರಹಿಸಬಹುದು.

**ಬೇಡಿಕೆ ಸಾಪೇಕ್ಷ ಸ್ಥಿತಿಸ್ಥಾಪಕತೆ ಮತ್ತು ಬೇಡಿಕೆ ಸಾಪೇಕ್ಷ ಅಸ್ಥಿತಿಸ್ಥಾಪಕತೆ**

ಪ್ರತಿಯೊಂದು ಊರಿನಲ್ಲೂ ನೂರಾರು ಸರಕುಗಳು ಮಾರಾಟವಾಗುತ್ತಿರುತ್ತವೆ. ಅವುಗಳ ಬೇಡಿಕೆಯ ಸಾಪೇಕ್ಷ ಸ್ಥಿತಿಸ್ಥಾಪಕತೆ ಅಥವಾ ಬೇಡಿಕೆಯ ಸಾಪೇಕ್ಷ ಅಸ್ಥಿತಿಸ್ಥಾಪಕತೆ ಬಗ್ಗೆ ಅಧ್ಯಯನ ಮಾಡಬಹುದು. ಜನರು ದಿನನಿತ್ಯ ಖರೀದಿಸುವ ವಸ್ತುಗಳಲ್ಲಿ ಯಾವುದರ ಬೇಡಿಕೆಯು ಸಾಪೇಕ್ಷ ಸ್ಥಿತಿಸ್ಥಾಪಕತೆಯಿಂದ ಕೂಡಿದೆ ಮತ್ತು ಯಾವುದರ ಬೇಡಿಕೆಯು ಸಾಪೇಕ್ಷ ಸ್ಥಿತಿಸ್ಥಾಪಕತೆಯಿಂದ ಕೂಡಿದೆ ಮತ್ತು ಯಾವುದರ ಬೇಡಿಕೆಯು ಸಾಪೇಕ್ಷ ಅಸ್ಥಿತಿಸ್ಥಾಪಕತೆಯಿಂದ ಕೂಡಿದೆ ಎಂಬುದನ್ನು ಶೋಧಿಸುವುದು ಅಗತ್ಯ. ಒಂದು ಸರುಕಿನ ಬೇಡಿಕೆಯು ಸಾಪೇಕ್ಷ ಸ್ಥಿತಿಸ್ಥಾಪಕತೆ ಹೊಂದಿದ್ದರೆ ಅದು ಯಾಕೆ ಸ್ಥಿತಿಸ್ಥಾಪಕತೆ ಹೊಂದಿದೆ ಎಂಬುದನ್ನು ಕುರಿತಂತೆ ಚರ್ಚೆ ಮಾಡಬಹುದು. ಇದಕ್ಕೆ ಸಂಬಂಧಿಸಿದಂತೆ ಅಧ್ಯಯನ ವರದಿಯನ್ನು ಸಿದ್ಧಪಡಿಸಬಹುದು.

**ಅನುಭೋಗಿ ಮಿಗುತೆಯ ಅಧ್ಯಯನ**

ವಿದ್ಯಾರ್ಥಿಗಳ ಕೆಲವು ಗುಂಪುಗಳು ತಮ್ಮ ಊರಿನಲ್ಲಿ ಯಾವ ಸರಕುಗಳಿಗೆ

ಸಂಬಂಧಿಸಿದಂತೆ ಅನುಭೋಗಿಗಳು ತಾವು ನೀಡುವ ಬೆಲೆಗಿಂತ ಅಧಿಕ ತುಷ್ಟಿಗುಣ ಪಡೆಯುತ್ತಾರೆ ಎಂಬುದನ್ನು ಅಧ್ಯಯನ ಯೋಜನೆಗೆ ಆಯ್ಕೆ ಮಾಡಿಕೊಳ್ಳಬಹುದು. ಊರಿನ ೫೦ ಅನುಭೋಗಿಗಳನ್ನು ಅಧ್ಯಯನಕ್ಕಾಗಿ ಸಂದರ್ಶಿಸಬಹುದು. ಯಾವ ಸರಕುಗಳಿಗೆ ಸಂಬಂಧಿಸಿದಂತೆ ಅನುಭೋಗಿಗಳು ಮಾರುಕಟ್ಟೆಯಲ್ಲಿ ಚಾಲ್ತಿಯಲ್ಲಿರುವ ಬೆಲೆಗಿಂತ ಅಧಿಕ ಬೆಲೆ ನೀಡಲು ಸಿದ್ಧರಿರುತ್ತಾರೆ ಎಂಬುದರ ಬಗ್ಗೆ ಮಾಹಿತಿ ಸಂಗ್ರಹಿಸಬೇಕು. ಇದಕ್ಕೆ ಸಂಬಂಧಿಸಿದ ಅಧ್ಯಯನ ವರದಿ ಸಿದ್ಧಪಡಿಸಬಹುದು. ಸಂಗ್ರಹಿಸಿದ ಮಾಹಿತಿಯನ್ನು ಕೋಷ್ಟಕಗಳ ರೂಪದಲ್ಲಿ ಹಾಗೂ ರೇಖಾಚಿತ್ರಗಳ ರೂಪದಲ್ಲಿ ಮಂಡಿಸಬಹುದು.

## ಅಧ್ಯಾಯ ಮೂರು

## ನಮ್ಮ ಊರಿನ ಜನಸಂಖ್ಯೆಯ ಬೆಳವಣಿಗೆ ಗತಿಯ ಅಧ್ಯಯನ

ನಮ್ಮ ಕಾಲೇಜು ನೆಲೆಗೊಂಡಿರುವ ಊರಿನ ಜನಸಂಖ್ಯೆಯು ಕಳೆದ ೫ ದಶಕಗಳ ಕಾಲಾವಧಿಯಲ್ಲಿ ಹೇಗೆ ಬೆಳೆಯುತ್ತ ಬಂದಿದೆ ಎಂಬುದರ ಬಗ್ಗೆ ಜನಗಣತಿ ವರದಿಗಳಿಂದ ಮಾಹಿತಿ ಸಂಗ್ರಹಿಸಿರಬಹುದು. ಜನಸಂಖ್ಯೆಯ ವಿವರಗಳ ಆಧಾರದ ಮೇಲೆ ನಮ್ಮ ಊರಿನ ಜನಸಂಖ್ಯೆಯ ವಾರ್ಷಿಕ ಹಾಗೂ ದಶಕವಾರು ಬೆಳವಣಿಗೆ ಪ್ರಮಾಣವನ್ನು ಲೆಕ್ಕ ಹಾಕಬಹುದು. ಇದಲ್ಲದೆ ಜನಸಂಖ್ಯೆ ಕುರಿತಂತೆ ಕೆಳಕಂಡ ವಿಷಯದ ಬಗ್ಗೆ ಮಾಹಿತಿ ಸಂಗ್ರಹಿಸಬಹುದು.

ನಮ್ಮ ಊರಿನ ಜನಸಂಖ್ಯೆಯ ಲಿಂಗ ಪರಿಮಾಣ

ನಮ್ಮ ಊರಿನ ಜನಸಂಖ್ಯೆಯ ಸಾಕ್ಷರತೆ ಪ್ರಮಾಣ

ನಮ್ಮ ಊರಿನ ಜನಸಂಖ್ಯೆಯ ವಯೋಮಾನವಾರು ವರ್ಗೀಕರಣ.

ಜಿಲ್ಲೆ ಹಾಗೂ ರಾಜ್ಯಮಟ್ಟದ ಜನಸಂಖ್ಯೆಯ ಬೆಳವಣಿಗೆ ಜೊತೆ ನಮ್ಮ ಊರಿನ ಜನಸಂಖ್ಯೆಯ ಬೆಳವಣಿಗೆಯ ತುಲನೆ.

ಈ ಎಲ್ಲ ಮಾಹಿತಿಯನ್ನು ಕ್ರೂಢೀಕರಿಸಿ ಒಂದು ಸೊಗಸಾದ ಅಧ್ಯಯನ ವರದಿ ಸಿದ್ಧಪಡಿಸಬಹುದು. 'ನಮ್ಮ ಊರಿನ ಜನಸಂಖ್ಯೆಯ ಬೆಳವಣಿಗೆ ಗತಿ' ಎಂಬ ಶೀರ್ಷಿಕೆಯಲ್ಲಿ ಇದನ್ನು ನೀವು ಪ್ರಕಟಿಸಬಹುದು.

## ನೈಜ ಕೂಲಿ ಮತ್ತು ಹಣರೂಪಿ ಕೂಲಿ

ನಮ್ಮ ಊರಿನಲ್ಲಿ ದುಡಿಮೆಗಾರರ ಕೂಲಿ ಎಷ್ಟಿದೆ? ಯಾವ ಕೆಲಸಕ್ಕೆ ಎಷ್ಟು ಕೂಲಿ? ಎಷ್ಟು ವಿಧದ ಕೂಲಿ ಇದೆ? ಮಹಿಳೆಯರಿಗೆ ಕೂಲಿ ಯಾಕೆ ಪುರುಷರಿಗಿಂತ ಕಡಿಮೆ? ಹಣದ ರೂಪದಲ್ಲಿ ದುಡಿಮೆಗಾರರು ಪಡೆಯುವ ಕೂಲಿಯಿಂದ ಕೂಲಿಕಾರರು ಎಷ್ಟು ದವಸ-ಧಾನ್ಯ ಖರೀದಿಸಬಹುದು ಈ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವುದು ಒಂದು ಅಧ್ಯಯನದ ವಸ್ತುವಾಗಬಹುದು. ಈ ಮಾಹಿತಿಯನ್ನು ಅಧ್ಯಯನ ವರದಿಯ

ರೀತಿಯಲ್ಲಿ ಮಂಡಿಸಬಹುದು. ಹಣರೂಪಿ ಕೂಲಿಯಲ್ಲಿ ಏರಿಕೆಯಾಗಿ ಮತ್ತು ಬೆಲೆ ಮಟ್ಟದಲ್ಲೂ ಏರಿಕೆಯಾದಾಗ ನೈಜ ಕೂಲಿಯ ಸ್ಥಿತಿ ಏನಾಗಿರುತ್ತದೆ?

ಕೂಲಿಕಾರರಿಗೆ ಸಾಮಾಜಿಕ ಭದ್ರತೆ ಸೌಲಭ್ಯಗಳಿವೆಯೆ? ಕೂಲಿಕಾರರಿಗೆ ವಾರದ ರಜೆ ಏಕಿಲ್ಲ? ಕೂಲಿಕಾರರಿಗೆ ಮತ್ತು ಕೂಲಿಗೆ ಸಂಬಂಧಿಸಿದಂತೆ ಅನೇಕ ಬಗೆಯ ಮಾಹಿತಿಯನ್ನು ನೀವು ಸಂಗ್ರಹಿಸಬಹುದು. ಇದೊಂದು ಅತ್ಯಂತ ಉಪಯುಕ್ತ ಅಧ್ಯಯನ ಯೋಜನೆಯಾಗುತ್ತದೆ.

### ನಮ್ಮ ಊರಿನ ಉದ್ಯಮ ಸಾಹಸಿಗಳು

ನಮ್ಮ ಊರಿನಲ್ಲಿ ಉದ್ದಿಮೆ-ಕೈಗಾರಿಕಾ ನಡೆಸುತ್ತಿರುವ ಉದ್ದಿಮೆದಾರರಿರಬಹುದು. ಸಾಂಪ್ರದಾಯಿಕ ಅರ್ಥದಲ್ಲಿ ಉದ್ದಿಮೆದಾರರೆಂದರೆ ನಮ್ಮ ಊರಿನ ಇಟ್ಟಿಗೆಭಟ್ಟಿ ನಡೆಸುವವರು ಉದ್ದಿಮೆದಾರರಾಗುತ್ತಾರೆ. ಮನೆ ಕಟ್ಟಿಸುವ ಕಾಂಟ್ರಾಕ್ಟ್‌ದಾರರು ಉದ್ದಿಮೆದಾರರಾಗುತ್ತಾರೆ. ಚಾಪೆ ಮಾಡಿ ಮಾರುವವರು ಉದ್ದಿಮೆದಾರರು. ಎತ್ತಿನಬಂಡಿ ಮಾಡುವವರು ಉದ್ದಿಮೆದಾರರಾಗುತ್ತಾರೆ.

ಈ ಉದ್ದಿಮೆದಾರರ ಸ್ವರೂಪ ಯಾವ ಬಗೆಯದು? ಅವರು ಬಂಡವಾಳವನ್ನು ಹೇಗೆ ಕೂಡಿಸಿಕೊಳ್ಳುತ್ತಾರೆ? ಕಾರ್ಮಿಕರನ್ನು ಹೇಗೆ ನೇಮಿಸಿಕೊಳ್ಳುತ್ತಾರೆ? ತಾವು ಉತ್ಪಾದಿಸಿದ ಸರಕುಗಳ ಬೆಲೆಯನ್ನು ಹೇಗೆ ನಿಗದಿಪಡಿಸುತ್ತಾರೆ ಈ ಎಲ್ಲ ವಿಷಯಗಳನ್ನು ಒಟ್ಟುಗೂಡಿಸಿ ಒಂದು ಅಧ್ಯಯನ ವರದಿ ಸಿದ್ಧಪಡಿಸಬಹುದು.

### ಅಧ್ಯಾಯ ನಾಲ್ಕು

ಉತ್ಪಾದನಾ ವೆಚ್ಚಕ್ಕೆ ಸಂಬಂಧಿಸಿದಂತೆ ಅನೇಕ ಅಧ್ಯಯನ ಯೋಜನೆಗಳನ್ನು ಕೈಗೊಳ್ಳಬಹುದು.

### ಸ್ಥಿರ ವೆಚ್ಚ ಮತ್ತು ಬದಲಾಗುವ ವೆಚ್ಚ

ಯಾವುದಾದರೂ ಉದ್ದಿಮೆಯೊಂದನ್ನು ಸಂದರ್ಶಿಸಿ ಅದರ ಸ್ಥಿರ ವೆಚ್ಚಗಳಾವುವು ಮತ್ತು ಬದಲಾಗುವ ವೆಚ್ಚಗಳಾವುವು ಎಂಬುದರ ವಿವರವಾದ ಮಾಹಿತಿಯನ್ನು ಸಂಗ್ರಹಿಸಬಹುದು.

### ವ್ಯಕ್ತ ವೆಚ್ಚ ಮತ್ತು ಅವ್ಯಕ್ತ ವೆಚ್ಚ

ವ್ಯಕ್ತ ವೆಚ್ಚವು ಲೆಕ್ಕ ಪರಿಶೋಧಕರು ಬಳಸುವ ಪರಿಭಾವನೆಯಾಗಿದೆ. ಅರ್ಥಶಾಸ್ತ್ರಜ್ಞರು ವ್ಯಕ್ತ ವೆಚ್ಚದ ಜೊತೆಯಲ್ಲಿ ಅವ್ಯಕ್ತ ವೆಚ್ಚವೆಂಬ ಪರಿಭಾವನೆಯನ್ನು ಬಳಸುತ್ತಾರೆ. ಇವೆರಡರ ನಡುವಿನ ವ್ಯತ್ಯಾಸವನ್ನು ಗುರುತಿಸಲು ಅಧ್ಯಯನವೊಂದನ್ನು ಕೈಗೊಳ್ಳಬಹುದು.

ಸಂಪನ್ಮೂಲಗಳ ಪರಮೋಚ್ಚ ಕಾರ್ಯಕ್ಷಮತೆ ದೃಷ್ಟಿಯಿಂದ ಅವ್ಯಕ್ತ ವೆಚ್ಚವು ತುಂಬಾ ಮಹತ್ವ ಪಡೆದಿದೆ. ಏಕೆಂದರೆ ಅವ್ಯಕ್ತ ವೆಚ್ಚವನ್ನ ಸೇರಿಸಿಕೊಂಡು

ಉದ್ದಿಮೆಯೊಂದರ ಒಟ್ಟು ವೆಚ್ಚವನ್ನು ಗಣನೆ ಮಾಡಬೇಕಾಗುತ್ತದೆ. ಹೀಗೆ ಗಣನೆ ಮಾಡಿದ ಒಟ್ಟು ವೆಚ್ಚವನ್ನು ಆಧಾರವಾಗಿಟ್ಟುಕೊಂಡು ಉದ್ದಿಮೆಯು ತಾನು ಉತ್ಪಾದಿಸುವ ಸರಕಿನ ಬೆಲೆಯನ್ನು ನಿಗದಿಪಡಿಸಬೇಕಾಗುತ್ತಾರೆ. ಇಲ್ಲದಿದ್ದರೆ ಉದ್ದಿಮೆಯು ತೋರಿಕೆಗೆ ಲಾಭ ಗಳಿಸುತ್ತಿದ್ದರೂ ವಾಸ್ತವವಾಗಿ ಅಲ್ಲಿ ಲಾಭವಿರಲಿಕ್ಕಿಲ್ಲ.

## ಅಧ್ಯಾಯ ಐದು

ಈ ಅಧ್ಯಾಯದಲ್ಲಿ ಪ್ರಾಯೋಗಿಕ ಅಧ್ಯಯನ ಯೋಜನೆಗಳಿಗೆ ಅವಕಾಶ ತುಂಬಾ ಸೀಮಿತವಾಗಿದೆ.

## ಅಧ್ಯಾಯ ಆರು

ರಾಷ್ಟ್ರೀಯ ಆದಾಯವನ್ನು ಗಣನೆ ಮಾಡಿದಂತೆ ನಮ್ಮ ದೇಶದಲ್ಲಿ ರಾಜ್ಯಗಳ ಆದಾಯವನ್ನು ಗಣನೆ ಮಾಡಲಾಗುತ್ತಿದೆ. ಇದನ್ನು ರಾಜ್ಯ ದೇಶೀಯ ಉತ್ಪನ್ನ (ಎಸ್‌ಡಿಪಿ) ಎಂದು ಕರೆಯಲಾಗುತ್ತದೆ. ಕರ್ನಾಟಕದ ರಾಜ್ಯ ದೇಶೀಯ ಉತ್ಪನ್ನಕ್ಕೆ ಸಂಬಂಧಿಸಿದಂತೆ ಒಂದು ಅಧ್ಯಯನ ಯೋಜನೆಯನ್ನು ಕೈಗೊಳ್ಳಬಹುದು. ಕರ್ನಾಟಕದ ರಾಜ್ಯ ದೇಶೀಯ ಉತ್ಪನ್ನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಕಾಲಕಾಲಕ್ಕೆ ವರದಿಗಳ ರೂಪದಲ್ಲಿ ಪ್ರಕಟಿಸುತ್ತದೆ. ಅದರಲ್ಲಿ ರಾಜ್ಯದಲ್ಲಿನ ಜಿಲ್ಲೆಗಳ ಆದಾಯವನ್ನು ಪ್ರಕಟಿಸುತ್ತದೆ. ನಮ್ಮ ಜಿಲ್ಲೆಗೆ ಸಂಬಂಧಿಸಿದ ಆದಾಯ ಹಾಗೂ ತಲಾ ಆದಾಯವನ್ನು ಗಣನೆ ಮಾಡಬಹುದು.

ರಾಜ್ಯ ದೇಶೀಯ ಉತ್ಪನ್ನದ ವಲಯವಾರು ಸ್ವರೂಪವನ್ನು ನಾವು ಗುರುತಿಸಬಹುದು. ಈ ಮಾಹಿತಿಯ ಆಧಾರದ ಮೇಲೆ ಕರ್ನಾಟಕ ರಾಜ್ಯದ ಆರ್ಥಿಕ ರಚನೆಯ ಸ್ವರೂಪವನ್ನು ಗುರುತಿಸಬಹುದು. ಇದಕ್ಕೆ ಸಂಬಂಧಿಸಿದ ವರದಿಯನ್ನು ಸಿದ್ಧಪಡಿಸಬಹುದು.

## ಅಧ್ಯಾಯ ಏಳು

ಇಂದು ಹಣದ ಕೆಲಸವನ್ನು ಮಾಡುವ ಅನೇಕ ಸಾಧನಗಳು ಚಲಾವಣೆಯಲ್ಲಿವೆ. ಇವೆಲ್ಲವನ್ನು ಅರ್ಥಶಾಸ್ತ್ರದಲ್ಲಿ 'ಸಮೀಪ ಹಣ'ವೆಂದು ಕರೆಯಲಾಗಿದೆ. ಚೆಕ್ಕುಗಳು, ಡ್ರಾಫ್ಟುಗಳು, ಬಿಲ್ಲುಗಳು, ಕ್ರೆಡಿಟ್ ಕಾರ್ಡ್‌ಗಳು, ಡೆಬಿಟ್ ಕಾರ್ಡ್‌ಗಳು ಮುಂತಾದವು ಸಮೀಪ ಹಣಕ್ಕೆ ಉದಾಹರಣೆಗಳು. ಠೇವಣಿಗಳು ಸಹ ಸಮೀಪ ಹಣಕ್ಕೆ ಉದಾಹರಣೆ. ನಮ್ಮ ಊರಿನಲ್ಲಿ ಚಲಾವಣೆಯಲ್ಲಿರುವ ಸಮೀಪ ಹಣದ ಒಂದು ಪಟ್ಟಿಯನ್ನು ಸಿದ್ಧಪಡಿಸಬಹುದು. ಇದಕ್ಕಾಗಿ ಬ್ಯಾಂಕುಗಳನ್ನು ಸಂದರ್ಶಿಸಬಹುದು. ವ್ಯಾಪಾರಗಾರರನ್ನು ಸಂದರ್ಶಿಸಬಹುದು. ಸಮೀಪ ಹಣಕ್ಕೂ ಮತ್ತು ಶಾಸನಬದ್ಧ ಹಣಕ್ಕೂ ನಡುವಿನ ವ್ಯತ್ಯಾಸವನ್ನು ಗುರುತಿಸಬಹುದು. ಇವೆರಡೂ ಬಗೆಯ ಹಣಗಳ ನಡುವಿನ ಸಮಾನ ಸಂಗತಿಗಳನ್ನು ಗುರುತಿಸಬಹುದು.

## ನಮ್ಮ ಶಾಲೆಯ ಪುಟ್ಟ ಉಳಿತಾಯ ಬ್ಯಾಂಕ್

ನಮ್ಮ ಶಾಲೆ/ಕಾಲೇಜಿನಲ್ಲಿ ಒಂದು ಪುಟ್ಟ ಉಳಿತಾಯ ಬ್ಯಾಂಕು ತೆರೆಯಬಹುದು. ಶಾಲೆಯ ವಿದ್ಯಾರ್ಥಿಗಳು ಬ್ಯಾಂಕನ್ನು ನಡೆಸಬಹುದು. ವಿದ್ಯಾರ್ಥಿಗಳೆಲ್ಲ ಬ್ಯಾಂಕಿನಲ್ಲಿ ಖಾತೆ ತೆಗೆಯಬಹುದು. ಚೆಕ್ಕುಗಳ ಮೂಲಕ ಹಣವನ್ನು ಖಾತೆಯಿಂದ ಪಡೆದುಕೊಳ್ಳಬಹುದು. ಶಾಲೆ/ಕಾಲೇಜನ್ನು ಬಿಟ್ಟು ಹೋಗುವಾಗ ವಿದ್ಯಾರ್ಥಿಯು ಬ್ಯಾಂಕಿನ ಖಾತೆಯನ್ನು ರದ್ದುಪಡಿಸಿ ಖಾತೆಯಲ್ಲಿದ್ದ ಹಣವನ್ನು ಪಡೆದುಕೊಳ್ಳಬಹುದು. ಇದರಿಂದ ಬ್ಯಾಂಕಿನ ವ್ಯವಹಾರದ ಪ್ರಾಯೋಗಿಕ ಅನುಭವ ವಿದ್ಯಾರ್ಥಿಗಳಿಗೆ ದೊರೆಯುತ್ತದೆ. ಚೆಕ್ಕು ಹೇಗೆ ಬರೆಯಬೇಕು, ಕ್ರಾಸ್ಡ್ ಚೆಕ್ ಎಂದರೇನು, ಬೆಯರರ್ ಚೆಕ್ಕುಗಳಿಗೂ ಮತ್ತು ಸ್ವಂತ ಹೆಸರಿನ ಚೆಕ್ಕುಗಳಿಗೂ ನಡುವಿನ ವ್ಯತ್ಯಾಸವನ್ನು ಸ್ಪಷ್ಟವಾಗಿ ವಿದ್ಯಾರ್ಥಿಗಳು ತಿಳಿದುಕೊಳ್ಳಬಹುದು. ಯಾವುದಾದರೂ ಬ್ಯಾಂಕಿನ ಅಧಿಕಾರಿಗಳ ನೆರವು ಪಡೆಯಬಹುದು. ನಮ್ಮ ಶಾಲೆ/ಕಾಲೇಜಿನ ಉಳಿತಾಯ ಬ್ಯಾಂಕಿನ ವ್ಯವಹಾರದ ಬಗ್ಗೆ ಒಂದು ವರದಿ ಸಿದ್ಧಪಡಿಸಬಹುದು.

## ಅತಿಪ್ರಸರಣ / ಹಣದುಬ್ಬರ

ಮಾರುಕಟ್ಟೆಯಲ್ಲಿ ದಿನನಿತ್ಯ ಬಳಸುವ ಸರಕು ಮತ್ತು ಸೇವೆಗಳ ಬೆಲೆಗಳು ಸತತವಾಗಿ ಏರಿಕೆಯ ಪ್ರವೃತ್ತಿಯನ್ನು ತೋರಿದರೆ ಅದನ್ನು ಹಣದುಬ್ಬರವೆಂದು ಹೇಳುತ್ತೇವೆ. ಹಣದ ಪೂರೈಕೆಯಲ್ಲಿ ಮಿತಿ ಮೀರಿದ ಏರಿಕೆಯುಂಟಾಗಿ ಅದರ ಮೌಲ್ಯ ಕುಸಿದು ಬಿಟ್ಟರೆ ಅದು ಹಣದುಬ್ಬರವೆನಿಸಿಕೊಳ್ಳುತ್ತದೆ.

ಅತಿಪ್ರಸರಣ ಅಥವಾ ಹಣದುಬ್ಬರವು ಸಮಾಜದ ವಿವಧ ವರ್ಗದ ಮೇಲೆ ವಿವಿಧ ರೀತಿಯ ಪರಿಣಾಮ ಉಂಟು ಮಾಡುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸಮಾಜದ ವಿವಿಧ ವರ್ಗಗಳನ್ನು ಸಂದರ್ಶಿಸಿ ಹಣದುಬ್ಬರದ ಪರಿಣಾಮಗಳ ಬಗ್ಗೆ ಮಾಹಿತಿ ಸಂಗ್ರಹಿಸಬಹುದು. ವ್ಯಾಪಾರಿಗಳಿಗೆ ಹಣದುಬ್ಬರದಿಂದ ಲಾಭವಾಗುತ್ತದೆಯೆ? ರೈತರಿಗೆ ಹಣದುಬ್ಬರದಿಂದ ಏನು ಪರಿಣಾಮ ಉಂಟಾಗುತ್ತದೆ? ಕೂಲಿಕಾರರಿಗೆ ಹಣದುಬ್ಬರದಿಂದ ಹಾನಿಯಾಗುತ್ತದೆಯೆ ಪಿಂಚಣಿದಾರರಿಗೆ ಹಣದುಬ್ಬರದಿಂದ ಏನಾಗುತ್ತದೆ ಈ ಎಲ್ಲ ಮಾಹಿತಿಯನ್ನು ಸೂಕ್ತವಾಗಿ ವರ್ಗೀಕರಿಸಿಕೊಂಡು ಅಧ್ಯಯನ ವರದಿಯೊಂದನ್ನು ಸಿದ್ಧಪಡಿಸಬಹುದು.

## ಅಧ್ಯಾಯ ೮

ನಮ್ಮ ಊರಿನಲ್ಲಿ ವಿಶ್ವಬ್ಯಾಂಕಿನ ನೆರವಿನಿಂದ ಯಾವುದಾದರೂ ಅಭಿವೃದ್ಧಿ ಯೋಜನೆ ಅನುಷ್ಠಾನಗೊಂಡಿದ್ದರೆ, ಅದರ ಬಗ್ಗೆ ವಿವರವನ್ನು ಸಂಗ್ರಹಿಸಿ ಒಂದು ಅಧ್ಯಯನ ವರದಿ ಸಿದ್ಧಪಡಿಸಬಹುದು.

ನಿರಪೇಕ್ಷ ವೆಚ್ಚ ವ್ಯತ್ಯಾಸಗಳು ಮತ್ತು ತುಲನಾತ್ಮಕ ವೆಚ್ಚದ ವ್ಯತ್ಯಾಸಗಳ

ನಡುವಿನ ಭಿನ್ನತೆಯನ್ನು ಸ್ಪಷ್ಟಪಡಿಸುವಂತಹ ಉದಾಹರಣೆಗಳನ್ನು ನಾವು ರಚಿಸಬಹುದು. ಸಾಮಾನ್ಯವಾಗಿ ಪಠ್ಯ ಪುಸ್ತಕಗಳಲ್ಲಿ ಇಂಗ್ಲೆಂಡ್, ಪೋರ್ಚ್‌ಗಲ್‌ಗಳ ಉದಾಹರಣೆ ನೀಡಲಾಗುತ್ತದೆ. ನಾವು ಬೇರೆ ಬೇರೆ ದೇಶಗಳಲ್ಲಿ ಕಲ್ಪಿಸಿಕೊಂಡು ಬೇರೆ ಬೇರೆ ಸರಕುಗಳನ್ನು ಗುರುತಿಸಿಕೊಂಡು ನಿರಪೇಕ್ಷ ವೆಚ್ಚಕ್ಕೆ ಸಂಬಂಧಿಸಿದಂತೆ ಕೆಲವು ಉದಾಹರಣೆಗಳು ಮತ್ತು ತುಲನಾತ್ಮಕ ವೆಚ್ಚ ವ್ಯತ್ಯಾಸಗಳಿಗೆ ಕೆಲವು ಉದಾಹರಣೆಗಳನ್ನು ಗುರುತಿಸಬಹುದು. ನಿರಪೇಕ್ಷ ವೆಚ್ಚದ ವ್ಯತ್ಯಾಸಗಳಿಗಿಂತ ತುಲನಾತ್ಮಕ ವೆಚ್ಚದ ವ್ಯತ್ಯಾಸಗಳು ಅಂತಾರಾಷ್ಟ್ರೀಯ ವ್ಯಾಪಾರದ ಉತ್ತಮ ವಿವರಣೆ ಹೇಗೆ ಎಂಬುದನ್ನು ಉದಾಹರಣೆಗಳು ಸ್ಪಷ್ಟಪಡಿಸಿಕೊಳ್ಳಬಹುದು.

## ಅಧ್ಯಯನದ ವರದಿ ಸಿದ್ಧಪಡಿಸುವುದು

ಮೇಲೆ ತಿಳಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಅಥವಾ ಯಾವುದಾದರೂ ವಿಷಯ ಕುರಿತಂತೆ ಅಧ್ಯಯನ ವರದಿಯನ್ನು ಸಿದ್ಧಪಡಿಸಬೇಕಾದರೆ ಕೆಲವು ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಈ ರೀತಿಯ ವರದಿಯನ್ನು ಸಿದ್ಧಪಡಿಸುವುದರ ಮೂಲಕ ಬರವಣಿಗೆಯನ್ನು ಅಭ್ಯಾಸ ಮಾಡಿಕೊಳ್ಳಬಹುದು ಮತ್ತು ಪ್ರಬಂಧ ಕಲೆಯನ್ನು ಮೈಗೂಡಿಕೊಳ್ಳಬಹುದು. ಅಧ್ಯಯನ ವರದಿಯನ್ನು ಸಿದ್ಧಪಡಿಸುವುದು ಒಂದು ಕಲೆ.

ಸಾಮಾನ್ಯವಾಗಿ ಅಧ್ಯಯನ ವರದಿಗಳಲ್ಲಿ ಐದು ಭಾಗಗಳಿರುತ್ತವೆ. ಮೊದಲನೆಯ ಭಾಗದಲ್ಲಿ ನಾವು ಅಧ್ಯಯನ ಮಾಡುತ್ತಿರುವ ವಿಷಯ ಕುರಿತಂತೆ ಕೆಲವು ಸೂಕ್ಷ್ಮ ಮಾಹಿತಿ ನೀಡಬೇಕಾಗುತ್ತದೆ. ಅಧ್ಯಯನದ ವಿಷಯವನ್ನು ಅಧ್ಯಯನದ ಪ್ರಶ್ನೆಯನ್ನಾಗಿ ಪರಿಭಾವಿಸಿಕೊಳ್ಳಬೇಕಾಗುತ್ತದೆ. ಅದಕ್ಕೆ ಸಂಬಂಧಿಸಿದ ವಿಷಯವನ್ನು ಕುರಿತಂತೆ ಅಧ್ಯಯನ ಕೈಗೊಳ್ಳಲಾಗಿದೆ ಎಂಬುದನ್ನು ವಿವರಿಸಬೇಕಾಗುತ್ತದೆ.

ಎರಡನೆಯ ಭಾಗದಲ್ಲಿ ಅಧ್ಯಯನದ ಉದ್ದೇಶಗಳನ್ನು ಅನುಕ್ರಮವಾಗಿ ನೀಡಬೇಕಾಗುತ್ತದೆ. ಉದ್ದೇಶಗಳು ಅಧ್ಯಯನಕ್ಕೆ ಒಂದು ಚೌಕಟ್ಟನ್ನು ನೀಡುತ್ತದೆ ಮತ್ತು ಅಧ್ಯಯನಕ್ಕೆ ದಿಶೆಯೊಂದು ಪ್ರಾಪ್ತವಾಗುತ್ತದೆ. ಮೂರನೆಯದಾಗಿ ಅಧ್ಯಯನ ವಿಧಾನ. ಇಲ್ಲಿ ಮಾಹಿತಿಯನ್ನು ಯಾವ ಮೂಲಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ, ಯಾರನ್ನು ಸಂದರ್ಶಿಸಲಾಗಿದೆ, ಮಾಹಿತಿಯನ್ನು ಹೇಗೆ ವರ್ಗೀಕರಿಸಲಾಗಿದೆ, ಅಧ್ಯಯನದ ಕಾಲ ಇತ್ಯಾದಿ ವಿವರಗಳು ಅಧ್ಯಯನ ವಿಧಾನ ಒಳಗೊಳ್ಳುತ್ತದೆ.

ನಾಲ್ಕನೆಯ ಅಧ್ಯಯನದ ಮಹತ್ವದ ಭಾಗ. ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಸಂಗ್ರಹಿಸಿದ ಮಾಹಿತಿಯ ವಿಶ್ಲೇಷಣೆ ಇರುತ್ತದೆ. ಈ ವಿಶ್ಲೇಷಣೆ ಚರ್ಚೆಯ ಆಧಾರದ ಮೇಲೆ ಅಧ್ಯಯನದಿಂದ ಕಂಡುಕೊಂಡ ತೀರ್ಮಾನಗಳು ರೂಪ ಪಡೆಯುತ್ತವೆ.

ಕೊನೆಯದಾಗಿ ಅಧ್ಯಯನದ ಸಾರಾಂಶ. ಇದರಲ್ಲಿ ಅಧ್ಯಯನದಿಂದ ಹೊಸದಾಗಿ

ಕಂಡುಕೊಂಡ ಸಂಗತಿಗಳನ್ನು ನೀಡಬೇಕು. ಇಡೀ ಅಧ್ಯಯನದ ಸಾರಾಂಶವನ್ನು ನೀಡಬೇಕು.

ಅಧ್ಯಯನ ವರದಿಯು ಎಷ್ಟು ಪುಟಗಳಿರಬೇಕು? ಇದಕ್ಕೆ ಯಾವುದೆ ನಿಯಮವಿಲ್ಲ. ಇಲ್ಲಿ ವಿದ್ಯಾರ್ಥಿಗಳು ಅಧ್ಯಯನ ಯೋಜನೆ ಸಿದ್ಧಪಡಿಸುತ್ತಿದ್ದಾರೆ. ಆದ್ದರಿಂದ ಅಧ್ಯಯನ ವರದಿಯು ೧೫ ರಿಂದ ೨೦ ಪುಟಗಳಿದ್ದರೆ ಸಾಕು. ಅದಕ್ಕಿಂತ ಕಡಿಮೆಯಿದ್ದರೂ ನಡೆದೀತು. ಆದರೆ ಒಳಗಿನ ಪುಟಗಳಲ್ಲಿ ಏನಿದೆಯೆಂಬುದು ಮುಖ್ಯವಾಗುತ್ತದೆ. ಈ ಪ್ರಾಯೋಗಿಕ ಅಧ್ಯಯನ ಯೋಜನೆ ನಡೆಸುವ ಎಲ್ಲ ಹಂತಗಳಲ್ಲೂ ನಾವು ಅಧ್ಯಾಪಕರ ನೆರವನ್ನು ಪಡೆಯುವುದು ತುಂಬಾ ಅಗತ್ಯ.

# ಅನುಬಂಧ ೨

## ಮೊದಲ ಪಿ.ಯು.ಸಿ. ಅರ್ಥಶಾಸ್ತ್ರ

## ಮಾದರಿ ಪ್ರಶ್ನೆಪತ್ರಿಕೆ ೧

ಸಮಯ : ೩ಗಂಟೆಗಳು ಗರಿಷ್ಠ ಅಂಕಗಳು: ೯೦

**ಸೂಚನೆಗಳು**

೧. ಮಾರ್ಜಿನಲ್ಲಿ ಸ್ಫುಟವಾಗಿ ಪ್ರಶ್ನೆ ಸಂಖ್ಯೆಗಳನ್ನುಬರೆಯಿರಿ.

೨. ಪ್ರಶ್ನೆಗಳಿಗೆ ಉತ್ತರಗಳು ಅವ್ಯಾಹತವಾಗಿರಬೇಕು.

**ಭಾಗ - ಅ**

**ಈ ಕೆಳಗಿನವುಗಳಿಗೆ ತಲಾ ಒಂದು ವಾಕ್ಯದಲ್ಲಿ ಉತ್ತರಿಸಿ** ೧x೧೦ = ೧೦

೧. ಮಾರ್ಷಲನ ಅರ್ಥಶಾಸ್ತ್ರದ ವ್ಯಾಖೆಯು ಯಾವುದಕ್ಕೆ ಪ್ರಾಶಸ್ತ್ಯ ನೀಡುತ್ತದೆ.

೨. ಈ ಕೆಳಗಿನವುಗಳಿಂದ ಒಂದು ವಾಸ್ತವಿಕ ಮತ್ತು ಒಂದು ಪ್ರಮಾಣಕ ಹೇಳಿಕೆಯನ್ನು ಗುರುತಿಸಿ.

i) ಬ್ರೆಡ್ಡಿನ ಬೆಲೆಗಳು ಕಡಿಮೆಯಿರಬೇಕು.

ii) ಡೀಸಲಿನ ಬೆಲೆ ಇಳಿಕೆಯಿಂದ ಅದರ ಅನುಭೋಗ ಹೆಚ್ಚಾಗುತ್ತದೆ.

iii) ಬಡವರು ತೆರಿಗೆ ಪಾವತಿ ಮಾಡಕೂಡದು.

iv) ಕಡಿಮೆ ತೆರಿಗೆ ದರವು ಅಧಿಕ ತೆರಿಗೆ ಆದಾಯವನ್ನು ತಂದುಕೊಡುತ್ತದೆ.

೩. ಈ ಹೇಳಿಕೆ ಸರಿಯೋ, ತಪ್ಪೋ ಎಂಬುದನ್ನು ತಿಳಿಸಿ:
"ವೈಯಕ್ತಿಕ ಉಳಿತಾಯ ಅಪೇಕ್ಷಣೀಯ, ಸಾಮೂಹಿಕ ಉಳಿತಾಯ ಅನಪೇಕ್ಷಣೀಯ"

೪. ಧನಾತ್ಮಕ ಮತ್ತು ಋಣಾತ್ಮಕ ಪೂರ್ಣಾಂಕ ಮೌಲ್ಯಕ್ಕೆ ಅರ್ಥಶಾಸ್ತ್ರದಲ್ಲಿ ಉದಾಹರಣೆ ಕೊಡಿ.

೫. ಹೃದಯಶಸ್ತ್ರ ಚಿಕಿತ್ಸಕನಿಗೆ ಕಾರು ಒಂದು ಅಗತ್ಯದ ಸರಕೇ ಅಥವಾ ವಿಲಾಸೀ ಸರಕೆ?

೬. ಮಾರುಕಟ್ಟೆ ಬೆಲೆಗಳಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನವೆಂದರೇನು?

೭. ಕೆಲ ಜನ ಮಾರುಕಟ್ಟೆಯು ಎಷ್ಟು ವ್ಯಾಪಾರಿಗಳನ್ನು ಒಳಗೊಂಡಿರುತ್ತದೆ.

೮. ಸಾರ್ವಜನಿಕರಲ್ಲಿರುವ ಕರೆನ್ಸಿಯು $M_1$ನ ಭಾಗವೇ ಅಥವಾ $M_3$ ಭಾಗವೇ?

೯. ಐ.ಬಿ.ಆರ್.ಡಿ. ಇದನ್ನು ವಿಸ್ತರಿಸಿ.

೧೦. ಬಿಡಿಭಾಗಗಳ ಬೆಲೆ ಏರಿಕೆಯಿಂದಾಗಿ ಕಂಪ್ಯೂಟರಿನ ಬೆಲೆ ಹೆಚ್ಚಾಗಿದೆ. ಇದು ವೆಚ್ಚದೂಡಿಕೆಯ ಹಣದುಬ್ಬರವೇ ಅಥವಾ ಬೇಡಿಕೆ ಎಳೆತದ ಹಣದುಬ್ಬರವೆ?

## ಭಾಗ - ಆ

**ಕೆಳಗಿನವುಗಳಲ್ಲಿ ಯಾವುದಾದರೂ ಹತ್ತು ಪ್ರಶ್ನೆಗಳಿಗೆ ತಲಾ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.** **೨x೧೦=೨೦**

೧೧. ಅಂಶಲಕ್ಷಿ ಮತ್ತು ಸಮಗ್ರಲಕ್ಷಿ ಅರ್ಥಶಾಸ್ತ್ರದ ನಡುವಣ ವ್ಯತ್ಯಾಸ ತಿಳಿಸಿ.

೧೨. Qd=f [P] ಬೇಡಿಕೆಯ ಈ ಕಾರ್ಯವಲಂಬಿ ಸಂಬಂಧದಲ್ಲಿ ಅವಲಂಬಿ ಮತ್ತು ಸ್ವತಂತ್ರ ಚರಪರಿಮಾಣಗಳನ್ನು ಗುರಿತಿಸಿ.

೧೩. ಕಾರ್ಖಾನೆಯ ಒಟ್ಟು ಉತ್ಪನ್ನ ಪ್ರಮಾಣ ೧೦೦ ಯುನ್ನಿಟ್ಟುಗಳು, ನೇಮಿಸಲ್ಪಟ್ಟ ಕೆಲಸಗಾರರ ಸಂಖ್ಯೆ ೧೦. ಕೆಲಸಗಾರರ ಸಂಖ್ಯೆಯನ್ನು ೧೧ಕ್ಕೆ ಏರಿಸಿದರೆ ಒಟ್ಟು ಉತ್ಪನ್ನ ೧೧೦ ಯುನಿಟ್ಟುಗಳಾಗುತ್ತವೆ. ಕಾರ್ಮಿಕನೊಬ್ಬನ ಸರಾಸರಿ ಉತ್ಪನ್ನವನ್ನು ಕಂಡುಹಿಡಿಯಿರಿ.

೧೪. ಒಟ್ಟು ದೇಶೀಯ ಉತ್ಪನ್ನ ಮತ್ತು ಒಟ್ಟು ರಾಷ್ಟ್ರೀಯ ಉತ್ಪನ್ನದ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೧೫. ಮುಕ್ತ ವ್ಯಾಪಾರ ನೀತಿಯ ಯಾವುದಾದರೂ ನಾಲ್ಕು ಒಳಿತುಗಳನ್ನು ಬರೆಯಿರಿ.

೧೬. ಸಮರ್ಪಕ ಉದಾಹರಣೆಯೊಂದಿಗೆ ಹಣದ ಬೇಡಿಕೆಯ ಎರಡು ಉದ್ದೇಶಗಳನ್ನು ತಿಳಿಸಿ.

೧೭. ಮಾಲ್ಥಸನ ಸಿದ್ಧಾಂತದಲ್ಲಿ ಆಹಾರ ಪೂರೈಕೆ ಮತ್ತು ಜನಸಂಖ್ಯಾ ಬೆಳವಣಿಗೆಯ ಸ್ವರೂಪವನ್ನು ತಿಳಿಸಿ.

೧೮. ಅಂತರಾಷ್ಟ್ರೀಯ ಹಣಕಾಸು ನಿಧಿಯ ನಾಲ್ಕು ಉದ್ದೇಶಗಳನ್ನು ತಿಳಿಸಿ.

೧೯. ಸ್ಥಿರ ಮತ್ತು ಚರ ಉತ್ಪಾದನಾ ವೆಚ್ಚದ ಅರ್ಥವನ್ನು ತಿಳಿಸಿ.

೨೦. ಏಕಸ್ವಾಮ್ಯದ ನಾಲ್ಕು ಲಕ್ಷಣಗಳನ್ನು ತಿಳಿಸಿ.

೨೧. ಬೇಡಿಕೆಯ ನಿಯಮವನ್ನು ಮತ್ತು ಸರಳ ರೇಖಾ ಬೇಡಿಕೆ ಬಿಂಬಕದ ಓಟವನ್ನು ತಿಳಿಸಿ.

೨೨. ನೇರ ಮತ್ತು ಪರೋಕ್ಷ ಅನುಭೋಗಗಳಿಗೆ ತಲಾ ಎರಡೆರಡು ಉದಾಹರಣೆಗಳನ್ನು ಕೊಡಿ.

## ಭಾಗ - ಇ

**ಕೆಳಗಿನವುಗಳಲ್ಲಿ ಯಾವುದಾದರೂ ಎಂಟು ಪ್ರಶ್ನೆಗಳಿಗೆ ತಲಾ ಹದಿನೈದು ವಾಕ್ಯಗಳಲ್ಲಿ ಉತ್ತರಿಸಿ.** **೫ x ೮ = ೪೦**

೨೩. ಅರ್ಥಶಾಸ್ತ್ರದ ಕೊರತೆ ವ್ಯಾಖ್ಯೆಯನ್ನು ಪ್ರಸ್ತುತ ಪಡಿಸಿ ಮತ್ತು ವಿವರಿಸಿ.

೨೪. ಆರ್ಥಿಕತೆಯ ಅರ್ಥವನ್ನು ತಿಳಿಸಿ. ಆರ್ಥಿಕತೆ ಯೊಂದರ ಮೂಲ ಸಮಸ್ಯೆಗಳನ್ನು ಪ್ರಸ್ತುತ ಪಡಿಸಿ.

೨೫. ತುಷ್ಟಿಗುಣವೆಂದರೇನು? ತುಷ್ಟಿಗುಣದ ವಿಧಗಳನ್ನು ವಿವರಿಸಿ.

೨೬. ಬಂಡವಾಳವೆಂದರೇನು? ಬಂಡವಾಳ ಸಂಚಯನದ ಪ್ರಕ್ರಿಯೆಯನ್ನು ವಿವರಿಸಿ.

೨೭. ಆವಿಷ್ಕಾರವನ್ನು ವಿಶೇಷವಾಗಿ ಉಲ್ಲೇಖಿಸಿ ಉದ್ಯಮ ಸಾಹಸಿಯ ಕಾರ್ಯಗಳನ್ನು ವಿವರಿಸಿ?

೨೮. ಮಾರುಕಟ್ಟೆ ಎಂದರೇನು? ಪರಿಪೂರ್ಣ ಪೈಪೋಟಿಯ ಲಕ್ಷಣಗಳಾವುವು?

೨೯. ಅಂತಾರಾಷ್ಟ್ರೀಯ ವ್ಯಾಪಾರದ ತಳಹದಿ ಯಾವುದು?

೩೦. ವಿದೇಶೀ ವಿನಿಯಮ ದರವೆಂದರೇನು? ಸ್ಥಿರ ವಿನಿಮಯದರ ಮತ್ತು ತೇಲುವ ವಿನಿಮಯ ದರಗಳ ನಡುವಣ ವ್ಯತ್ಯಾಸ ತಿಳಿಸಿ.

೩೧. ಬೆಲೆ ಹಣದುಬ್ಬರವನ್ನು ನಿಯಂತ್ರಿಸುವ ವಿತ್ತನೀತಿಯ ಪ್ರಮುಖ ಅಂಶಗಳು ಯಾವುವು?

೩೨. ಸರಾಸರಿ ಮತ್ತು ಸೀಮಾಂತ ವೆಚ್ಚ ಮತ್ತು ಆದಾಯ ಇವುಗಳ ಸಂಬಂಧವನ್ನು ಕಾರ್ಯಾವಲಂಬಿ ಬಿಂಬಕಗಳಲ್ಲಿ ತೋರಿಸುವ ಚಿತ್ರಗಳನ್ನು ಬಿಡಿಸಿ.

೩೩. ರಾಷ್ಟ್ರೀಯ ಆದಾಯವನ್ನು ಅಂದಾಜಿಸುವ ವಿವಿಧ ವಿದಾನಗಳನ್ನು ವಿವರಿಸಿ.

೩೪. ಕಲ್ಯಾಣ ಅರ್ಥಶಾಸ್ತ್ರದ ಅರ್ಥವನ್ನು ನೀಡಿ. ಕಲ್ಯಾಣ ಅರ್ಥಶಾಸ್ತ್ರದ ಪ್ರಥಮ ಮತ್ತು ದ್ವಿತೀಯ ಪ್ರಮೇಯಗಳನ್ನು ತಿಳಿಸಿ.

## ಭಾಗ - ಈ

**ಕೆಳಗಿನವುಗಳಲ್ಲಿ ಯಾವುದಾದರೂ ಎರಡು ಪ್ರಶ್ನೆಗಳಿಗೆ ತಲಾ ನಲವತ್ತು ವಾಕ್ಯಗಳಲ್ಲಿ ಉತ್ತರಿಸಿ.** ೧೦ x ೨ =೨೦

೩೫. ಕೋಷ್ಟಕ ಮತ್ತು ಚಿತ್ರದ ಸಹಾಯದಿಂದ ಇಳಿಕೆಯ ಸೀಮಾಂತ ತುಷ್ಟಿಗುಣ ನಿಯಮವನ್ನು ವಿವರಿಸಿ.

೩೬. ಜನಸಂಖ್ಯಾ ಜನಾಂಗಿಕ ಪರಿವರ್ತನಾ ಸಿದ್ಧಾಂತವನ್ನು ಪರಿಶೀಲಿಸಿ.

೩೭. ಹಣವನ್ನು ವ್ಯಾಖ್ಯಾನಿಸಿ. ಹಣದ ಪ್ರಧಾನ ಮತ್ತು ಆನುಷಂಗಿಕ ಕಾರ್ಯಗಳನ್ನು ವಿವರಿಸಿ.

೩೮. ಆರ್ಥಿಕ ಸಿದ್ಧಾಂತದ ಈ ಕೆಳಗಿನ ಪಥಗಳ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

(i) ಸ್ಥಿರಾತ್ಮಕ ಮತ್ತು ಚಲನಾತ್ಮಕ ವಿಶ್ಲೇಷಣೆ.

(ii) ಭಾಗಶಃ ಮತ್ತು ಮತ್ತು ಸಾರ್ವತ್ರಿಕ ಸಮತೋಲನ ವಿಶ್ಲೇಷಣೆ.

# ಮೊದಲ ಪಿ.ಯು.ಸಿ. ಅರ್ಥಶಾಸ್ತ್ರ

## ಮಾದರಿ ಪ್ರಶ್ನೆ ಪತ್ರಿಕೆ ೨

ಸಮಯ: ೩ ಗಂಟೆಗಳು　　　　　　　　　　　　ಗರಿಷ್ಠ ಅಂಕಗಳು:೯೦

**ಸೂಚನೆಗಳು:**

೧. ಮಾರ್ಜಿನ್‌ನಲ್ಲಿ ಸ್ಫುಟವಾಗಿ ಪ್ರಶ್ನೆ ಸಂಖ್ಯೆಗಳನ್ನು ಬರೆಯಿರಿ.

೨. ಪ್ರಶ್ನೆಗಳಿಗೆ ಉತ್ತರಗಳು ಅವ್ಯಾಹತವಾಗಿರಬೇಕು.

### ಭಾಗ - ಅ

**ಈ ಕೆಳಗಿನವುಗಳಿಗೆ ತಲಾ ಒಂದು ವಾಕ್ಯದಲ್ಲಿ ಉತ್ತರಿಸಿ.**　　　　೧ x ೧೦ = ೧೦

೧. ಸಮಗ್ರ ಲಕ್ಷಿ ಅರ್ಥಶಾಸ್ತ್ರವೆಂದರೇನು?

೨. $Y=X_{೩}$ ಎಂದಾದರೆ dy/dx ಎಷ್ಟೆಂದು ಕಂಡುಹಿಡಿಯಿರಿ.

೩. ಸ್ಥಿರ ಮತ್ತು ಅಸ್ಥಿರ ವೆಚ್ಚಗಳ ಒಟ್ಟು ಮೊತ್ತವನ್ನು ಒಟ್ಟು ಉತ್ಪನ್ನದಿಂದ ಭಾಗಿಸಿದಾಗ ನೀವು ಏನನ್ನು ಪಡೆಯುತ್ತೀರಿ?

೪. ಸಾಂಪ್ರದಾಯಿಕ ಅಗತ್ಯದ ಬಯಕೆಗಳಿಗೊಂದು ಉದಾಹರಣೆ ಕೊಡಿ

೫. ಉತ್ಪಾದನೆಯ ಅರ್ಥವನ್ನು ತಿಳಿಸಿ.

೬. ಸರಕೊಂದರ ಬೆಲೆ ಬದಲಾಗುವಾಗ ಅದಕ್ಕನುಗುಣವಾಗಿ ಬೇಡಿಕೆ ಪ್ರತಿಸ್ಪಂದನವನ್ನು ವಿವರಿಸಲು ಬಳಸುವ ಪದ ಯಾವುದು?

೭. ಹಣದ ವ್ಯಾವಹಾರಿಕ ಬೇಡಿಕೆಗೊಂದು ಉದಾಹರಣೆ ಕೊಡಿ.

೮. ಹಣದುಬ್ಬರವನ್ನು ವ್ಯಾಖ್ಯಾನಿಸಿ.

೯. ಅಂತಾರಾಷ್ಟ್ರೀಯ ವ್ಯಾಪಾರದ ರಕ್ಷಣೆಯ ಯಾವುದಾದರೂ ಎರಡು ಕ್ರಮಗಳನ್ನು ಉಲ್ಲೇಖಿಸಿ.

೧೦. ಪೂರೈಕೆಯ ಕಾರ್ಯಾತ್ಮಕ ಜಂಬಕವನ್ನು ಪ್ರಸ್ತುತ ಪಡಿಸಿ.

### ಭಾಗ - ಆ

**ಈ ಕೆಳಗಿನವುಗಳಲ್ಲಿ ಯಾವುದಾದರು ಹತ್ತು ಪ್ರಶ್ನೆಗಳಿಗೆ ತಲಾ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**　　　　೨ x ೧೦ = ೨೦

೧೧. ಭಾಗಶಃ ಮತ್ತು ಸಾರ್ವತ್ರಿಕ ಸಮತೋಲನದ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೧೨. ಪೂರ್ಣಾಂಕ ಮತ್ತು ಭಿನ್ನರಾಶಿಗಳಿಗೆ ತಲಾ ಎರಡೆರಡು ಉದಾಹರಣೆಗಳನ್ನು ಕೊಡಿ.

೧೩. ವಾಸ್ತವಿಕ ಮತ್ತು ಪ್ರಮಾಣಕ ಅರ್ಥಶಾಸ್ತ್ರದ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೧೪. ಸ್ಥಿರ ಮತ್ತು ಸೊನ್ನೆ ಬೆಲೆ ಬೇಡಿಕೆಯ ಸ್ಥಿತಿಸ್ಥಾಪಕತ್ವವನ್ನು ವ್ಯಾಖ್ಯಾನಿಸಿ.

೧೫. ಉಚಿತ ಸರಕು ಮತ್ತು ಆರ್ಥಿಕ ಸರಕುಗಳ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೧೬. ತುಷ್ಟಿಗುಣದ ವಿವಿಧ ವಿಧಗಳನ್ನು ಪ್ರಸ್ತುತಪಡಿಸಿ.

೧೭. (i) ಸ್ಥಿರ ಮತ್ತು ಚರ ಬಂಡವಾಳ ಅಥವಾ (ii)ಭೌತಿಕ ಮತ್ತು ಹಣಕಾಸಿನ ಬಂಡವಾಳದ ಅರ್ಥವನ್ನು ತಿಳಿಸಿ.

೧೮. ಕೂಲಿಯ ಅರ್ಥವನ್ನು ತಿಳಿಸಿ. ನೈಜಕೂಲಿ ಮತ್ತು ಹಣರೂಪಿ ಕೂಲಿಯ ನಡುವಣ ವ್ಯತ್ಯಾಸ ತಿಳಿಸಿ.

೧೯. ಸಂಕುಚಿತ ಮತ್ತು ವಿಶಾಲ ಹಣದ ವಿವಿಧ ಅಂಗ ಭಾಗಗಳಾವುವು?

೨೦. ವೆಚ್ಚ ದೂಡಿಕೆಯ ಮತ್ತು ಬೇಡಿಕೆ ಎಳೆತದ ಹಣದುಬ್ಬರದ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೨೧. ಸಂಖ್ಯಾರೂಪದ ಉದಾಹರಣೆಯ ಮೂಲಕ ತಲಾದಾಯವನ್ನು ಲೆಕ್ಕ ಹಾಕುವುದು ಹೇಗೆಂದು ವಿವರಿಸಿ.

೨೨. ಅನುಭೋಗಿಯ ಮಿಗುತೆಯ ಅರ್ಥವನ್ನು ತಿಳಿಸಿ.

## ಭಾಗ - ಇ

**ಈ ಕೆಳಗಿನವುಗಳಲ್ಲಿ ಯಾವುದಾದರೂ ಎಂಟು ಪ್ರಶ್ನೆಗಳಿಗೆ ತಲಾ ಹದಿನೈದು ವಾಕ್ಯಗಳಲ್ಲಿ ಉತ್ತರಿಸಿ.** ೮x೫=೪೦

೨೩. ವಾಣಿಜ್ಯ ಬ್ಯಾಂಕುಗಳಿಂದ ಉದ್ದರಿ ನಿರ್ಮಾಣವಾಗುವ ಪ್ರಕ್ರಿಯೆಯನ್ನು ವಿವರಿಸಿ.

೨೪. ಅರ್ಥಶಾಸ್ತ್ರದ ಸ್ಥಿರಾತ್ಮಕ ಮತ್ತು ಚಲನಾತ್ಮಕ ವಿಶ್ಲೇಷಣೆಗಳ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೨೫. ಒಂದು ಕೋಷ್ಟಕ ಮತ್ತು ಚಿತ್ರದ ಸಹಾಯದಿಂದ ಬೇಡಿಕೆಯ ನಿಯಮವನ್ನು ವಿವರಿಸಿ.

೨೬. ಮಾನವನ ಬಯಕೆಗಳೆಂದರೇನು? ಮಾನವನ ಬಯಕೆಗಳ ಮೂಲ ಲಕ್ಷಣಗಳನ್ನು ವಿವರಿಸಿ.

೨೭. ಅಂತಾರಾಷ್ಟ್ರೀಯ ಹಣಕಾಸು ನಿಧಿಯ ಉದ್ದೇಶಗಳು ಮತ್ತು ಕಾರ್ಯಗಳು ಯಾವುವು?

೨೮. ಕೆಲವರ ಸ್ವಾಮ್ಯ ಮತ್ತು ಏಕಸ್ವಾಮ್ಯದ ಅರ್ಥ ಮತ್ತು ಲಕ್ಷಣಗಳನ್ನು ವಿವರಿಸಿ.

೨೯. ಸ್ಥಿರ ಮತ್ತು ಅಸ್ಥಿರ ವೆಚ್ಚ, ಸರಾಸರಿ ಮತ್ತು ಸೀಮಾಂತ ವೆಚ್ಚ -ಇವುಗಳ ನಡುವಣ ವ್ಯತ್ಯಾಸ ತಿಳಿಸಿ.

೩೦. ಉದ್ಯಮ ಸಾಹಸಿಯೋರ್ವನ ಕಾರ್ಯಗಳನ್ನು ವಿವರಿಸಿ.

೩೧. ಭೂಮಿಗೆ ಸಂಬಂಧಿಸಿದಂತೆ ಇಳಿಕೆಯ ಸೀಮಾಂತ ಪ್ರತಿಫಲ ನಿಯಮವನ್ನು ವಿವರಿಸಿ.

೩೨. ಕೆಳಗಿನ ದತ್ತಾಂಶಗಳನ್ನು ಆಧರಿಸಿ ಒಟ್ಟು ಆದಾಯ, ಸೀಮಾಂತ ಆದಾಯ ಮತ್ತು ಸರಾಸರಿ ಆದಾಯಗಳನ್ನು ಕಂಡುಹಿಡಿಯಿರಿ.

| ಮಾರಾಟವಾದ ಸರಕುಗಳ ಪ್ರಮಾಣ | ಪ್ರತಿ ಯುನಿಟ್ಟಿನ ಬೆಲೆ | ಒಟ್ಟು ಆದಾಯ | ಸೀಮಾಂತ ಆದಾಯ | ಸರಾಸರಿ ಆದಾಯ |
|---|---|---|---|---|
| (೧) | (೨) | (೩) | (೪) | (೫) |
| ೧೦ | ರೂ ೧೦ | | | |
| ೨೫ | ರೂ ೮ | | | |
| ೮೦ | ರೂ ೫ | | | |
| ೧೨೦ | ರೂ ೪ | | | |

೩೩. ಆರ್ಥಿಕ ಕಲ್ಯಾಣವನ್ನು ವ್ಯಾಖ್ಯಾನಿಸಿ. ಕಲ್ಯಾಣ ಅರ್ಥಶಾಸ್ತ್ರದ ಮೂಲ ಪ್ರಮೇಯಗಳನ್ನು ಪ್ರಸ್ತುತ ಪಡಿಸಿ.

೩೪. ಶ್ರಮದ ಅರ್ಥವನ್ನು ತಿಳಿಸಿ. ಶ್ರಮದ ಮೂಲ ಲಕ್ಷಣಗಳಾವುವು?

## ಭಾಗ - ಈ

**ಈ ಕೆಳಗಿನವುಗಳಲ್ಲಿ ಯಾವುದಾದರೂ ಎರಡು ಪ್ರಶ್ನೆಗಳಿಗೆ ತಲಾ ನಲವತ್ತು ವಾಕ್ಯಗಳಲ್ಲಿ ಉತ್ತರಿಸಿ.** ೧೦ x ೨ = ೨೦

೩೫. ವಿರಳತೆ ವ್ಯಾಖ್ಯೆಯು ಸಂಪತ್ತಿನ ಮತ್ತು ಕಲ್ಯಾಣದ ಅರ್ಥಶಾಸ್ತ್ರೀಯ ಪಂಥಗಳಿಗಿಂತ ಹೇಗೆ ಶ್ರೇಷ್ಠವಾದುದು ಎಂಬುದನ್ನು ತಿಳಿಸಿ.

೩೬. ವಿದೇಶಿ ವಿನಿಮಯ ಮತ್ತು ವಿದೇಶಿ ವಿನಿಮಯದ ದರದ ಅರ್ಥವನ್ನು ತಿಳಿಸಿ. ಸ್ಥಿರ ಮತ್ತು ತೇಲುವ ವಿನಿಮಯ ದರಗಳ ನಡುವಣ ವ್ಯತ್ಯಾಸವನ್ನು ಪ್ರಸ್ತುತಪಡಿಸಿ.

೩೭. ಹಣದುಬ್ಬರವೆಂದರೇನು? ಹಣದುಬ್ಬರದ ವಿಧಗಳು ಯಾವುವು? ಹಣದುಬ್ಬರವನ್ನು ನಿಯಂತ್ರಿಸುವುದು ಹೇಗೆ?

೩೮. ರಾಷ್ಟ್ರೀಯ ಆದಾಯದ ಪರ್ಯಾಯ ಪರಿಕಲ್ಪನೆಗಳನ್ನು ವಿವರಿಸಿ. ರಾಷ್ಟ್ರೀಯ ಆದಾಯವನ್ನು ಅಂದಾಜಿಸುವ ವಿವಿಧ ವಿಧಾನಗಳನ್ನು ಪ್ರಸ್ತುತಪಡಿಸಿ.

# ಅನುಬಂಧ ೩

## ಪರೀಕ್ಷೆಯ ವಿಧಾನ ಮತ್ತು ಪ್ರಶ್ನೆಪತ್ರಿಕೆಯ ನೀಲಿ ನಕಾಶೆ

ಪರೀಕ್ಷಾ ವಿಧಾನಕ್ಕೆ ಸಂಬಂಧಿಸಿದಂತೆ ಪದವಿಪೂರ್ವಶಿಕ್ಷಣ ಇಲಾಖೆಯು ಈ ಕೆಳಗಿನ ಮಾರ್ಗದರ್ಶಿಸೂತ್ರಗಳನ್ನು ನೀಡಿರುತ್ತದೆ.

* ವಾರ್ಷಿಕ ಪರೀಕ್ಷೆ : ೯೦ ಅಂಕಗಳು - ಸಿದ್ಧಾಂತ ಆಧಾರಿತ.

* ಆಂತರಿಕ ಮೌಲ್ಯಮಾಪನ : ೧೦ ಅಂಕಗಳು - ಪ್ರಾಯೋಗಿಕ ಕಾರ್ಯಯೋಜನೆಗಳು ಮತ್ತು ಹೊಣೆಗಳು.

ಸಿದ್ಧಾಂತ ಆಧಾರಿತ ಪರೀಕ್ಷೆಯ ರಚನಾ ವಿನ್ಯಾಸ : ಒಟ್ಟು೯೦ ಅಂಕಗಳು

| ಭಾಗ | ನೀಡುವ ಪ್ರಶ್ನೆಗಳು | ಉತ್ತರಿಸಬೇಕಾದ ಪ್ರಶ್ನೆಗಳು | ಅಂಕಗಳು |
|---|---|---|---|
| ಅ | ೧೦ | ೧೦ | ೧ x ೧೦ = ೧೦ |
| ಆ | ೧೨ | ೧೦ | ೨ x ೧೦ = ೨೦ |
| ಇ | ೧೨ | ೮ | ೫ x ೧೦ = ೪೦ |
| ಈ | ೪ | ೨ | ೨ x ೧೦ = ೨೦ |

ಅಂತರಿಕ ಮೌಲ್ಯಮಾಪನದ ೧೦ಅಂಕಗಳು ಪ್ರಾಯೋಗಿಕ ಕಾರ್ಯಯೋಜನೆಗಳನ್ನು ಮತ್ತು ಹೊಣೆಗಳನ್ನು ಆಧರಿಸಿರುತ್ತವೆ.

ಮಾದರಿ ಪ್ರಶ್ನೆ ಪತ್ರಿಕೆಯ ನೀಲಿ ನಕಾಶೆ - ಮೊದಲ ಪಿ.ಯು.ಸಿ ಅರ್ಥಶಾಸ್ತ್ರ

# ಮೊದಲವರ್ಷದ ಪಿ.ಯು.ಸಿ. ಅರ್ಥಶಾಸ್ತ್ರ ಮಾದರಿ ಪ್ರಶ್ನೆಪತ್ರಿಕೆ

## ನೀಲಿ ನಕಾಶೆ

ಅವಧಿ : ಮೂರು ಗಂಟೆಗಳು

ಗರಿಷ್ಟ ಅಂಕಗಳು : ೯೦

| ಅಧ್ಯಾಯಗಳು | ಬೋಧನೆಯ ಕಾಲಾವಧಿ ಗಂಟೆಗಳಲ್ಲಿ | ಜ್ಞಾನ | | | | ಅರಿವು-ಮನನ | | | | ಅನ್ವಯಿಕತೆ ಅಭಿವ್ಯಕ್ತಿ | | | | ಕೌಶಲ್ಯ | | | | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|
| | | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | |
| ೧ | ೧೮ | -- | -- | ೧ | -- | ೧ | -- | ೧ | -- | ೧ | -- | -- | ೧ | ೧ | ೧+೧ | -- | -- | ೨೭ |
| ೨ | ೧೨ | -- | -- | -- | -- | -- | ೧ | ೧ | -- | ೧ | -- | -- | -- | -- | ೧ | -- | ೧ | ೨೦ |
| ೩. | ೧೫ | -- | -- | ೧ | -- | ೧ | -- | ೧ | -- | -- | -- | -- | ೧ | -- | ೧ | -- | -- | ೨೩ |
| ೪ | ೯ | -- | ೧ | -- | -- | ೧ | ೧ | ೧ | -- | -- | -- | -- | -- | -- | ೧ | ೧ | -- | ೧೭ |
| ೫ | ೪ | -- | -- | -- | -- | -- | -- | ೧ | -- | -- | -- | -- | -- | -- | -- | -- | -- | ೦೫ |
| ೬ | ೮ | ೧ | -- | -- | -- | -- | -- | ೧ | -- | -- | ೧ | -- | -- | -- | -- | -- | -- | ೦೮ |
| ೭ | ೧೨ | -- | -- | -- | -- | ೧ | ೧ | ೧ | ೧ | -- | -- | -- | -- | ೧ | -- | -- | -- | ೧೯ |
| ೮ | ೧೨ | ೧ | -- | -- | -- | -- | ೧+೧ | -- | -- | -- | -- | ೧ | -- | -- | -- | ೧ | -- | ೧೫ |
| ಒಟ್ಟು | ೯೦ | ೨ | ೧ | ೨ | -- | ೪ | ೫ | ೭ | ೧ | ೨ | ೧ | ೧ | ೨ | ೨ | ೫ | ೨ | ೧ | ೧೩೪ |

ನೀಲಿ ನಕಾಶೆ

**ಸೂಚನೆಗಳು**

೧. ಅ.ಸ.ಪ್ರ = ಅತಿ ಸಣ್ಣ ಪ್ರಶ್ನೆಗಳು : ಅತಿ ಸಣ್ಣ ಪ್ರಶ್ನೆಗಳಿಗೆ ತಲಾ ೧ ಅಂಕ ಮಾತ್ರ.

ಸ.ಪ್ರ = ಸಣ್ಣ ಪ್ರಶ್ನೆಗಳು : ಸಣ್ಣ ಪ್ರಶ್ನೆಗಳಿಗೆ ತಲಾ ೨ ಅಂಕಗಳು

ದೊ.ಪ್ರ = ದೊಡ್ಡ ಪ್ರಶ್ನೆಗಳು : ದೊಡ್ಡ ಪ್ರಶ್ನೆಗಳಿಗೆ ತಲಾ ೫ ಅಂಕಗಳು

ಪ್ರ.ಪ್ರ. = ಪ್ರಬಂಧ ಮಾದರಿಯ ಪ್ರಶ್ನೆಗಳು. ಪ್ರಬಂಧ ಮಾದರಿಯ ಪ್ರಶ್ನೆಗಳಿಗೆ ತಲಾ ೧೦ ಅಂಕಗಳು.

೨. ಪ್ರಶ್ನೆಗಳ ಒಟ್ಟು ಸಂಖ್ಯೆಯನ್ನು, ಪ್ರತಿಯೊಂದರ ಅಂಕಗಳಿಂದ ಗುಣಿಸಿದಾಗ ಒಟ್ಟು ಅಂಕಗಳು ದೊರೆಯುತ್ತವೆ. ಉದಾ: ಒಂದನೇ ಅಧ್ಯಾಯದ ಒಟ್ಟು ಅಂಕಗಳು ೨೭= (೩ x ೧) + (೨ x ೨) + (೨ x ೫) + (೧ x ೧೦).

೩. ನಕಾಶೆಯಲ್ಲಿನ ಮೊದಲ ಅಂಕಣದ ಅಂಕಿಗಳು ಅಧ್ಯಾಯಗಳನ್ನು ಸೂಚಿಸುತ್ತದೆ. ೧ = ಪೀಠಿಕೆ, ೨ = ಅನುಭೋಗ, ೩ = ಉತ್ಪಾದನೆ, ೪ = ವೆಚ್ಚ, ಆದಾಯ ಮತ್ತು ಮಾರುಕಟ್ಟೆ ಸಂರಚನೆ, ೫ = ಕಲ್ಯಾಣ ಅರ್ಥಶಾಸ್ತ್ರದ ಮೂಲಾಂಶಗಳು, ೬ = ರಾಷ್ಟ್ರೀಯ ಆದಾಯ, ೭ = ಹಣದ ಸಿದ್ಧಾಂತ ಮತ್ತು ೮ = ಅಂತರಾಷ್ಟ್ರೀಯ ವ್ಯಾಪಾರ.

# ಅನುಬಂಧ ೪

## ಆಕರ ಗ್ರಂಥಗಳು


ಬಿ.ಎಸ್. ಶ್ರೀಕಂಠಾರಾಧ್ಯ, *ಸಾರ್ವಜನಿಕ ಹಣಕಾಸು*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಹೂಡಾಲ್ಟನ್, *ಸಾರ್ವಜನಿಕ ಹಣಕಾಸಿನ ತತ್ವಗಳು*, ಅನು. ಎಸ್.ಎಂ.ವೀರರಾಘವಾಚಾರ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು

ಸಿ.ಕೆ. ರೇಣುಕಾರ್ಯ, *ಅಂತಾರಾಷ್ಟ್ರೀಯ ವ್ಯಾಪಾರದ ಮೂಲತತ್ವಗಳು*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಸಿ.ಕೆ. ರೇಣುಕಾರ್ಯ, *ಹಣ : ಒಂದು ಸೈದ್ಧಾಂತಿಕ ನಿರೂಪಣೆ*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಜಿ.ಡಿ.ಹುಚ್ಚಪ್ಪ, ಶ್ರೀನಿವಾಸಮೂರ್ತಿ ಎ.ಪಿ. ಮತ್ತು ಶ್ರೀಕಂಠಾರಾಧ್ಯ ಬಿ.ಎಸ್., ೧೯೭೩, *ಅರ್ಥಶಾಸ್ತ್ರ ಪರಿಚಯ, ಭಾಗ ೧, ಭಾಗ ೨*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಜಿ.ಆರ್.ಹಿಕ್ಸ್, *ಮೌಲ್ಯ ಮತ್ತು ಬಂಡವಾಳ : ಆರ್ಥಿಕ ತತ್ವದ ಕೆಲವು ಮೂಲಭೂತ ಸೂತ್ರಗಳ ಪರಿಶೀಲನೆ*, ಅನು.ಕೆ.ಪುಟ್ಟಸ್ವಾಮಯ್ಯ, ೧೯೭೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಜಿಯೋಫ್ರೀಕ್ರೌಥರ್, *ಹಣದ ಸ್ಥೂಲ ವಿವರಣೆ*, ಅನು. ಎ.ಪಿ.ಶ್ರೀನಿವಾಸಮೂರ್ತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಚಂದ್ರಶೇಖರ ದಾಮ್ಲೆ ಸಂ. *ಸಮಾಜವಿಜ್ಞಾನಗಳ ಪಾರಿಭಾಷಿಕ ಪದಕೋಶ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ

Ahuja H.L., *Micro Economic Theory,* Sultan Chand, New Delhi

Chang, Alpha, *Fundamental Methods of Mathematical Economics,* MacGraw Hill International Book Comapny, New Delhi

Das, Satya P. *Introductory Micro economics : A Test book for class XII,* National Council of Educational Research and Training, New Delhi

Perloff, Jeffrey M. *Microeconomics,* Pearson Education Asia, New Delhi

Samuleson, Paul A, *Economics,* MacGraw Hill Inc, New York

Seth M.L. *Principles of Economics,* Lakshmi Narain Agarwal Educational Publishers, Agra

Sundaram, *KPM and Sundaram,* EN, Principles of Economics, Sultan Chand, New Delhi

# ಲೇಖಕರ ವಿವರ

೧. ಡಾ. ಸಿ.ಕೆ. ರೇಣುಕಾರ್ಯ, ವಿಶ್ರಾಂತ ಪ್ರಾಧ್ಯಾಪಕರು, ನಂ.೪ ಗಂಗೋತ್ರಿ ಬಡಾವಣೆ, ಸಾಹುಕಾರ್ ಚನ್ನಯ್ಯ ರಸ್ತೆ, ಸರಸ್ವತಿಪುರಂ, ಮೈಸೂರು ೫೭೦೦೦೭, ಕರ್ನಾಟಕ, ದೂರವಾಣಿ ೦೮೨೧ ೨೨೫೪೪೧೩೭

೨. ಪ್ರೊ. ಎಂ. ಸಿದ್ಧಾನಂದ, ಮುಖ್ಯಸ್ಥರು, ಅರ್ಥಶಾಸ್ತ್ರ ವಿಭಾಗ, ಜಗದ್ಗುರು ರೇಣುಕಾಚಾರ್ಯ ಕಾಲೇಜು, ಆನಂದರಾವ್ ಸರ್ಕಲ್, ಬೆಂಗಳೂರು ೫೬೦೦೦೯, ಕರ್ನಾಟಕ, ದೂರವಾಣಿ ೦೮೦ ೨೩೩೩೮೦೩೨ / ೯೪೪೮೦೫೮೦೩೨

೩. ಪ್ರೊ.ಎಸ್. ಎನ್. ನಾಯಕ್, ಹಿರಿಯ ಉಪನ್ಯಾಸಕರು, ಹೆಚ್.ಸಿ.ಇ.ಎಸ್. ಪ.ಪೂ. ಕಾಲೇಜು, ಗದಗ ೫೮೨೧೦೩, ಕರ್ನಾಟಕ, ದೂರವಾಣಿ ೫೭೭೬೧೧೫ / ೯೮೪೫೬ ೩೩೦೫೮

೪. ಪ್ರೊ. ಉದಯಶಂಕರ, ಪ್ರಾಚಾರ್ಯರು, ಬಾಲಕರ ಸರಕಾರಿ ಪ.ಪೂ.ಕಾಲೇಜು, ತುಮಕೂರು, ಕರ್ನಾಟಕ, ದೂರವಾಣಿ ೦೮೧೬ ೨೩೫೨೦೩೧೮

೫. ಡಾ. ಒಡೆಯರ್ ಡಿ. ಹೆಗ್ಗಡೆ, ಮುಖ್ಯಸ್ಥರು, ಅರ್ಥಶಾಸ್ತ್ರ ಅಧ್ಯಯನ ಸ್ನಾತಕೋತ್ತರ ವಿಭಾಗ, ತೂಬಿನಕೆರೆ, ಮಂಡ್ಯ, ಕರ್ನಾಟಕ, ದೂರವಾಣಿ ೦೮೨೧ ೨೩೫೨೦೩೧೮

೬. ಡಾ.ಟಿ.ಆರ್. ಚಂದ್ರಶೇಖರ, ಪ್ರವಾಚಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ ೫೮೩೨೭೬, ಬಳ್ಳಾರಿ ಜಿಲ್ಲೆ, ಕರ್ನಾಟಕ, ದೂರವಾಣಿ ೦೮೩೯೪ ೨೯೩೧೧

೭. ಪ್ರೊ.ಜೆ.ಪಿ. ಪಿಂಜಾರ, ಹಿರಿಯ ಉಪನ್ಯಾಸಕರು, ಎಸ್.ಇ.ಸಿ.ಎ.ಬಿ. ಮಹಿಳಾ ಪ.ಪೂ.ಕಾಲೇಜು, ವಿಜಾಪುರ, ಕರ್ನಾಟಕ, ದೂರವಾಣಿ ೦೮೩೫೨ ೨೨೯೪೧

೮. ಡಾ. ಬಿ. ಪ್ರಭಾಕರ ಶಿಶಿಲ, ಅರ್ಥಶಾಸ್ತ್ರ ಪ್ರಾಧ್ಯಾಪಕರು, ನೆಹರೂ ಮೆಮೋರಿಯಲ್ ಕಾಲೇಜು, ಕುರುಂಜಿಭಾಗ್, ಸುಳ್ಯ, ದ.ಕ ೫೭೪೩೨೭, ಕರ್ನಾಟಕ, ದೂರವಾಣಿ ೦೮೨೫೭ ೬೦೦೬೬೩

ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕ ರಚನಾ ಕೇಂದ್ರವು ಸಿದ್ಧಪಡಿಸಿರುವ ಪದವಿಪೂರ್ವ ಶಿಕ್ಷಣದ ಮೊದಲ ವರ್ಷದ ಅರ್ಥಶಾಸ್ತ್ರ ಪಠ್ಯವನ್ನು ತಮ್ಮ ಮುಂದಿಡಲು ನಮಗೆ ಸಂತೋಷವೆನಿಸುತ್ತದೆ. ಈಗ ಜಾರಿಗೆ ಬಂದಿರುವ ಹೊಸ ಪಠ್ಯಕ್ರಮಕ್ಕೆ ಅನುಗುಣವಾಗಿ ಇದನ್ನು ಸಿದ್ಧಪಡಿಸಲಾಗಿದೆ. ಈ ಪಠ್ಯವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಾಡಿನ ಪ್ರಸಿದ್ಧ ವಿದ್ವಾಂಸರು ಪಾಲುದಾರರಾಗಿದ್ದಾರೆ.

ಈ ಪಠ್ಯವು ನಾಡಿನ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆಂದು ನಾವು ಭಾವಿಸಿದ್ದೇವೆ. ಈ ಪಠ್ಯವನ್ನು ಉಪಯೋಗಿಸುವ ಸಹೃದಯಿಗಳು ಪಠ್ಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೇಂದ್ರಕ್ಕೆ ಬರೆದು ತಿಳಿಸಿದರೆ ತುಂಬಾ ಉಪಯೋಗವಾಗುತ್ತದೆ. ಮುಂದಿನ ಆವೃತ್ತಿಗಳಲ್ಲಿ ಪಠ್ಯದ ಗುಣಮಟ್ಟವನ್ನು ಇನ್ನೂ ಹೆಚ್ಚು ಉತ್ತಮಪಡಿಸಬಹುದು.

ಪಠ್ಯಪುಸ್ತಕಗಳ ಜೊತೆ ನಾವು ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುತ್ತಿದ್ದೇವೆ. ನಾವು ಪ್ರಕಟಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಮನ್ನಣೆ ನೀಡಿ ನಮ್ಮ ಪ್ರಯತ್ನದಲ್ಲಿ ಕೈ ಜೋಡಿಸಿದೆ. ಕರ್ನಾಟಕದ ವಿದ್ಯಾರ್ಥಿ ಬಳಗಕ್ಕೆ ಕನ್ನಡದಲ್ಲಿ ಜ್ಞಾನವು ಉತ್ತಮ ರೀತಿಯಲ್ಲಿ ದೊರೆಯಬೇಕೆಂಬುದು ನಮ್ಮ ಮುಖ್ಯ ಗುರಿಯಾಗಿದೆ. ಈ ದಿಶೆಯಲ್ಲಿ ನಮ್ಮ ಪ್ರಯತ್ನ ನಡೆದಿದೆ. ಇದಕ್ಕೆ ತಮ್ಮ ಆಶೀರ್ವಾದವಿದೆಯೆಂದು ಭಾವಿಸಿದ್ದೇವೆ.

ರೂ.೧೦೦/-

# ಅರ್ಥಶಾಸ್ತ್ರ